ಸಮೃದ್ಧಿಯನ್ನು ಸೂಚಿಸಿದ್ದಾನೆ[1]. ಜೈನರೂ, ವೀರಶೈವರೂ, ಬ್ರಾಹ್ಮಣರೂ ಕೆಲ ಕೆಲವು ಕೇವಲ ಲೌಕಿಕ ಕಾವ್ಯಗಳನ್ನು ಬರೆದಿದ್ದರೂ ಮುಖ್ಯವಾಗಿ ಮತಗ್ರಂಥಗಳನ್ನೇ ವಿಶೇಷವಾಗಿ ಬರೆದಿದ್ದಾರೆ ಜೈನರ ಕಾವ್ಯಗಳಲ್ಲಿ ಪ್ರಾಯಿಕವಾಗಿ ತೀರ್ಥಂಕರರ ಚರಿತ್ರವೂ ತತ್ವವಿಚಾರವೂ ಹೇಳಿವೆ ವೀರಶೈವರ ಗ್ರಂಥಗಳಲ್ಲಿ ಈಶ್ವರನ ಚತುರ್ವಿಂಶತಿಲೀಲೆಗಳೂ ಅರುವತ್ತುಮೂವರ ಮತ್ತು ಪುರಾತನರ ಚರಿತಗಳೂ, ಏಕೋತ್ತರಶತಸ್ಥಲಿ ಮೊದಲಾದ ತತ್ವವಿಷಯಗಳೂ ವಿಸ್ತಾರವಾಗಿ ಪ್ರತಿಪಾದಿಸಲ್ಪಟ್ಟಿವೆ. ಬ್ರಾಹ್ಮಣರ ಗ್ರಂಥಗಳು ರಾಮಾಯಣ, ಭಾರತ, ಭಾಗವತ ಇವೇ ಮೊದಲಾದ ಪುರಾಣಕಥೆಗಳನ್ನೂ ವೇದಾಂತವಿಚಾರಗಳನ್ನೂ ಒಳಕೊಂಡಿವೆ.

ಭಟ್ಟಾಕಳಂಕನು ತನ್ನ ಕಾಲದಲ್ಲಿ ಕನ್ನಡನಾಟಕಗಳು ಇದ್ದಂತೆ ಹೇಳುತ್ತಾನೆ. ಪ್ರಾಚೀನನಾಟಕಗಳು ಆವುವೂ ಈಗ ದೊರೆತಿಲ್ಲ. ಆದರೆ ಕರ್ಣಪಾರ್ಯನು ಬರೆದುದಾಗಿ ತಿಳಿದು ಬರುವ ಮಾಳವೀಮಾಧವವೂ ಕೇಶಿರಾಜನು ಬರೆದಿರುವಂತೆ ಹೇಳಿಕೊಂಡಿರುವ ಸುಭದ್ರಾಹರಣವೂ ಪ್ರಬೋಧಚಂದ್ರವೂ ನಾಟಕಗಳಾಗಿರಬಹುದು. ರತ್ನಾವಳೀನಾಟಿಕೆಯ ಭಾಷಾಂತರವಾದ ಸಿಂಗರಾರ್ಯಕೃತ ಮಿತ್ರವಿಂದಾಗೋವಿಂದವೆಂಬ ನಾಟಕವೊಂದೇ ಈಗ ದೊರೆತಿದೆ. ಇದು 17 ನೆಯ ಶತಮಾನದಲ್ಲಿ ಹುಟ್ಟಿದೆ.

ಅಲಂಕಾರಗ್ರಂಥಗಳಲ್ಲಿ ನೃಪತುಂಗನ ಕವಿರಾಜಮಾರ್ಗವೇ ಪ್ರಾಚೀನವಾದುದು. ಅಲ್ಲಿಂದೀಚೆಗೆ ಹುಟ್ಟಿದ ನಾಗವರ್ಮನ ಕಾವ್ಯಾವಲೋಕನದಲ್ಲಿ ಶಬ್ದಾರ್ಥಾಲಂಕಾರಗಳೂ ಕವಿಸಮಯವೂ ಕವಿಕಾಮನ ಶೃಂಗಾರರತ್ನಾಕರ, ಸಾಳ್ವನ ರಸರತ್ನಾಕರ, ತಿಮ್ಮನ ನವರಸಾಲಂಕಾರ ಇವುಗಳಲ್ಲಿ ರಸಪ್ರಕ್ರಿಯೆಯೂ ಶಾರದಾವಿಲಾಸದಲ್ಲಿ ಧ್ವನಿಪ್ರಕ್ರಿಯೆಯೂ ಉಕ್ತವಾಗಿವೆ. ಇವಲ್ಲದೆ ದಂಡಿಯ ಕಾವ್ಯಾದರ್ಶದ ಪರಿವರ್ತನರೂಪವಾದ ಮಾಘವಾಲಂಕಾರವೂ ಚಂದ್ರಾಲೋಕದ ಆಧಾರದ ಮೇಲೆ ಹುಟ್ಟಿರುವ ಅಪ್ರತಿಮವೀರಚರಿತ, ನರಪತಿವಿಜಯ ಎಂಬ ಗ್ರಂಥಗಳೂ ಕರ್ಣಾಟಕ ಕುವಲಯಾನಂದವೂ ಇನ್ನು ಬೇರೆ ಕೆಲವು ಗ್ರಂಥಗಳೂ ಇವೆ.

ಛಂದಶ್ಶಾಸ್ತ್ರದಲ್ಲಿ ಗುಣಗಾಂಕಿಯವೆಂಬ ಒಂದು ಪ್ರಾಚೀನಗ್ರಂಥವು ಇದ್ದಂತೆ ತಿಳಿಯಬರುತ್ತದೆ. ಅದು ಈಗ ದೊರೆತಿಲ್ಲ. ನಾಗವರ್ಮನ ಛಂದೋಂಬುಧಿಯಲ್ಲಿ ಛಂದಶ್ಶಾಸ್ತ್ರದ ಎಲ್ಲಾ ಭಾಗಗಳೂ ಸಂಪೂರ್ಣವಾಗಿ ಹೇಳಿವೆ. ಇದೇ ವಿಷಯವಾಗಿ ಕವಿಜಿಹ್ವಾಬಂಧನ, ಛಂದಸ್ಸಾರ ಎಂಬ ಗ್ರಂಥಗಳು ಇರುವುದಲ್ಲದೆ ಇನ್ನೂ ಕೆಲವು ಗ್ರಂಥಗಳು ಇದ್ದಂತೆ ಊಹಿಸಲು ಕಾರಣವಿದೆ.

---

1 ಶಬ್ದಾಗಮಯುಕ್ತ್ಯಾಗಮ ಪರಮಾಗಮ ವಿಷಯಾಣಾಂ ತಥಾ ಕಾವ್ಯನಾಟಕಾಲಂಕಾರ ಕಲಾಶಾಸ್ತ್ರವಿಷಯಾಣಾಂ ಚ ಬಹೂನಾಂ ಗ್ರಂಥಾನಾಮಪಿ ಭಾಷಾಕೃತಾನಾಮುಪಲಭ್ಯಮಾನತ್ವಾತ್.

ಶಬ್ದಾನುಶಾಸನ.

ವ್ಯಾಕರಣಗ್ರಂಥಗಳಲ್ಲಿ ನಯಸೇನಕೃತವಾದ ಒಂದು ವ್ಯಾಕರಣವಿದ್ದಂತೆ ತಿಳಿಯುತ್ತದೆ. ಅದು ದೊರೆತಿಲ್ಲ. ಶಬ್ದಸ್ಮೃತಿ, ಶಬ್ದಮಣಿದರ್ಪಣ ಇವೆರಡು ಗ್ರಂಥಗಳೂ ಕನ್ನಡಭಾಷೆಯಲ್ಲಿಯೂ ಭಾಷಾಭೂಷಣ, ಶಬ್ದಾನುಶಾಸನ ಎಂಬಿವೆರಡೂ ಸಂಸ್ಕೃತದಲ್ಲಿಯೂ ಇವೆ.

ನಿಘಂಟುಗಳಲ್ಲಿ ರನ್ನಕಂದವೇ ಪ್ರಾಚೀನವಾದುದು. ಶಬ್ದಸಾರ, ಕರ್ಣಾಟಕನಿಘಂಟು, ಚತುರಾಸ್ಯನಿಘಂಟು, ಕರ್ಣಾಟಕಶಬ್ದಮಂಜರಿ, ಕಬ್ಬಿಗರ ಕೈಪಿಡಿ, ಕವಿಕಂಠಹಾರ, ಕರ್ಣಾಟಕ ಸಂಜೀವನ ಮೊದಲಾದುವು ಹಳಗನ್ನಡ ಪದಗಳ ಅರ್ಥವನ್ನು ವಿವರಿಸುತ್ತವೆ. ವಸ್ತುಕೋಶ, ಮಂಗಾಭಿಧಾನ, ನಾನಾರ್ಥ ರತ್ನಾಕರ ಮೊದಲಾದುವು ಸಂಸ್ಕೃತಶಬ್ದಗಳಿಗೆ ಕನ್ನಡಪ್ರತಿಪದಗಳನ್ನು ಕೊಡುತ್ತವೆ. ಇವಲ್ಲದೆ ಅಮರ, ಹಲಾಯುಧ ಮೊದಲಾದ ಸಂಸ್ಕೃತಕೋಶಗಳಿಗೆ ಟೀಕೆಗಳೂ ವೈದ್ಯನಿಘಂಟುಗಳ ಟೀಕೆಗಳೂ ದೊರೆಯುತ್ತವೆ.

ಭಾಷಾವ್ಯುತ್ಪತ್ತಿಗೆ ಸಹಕಾರಿಗಳಾದ ಮೇಲೆ ಹೇಳಿದ ಗ್ರಂಥಗಳಲ್ಲದೆ ಲೋಕವ್ಯವಹಾರಕ್ಕೆ ಉಪಯುಕ್ತವಾದ ಶಾಸ್ತ್ರಗ್ರಂಥಗಳೂ ಜೀವನವೃತ್ತಾಂತಗಳೂ, ಚರಿತ್ರಗಳೂ ಯಥೋಚಿತವಾಗಿ ದೊರೆಯುತ್ತವೆ.

ವೈದ್ಯಶಾಸ್ತ್ರದಲ್ಲಿ ಜಗದ್ದಳಸೋಮನಾಥಕೃತವಾದ ಕರ್ಣಾಟಕ ಕಲ್ಯಾಣಕಾರಕವೇ ಪ್ರಾಚೀನವಾದುದು. ಖಗೇಂದ್ರಮಣಿದರ್ಪಣದಲ್ಲಿ ವಿಷವೈದ್ಯವು ವಿಸ್ತಾರವಾಗಿ ಹೇಳಿದೆ. ಅಲ್ಲದೆ ಶ್ರೀಧರದೇವ, ಸಾಳ್ವ, ಚಿಕುಪಾಧ್ಯಾಯ, ವೀರರಾಜ, ನಂಜರಾಜ. ನೃಸಿಂಹಭಟ್ಟ, ಬ್ರಹ್ಮ ಮೊದಲಾದವರು ಹಲವು ವೈದ್ಯ ಗ್ರಂಥಗಳನ್ನು ಬರೆದಿದ್ದಾರೆ. ವ್ರಣವೈದ್ಯ, ಸ್ತ್ರೀವೈದ್ಯ, ಬಾಲವೈದ್ಯ ಇವುಗಳ ವಿಷಯವಾಗಿಯೂ ಗ್ರಂಥಗಳು ಹುಟ್ಟಿವೆ. ಚಂದ್ರರಾಜ, ಅಭಿನವಚಂದ್ರ, ರಾಮಚಂದ್ರ, ಪದ್ಮಣಪಂಡಿತ ಮೊದಲಾದವರು ಅಶ್ವವೈದ್ಯವನ್ನೂ ಚಾಲುಕ್ಯ ರಾಜನಾದ ಕೀರ್ತಿವರ್ಮನು ಗೋವೈದ್ಯವನ್ನೂ ವೀರಭದ್ರರಾಜನು ಪಾಲಕಾಪ್ಯ ಕೃತಹಸ್ತ್ಯಾಯುರ್ವೇದಕ್ಕೆ ಟೀಕೆಯನ್ನೂ ಬರೆದಿದ್ದಾರೆ.

ಪಾಕಶಾಸ್ತ್ರದಲ್ಲಿ ಜಯಬಂಧುನಂದನನ ಗ್ರಂಥವೇ ಪ್ರಾಚೀನವಾದುದು. ಮಂಗರಸ ಮುಂತಾದವರು ರಚಿಸಿದ ಗ್ರಂಥಗಳೂ ಇವೆ.

ಜ್ಯೋತಿಶ್ಶಾಸ್ತ್ರದಲ್ಲಿ ಶ್ರೀಧರಾಚಾರ್ಯಕೃತ ಜಾತಕತಿಲಕವೇ ಪ್ರಾಚೀನವಾದುದು. ಇದಲ್ಲದೆ ಈ ವಿಷಯವಾಗಿ ಲೋಕೋಪಕಾರ, ರಟ್ಟಮತ, ರಟ್ಟನ ಜಾತಕ, ನರಪಿಂಗಲಿ, ಮಾರ್ಕಂಡೇಯಪುರಾಣ, ಶಕುನಪ್ರಪಂಚ ಮೊದಲಾದ ಗ್ರಂಥಗಳೂ ಸೂರ್ಯಸಿದ್ಧಾಂತವೇ ಮೊದಲಾದ ಕೆಲವು ಸಂಸ್ಕೃತ ಗ್ರಂಥಗಳ ಟೀಕೆಗಳೂ ದೊರೆಯುತ್ತವೆ.

ಗಣಿತಶಾಸ್ತ್ರದಲ್ಲಿ ವ್ಯವಹಾರಗಣಿತ, ಕ್ಷೇತ್ರಗಣಿತ, ಬೀಜಗಣಿತ ಮೊದಲಾದ ಗ್ರಂಥಗಳೂ ಕೆಲವು ಸಂಸ್ಕೃತ ಗ್ರಂಥಗಳ ಟೀಕೆಗಳೂ ಇವೆ.

ಕಾಮಶಾಸ್ತ್ರದಲ್ಲಿ ಮದನತಿಲಕವೇ ಪುರಾತನಗ್ರಂಥವು. ಇದಲ್ಲದೆ ಸ್ಮರತಂತ್ರ, ಮನ್ಮಥವಿಜಯ, ಜನವಶ್ಯ ಮೊದಲಾದ ಗ್ರಂಥಗಳೂ ವಾತ್ಸ್ಯಾಯನ, ಕೊಕ್ಕೋಕ ಮೊದಲಾದ ಗ್ರಂಥಗಳ ಟೀಕೆಗಳೂ ಇವೆ.

ಇವುಗಳಲ್ಲದೆ ಸ್ವರಶಾಸ್ತ್ರ, ರತ್ನಶಾಸ್ತ್ರ, ಸಾಮುದ್ರಿಕಶಾಸ್ತ್ರ, ಬಾಣಗಾರಿಕೆ ಮೊದಲಾದುವುಗಳ ವಿಷಯವಾಗಿಯೂ ಗ್ರಂಥಗಳು ಹುಟ್ಟಿವೆ.

ಜೀವನವೃತ್ತಾಂತಗಳಲ್ಲಿ ರಾಜನೃಪವಿಜಯ, ಕಂಠೀರವನರಸರಾಜವಿಜಯ, ಚಿಕ್ಕದೇವರಾಜವಿಜಯ ಮುಂತಾದ ಗ್ರಂಥಗಳೂ ಚರಿತ್ರಗಳಲ್ಲಿ ಮೈಸೂರರಸುಗಳ ಪೂರ್ವಾಭ್ಯುದಯ, ಕೆಳದಿನೃಪವಿಜಯ, ಬಿಳಗಿಯರಸರ ವಂಶಾವಳಿ ಮೊದಲಾದ ಗ್ರಂಥಗಳೂ ಇವೆ.

ಅಲ್ಲದೆ ಕಾವ್ಯಸರಣಿಯನ್ನನುಸರಿಸಿ ಪ್ರೌಢವಾದ ಬಂಧದಿಂದ ಉದ್ದಾಮಕವಿಗಳು ರಚಿಸಿರುವ ಅನೇಕ ಕನ್ನಡಶಾಸನಗಳು ದೊರೆಯುತ್ತವೆ. ಇವು 7 ನೆಯ ಶತಮಾನ ಮೊದಲುಗೊಂಡು 17 ನೆಯ ಶತಮಾನದ ವರೆಗೆ ಬೇರೆ ಬೇರೆ ಕಾಲದಲ್ಲಿ ಹುಟ್ಟಿವೆ. ಇವುಗಳಲ್ಲಿ ಹಲವು ಗ್ರಂಥಗಳೆಂದು ಪರಿಗಣಿಸುವಷ್ಟು ಪ್ರೌಢವಾಗಿವೆ.

## ಕನ್ನಡಭಾಷೆಗೆ ಪ್ರೋತ್ಸಾಹ.

ಕರ್ಣಾಟಕಭಾಷೆಯೂ ಕವಿತೆಯೂ ಪೂರ್ವಕಾಲದಿಂದಲೂ ರಾಜರುಗಳ ಮತ್ತು ಮಂಡಲಿಕರ ಪ್ರೋತ್ಸಾಹದಿಂದ ಅಭಿವೃದ್ಧಿಗೆ ಬಂದಂತೆ ತಿಳಿಯಬರುತ್ತದೆ. ರಾಷ್ಟ್ರಕೂಟರು, ಗಂಗರು, ಚಾಲುಕ್ಯರು, ಕಾಕತೀಯರು, ಹೊಯ್ಸಳರು, ಸೌಂದತ್ತಿಯರಸರು, ವಿಜಯನಗರದ ಅರಸರು, ಮೈಸೂರರಸರು, ತುಳುವರಾಜರು, ಚೌಟರು ಇವರೇ ಮೊದಲಾದ ರಾಜರುಗಳಲ್ಲಿ ಕೆಲವರು ಸ್ವತಃ ಕವಿಗಳಾಗಿದ್ದುದಲ್ಲದೆ ಅನೇಕರು ಕರ್ಣಾಟಕಕವಿಗಳಿಗೆ ಪೋಷಕರಾಗಿದ್ದು ವಿಶೇಷ ಪ್ರೋತ್ಸಾಹವನ್ನುಂಟುಮಾಡಿದ್ದಾರೆ. ಈ ರಾಜರುಗಳೇ ಅಲ್ಲದೆ ಇವರ ಕೈಯ ಕೆಳಗೆ ದೊಡ್ಡದೊಡ್ಡ ಪದವಿಗಳನ್ನು ವಹಿಸಿದ್ದ ಅನೇಕ ಅಧಿಕಾರಿಗಳಲ್ಲಿ ಕೆಲವರು ಗ್ರಂಥರಚನೆ ಮಾಡಿರುವುದಲ್ಲದೆ ಹಲವರು ಕವಿಗಳಿಗೆ ಪ್ರೋತ್ಸಾಹಕರಾಗಿ ಹಲವು ಗ್ರಂಥಗಳನ್ನು ಬರಸಿದ್ದಾರೆ. ಇವರೇ ಅಲ್ಲದೆ ಉಮ್ಮತ್ತೂರು, ಕೆಳದಿ, ಸುಗಟೂರು, ಬೇಲೂರು, ನುಗ್ಗೆಹಳ್ಳಿ, ಪಿರಿಯಪಟ್ಟಣ, ಹದಿನಾಡು, ಚಿಕ್ಕನಾಯಕನಹಳ್ಳಿ, ಮುದಿಗೆರೆ, ಬಿಜ್ಜವರ, ಕಳಲೆ ಮುಂತಾದ ಸ್ಥಳಗಳ ಪಾಳೆಯಗಾರರೂ ಕವಿ

ಪೋಷಕರಾಗಿದ್ದರು. ಉದಾಹರಣೆಗಾಗಿ ಕೆಲವು ಅಂಶಗಳನ್ನು ಇಲ್ಲಿ ತಿಳಿಸುತ್ತೇವೆ[1]. ರಾಷ್ಟ್ರಕೂಟರಲ್ಲಿ ಪ್ರಸಿದ್ಧನಾದ ನೃಪತುಂಗನು ಸ್ವತಃ ಕವಿಯಾಗಿದ್ದುದಲ್ಲದೆ ಅನೇಕ ಕನ್ನಡಕವಿಗಳಿಗೆ ಅವಲಂಬವಾಗಿದ್ದನು. ಗಂಗರಾಜರಿಂದ ಪೋಷಿತರಾಗಿ ಚಾವುಂಡರಾಯ, ನಾಗವರ್ಮ I, ಗುಣವರ್ಮ I ಮೊದಲಾದವರು ಉದ್ಗ್ರಂಥಗಳನ್ನು ರಚಿಸಿದರು. ಚಾಲುಕ್ಯರಾಜರ ಪೋಷಣೆಯಲ್ಲಿ ಆದಿಪಂಪ, ಪೊನ್ನ, ರನ್ನ, ಚಂದ್ರರಾಜ, ದುರ್ಗಸಿಂಹ, ಕೀರ್ತಿವರ್ಮ, ನಾಗವರ್ಮ II ಮೊದಲಾದ ಕವಿಗಳು ಕಾವ್ಯಗಳನ್ನು ಬರೆದಿದ್ದಾರೆ. ಹೊಯ್ಸಳರ ಕಾಲದಲ್ಲಿ ಅಭಿನವಪಂಪ, ಕಂತಿ, ರಾಜಾದಿತ್ಯ, ಸುಮನೋಬಾಣ, ಮಲ್ಲಿಕಾರ್ಜುನ, ರುದ್ರಭಟ್ಟ, ಜನ್ನ, ಹರಿಹರ, ಕೆರೆಯಪದ್ಮರಸ, ಕುಮಾರಪದ್ಮರಸ, ಕೇಶಿರಾಜ ಮೊದಲಾದವರು ಗ್ರಂಥರಚನೆಮಾಡಿದ್ದಾರೆ. ಕರ್ಣಪಾರ್ಯ, ನೇಮಿಚಂದ್ರ, ಮುನಿಚಂದ್ರ ಮೊದಲಾದ ಕವಿಗಳು ಸೌಂದತ್ತಿಯರಸರ ಕಾಲದಲ್ಲಿ ಗ್ರಂಥಗಳನ್ನು ಬರೆದಿದ್ದಾರೆ. ವಿಜಯನಗರದ ಅರಸರ ಪ್ರೋತ್ಸಾಹದಿಂದ ಮಧುರ, ಮಂಗರಸ I, ಕುಮಾರವ್ಯಾಸ, ಕುಮಾರವಾಲ್ಮೀಕಿ, ನಿತ್ಯಾತ್ಮಶುಕ, ಕಲ್ಲರಸ, ಲಕ್ಕಣ್ಣದಂಡೇಶ, ಚಾಮರಸ, ಚಂದ್ರಶೇಖರ ಮುಂತಾದವರು ಗ್ರಂಥಗಳನ್ನು ರಚಿಸಿದ್ದಾರೆ. ತುಳುವರಾಜರ ಪೋಷಣೆಯಲ್ಲಿ ಸಾಳ್ವ, ರತ್ನಾಕರವರ್ಣಿ ಇವರೇ ಮೊದಲಾದವರು ಗ್ರಂಥರಚನೆಮಾಡಿದರು. ಮೈಸೂರರಸರ ಪೋಷಣೆಯಲ್ಲಿ ತಿರುಮಲಾರ್ಯ, ಸಿಂಗರಾರ್ಯ, ಚಿಕ್ಕುಪಾಧ್ಯಾಯ, ತಿಮ್ಮರಸ, ಮಲ್ಲಿಕಾರ್ಜುನ, ಸಂಚಿಯ ಹೊನ್ನಮ್ಮ, ಕಳಲೆ ನಂಜರಾಜ ಮುಂತಾದವರು ಅನೇಕ ಕೃತಿಗಳನ್ನು ರಚಿಸಿದ್ದಾರೆ. ಮುಮ್ಮಡಿ ಕೃಷ್ಣರಾಜಒಡೆಯರವರ ಕಾಲದಲ್ಲಿ ಅಳಿಯ ಲಿಂಗರಾಜ, ದೇವಲಾಪುರದ ನಂಜುಂಡ, ಕೆಂಪುನಾರಾಯಣಶಾಸ್ತ್ರಿ, ಸೀತಾರಾಮಶಾಸ್ತ್ರಿ ಮೊದಲಾದವರು ಅನೇಕ ಗದ್ಯಗ್ರಂಥಗಳನ್ನೂ ಯಕ್ಷಗಾನ ಪ್ರಬಂಧಗಳನ್ನೂ ರಚಿಸಿದ್ದಾರೆ. ಚಾಮರಾಜ ಒಡೆಯರವರ ಕಾಲದಲ್ಲಿ ಅನೇಕಕವಿಗಳು ಸಂಸ್ಕೃತದಿಂದಲೂ ಇಂಗ್ಲಿಷಿನಿಂದಲೂ ನಾಟಕಗಳನ್ನು ಪರಿವರ್ತಿಸಿ ನಾಗರಿಕರಿಗೆ ಹೃದಯಂಗಮವಾಗುವಂತೆ ಅಭಿನಯಿಸಿ ತೋರಲು ಅನುಕೂಲವಾಗುವಹಾಗೆ ರಚಿಸಿದ್ದಾರೆ.

ಈ ರೀತಿಯಲ್ಲಿ ಕರ್ಣಾಟಕಕವಿತೆ ರಾಷ್ಟ್ರಕೂಟರ ಕಾಲದಲ್ಲಿ ಗೋದಾವರೀ ತೀರದಲ್ಲಿ ಕಿಸುವೊಳಲೇ ಮೊದಲಾದ ಸ್ಥಳಗಳಲ್ಲಿ ಉತ್ತಮಸ್ಥಿತಿಯಲ್ಲಿದ್ದು ಅನಂತರ ದಕ್ಷಿಣಾಭಿಮುಖವಾಗಿ ಹೊರಟು ಚಾಲುಕ್ಯರಿಂದ ಪೋಷಿತವಾಗಿ ಬಳಿಕ ಹೊಯ್ಸಳರ ಕೈಸೇರಿ ತರುವಾಯ ವಿಜಯನಗರದಲ್ಲಿದ್ದು ಆಮೇಲೆ ಕಾವೇರೀತೀರದಲ್ಲಿ ಮೈಸೂರರಸರ ಪರಿಪಾಲನೆಯಲ್ಲಿ ನಿಂತಹಾಗೆ ತೋರುತ್ತದೆ.

---

1. ಇನ್ನೂ ಹೆಚ್ಚು ವಿಷಯಗಳನ್ನು ತಿಳಿಯಬೇಕಾದರೆ ದ್ವಿತೀಯ ಸಂಪುಟದ ಅವತರಣಿಕೆಯ 12—22 ಪುಟಗಳನ್ನು ನೋಡಿ.

## ಕರ್ಣಾಟಕ ಕವಿಚರಿತೆ.

ಹಿಂದಣ ಮುದ್ರಣದ ಅವತರಣಿಕೆಯಲ್ಲಿ (ಪುಟ 15) ಹೇಳಿರುವಂತೆ ಈ ಗ್ರಂಥದಲ್ಲಿ ಒಬ್ಬೊಬ್ಬ ಕವಿಯ ಚರಿತೆಯೂ ಪ್ರಾಯಿಕವಾಗಿ ಈ ಕ್ರಮದಲ್ಲಿ ಬರೆದಿದೆ:—

ಮೊದಲು ಕವಿಯ ಹೆಸರೂ ಅದರ ಪಕ್ಕದಲ್ಲಿ ವರ್ಷ ಸಂಖ್ಯೆಯೂ ಕೊಟ್ಟಿವೆ. ವರ್ಷ ಸಂಖ್ಯೆಗಳೆಲ್ಲಾ ಕ್ರಿಸ್ತಶಕೆಗೆ ಅನ್ವಯಿಸುತ್ತವೆ ಎಂದು ತಿಳಿಯಬೇಕು. ಈ ವರ್ಷಸಂಖ್ಯೆ ಪ್ರಾಯಿಕವಾಗಿ ಗ್ರಂಥರಚನಾಕಾಲವನ್ನು ಸೂಚಿಸುತ್ತದೆ. ಕೆಲವು ಕಡೆ ಈ ಸಂಖ್ಯೆಯ ಹಿಂದೆ ಸುಮಾರು ಎಂಬ ಅರ್ಥವನ್ನು ಸೂಚಿಸುವಂತೆ ಸು. ಎಂಬ ಅಕ್ಷರವು ಬರೆದಿದೆ. ಬಳಿಕ ಆ ಕವಿಯಿಂದ ರಚಿತವಾದ ಗ್ರಂಥಗಳ ಹೆಸರು ಕೊಟ್ಟಿದೆ. ಕೆಲವೆಡೆಗಳಲ್ಲಿ ಆ ಕವಿ ಬರೆದುದಾಗಿ ಇತರಕಾರಣಗಳಿಂದ ತಿಳಿಯ ಬರುವ ಗ್ರಂಥಗಳ ಹೆಸರೂ ಸೇರಿಸಿದೆ. ತರುವಾಯ ಕವಿಯ ದೇಶ, ವಂಶ, ಮತ, ಗುರು, ಪೋಷಕ, ಬಿರುದುಗಳು ಇವೇ ಮೊದಲಾದ ಅವನ ಜೀವನವೃತ್ತಾಂತದ ಅಂಶಗಳು ಹೇಳಿವೆ. ಅನಂತರ ವಿಚಾರಪೂರ್ವಕವಾಗಿ ಕಾಲನಿರ್ಣಯ ಮಾಡಿದೆ. ಆ ಮೇಲೆ ಆ ಕವಿಯನ್ನು ಸ್ತುತಿಸುವ ಇತರಕವಿಗಳ ಹೆಸರುಗಳು ಕೊಟ್ಟಿವೆ. ಅಲ್ಲಿಂದ ಮುಂದೆ ಆ ಕವಿ ಸ್ಮರಿಸುವ ಪೂರ್ವಕವಿಗಳ ಹೆಸರುಗಳು ಹೇಳಿವೆ. ಅನಂತರ ಆ ಕವಿ ತನ್ನ ಕವಿತಾಚಾತುರಿ, ಗುಣಗಳು ಮೊದಲಾದುವನ್ನು ಹೇಳಿಕೊಳ್ಳುವ ಪದ್ಯಗಳು ಉದ್ಧರಿಸಿ ಬರೆದಿವೆ. ಬಳಿಕ ಕವಿಕೃತವಾದ ಗ್ರಂಥ ಗಳನ್ನು ಒಂದೊಂದಾಗಿ ತೆಗೆದುಕೊಂಡು ಅದರವರ ಸ್ವರೂಪ, ಪ್ರತಿಪಾದ್ಯವಿಷಯ, ಕಥಾಗರ್ಭ, ಆಶ್ವಾಸ ಸಂಖ್ಯೆ, ಇಷ್ಟದೇವತಾಸ್ತುತಿ, ಗುರುಪರಂಪರೆ, ಗ್ರಂಥ ರಚನೆಗೆ ಕಾರಣ ಮೊದಲಾದುವನ್ನು ವಿವರಿಸಿ ಬಳಿಕ ಆಶ್ವಾಸಾಂತ್ಯಗಳಲ್ಲಿ ದೊರೆವ ಗದ್ಯಗಳು ಅನುವಾದಮಾಡಲ್ಪಟ್ಟಿವೆ. ಅನಂತರ ಗ್ರಂಥದ ಬಂಧದ ವಿಷಯವಾಗಿ ಒಂದೆರಡು ಮಾತುಗಳನ್ನು ಹೇಳಿ ಕವಿತೆಯ ಧೋರಣೆಯನ್ನು ತೋರಿಸುವುದಕ್ಕಾಗಿ ಕೆಲವು ಪದ್ಯಗಳು ಉದಾಹೃತವಾಗಿವೆ.

ಪ್ರಾಯಿಕವಾಗಿ ಈ ಕ್ರಮವನ್ನು ಅನುಸರಿಸಿ ಕವಿಗಳ ಚರಿತೆ ಬರೆಯಲ್ಪ ಟ್ಟಿದ್ದರೂ ಮೇಲೆ ವಿವರಿಸಿದ ಅಂಶಗಳೆಲ್ಲಾ ತಿಳಿದುಬಾರದಿರುವ ಕೆಲವರು ಕವಿಗಳ ಚರಿತೆ ಯಥೋಚಿತವಾಗಿ ಸಂಕ್ಷೇಪಿಸಿ ಬರೆದಿದೆ.

### ಪ್ರಥಮ ಸಂಪುಟ.

ಕರ್ಣಾಟಕಕವಿಚರಿತೆಯ ಪ್ರಥಮ ಸಂಪುಟವು ಹಲವು ವರ್ಷಗಳಿಗೆ ಹಿಂದೆ, 1907 ರಲ್ಲಿ, ಮುದ್ರಿತವಾಯಿತು. ಆ ಮುದ್ರಣದ ಪ್ರತಿಗಳೆಲ್ಲಾ ಮುಗಿದು ಹೋದುದರಿಂದ ಪುಸ್ತಕವನ್ನು ಪರಿಷ್ಕರಿಸಿ ಮತ್ತೊಂದು ಮುದ್ರಣವನ್ನು ಕೈಗೊ

ಳ್ಳುವುದು ಉಚಿತವೆಂದು ತೋರಿತು. ಅದೇ ಮೇರೆಗೆ ತಿದ್ದುವ ಕೆಲಸವು ಒಂದೂವರೆ ವರ್ಷಕ್ಕೆ ಹಿಂದೆಯೇ ಆರಂಭವಾಗಿ ಪುಸ್ತಕವು ಈ ರೀತಿಯಾಗಿ ಮುದ್ರಿತವಾಗಿದೆ. ಇದರಲ್ಲಿ ಪ್ರಥಮ ಸಂಪುಟದ ಹಿಂದಣ ಮುದ್ರಣದ 1 ನೆಯ ಪರಿಶಿಷ್ಟದಲ್ಲಿಯೂ ದ್ವಿತೀಯ ಸಂಪುಟದ ಮೊದಲು 42 ಪುಟಗಳು, 3 ನೆಯ ಪರಿಶಿಷ್ಟ ಇವುಗಳಲ್ಲಿಯೂ ಹೇಳಿರುವ ಕವಿಗಳನ್ನು ಸೇರಿಸಿರುವುದಲ್ಲದೆ ಹಲವರು ಹೊಸಕವಿಗಳ ಚರಿತೆಯೂ, ಶಾಂತಿನಾಥನ ಸುಕುಮಾರಚರಿತೆ (ಪುಟ 83) ಹರೀಶ್ವರನ ಮುಡಿಗೆಯ ಅಷ್ಟಕ (ಪುಟ 234) ಆಚಣ್ಣನ ಶ್ರೀಪದಾಶೀತಿ (ಪುಟ 304) ಇವೇ ಮೊದಲಾದ ಹಿಂದೆ ದೊರೆಯದ ಹಲವು ಹೊಸಗ್ರಂಥಗಳೂ ಸೇರಿಸಿವೆ. ಅಲ್ಲದೆ ವೀರಶೈವವಚನಕಾರರಲ್ಲಿ ಹಿಂದೆ ತಿಳಿಯದೆ ಇದ್ದ ಕೆಲವರ ಚರಿತೆಯನ್ನು ಬರೆದಿರುವುದಲ್ಲದೆ ದ್ವಿತೀಯ ಸಂಪುಟದಲ್ಲಿ ಸರಿಯಾಗಿ ಬರೆಯದೆ ಇದ್ದ ಹಲವರು ವಚನಕಾರರ ಚರಿತೆ ತಿದ್ದಿ ಬರೆಯಲ್ಪಟ್ಟಿದೆ (ಪುಟಗಳು 189–210). ಹಿಂಪಣ ಮುದ್ರಣದಲ್ಲಿ ಹೇಳಿರುವ ಕವಿಗಳ ಸಂಖ್ಯೆ ಸುಮಾರು 230 ; ಇದರಲ್ಲಿಯ ಕವಿಗಳ ಸಂಖ್ಯೆ ಸುಮಾರು 280 ಈ ಕವಿಗಳಲ್ಲಿ ಸುಮಾರು 40 ಮಂದಿ ಶಾಸನಗಳನ್ನು ಬರೆದಿದ್ದಾರೆ. ಮತಗಳ ಪ್ರಕಾರ ವಿಂಗಡಿಸಿದರೆ ಸುಮಾರು 95 ಮಂದಿ ಜೈನರೂ 90 ಮಂದಿ ವೀರಶೈವರೂ 45 ಮಂದಿ ಬ್ರಾಹ್ಮಣರೂ 50 ಮಂದಿ ಇತರರೂ ಆಗಿದ್ದಾರೆ. ಈ ಕವಿಗಳಲ್ಲಿ 6 ಮಂದಿ ಹೆಂಗಸರು. ಅವತರಣಿಕೆಯಲ್ಲಿಯೂ ತಿದ್ದುಪಾಡುಗಳು ಮಾಡಿವೆ. ಹಿಂದಣ ಮುದ್ರಣಕ್ಕೆ ಸೇರಿಸಿದ್ದ ಅನುಬಂಧದಲ್ಲಿಯ ಕವಿಗಳೂ ಗ್ರಂಥಗಳೂ ಬಹಳ ಮಟ್ಟಿಗೆ ದ್ವಿತೀಯ ತೃತೀಯ ಸಂಪುಟಗಳಲ್ಲಿ ಸೇರಿರುವುದರಿಂದ ಆ ಅನುಬಂಧವು ಈ ಮುದ್ರಣದಲ್ಲಿ ಬಿಡಲ್ಪಟ್ಟಿದೆ. ಉಳಿದಿರುವ ಕವಿಗಳ ಮತ್ತು ಗ್ರಂಥಗಳ ಪಟ್ಟಿ ತೃತೀಯ ಸಂಪುಟಕ್ಕೆ ಅನುಬಂಧವಾಗಿ ಕೊಡಲ್ಪಡುವುದು.

ಈ ಪುಸ್ತಕವನ್ನು ಪರಿಷ್ಕರಿಸುವುದರಲ್ಲಿ ಕೆಲವರು ಮಹನೀಯರು ಆದರದಿಂದ ಸಹಾಯಮಾಡಿದ್ದಾರೆ. ಇವರೊಳಗೆ ದಾವಣಗೆರೆ ನಿಶಾನಿಮಠದ ಶ್ರೀಮಾರ್ ಶಾಂತವೀರಾರ್ಯರು ಮಾಡಿದ ಸಹಾಯವು ಮುಖ್ಯವಾಗಿ ತಿಳಿಸತಕ್ಕದಾಗಿದೆ. ವೀರಶೈವ ವಚನಕಾರರು ಪ್ರಾಯಿಕವಾಗಿ ತಮ್ಮ ವಚನಗಳಲ್ಲಿ ಇಷ್ಟದೇವತೆಯ ಅಂಕಿತವನ್ನು ಹೇಳುವರೇ ಹೊರತು ತಮ್ಮ ಹೆಸರನ್ನು ಹೇಳುವುದಿಲ್ಲ. ಆದುದರಿಂದ ಇಂಥಿಂಥ ವಚನಕಾರರು ಇಂಥಿಂಥ ಅಂಕಿತಗಳನ್ನು ಉಪಯೋಗಿಸುತ್ತಾರೆ ಎಂಬಂಶವು ತಿಳಿದ ಹೊರತು ಆವುವಾದರೂ ವಚನಗಳನ್ನು ನೋಡಿ ತತ್ಕರ್ತೃಗಳು ಇಂಥವರು ಎಂದು ಹೇಳಲು ಸಾಧ್ಯವಲ್ಲ. ಶ್ರೀಮಾರ್ ಶಾಂತವೀರಾರ್ಯರಿಗೆ ಅದೃಷ್ಟವಶಾತ್ ಸಿಕ್ಕಿದ ಒಂದು ಓಲೆಯ ಪುಸ್ತಕದಲ್ಲಿ ಅನೇಕ ವಚನಕಾರರ ಹೆಸರೂ ಅವರ ವಚನಗಳೂ ಆ ವಚನಗಳ ಸಂಖ್ಯೆಯೂ ಕೊಟ್ಟಿವೆ. ಈ ಪುಸ

ಕವು 1747 ರಲ್ಲಿ ಬರೆದುದು; ಇದರಲ್ಲಿ 3222 ವಚನಗಳಿವೆ. ಅವರು ಕೊಟ್ಟ ಈ ಪುಸ್ತಕದ ಪ್ರತಿಯು ಸಹಾಯದಿಂದ ವಚನಕಾರರ ವಿಷಯವಾಗಿ ಬಿದ್ದಿದ್ದ ತಪ್ಪುಗಳನ್ನು ತಿದ್ದುವುದಕ್ಕೂ ಹೊಸವಚನಕಾರರನ್ನು ಸೇರಿಸುವುದಕ್ಕೂ ಅನುಕೂಲವಾಯಿತು. ಆದರೂ ಇನ್ನೂ ಅನೇಕ ವಚನಕಾರರ ಹೆಸರು ತಿಳಿದಿಲ್ಲ (ಪುಟ 211). ಬಿಜಾಪುರ ಜಿಲ್ಲೆಗೆ ಸೇರಿದ ಹಲಸಂಗಿಯ ಶ್ರೀವರ್ಮ ಚೆನ್ನಮಲ್ಲಪ್ಪನವರೂ 449 ನೆಯ ಪುಟದಲ್ಲಿ ಹೇಳಿರುವ ಬಿಜಾಪುರದ ಶಾಸನದ ಪ್ರತಿಯನ್ನು ಕಳುಹಿಸಿಕೊಟ್ಟು ಸಹಾಯಮಾಡಿದ್ದಾರೆ. ಈ ಶಾಸನವು ಬಿಜಾಪುರದೊಡನೆ ಸಂಬಂಧವುಳ್ಳ ನಾಗಚಂದ್ರನಿಂದ ರಚಿತವಾಗಿರಬಹುದೋ ಎಂಬ ಊಹೆಗೆ ಅವಕಾಶವಿದೆ.

ಇನ್ನು, ಕೆಲವು ಪತ್ರಿಕೆಗಳಲ್ಲಿ ಕವಿಚರಿತೆಯ ವಿಷಯವಾಗಿಯೂ ನನ್ನ ವಿಷಯವಾಗಿಯೂ ಬರೆದಿರುವ ಅಂಶಗಳನ್ನು ಕುರಿತು ಒಂದೆರಡು ಮಾತುಗಳನ್ನು ಆಡಬೇಕಾಗಿದೆ. ಕನ್ನಡ ಪರಿಷತ್ಪತ್ರಿಕೆಯಲ್ಲಿ (ಜನವರಿ 1922, ಪುಟಗಳು 280–282) ಶ್ರೀವರ್ಮ ಬಿ. ಎಸ್. ಕೃಷ್ಣಮೂರ್ತಿಗಳು "ಗುಣಸೇನಪಂಡಿತನ ಹೆಸರು ಕವಿಚರಿತೆಯ ಎರಡು ಸಂಪುಟಗಳಲ್ಲಿಯೂ ಹೇಳಿಲ್ಲ; ಈತನಿಗೆ ಕನ್ನಡದಲ್ಲಿಯೂ ಪಾಂಡಿತ್ಯವಿದ್ದಂತೆ ತೋರುವುದು" ಎಂದು ಬರೆದಿದ್ದಾರೆ. ಈತನು ಕನ್ನಡದಲ್ಲಿ ಬರೆದಿದ್ದಾನೆ ಎಂಬುದಕ್ಕೆ ನನಗೆ ಆವ ಆಧಾರವೂ ದೊರೆಯಲಿಲ್ಲವಾದುದರಿಂದ ಇವನ ಹೆಸರನ್ನು ಹೇಳಲಿಲ್ಲ. ಸರಿಯಾದ ಆಧಾರವು ಸಿಕ್ಕಿದರೆ ಇವನ ಹೆಸರನ್ನು ಸೇರಿಸಲು ಆವ ಅಡ್ಡಿಯೂ ಇಲ್ಲ. ಇದೇ ಪತ್ರಿಕೆಯಲ್ಲಿಯೂ ಇತರ ಪತ್ರಿಕೆಗಳಲ್ಲಿಯೂ ಕವಿರಾಜಮಾರ್ಗದ ಕರ್ತೃವಿನ ವಿಷಯವಾಗಿ ಅನೇಕ ವಾಗ್ಯುದ್ಧಗಳು ನಡೆದಿವೆ. ಈ ಯುದ್ಧದಲ್ಲಿ ಅನ್ವಯಿಸುವ ಶಕ್ತಿ ನನಗಿಲ್ಲ. ಶ್ರೀವರ್ಮ ನಾರಾಯಣ ಶ್ರೀನಿವಾಸ ರಾಜಪುರೋಹಿತರು ಈ ಯುದ್ಧದಲ್ಲಿ ವಿಶೇಷವಾಗಿ ಅನ್ವಯಿಸಿ ಹಲವು ಆಯುಧಗಳನ್ನು ಜಳಪಿಸಿದ್ದಾರೆ. ಆದರೆ ಇದರಿಂದ ಕನ್ನಡಿಗರಿಗೆ ವಿಶೇಷ ಪ್ರಯೋಜನವಾದಂತೆ ಕಾಣುವುದಿಲ್ಲ. ಈ ವಾದದ ಗುಣಾವಗುಣಗಳನ್ನು ವಿಚಾರಮಾಡಲು ಇಲ್ಲಿ ಅವಕಾಶವಿಲ್ಲ; ಇಷ್ಟು ಮಟ್ಟು ಮಾತ್ರ ಹೇಳಬಹುದು: ಜೈನನಾದ ನೃಪತುಂಗನು ಬ್ರಾಹ್ಮಣರ ಭಗವದ್ಗೀತೆಯ

ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ।
ತತ್ರ ಶ್ರೀರ್ವಿಜಯೋ ಭೂತಿರ್ಧ್ರುವಾ ನೀತಿರ್ಮತಿರ್ಮಮ ॥

ಎಂಬ ಶ್ಲೋಕದಲ್ಲಿ ಉಕ್ತವಾದ ಕೆಲವು ಪದಗಳನ್ನೇ ತನಗೆ ಬಿರುದುಗಳಾಗಿ ಮಾಡಿಕೊಳ್ಳಲು ಕುತೂಹಲಿಯಾದುದಕ್ಕೆ ಕಾರಣವು ಗೋಚರವಾಗುವುದಿಲ್ಲ. ಶ್ರೀವಿಜಯ ಎಂಬ ಬಿರುದು ನೃಪತುಂಗನಿಗೆ ಉಂಟೆಂದು ತೋರಿಸುವುದಕ್ಕೆ ಶ್ರೀವರ್ಮ ರಾಜಪುರೋಹಿತರು

ವೀರಶ್ರೀ ವಿಜಯನ ಕೆ । ಯ್ನಾರೆ ಸುರಾಂಗನೆಯರೊಸೆದು ಪರಸುವ ರವಮುಂ ।
ಘೋರೆಂದೆಸಗುವ ಕುಸುಮಾ । ಸಾರವ ಬಲ್ಸರಿಯುಮೆಸೆದುವಂಬರತಳದೊಳ್ ॥

ಎಂಬ ಪದ್ಯವನ್ನು ಉದಾಹರಿಸಿದ್ದಾರೆ (ಪರಿಷತ್ಪತ್ರಿಕೆ, ಜುಲೈ 1923). ಈ ಪದ್ಯದಲ್ಲಿ ಶ್ರೀವಿಜಯ ಎಂಬ ಬಿರುದೇ ಇಲ್ಲ. ವೀರಶ್ರೀ ಎಂಬುದು ಕರ್ತೃ. ವಿಜಯ ಎಂದರೆ ಅರ್ಜುನ. ವೀರಲಕ್ಷ್ಮಿ ಅರ್ಜುನನ ಕೈಸೇರಲು ಸುರಾಂಗನೆಯರು ಹರಸಿದರು, ಪುಷ್ಪವೃಷ್ಟಿಯಾಯಿತು—ಎಂಬುದು ಈ ಪದ್ಯದ ಅರ್ಥವು. ಶ್ರೀಮಾನ್ ಟಿ. ಎಸ್. ಸುಬ್ಬರಾಯಶಾಸ್ತ್ರಿಗಳು ಪ್ರಬುದ್ಧ ಕರ್ಣಾಟಕದಲ್ಲಿ (ದುಂದುಭಿ ವರ್ಷದ ದೀಪಾವಳೀ ಸಂಚಿಕೆ, ಪುಟಗಳು 5–16) 1763 ರಲ್ಲಿ ಹುಟ್ಟಿದ ಚೋರ ಬಸವಚರಿತ್ರೆ ಎಂಬ ಆಧುನಿಕಗ್ರಂಥದ ಕೆಲವು ಹೇಳಿಕೆಗಳನ್ನು ಅವಲಂಬಿಸಿ ಕುಮಾರವ್ಯಾಸನು ಚಾಮರಸನ ಸಮಕಾಲದವನಾದ ಹರೀಶ್ವರನ (ಸು. 1165) ಸಮಕಾಲದವನೆಂದು ನಿರ್ಧರಿಸಿದ್ದಾರೆ. ಈ ಗ್ರಂಥಕ್ಕಿಂತ ಸುಮಾರು 100 ವರ್ಷ ಹಿಂದೆ ಹುಟ್ಟಿರುವ ಭೈರವೇಶ್ವರಕಥಾಸೂತ್ರರತ್ನಾಕರದಲ್ಲಿ ಪ್ರೌಢರಾಯ (1419–1446), ಜಕ್ಕಣಾರ್ಯ, ಚಾಮರಸ, ವೀರಣ್ಣೊಡೆಯ, ಕರಸ್ಥಲದನಾಗಿದೇವ, ಕಲ್ಲುಮಠದ ಪ್ರಭು ಇವರೆಲ್ಲರೂ ಸಮಕಾಲದವರೆಂದು ಹೇಳಿದೆ. ಅಲ್ಲದೆ ಹರೀಶ್ವರನಿಗೆ ಹರಿಹರ ಶಿವಾಚಾರ್ಯ ಎಂಬ ಹೆಸರು ಚೋರಬಸವಚರಿತ್ರೆಯಲ್ಲಿ ಹೊರತು ಇನ್ನಾವ ವೀರಶೈವ ಗ್ರಂಥದಲ್ಲಿಯೂ ಹೇಳಿರುವಂತೆ ತಿಳಿವುದಿಲ್ಲ. ಕಾಲನಿರ್ಣಯ ವಿಷಯದಲ್ಲಿ ಈ ಗ್ರಂಥವನ್ನು ಎಷ್ಟರಮಟ್ಟಿಗೆ ನಂಬಬಹುದು ಎಂಬಂಶವು ಶಾಸ್ತ್ರಿಗಳು ಅನುವಾದ ಮಾಡಿರುವ ಈ ಒಂದು ವಾಕ್ಯದಿಂದಲೇ ವ್ಯಕ್ತವಾಗುತ್ತದೆ (ಪುಟ 7) :—

"ಹಂಪೆಯಲ್ಲಿ ರಾಘವ, ಭೀಮಕವಿ, ಲಕ್ಕಣ್ಣಮಂತ್ರಿ ಮೊದಲಾದ ಶಿವಭಕ್ತ ಕವಿಗಳ ಮಧ್ಯದಲ್ಲಿ ಬೆಳಗುತ್ತಿದ್ದ ಹರಿಹರ ಶಿವಾಚಾರ್ಯನೆಡೆಗೈತಂದು ಚಾಮರಸನು ಅವನೊಡನೆ ಪ್ರಭುಲಿಂಗಲೀಲೆಯನ್ನು ಹೇಳುತ್ತಿದ್ದನು."

ಇಲ್ಲಿ ಒಟ್ಟಿಗೆ ಕುಳಿತಿದ್ದಂತೆ ಹೇಳಿರುವವರಲ್ಲಿ ಹರೀಶ್ವರನ ಮತ್ತು ರಾಘವನ ಕಾಲ ಸುಮಾರು 1165 ; ಭೀಮಕವಿಯ ಕಾಲ 1369 ; ಲಕ್ಕಣ್ಣಮಂತ್ರಿಯ ಕಾಲ 1428.

ವೀರಶೈವ ಧರ್ಮಪ್ರಕಾಶಿಕೆ (ಜುಲೈ 1922), ವಿಭಾಕರ (ಜೂನ್ 30, 1922) ಈ ಪತ್ರಿಕೆಗಳು ವಸ್ತುಸ್ಥಿತಿಯನ್ನು ತಿಳಿಯದೆ ಭ್ರಮಿಸಿ ನನ್ನ ಮೇಲೆ ಕೆಲವು ದೋಷಗಳನ್ನು ಆರೋಪಿಸಿವೆ. ಮೊದಲನೆಯ ಪತ್ರಿಕೆಯಲ್ಲಿ ಈ ಮಾತುಗಳು ಹೇಳಿವೆ :—"ಶ್ರೀಮದ್ವೀರಶೈವಮತದ ಮೇಲೆ ಕರ್ಣಾಟ ಕವಿಚರಿತೆಯ ಕರ್ತರು ಪರಮತದವರಾದಕಾರಣ ವಿಷವನ್ನು ಕಾರಿರುವರೆಂದು ವೇ॥ ಶಾಂತವೀರಯ್ಯ, ನಿಶಾನಿಮಠ ಇವರು ತುಂಬಾ ಶ್ರಮವಹಿಸಿ ಶೋಧಿಸಿ ಕಳುಹಿಸಿರುವ ವಿಷಯ

ಗಳನ್ನು ಓದಿದ ಎಂಥವರಿಗಾದರೂ ತಿಳಿಯದೆ ಇರಲಾರದು. ಇವರು ಕಷ್ಟಪಟ್ಟು ಪುರಾತನ ತಾಳವಾಲಿ ಗ್ರಂಥಗಳನ್ನು ಶೋಧಿಸಿ ಪರಮತದವರು ನಮ್ಮ ಮತದ ಮೇಲೆ ಕಾರಿರುವ ವಿಷಕ್ಕೆ ತಕ್ಕ ಔಷಧವನ್ನು ತಯಾರುಮಾಡುತ್ತಿರುವರು." ನಾನು ಕೆಲವರು ವೀರಶೈವ ವಚನಕಾರರ ಹೆಸರನ್ನು ಹೇಳಲಿಲ್ಲ ಎಂಬುದಕ್ಕಾಗಿ ಈ ಕಠಿನೋಕ್ತಿಗಳು ಪ್ರಯೋಗಿಸಿವೆ. ದ್ವಿತೀಯ ಸಂಪುಟವನ್ನು ಬರೆದಾಗ ನಾನು ಸಾವಿರಾರು ಓಲೆಯ ಪುಸ್ತಕಗಳನ್ನು ಶೋಧಿಸಿದೆನು. ಆದರೆ ಶ್ರೀಮಾನ್ ಶಾಂತ ವೀರಾರ್ಯರಿಗೆ ಸುಯೋಗದಿಂದ ಸಿಕ್ಕಿದಂತೆ ನನಗೂ ವಚನಕಾರರ ಹೆಸರನ್ನು ಹೇಳುವ ಒಂದು ಪುಸ್ತಕವು ಸಿಕ್ಕಿದ್ದರೆ ಒಂದು ಹೆಸರನ್ನಾದರೂ ಬಿಡುತ್ತಿರಲಿಲ್ಲ. ಆಕಾಲದಲ್ಲಿ ತಿಳಿದಿರಲಿಲ್ಲವಾದುದರಿಂದ ಹೇಳಲಿಲ್ಲ. 'ಅನ್ಯಮತ', 'ವಿಷಕಾರು ವುದು' ಎಂಬ ನುಡಿಗಳು ನನಗೆ ಬಹಳ ಖೇದಕರವಾಗಿವೆ. ಸಾಹಿತ್ಯ ಸಾಮ್ರಾಜ್ಯ ದಲ್ಲಿ ಮತ, ವರ್ಣ, ಸಿರಿ, ಬಡತನ ಮುಂತಾದ ಭಾವನೆಗಳಿಗೆ ಎಡೆಯೇ ಇಲ್ಲ. ವೀರಶೈವ ಕವಿಗಳ ಚರಿತೆಯನ್ನು ಬರೆವುದರಲ್ಲಿ ನಾನು ತೋರಿಸಿರುವ ನಿಷ್ಪಕ್ಷ ಪಾತತೆಗೆ ಅನೇಕ ವೀರಶೈವ ಮಹನೀಯರು ಆನಂದಿಸಿ ತಮ್ಮ ಮೆಚ್ಚಿಕೆಯನ್ನು ತಿಳಿಸಿದ್ದಾರೆ. ವಿಭಾಕರದಲ್ಲಾದರೋ ಈ ಮಾತುಗಳು ಹೇಳಿವೆ:—"ರಾ. ನರ ಸಿಂಹಾಚಾರ್ಯರು ತಮಗೆ ಸಂಬಳವು ದೊರೆಯುವದೆಂದು ಪರಿಶ್ರಮಿಸಿ ಶೋಧ ಮಾಡಿದರು ಮತ್ತು ಆ ಗ್ರಂಥಕರ್ತರ (ವಚನಕಾರರ) ಹೆಸರು ಬರೆಯೋಣ ವೆಂದರೆ ವೀರಶೈವ ಶರಣರ ಕೀರ್ತಿಯು ಹೆಚ್ಚುಬಹುದೆಂತಲೋ ಏನೋ ಕಾರಣ ದಿಂದ ಬಿಟ್ಟಿರಬಹುದು" ಈ ವಿಷಬಾಣ ಪ್ರಯೋಗಕ್ಕೆ ನಾನು ಸರ್ವಾತ್ಮನಾ ಪಾತ್ರವಲ್ಲ. ಕವಿಚರಿತೆಯನ್ನು ನಾನು ಸರಕಾರಕ್ಕಾಗಿ ಸಂಬಳವನ್ನು ಹೊಂದಿ ಬರೆಯಲಿಲ್ಲ; ಭಾಷಾಸೇವೆಯನ್ನು ಮಾಡಬೇಕೆಂಬ ಉತ್ಕಟೇಚ್ಛೆಯಿಂದ ಶ್ರಮ ಪಟ್ಟು ಸ್ವಂತ ದ್ರವ್ಯವನ್ನು ವ್ಯಯಮಾಡಿ ಪ್ರಕಟಿಸಿದೆನು. ವಚನಕಾರರ ಅಂಕಿತ ಗಳನ್ನೆಲ್ಲಾ ಕೊಟ್ಟಿದ್ದೇನೆ: ಹೆಸರು ಆಕಾಲದಲ್ಲಿ ದೊರೆಯಲಿಲ್ಲವಾದುದರಿಂದ ಹೇಳಲಿಲ್ಲ. ಇಷ್ಟುಮಾತ್ರಕ್ಕೆ ಮತ್ಸರಗ್ರಸ್ತನೆಂದು ಹೇಳುವುದು ಉಚಿತವೇ? ವೀರಶೈವರ ಸಾಹಿತ್ಯ ಸಂಪತ್ತನ್ನು ಪ್ರಕಟಮಾಡುವುದರಲ್ಲಿ ಆವ ವೀರಶೈವನೂ ನನ್ನಷ್ಟು ಶ್ರಮಪಟ್ಟಿಲ್ಲ ಎಂದು ಧೈರ್ಯವಾಗಿ ಹೇಳಬಲ್ಲೆನು.

ಕನ್ನಡ ಸಾಹಿತ್ಯಪರಿಷತ್ಪತ್ರಿಕೆಯಲ್ಲಿ (ಅಕ್ಟೋಬರ್ 1922, ಪುಟಗಳು 171–184) ಶ್ರೀಮಾನ್ ತಿರುಮಲ ತಾತಾಚಾರ್ಯರು ಬರೆದಿರುವ ವಿಷಯವನ್ನು ಕುರಿತು ಒಂದು ಮಾತನ್ನು ಆಡುವುದು ಉಚಿತವಾಗಿ ತೋರುತ್ತದೆ. ಇವರು ಶಾಸನದ ಕೊನೆಯಲ್ಲಿ ಬರುವ 'ಬರೆದಂ' ಎಂಬುದು ಆ ಶಾಸನವನ್ನು ರಚಿಸಿದ ಕವಿಗೆ ಅನ್ವಯಿಸುತ್ತದೆ ಎಂದು ತಿಳಿದುಕೊಂಡಿರುವಂತೆ ತೋರುತ್ತದೆ. ಬೇರೆ ಆವ ವಿಧವಾದ ಸೂಚನೆಯೂ ಇಲ್ಲದೆ ಸುಮ್ಮನೆ ಬರೆದಂ ಎಂದಿದ್ದರೆ ಅದು

ಲೇಖಕನಿಗೆ ಅನ್ವಯಿಸುವುದೇ ಹೊರತು ಕವಿಗಲ್ಲ. ಕವಿಯಾದರೆ ಒರೆದಂ, ಪೇೞ್ದಂ ಎಂಬುವೇ ಮೊದಲಾದ ಪದಗಳಿರುತ್ತವೆ. ಆದುದರಿಂದ ಅವರು ಕವಿಗಳೆಂದು ಭಾವಿಸಿರುವ ಗುರುಭಕ್ತರಾಜಯ್ಯ, ರಾವಪಯ್ಯ, ಪ್ರತಿಕಂಠಕಾಮ ರಾಜ ಎಂಬವರು ಲೇಖಕರೇ ಹೊರತು ಕವಿಗಳಲ್ಲ.

ಈ ಮುದ್ರಣದಲ್ಲಿ ಲೋಪಗಳಿಲ್ಲ ಎಂದು ಹೇಳಲಾರೆನು, ಸಾಧ್ಯವಾದ ಮಟ್ಟಿಗೂ ಪರಿಷ್ಕರಿಸಿದ್ದೇನೆ ಎಂದು ಮಾತ್ರ ಹೇಳಬಲ್ಲೆನು. ಇದನ್ನು ಕನ್ನಡಿಗರಿಗೆ ಕಾಣಿಕೆಯಾಗಿ ಒಪ್ಪಿಸಿದ್ದೇನೆ. ಇದು ಅವರ ಮೆಚ್ಚಿಕೆಯನ್ನೂ ಪ್ರೋತ್ಸಾಹವನ್ನೂ ಪಡೆದರೆ ನನ್ನ ಶ್ರಮವು ಸಾರ್ಥಕವೆಂದು ಭಾವಿಸುವೆನು. ಈಗ ಮುದ್ರಣದಲ್ಲಿರುವ ತೃತೀಯ ಸಂಪುಟವೂ ಶೀಘ್ರವಾಗಿ ಹೊರಬೀಳಬೇಕೆಂದು ಹಾರೈಸುತ್ತೇನೆ.

ಈ ಗ್ರಂಥವನ್ನು ತಮಗೆ ಅರ್ಪಿಸಲು ಅಪ್ಪಣೆಯನ್ನು ದಯಪಾಲಿಸಿದುದಕ್ಕಾಗಿ ಶ್ರೀಮನ್ಮಹಾರಾಜರವರಿಗೆ ಅತ್ಯಂತ ಕೃತಜ್ಞನಾಗಿದ್ದೇನೆ.

ದ್ವಿತೀಯ ಸಂಪುಟದ ವಿಷಯವಾಗಿ ಸದಭಿಪ್ರಾಯಗಳನ್ನು ತಿಳಿಸಿದ ಮಹನೀಯರುಗಳ, ಐದುನೂರು ರೂಪಾಯಿ ಸಹಾಯ ದ್ರವ್ಯವನ್ನು ಕೊಟ್ಟು ಈ ಮುದ್ರಣಕ್ಕೆ ಸಹಕಾರಿಗಳಾದ ಮೈಸೂರು ವಿಶ್ವವಿದ್ಯಾನಿಲಯದ ಅಧಿಕಾರಿಗಳ, ಉಪಕಾರವು ಚಿರಸ್ಮರಣೀಯವಾಗಿದೆ.

ಈ ಪುಸ್ತಕವನ್ನು ಜಾಗ್ರತೆಯಾಗಿಯೂ ಜಾಗರೂಕತೆಯೊಡನೆಯೂ ಮುದ್ರಿಸಿದ ಬೆಂಗಳೂರು ಮುದ್ರಣಾಲಯದ ಮುಖ್ಯಾಧಿಕಾರಿಗಳ ಉಪಕಾರವು ಸ್ಮರಿಸತಕ್ಕುದಾಗಿದೆ.

ಮುನ್ನಂ ಕೃತಿರತ್ನಂಗಳ | ನೆನ್ನರುಮರ್ದೆಯಲ್ಲಿ ಧರಿಸುವನ್ನಂ ಸ್ವೇಚ್ಛಾ |
ಕನ್ನಡಕವಿಗಳ ಚರಿತಂ | ಕನ್ನಡಿಗರ ಬಗೆಗೆ ಮುದಮನೊದವಿಸುಗನಿಶಂ ||
ಶ್ರೀರಾಮಾನುಜಪದಸರ | ಸೀರುಹಷಟ್ಪದನನಂತದೇಶಿಕವಂಶ್ಯಂ |
ನಾರಾಯಣಾರ್ಯತನುಭವ | ನೋರಂತೊರೆದಂ ನೃಸಿಂಹಕವಿಯಾಕೃತಿಯಂ

Bangalore,
*1st March, 1924.*

ರಾ. ನರಸಿಂಹಾಚಾರ್ಯ.

---

ಶ್ರೀಃ

# ಕರ್ಣಾಟಕ ಕವಿಚರಿತೆ.

## ಪ್ರಥಮ ಸಂಪುಟ.

**ಸಮಂತಭದ್ರ, ಕವಿಪರಮೇಷ್ಠಿ, ಪೂಜ್ಯಪಾದ,** ಎಂಬ ಮೂವರು ಜೈನ ಕವಿಗಳನ್ನು, ಕನ್ನಡದಲ್ಲಿ ಗ್ರಂಥಗಳನ್ನು ಬರೆದಿರುವ ಪ್ರಬಲರಾದ ಜೈನಕವಿಗಳೆಲ್ಲಾ ತಮ್ಮತಮ್ಮ ಗ್ರಂಥಗಳ ಆದಿಭಾಗದಲ್ಲಿ ವಿಶೇಷವಾಗಿ ಸ್ತುತಿಸಿದ್ದಾರೆ:—

ಶ್ರೀಮತ್ಸಮಂತಭದ್ರ । ಸ್ವಾಮಿಗಳ ಜಗತ್ಪ್ರಸಿದ್ಧಕವಿಪರಮೇಷ್ಠಿ ।
ಸ್ವಾಮಿಗಳ ಪೂಜ್ಯಪಾದ । ಸ್ವಾಮಿಗಳ ಪದಂಗಳೀಗ ಶಾಶ್ವತಪದಮಂ ॥

**ಆದಿಪಂಪ.**

*** ಸಮಂತಭದ್ರ । ಖ್ಯಾತರ ಪದಪಾಂಸು ಕಿಡಿಸುಗಘಪಾಂಸುಗಳಂ ॥
ಕವಿಪರಮೇಷ್ಠಿಗಳ ಗುಣ । ಸ್ತವನಂಗಳ್ ಪೂಜ್ಯಪಾದಯತಿಪತಿಯ ಗುಣ ।
ಸ್ತವನಂಗಳೊರ್ಮೆ ನಾಲಗೆ । ಗೆ ವಂದ ಮಾನವನ ವಾಙ್ಮಲಂ ನಿಂದಪುದೇ ॥

**ಅಭಿನವಪಂಪ.**

ಸಮನಿಕೆ ಮನಸ್ಕಾನಸದೊಳ್ । ಸಮಂತಭದ್ರಾಂಘ್ರಿನಖರಕಾಂತಿಜಳಂ ಮ ।
ತ್ತಮಳಿನಕವಿಪರಮೇಷ್ಠಿ । ಕ್ರಮಕಮಳಂ ಪೂಜ್ಯಪಾದಪದನಖಕುಮುದಂ ॥

**ಅಗ್ಗಳ.**

ಹೀಗೆಯೇ **ಹೊನ್ನ, ನಯಸೇನ** ಮೊದಲಾದವರೂ ಹೊಗಳಿದ್ದಾರೆ.

ಈ ಮೂವರು ಕವಿಗಳು ಕನ್ನಡದಲ್ಲಿ ಗ್ರಂಥಗಳನ್ನು ಬರೆದಿರುವರೋ ಇಲ್ಲವೋ ತಿಳಿಯದು. ಆದರೂ ಇವರನ್ನು ಅನೇಕ ಕರ್ಣಾಟಕಕವಿಗಳು ಸ್ತುತಿಸುವುದರಿಂದ ಇವರ ವಿಷಯವನ್ನು ಸ್ವಲ್ಪಮಟ್ಟಿಗೆ ತಿಳಿದುಕೊಳ್ಳುವುದು ಆವಶ್ಯಕವು.

## ಸಮಂತಭದ್ರ. ಸು. 400.

ಈತನನ್ನು ಜಿನಸೇನನು (783) ತನ್ನ ಸಂಸ್ಕೃತದ ಆದಿಪುರಾಣದಲ್ಲಿಯೂ[1] **ಚಾವುಂಡರಾಯನು** (978) ತನ್ನ "ಚಾವುಂಡರಾಯ" ಪುರಾಣದಲ್ಲಿಯ:—

1. ನಮಸ್ಸಮಂತಭದ್ರಾಯ ಮಹತೇ ಕವಿವೇಧಸೇ ।
ಯದ್ವಚೋವಜ್ರಪಾತೇನ ನಿರ್ಭಿನ್ನಾಃ ಕುಮತಾದ್ರಯಃ ॥

ಅಭಿಮತವಾಗಿರೆ ತತ್ತ್ವಾ । ರ್ಥಭಾಷ್ಯಮಂ ತರ್ಕಶಾಸ್ತ್ರಮಂ ಬರೆದು ವಚೋ ।
ವಿಭವದಿನಿಳೆಗೆಸೆದ ಸಮಂ । ತಭದ್ರದೇವರ ಸಮಾನರೆಂಬರುಮೊಳರೇ ॥

ಎಂಬ ಪದ್ಯದಲ್ಲಿಯೂ ಸ್ತುತಿಸಿದ್ದಾರೆ.

ಇದಲ್ಲದೆ, ಶ್ರವಣಬೆಳ್ಗೊಳದ 67 ನೆಯ [1] ಶಾಸನದಲ್ಲಿ (1129) ಈತನ ವಿಷಯವಾಗಿ ಈ ಸಂಗತಿಗಳು ತಿಳಿಯಬರುತ್ತವೆ :—ಈತನು ಭಸ್ಮಕರೋಗವನ್ನು ನಾಶವಮಾಡಿಕೊಂಡು ಪದ್ಮಾವತೀದೇವಿಯಿಂದ ಉದಾತ್ತವಾದ ಪದವನ್ನು ಹೊಂದಿ ಮಂತ್ರಶಕ್ತಿಯಿಂದ ಚಂದ್ರಪ್ರಭಜಿನನನ್ನು ಆಹ್ವಾನಮಾಡಿ ಕಲಿಯುಗದಲ್ಲಿ ಜಿನಧರ್ಮಕ್ಕೆ ಸ್ರ್ವಾತಂತ್ರ್ಯವನ್ನು ಉಂಟುಮಾಡಿದನು. ವಾದಕ್ಕೋಸ್ಕರ ಪಾಟಲೀಪುತ್ರನಗರ, ಮಾಳವದೇಶ, ಸಿಂಧುದೇಶ, ಠಕ್ಕದೇಶ, ಕಾಂಚೀಪುರ, ವಿದಿಶೆ. ಕರಹಾಟಕದೇಶ, ಇವುಗಳಲ್ಲಿ ಸಂಚಾರ ಮಾಡಿದನು. ಇವನು ವಾದಕ್ಕೆ ನಿಂತರೆ ಈಶ್ವರನಿಗೂ ನಾಲಗೆ ಒಳಕ್ಕೆ ಎಳೆದುಕೊಳ್ಳುವುದು. [2]

ಇವನ ವಿಷಯವಾಗಿ ದೇವಚಂದ್ರನು [3] ತನ್ನ ರಾಜಾವಳೀಕಥೆಯಲ್ಲಿ (1838) ಹೀಗೆ ಬರೆದಿದ್ದಾನೆ.—

ಕಾಂಚೀಪುರಿಯೊಳು ಶಿವಕೋಟಿಮಹಾರಾಜನೆಂಬಾತನನುಜಂ ಶಿವಾಯನಂ ಬೆರಸು ರಾಜ್ಯಂಗೆಯ್ಯುತ್ತೆ ಕೋಟಿಲಿಂಗಸ್ಥಾಪನೆಗೆಯ್ದು ಅವಜ್ಜೊಳು ಭೀಮಲಿಂಗದ ಗುಡಿಯೊಳು ದಿನವೊಂದಕ್ಕೆ ದ್ವಾದಶಖಂಡುಗತಂಡುಲದ ಅನ್ನವಂ ವಿನಿಯೋಗಂಮಾಡಿಸುತ್ತಿರ್ಪಿನಮಿತ್ತ ಭೀಮರಥೀ ಕೃಷ್ಣವೇಣೀ ತೊಱೆಗಳ ಮಧ್ಯವಿಷಯದಲ್ಲಿರುವ ಉತ್ಕಲಿಕಾಗ್ರಾಮದೊಳುದ್ಭವಿಸಿದ ಸಮಂತಭದ್ರಾಚಾರ್ಯರೆಂಬ ಯತಿಪತಿಗಳು ಮಣುವಕಹಳ್ಳಿಯೊಳನಶನಾವಿತಪದಿಂ

1. ಈಸಂಖ್ಯೆಗಳು ಶ್ರವಣಬೆಳ್ಗೊಳದ ಶಾಸನಗಳ ಹೊಸಮುದ್ರಣಕ್ಕೆ ಅನ್ವಯಿಸುತ್ತವೆ.

2 ವಂದ್ಯೋ ಭಸ್ಮಕಭಸ್ಮಸಾತ್ಕೃತಿಪಟುಃ ಪದ್ಮಾವತೀದೇವತಾ।
ದತ್ತೋದಾತ್ತಪದಃ ಸಮಂತ್ರವಚನವ್ಯಾಹೂತಚಂದ್ರಪ್ರಭಃ॥
ಆಚಾರ್ಯಸ್ಸ ಸಮಂತಭದ್ರಗಣಭೃದ್ಯೇನೇಹಕಾಲೇ ಕಲೌ।
ಜೈನಂ ವರ್ತ್ಮ ಸಮಂತಭದ್ರಮಭವದ್ಭದ್ರಂ ಸಮಂತಾನ್ಮುಹುಃ॥
ಯಸ್ಯೈವಂ ವಿಧಾ ವಾದಾರಂಭ ಸಂರಂಭ ವಿಜೃಂಭಿತಾಭಿವ್ಯಕ್ತಯಸ್ಸೂಕ್ತಯಃ—
ಪೂರ್ವಂ ಪಾಟಲಿಪುತ್ರಮಧ್ಯನಗರೇ ಭೇರೀ ಮಯಾ ತಾಡಿತಾ।
ಪಶ್ಚಾನ್ಮಾಳವಸಿಂಧುಠಕ್ಕವಿಷಯೇ ಕಾಂಚೀಪುರೇ ವೈದಿಶೇ॥
ಪ್ರಾಪ್ತೋಹಂ ಕರಹಾಟಕಂ ಬಹುಭಟಂ ವಿದ್ಯೋತ್ಕಟಂ ಸಂಕಟಂ।
ವಾದಾರ್ಥೀ ವಿಚರಾಮ್ಯಹಂ ನರಪತೇ ಶಾರ್ದೂಲವಿಕ್ರೀಡಿತಂ॥
ಅವಟುತಟಮಟತಿ ಝಟಿತಿ ಸ್ಫುಟಪಟುವಾಚಾಟಧೂರ್ಜಟೇರಪಿ ಜಿಹ್ವಾ।
ವಾದಿನಿ ಸಮಂತಭದ್ರೇ ಸ್ಥಿತವತಿ ತವ ಸದಸಿ ಭೂಪ ಕಾಸ್ಥಾನ್ಯೇಷಾಂ॥

3. ಈತನು 1838 ರಲ್ಲಿ ರಾಜಾವಳೀಕಥೆಯೆಂಬ ಒಂದು ದೊಡ್ಡ ಗದ್ಯಗ್ರಂಥವನ್ನು ಬರೆದಿದ್ದಾನೆ ಅದರಲ್ಲಿ ಜೈನಮತಕ್ಕೆ ಸಂಬಂಧಿಸಿದ ಹಲವು ಇತಿಹಾಸಗಳೂ, ಅನೇಕರಾಜರ ಚರಿತ್ರೆಗಳೂ, ಕೆಲವು ಕವಿಗಳ ವಿಷಯಗಳೂ ದೊರೆಯುತ್ತವೆ.

ಕ್ರಿಯಾಯುಕ್ತರಾಗಿರಲೊಂದು ಕಾರಣಮಾಗೆ ಭಸ್ಮಕವ್ಯಾಧಿ ಪುಟ್ಟಿಯದಕ್ಕೆ ಪ್ರತೀಕಾರವಿಲ್ಲದುದಱಿಂ ಸ್ವಗುರುವ ಸಮೀಪಮನೆಯ್ದು—

ಉಪಸರ್ಗೇ ದುರ್ಭಿಕ್ಷೇ ಜರಸಿ ರುಜಾಯಾಂ ಚ ನಿಷ್ಪ್ರತೀಕಾರೇ।
ಧರ್ಮಾಯ ತನುವಿಮೋಚನಮಾಹುಸ್ಸಲ್ಲೇಖನಾಮಾರ್ಯಾಃ ॥

ಎಂದು ಸಲ್ಲೇಖನವಂ ಬೇಡುತ್ತಿರ್ಪುದುಂ ಗುರುಗಳಿಂತೆಂದರ್—ನಿಮ್ಮಿಂದಂ ಮುಂದೆ ಧರ್ಮೋದ್ಧಾರಮಪ್ಪುದಱಿಂ ಪೆರ್ಮ್ಮೆಯೊಳೆಲ್ಲಿ ತೃಪ್ತಿಯಪ್ಪಂತು ಭುಂಜಿಸಿ ರೋಗೋಪಶಮಮಾಗೆ ಪುನರ್ದೀಕ್ಷೆಗೊಳ್ವುದೆಂಬುದುಂ ಕಾಂಚೀಪುರಮನೆಯ್ದಿ ಶಿವಕೋಟಿಮಹಾರಾಜನಂ ಕಂಡಾಶೀರ್ವಾದಂಗುಡೆ ಅವರ ಶರೀರದ ಭದ್ರಾಕಾರಮುಂ ನಾಗ್ನ್ಯಲಮುಂ ನೋಡಿ ಆಶ್ಚರ್ಯಮಾಗಿ ಶಿವನೆಂದೇ ಬಗೆದು ನಮಸ್ಕರಿಸೆ, ಅವಂ ಮಾಡಿಪ್ಪ ಧರ್ಮಮೇನೆಂಬುದುಂ, ತನ್ನ ಶಿವಭಕ್ತಿ ಶಿವಾಚಾರಮುಂ ಶಿವಲಿಂಗಾರಾಧನೆಯುಂ ಭೀಮಲಿಂಗಕ್ಕೆ ಬಿಟ್ಟಿರ್ದ ಪಡಿತರಮುಂ ಪೇಳೆ, ನಿನ್ನ ಧರ್ಮಾನುಕೂಲಮುಂ ಶಿವಾರ್ಪಣಂ ಮಾಡಿಪ್ಪೆನೆಂದು ಪನ್ನೆರಡು ಖಂಡುಗದಕ್ಕಿಯನ್ನಕ್ಕೆ ತಕ್ಕ ವ್ಯಂಜನದರ್ಥವನಿಕ್ಕಿಸಿ ಕವಾಟಬಂಧಮುಂ ಮಾಡಿ ಪೋಗವೇೞ್ದು ತಾನುಮಾಭಕ್ತಮೆಲ್ಲಮನೊಂದಗುೞಿಯುಳಿಯದಂತೆ ತನ್ನುದರಾಗ್ನಿಗಾಹುತಿಗೊಟ್ಟು ತಣಿಪಿ ಕದಮಂ ತೆಱೆಯಲುತ್ತಾಕ್ಷರ್ಯಂಬಟ್ಟು ಮಱುದಿವಸಂ ರಾಶಿಯೊಳರ್ಧಾಂಶದೊಳೊಂದಂಶಮುಳಿಯದೊಡೆ ಇದೇಕುೞಿದುದೆಂದು ಬೆಸಗೊಳೆ, ದೇವರ್ ಪ್ರಸಾದಶೇಷಾನ್ನಮನಿರಿಸಿದರೆನೆ, ಬೞಿಗನೊಳು ನಾಲ್ಕಱೊಳೊಂದಂಶಮುಳಿಯೆ ಪರೀಕ್ಷಿಸಲಾರಯ್ದು ನೋಡಿ ತಿಳಿದು ಐದನೆಯ ದಿವಸಂ ಚತುರಂಗಬಲಂ ಬೆರಸರಸಂ ಮೂವಳಸು ಸುತ್ತಿ ಬಾಗಿಲಂ ತೆಱವುದೆಂದು ಕಲಕಲರವಂ ಪೊಣ್ಮೆ ತದುಪಸರ್ಗಂ ಪಿಂಗುವನ್ನಮಾಹಾರಶರೀರನಿವೃತ್ತಿಗೆಯ್ದು ವಸ್ತುಸ್ತವಾದಿ ತ್ರಿವಿಧ ಸ್ತೋತ್ರಮನೇಕಚಿತ್ತದಿಂ ವೃಷಭಾದಿ ಇಪ್ಪತ್ತುನಾಲ್ವರ್ಗಂ ನಾನಾಜಾತಿವೃತ್ತಪದ್ಯಂಗಳಿಂ ಪೇೞುತೊಡಗಿಯಷ್ಟಮತೀರ್ಥಕರ ಚಂದ್ರಪ್ರಭಸ್ವಾಮಿಗ್ಯೆದುಸ್ತುತಿಯಂ ಪೇೞ್ದು ಭೀಮಲಿಂಗಮನೀಕ್ಷಿಸುವುದುಂ, ಜಿನಶಾಸನದೇವಿಯಿಂದ ಲಿಂಗದೊಳೆ ಮೂಱುಪುರುಷಪ್ರಮಾಣದ ಸುವರ್ಣಮಯ ಚಂದ್ರಲಾಂಛನಮಪ್ಪರ್ಹದ್ಭಟ್ಟಾರಕಪ್ರತಿಮೆ ಯಕ್ಷಯಕ್ಷೀಪ್ರತಿಮೆಯಿಂದಷ್ಟಮಹಾಪ್ರಾತಿಹಾರ್ಯದೊಡನೆ ಜಾಜ್ವಲ್ಯಮಾನಮಾಗೆ ಸೂರ್ಯೋದಯಮಾದಂತೆಯುದ್ಭವಿಸಿತೋಱುವುದುಂ, ಮುನೀಶ್ವರಂ ಬಾಗಿಲಂ ತೆಱೆದುೞಿದ ವೀತರಾಗರ ನುತಿಗೆಯ್ಯುತ್ತೆ ನಿಂದಿರ್ಪುದುಂ, ಆ ಮಾಹಾತ್ಮ್ಯಕ್ಕೆ ಅತ್ಯಾಶ್ಚರ್ಯಮಾಗೆ ಶಿವಕೋಟಿಮಹಾರಾಜಂ ಭವ್ಯನಪ್ಪುದಱಿಂ ನಿಜಾನುಜಂ ಬೆರಸಾಮುನಿಮುಖ್ಯರ ಶ್ರೀಪಾದಕ್ಕಂ ಪೊಡೆವಟ್ಟಿರ್ಪುದುಂ, ಮಹಾವೀರವರ್ಧಮಾನಪರ್ಯಂತಂ ನುತಿಗೆಯ್ದು ಕೈಯೆತ್ತಿಕೊಂಡು ಬರಸೆ ಆ ಸದ್ಧರ್ಮ ಸ್ವರೂಪಮಂ ಸವಿಸ್ತರಂ ಕೇಳ್ದು ಸಂಸಾರ ಶರೀರಭೋಗನಿರ್ವೇಗದಿಂ ಶ್ರೀಕಂಠನೆಂಬ ಸುತಂಗೆ ರಾಜ್ಯಮನಿತ್ತು ಶಿವಾಯನಂಗೂಡಿ ಆ ಮುನಿವರರಲ್ಲಿಯೇ ಜಿನದೀಕ್ಷೆಯನಾಂತು ಶಿವಕೋಟ್ಯಾಚಾರ್ಯರಾಗಿ ರತ್ನಮಾಲಾದ್ಯನೇಕ ಶಾಸ್ತ್ರಪ್ರವರ್ತಕರಾದರ್. ಆ ಭಾವಿತೀರ್ಥಕರರಪ್ಪ ಸಮಂತಭದ್ರಸ್ವಾಮಿಗಳು ಪುನರ್ದೀಕ್ಷೆ

ಗೊಂಡು ತಪಸ್ಸಾಮರ್ಥ್ಯದಿಂ ಚತುರಂಗುಲಚಾರಣತ್ವಮಂ ಪಡೆದು ರತ್ನಕರಂಡಕಾದಿಜಿನಾಗಮಪುರಾಣಮುಂ ಪೇಳ್ದು ಸ್ಯಾದ್ವಾದವಾದಿಗಳಾಗಿ ಸಮಾಧಿವಡೆದರು.

ಈತನನ್ನು ಜಿನಸೇನನು (783) ಸ್ತುತಿಸಿರುವುದರಿಂದ ಇವನು ಅವನಿಗಿಂತ ಹಿಂದಣವನೆಂಬುದು ವ್ಯಕ್ತವಾಗಿದೆ. ಈತನು ಶಕ 60 ರಲ್ಲಿ—ಎಂದರೆ ಕ್ರಿಸ್ತಶಕ 138 ರಲ್ಲಿ—ಇದ್ದಂತೆ ಜೈನರಲ್ಲಿ ಪ್ರತೀತಿಯಿದೆ[1] ಆದರೆ ಕ್ರಿಸ್ತಶಕ 1 ನೆಯ ಶತಮಾನದಲ್ಲಿ ಇದ್ದನೆಂದು ಇವರು ಹೇಳುವ ಕುಂದಕುಂದಾಚಾರ್ಯನಿಂದ ಸಮಂತಭದ್ರನು 7. 8 ತಲೆ ಈಚೆಯವನಾದುದರಿಂದ ಇವನ ಕಾಲವು 138 ಕ್ಕಿಂತ ಈಚೆ ಇದ್ದಿರಬೇಕು. ಪೂಜ್ಯಪಾದನು (ಸು. 600) ತನ್ನ ಜೈನೇಂದ್ರ ವ್ಯಾಕರಣದಲ್ಲಿ ಈತನ ಹೆಸರನ್ನು ಹೇಳುವುದರಿಂದ ಇವನು ಅವನಿಗಿಂತ ಹಿಂದೆ ಇದ್ದವನು ಎಂಬುದಂತೂ ಸ್ಪಷ್ಟವಾಗಿಯೇ ಇದೆ: ಸುಮಾರು 400 ರಲ್ಲಿ ಇದ್ದಿರಬಹುದೆಂದು ಊಹಿಸುತ್ತೇವೆ.

ಈತನು ಮಣುವಕಹಳ್ಳಿಯಲ್ಲಿ ತಪಸ್ಸುಮಾಡಿದಂತೆ ರಾಜಾವಳೀಕಥೆಯಲ್ಲಿ ಹೇಳಿರುವುದರಿಂದ ಇವನು ಕರ್ಣಾಟಕದೇಶದಲ್ಲಿ ಕೆಲವುಕಾಲ ವಾಸಮಾಡಿದ್ದರೂ ಇರಬಹುದು. ಇವನು ಕನ್ನಡದಲ್ಲಿ ಗ್ರಂಥಗಳನ್ನು ಬರೆದಿದ್ದಾನೆಯೋ ಇಲ್ಲವೋ ತಿಳಿಯದು. ಈತನ ಸಂಸ್ಕೃತಪ್ರಾಕೃತಗ್ರಂಥಗಳಿಗೆ ಹಳಗನ್ನಡದ ವ್ಯಾಖ್ಯಾನಗಳು ದೊರೆತಿವೆ.

---

## ಕವಿಪರಮೇಷ್ಠಿ. ಸು. 550.

ಇವನನ್ನು **ಆದಿಪಂಪನೂ** (941) **ನಯಸೇನನೂ** (1112) "ಜಗತ್ಪ್ರಸಿದ್ಧ" ಎಂದು ಹೊಗಳಿದ್ದಾರೆ. **ಪಾರ್ಶ್ವಪಂಡಿತನು** (1205)—

ನಿಷ್ಪ್ರಾಪರತ್ವದಿಂ ಪರ। ಮೇಷ್ಠಿಸ್ತವನಮನನೂನಮಂ ಮಾಡಿ ಗುಣ।
ಜ್ಯೇಷ್ಠನೆನಿಸಿರ್ಪ ಕವಿಪರ। ಮೇಷ್ಠಿಗುಣಸ್ತವನಮೆಮಗೆ ದಲ್ ಕರಣೀಯಂ॥

ಎಂದೂ, ಎರಡನೆಯ **ಗುಣವರ್ಮನು** (ಸು. 1235) ತನ್ನ **ಪುಷ್ಪದಂತಪುರಾಣದಲ್ಲಿ**—

ನಿರುಪಮಸರಸ್ವತೀಸುಂ। ದರಚತುರಾನನನಶೇಷವಿಬುಧಸ್ತುತ್ಯಂ।
ಪರಮಬ್ರಹ್ಮನೆನಲ್ ಕವಿ। ಪರಮೇಷ್ಠಿ ಪುರಾಣಪುರುಷನೆಂಬುದು ಪುಸಿಯೇ॥

ಎಂದೂ, ಸ್ತುತಿಸಿದ್ದಾರೆ. **ಚಾವುಂಡರಾಯನು** (978)—

1. ಡಾಕ್ಟರ್ ಭಂಡಾರ್ಕರರವರ "ಸಂಸ್ಕೃತಕೋಶಸಂಗ್ರಹ" ದ ರಿಪೋರ್ಟು 1883–1884, ಪುಟ 320.

ಚರಿತಪುರಾಣದೊಳೊಂದನೆ। ಬರೆದರ್ ಬರೆದಿಕ್ಕಿದರ್ ತ್ರಿಷಷ್ಟಿಶಲಾಕಾ।
ಪುರುಷರ ಪುರಾಣಮಂ ಕವಿ। ಪರಮೇಶ್ವರರಂತೆ ಜಸಕೆ ನೋಂತರುಮೊಳರೇ॥

ಎಂಬ ಪದ್ಯದಲ್ಲಿಯೂ, **ನೇಮಿಚಂದ್ರನು** (ಸು. 1170) **ನೇಮಿನಾಥಪುರಾಣ** ದಲ್ಲಿಯು—

ಜಿನರ ಪುರಾಣಂಗಳೊಳೊಂ। ದನೆ ಬರೆದೊಡೆ ಬರೆದೆವೆಂಬರೀಭುವನಂ ಜೀ।
ಯೆನೆ ಬರೆದಿರಿಸಿದರಿರ್ಪ। ತ್ತನಾಲ್ಕುಮಂ ಪೊಗೞ ಸುಕವಿಪರಮೇಶ್ವರರಂ॥

ಎಂಬ ಪದ್ಯದಲ್ಲಿಯೂ, "ಕವಿಪರಮೇಶ್ವರ" ಎಂಬ ಕವಿಯನ್ನು ಸ್ತುತಿಸಿದ್ದಾರೆ. ಆದರೆ **ನೇಮಿಚಂದ್ರನು** ಈ ಪದ್ಯದ ಹಿಂದಣ

ಸುಕವಿಪರಮೇಷ್ಠಿಗಳ ನಾ। ಟಕಮೆನಿಸಿದ ಭುವನವಂದ್ಯವರವಿದ್ಯಾತೀ।
ರ್ಥಕರತ್ನಪುಣ್ಯಲಕ್ಷ್ಮೀ। ಗ। ಸಕಲಶ್ರುತದೇವಿ ಯುಕ್ತಿ ಯಕ್ಷಂ ಬ್ರಹ್ಮಂ॥

ಎಂಬ ಪದ್ಯದಲ್ಲಿ ಕವಿಪರಮೇಷ್ಠಿ ಎಂಬ ಹೆಸರನ್ನು ಹೇಳಿರುವುದರಿಂದ ಇವನಿಗೆ "ಕವಿಪರಮೇಶ್ವರ" ಎಂಬ ಹೆಸರೂ ಉಂಟೆಂದು ಊಹಿಸಬಹುದಾಗಿದೆ. **ಆದಿ ಪಂಪನು** (941) ಈತನನ್ನು ಸ್ತುತಿಸುವುದರಿಂದ ಇವನು ಅವನ ಕಾಲಕ್ಕೆ ಹಿಂದಣವನೆಂಬುದಂತೂ ವ್ಯಕ್ತವಾಗಿಯೇ ಇದೆ. **ಚಾವುಂಡರಾಯನು** ಈ ಕವಿಯ ತ್ರಿಷಷ್ಟಿಶಲಾಕಾಪುರುಷಪುರಾಣದ ಆಧಾರದಿಂದ ಜಿನಸೇನನು (783) ಆದಿಪುರಾಣವನ್ನು ಬರೆದುದಾಗಿ ಹೇಳುವುದರಿಂದ ಇವನು ಜಿನಸೇನನಿಗೆ ಹಿಂದಣವನೆಂದು ತಿಳಿಯುತ್ತದೆ. ಈತನ ಹೆಸರು ಜೈನಗ್ರಂಥಗಳಲ್ಲಿ ಪ್ರಾಯಶಃ ಸಮಂತಭದ್ರನ ಹೆಸರಿಗೆ ಮುಂದೆಯೂ ಪೂಜ್ಯಪಾದನ (ಸು. 600) ಹೆಸರಿಗೆ ಹಿಂದೆಯೂ ಇರುವುದರಿಂದ ಇವನು ಸಮಂತಭದ್ರನ ಕಾಲಕ್ಕೆ ಈಚೆಯೂ ಪೂಜ್ಯಪಾದನ ಕಾಲಕ್ಕೆ ಆಚೆಯೂ ಇದ್ದವನೆಂದು ತೋರುತ್ತದೆ. ಸುಮಾರು 550 ರಲ್ಲಿ ಇದ್ದಿರಬಹುದೆಂದು ಊಹಿಸುತ್ತೇವೆ.

---

## ಪೂಜ್ಯಪಾದ. ಸು. 600.

ಈತನನ್ನು **ಚಾವುಂಡರಾಯನು** (978)—

ಸುಕವಿಪ್ರಣುತರ್ ವ್ಯಾಕರ। ಣಕರ್ತೃಗಳ್ ಗಗನಗಮನಸಾಮರ್ಥ್ಯರ್ ತಾ।
ರ್ಕಿಕತಿಳಕರೆಂದು ಪೊಗೞ್ವುದು। ಸಕಲಜನಂ ಪೂಜ್ಯಪಾದಭಟ್ಟಾರಕರಂ॥

ಎಂಬ ಪದ್ಯದಲ್ಲಿಯೂ, **ವೃತ್ತವಿಲಾಸನು** (ಸು. 1160)—

ಭರದಿಂ ಜೈನೇಂದ್ರಮುಂ ಭಾಸುರಮೆನಲೊರೆದಂ ಪಾಣಿನೀಯಕ್ಕೆ ಟೀಕಂ।
ಬರೆದಂ ತತ್ತ್ವಾರ್ಥಮಂ ಟಿಪ್ಪಣದಿನಱಿಪಿದಂ ಯಂತ್ರಮಂತ್ರಾದಿಶಾಸ್ತ್ರೀ॥

ತ್ಕರಮಂ ಭೂರಕ್ಷಣಾರ್ಥಂ ವಿರಚಿಸಿ ಜಸಮಂ ತಾಳ್ದಿದಂ ವಿಶ್ವವಿದ್ಯಾ |
ಭರಣಂ ದೇವಾಂಗನಾರಾಧಿತಪದಕಮಳಂ ಪೂಜ್ಯಪಾದವ್ರತೀಂದ್ರಂ ||

ಎಂಬ ಪದ್ಯದಲ್ಲಿಯೂ, **ನೇಮಿಚಂದ್ರನು** (ಸು. 1170)—

**ಪೂಜ್ಯಪಾದ | ಸ್ವಾಮಿಯ ವಾಣೀವಿಲಾಸವಿಭಾಗಭಿಮತವಮಂ ||

ಎಂಬ ಪದ್ಯಭಾಗದಲ್ಲಿಯೂ, **ಪಾರ್ಶ್ವಪಂಡಿತನು** (1205)—

ಸಕಳೋರ್ವೀನುತಪೂಜ್ಯಪಾದಮುನಿಪಂ ತಾಂ ಪೇೞ್ದ ಕಲ್ಯಾಣಕಾ |
ರಕದಿಂ ದೇಹದ ದೋಷಮಂ ವಿತತವಾಚಾದೋಷಮಂ ಶಬ್ದಸಾ ||
ಧಕಜೈನೇಂದ್ರದಿನೀಜಗಜ್ಜನದ ಮಿಥ್ಯಾದೋಷಮಂ ತತ್ತ್ವಬೋ |
ಧಕತತ್ತ್ವಾರ್ಥದ ವೃತ್ತಿಯಿಂದೆ ಕಳೆದಂ ಕಾರುಣ್ಯದುಗ್ಧಾರ್ಣವಂ ||

ಎಂಬ ಪದ್ಯದಲ್ಲಿಯೂ, ಸ್ತುತಿಸಿದ್ದಾರೆ.

ಈ ಪದ್ಯಗಳಲ್ಲಿ ತಿಳಿಯಬರುವ ಸಂಗತಿಗಳಲ್ಲದೆ, ಶ್ರವಣಬೆಳ್ಗೊಳದ ಶಾಸನಗಳಿಂದ[1] ಈತನ ವಿಷಯವಾಗಿ ಈ ಸಂಗತಿಗಳೂ ತಿಳಿಯಬರುತ್ತವೆ :—ಈತನಿಗೆ ಮೊದಲು **ದೇವನಂದಿ** ಎಂಬ ಹೆಸರು ಇದ್ದಿತು. ತರುವಾಯ ಬುದ್ಧಿಮಾಹಾತ್ಮ್ಯದಿಂದ **ಜಿನೇಂದ್ರಬುದ್ಧಿ** ಎಂಬ ನಾಮಧೇಯವು ಉಂಟಾಯಿತು. ಬಳಿಕ ವನದೇವತೆಗಳಿಂದ ಇವನ ಪಾದಗಳು ಪೂಜಿಸಲ್ಪಟ್ಟುದರಿಂದ **ಪೂಜ್ಯಪಾದ** ಎಂಬ ಹೆಸರು ಬಂದಿತು. ಈತನು ವೈದ್ಯಶಾಸ್ತ್ರದಲ್ಲಿ ಪ್ರವೀಣನಾಗಿದ್ದನು. ಈತನ ಪಾದತೀರ್ಥಸ್ಪರ್ಶದಿಂದ ಕಬ್ಬಿಣವು ಚಿನ್ನವಾಯಿತು. ಈತನು ಪೂರ್ವವಿದೇಹಕ್ಕೆ ಹೋಗಿ ಜಿನದರ್ಶನಮಾಡಿದನು.

ಇದೂ ಅಲ್ಲದೆ **ರಾಜಾವಳೀಕಥೆಯಲ್ಲಿ** ಈತನ ವಿಷಯವಾಗಿ ಬರೆದಿರುವ ಅಂಶಗಳನ್ನು ಸಂಗ್ರಹಿಸಿ ಬರೆಯುತ್ತೇವೆ :—

ಶಕವರ್ಷ 300 ಸಂದಂದು ಕರ್ಣಾಟಕದೊಳು ಕೊಳ್ಳಾಗಾಲಮೆಂಬ ಪುರದೊಳು ಮಾಧವಭಟ್ಟನೆಂಬ ಬ್ರಾಹ್ಮಣನ ಹೆಂಡತಿ ಶ್ರೀದೇವಿಯೆಂಬವಳ್ಗೆ ಗರ್ಭಂ ಬಳೆದು ನವಮಾಸಂ ನೆಱೆಯೆ ಶ್ರವಣನಕ್ಷತ್ರದೊಳ್ ಪುತ್ರೋತ್ಪತ್ತಿಯಪ್ಪುದುಂ ಜಾತನಾಮಕರ್ಮಾದಿಗಳಂ ಮಾಡಿ ಪೂಜ್ಯಪಾದನೆಂದು ಪೆಸರಿಟ್ಟು ಸಲಹಿದೊಡೆ, ಜೈನಶಾಸ್ತ್ರಂಗಳೊಳ್ ಬಲ್ಲಿದನಾಗಿ ಬಾಲಕಾಲದೊಳೆ ಜಿನದೀಕ್ಷೆಯಂ ತಾಳಿ ದಕ್ಷಿಣದಿಗ್ಭಾಗದ ಶಿಖೋಚ್ಚಯದೊಳ್ ತಪಂ

1. ಶಾ. 64. ಯೋ ದೇವನಂದಿಪ್ರಥಮಾಭಿಧಾನೋ | ಬುದ್ಧ್ಯಾ ಮಹತ್ಯಾ ಸ ಜಿನೇಂದ್ರಬುದ್ಧಿಃ |
ಶ್ರೀಪೂಜ್ಯಪಾದೋಜನಿ ದೇವತಾಭಿ | ರ್ಯತ್ಪೂಜಿತಂ ಪಾದಯುಗಂ ಯದೀಯಂ ||
ಶಾ. 254. ಶ್ರೀಪೂಜ್ಯಪಾದ ಇತಿ ಚೈಷ ಬುಧೈಃ ಪ್ರಚಖ್ಯೇ | ಯತ್ಪೂಜಿತಃ ಪದಯುಗೇ ವನದೇವತಾಭಿಃ ||
ಶಾ. 258. ಶ್ರೀಪೂಜ್ಯಪಾದಮುನಿರಪ್ರತಿಮೌಷಧರ್ದ್ಧಿಃ | ಜೀಯಾದ್ವಿದೇಹಜಿನದರ್ಶನಪೂತಗಾತ್ರಃ |
ಯತ್ಪಾದಧೌತಜಲಸಂಸ್ಪರುಶಪ್ರಭಾವಾತ್ | ಕಾಲಾಯಸಂ ಕಿಲ ತದಾ ಕನಕೀಚಕಾರ ||

ಗೆಯ್ಯುತ್ತಿರ್ದಂ. ಮುಡಿಗುಂಡವೆಂಬ ಗ್ರಾಮದಲ್ಲಿದ್ದ ತನ್ನ ಸೋದರದ ಮಾವನಾದ ಪಾಣಿನ್ಯಾಚಾರ್ಯನಿಗೆ ವ್ಯಾಕರಣಮುಂ ಪೂರ್ತಿಮಾಡುವುದಱೊಳಗೆ ಅವಸಾನಕಾಲಂ ಬರೆ ಆತನು ಪೂರ್ತಿಮಾಡೆಂದು ಕೇಳಿಕೊಳಲು ಪೂಜ್ಯಪಾದಂ ಪೂರ್ತಿಮಾಡಿದಂ. ಜೈನೇಂದ್ರವ್ಯಾಕರಣಸೂತ್ರಮುಂ ರಚಿಸಿದಂ. ಬಱಿಕಂ ಪಾಣಿನಿಸೂತ್ರವೃತ್ತಿಯುಂ ರಚಿಸಿದಂ.

ಈ ಕಥೆಯ ಪ್ರಕಾರ ಪೂಜ್ಯಪಾದನು ಕರ್ಣಾಟಕದೇಶದಲ್ಲಿ ಶಕ 300 ರಲ್ಲಿ ಹುಟ್ಟಿದನೆಂದು ತಿಳಿಯಬರುತ್ತದೆ. ಇದು ಎಷ್ಟರಮಟ್ಟಿಗೆ ನಿಜವೋ ಹೇಳಲಿಕ್ಕಾಗುವುದಿಲ್ಲ. ಅಲ್ಲದೆ ಇಲ್ಲಿ ಹೇಳಿರುವ ಪಾಣಿನಿಯ ವಿಷಯವು ಸುತರಾಂ ನಂಬುಗೆಗೆ ಅರ್ಹವಾದುದಲ್ಲ.

ಮತ್ತು ರಾಜಾವಳೀಕಥೆಯಲ್ಲಿ :—

ಪೂಜ್ಯಪಾದಯತೀಂದ್ರಂ ಪದಿನಾಡಿನೊಳು ತಪಂಗೆಯ್ಯುತ್ತ ತೀರ್ಥವಂದನೆಯುಂ ಮಾಡಲೆಂದು ಆಂಧ್ರ ಕರ್ಣಾಟ ಚೋಳ ಪಾಂಡ್ಯ ಮೊದಲಾದ ಎಲ್ಲಾ ದೇಶಂಗಳಂ ವಿಹಾರಿಸಿ ಕೌಂಗೆಲೆಯಶೈಲಕ್ಕಂ ಬಂದು ಜಿನಾಗಮಂ ಕೆಲವು ನೋಡಿ ತಿಳಿದುಪದೇಶಂಮಾಳ್ಪವರಿಲ್ಲದೆ ಕೆಲವು ಸಿದ್ಧಾಂತಂ ಮಱೆಗರೆದಿರ್ದುದಱಿಂ ಸಂದೇಹಗ್ರಸ್ತಮಾಗೆ ಪೂರ್ವವಿದೇಹಕ್ಕೆ ಪಾದಲೇಪೌಷಧಿಸಾಮರ್ಥ್ಯದಿಂ ಪೋಗಿ ಸಮವಸರಣದೊಳಿರ್ದ ಶ್ರೀಜಿನಪತಿಗಳಂ ವಂದಿಸಿ ತತ್ತ್ವಮಂ ನಿಸ್ಸಂದೇಹಮಾಗಱಿದಲ್ಲಿಯೆ ಪುಸ್ತಕದೊಳ್ ಬರೆದುಕೊಂಡು ದೈವಾಯತ್ತದಿಂ ಭರತಕ್ಷೇತ್ರಮನೆಯ್ದುವಲ್ಲಿ ಸೂರ್ಯಕಿರಣೋಷ್ಣದಿಂ ದೃಷ್ಟಿ ಪೋಗೆ ಬಂಕಾಪುರವೆಂಬುದಱೊಳ್ ಶಾಂತೀಶ್ವರರಂ ವಂದಿಸಿ ಶಾಂತ್ಯಷ್ಟಕಮುಂ ಪೇಱಿ ದೃಷ್ಟಿಯುಂ ಪಡೆದು ಬಂದು ಸಿದ್ಧಾಂತಮಂ ಶಿಷ್ಯಪ್ರಶಿಷ್ಯರ್ಗಮುಪದೇಶಂಗೆಯ್ದು ಲೌಕಿಕಪರಮಾರ್ಥಂಗಳಂ ರಚಿಸಿ ಸದ್ಗತಿಪ್ರಾಪ್ತರಾದರ್—ಎಂದು ಹೇಳಿದೆ.

ಈತನ ಜೈನೇಂದ್ರವ್ಯಾಕರಣದ ಹೆಸರನ್ನು ಜಿನಸೇನನು ತನ್ನ ಹರಿವಂಶದ (783) ಆದಿಭಾಗದಲ್ಲಿ ಹೇಳಿದ್ದಾನೆ. ಈ ವ್ಯಾಕರಣದ ಸೂತ್ರಗಳನ್ನು ಅಕಳಂಕದೇವನು (ಸು. 750) ತನ್ನ ತತ್ತ್ವಾರ್ಥರಾಜವಾರ್ತಿಕದಲ್ಲಿಯೂ ಜಯಾದಿತ್ಯವಾಮನರು ಕಾಶಿಕಾವೃತ್ತಿಯಲ್ಲಿಯೂ (ಸು. 700) ಉದಾಹರಿಸಿದ್ದಾರೆ. ಈ ಕಾರಣಗಳಿಂದ ಪೂಜ್ಯಪಾದನು ಸುಮಾರು 600 ರಲ್ಲಿ ಇದ್ದಿರಬಹುದು. ಈತನು ಕನ್ನಡದಲ್ಲಿ ಗ್ರಂಥಗಳನ್ನು ಬರೆದಿದ್ದಾನೆಯೋ ಇಲ್ಲವೋ ತಿಳಿಯದು.

---

## ಶ್ರೀವರ್ಧದೇವ. ಸು. 650.

ಈತನು ಜೈನಕವಿ. **ದೇವಚಂದ್ರನ** ರಾಜಾವಳೀಕಥೆಯಲ್ಲಿ—

ಮತ್ತಂ ತುಂಬುಲೂರಲ್ಲಿ ಪುಟ್ಟಿದ ತುಂಬುಲೂರುನಾಮಾಚಾರ್ಯರ್ ಪ್ರಾಕೃತಸಂಸ್ಕೃತಕರ್ಣಾಟಾದಿಭಾಷೆಗಳಿಂ ಸಿದ್ಧಾಂತಪ್ರಬಂಧಕರ್ತೃಗಳ್ ಚೂಡಾಮಣಿವ್ಯಾಖ್ಯಾನ ಚತುರಶೀತಿಸಹಸ್ರಗ್ರಂಥರಚನೆಯುಂ ಮಾಡಿದರ್

ಎಂದು ಒಂದು ಭಾಗದಲ್ಲಿಯೂ,

ತುಂಬುಲೂರುನಾಮಾಚಾರ್ಯರ್ ಎಂಬತ್ತುನಾಲ್ಕುಸಾಸಿರಗ್ರಂಥಕರ್ತೃಗಳಾಗಿ ಕರ್ಣಾಟಕಭಾಷೆಯಿಂ ಚೂಡಾಮಣಿವ್ಯಾಖ್ಯಾನಮಂ ಮಾಡಿದರ್

ಎಂದು ಮತ್ತೊಂದು ಭಾಗದಲ್ಲಿಯೂ ಬರೆದಿದೆ.

**ಚಾವುಂಡರಾಯನು** (978) ತೆಂಬುಳೂರಾಚಾರ್ಯನೆಂಬ ಗುರುವನ್ನು ಸ್ತೋತ್ರಮಾಡಿದ್ದಾನೆ. **ಭಟ್ಟಾಕಳಂಕನು** (1604) ತನ್ನ ಶಬ್ದಾನುಶಾಸನದಲ್ಲಿ ಕರ್ಣಾಟಕಭಾಷೆಯ ಪ್ರಾಶಸ್ತ್ಯವನ್ನು ಹೇಳುವಾಗ—ಈ ಕರ್ಣಾಟಕಭಾಷೆ ಶಾಸ್ತ್ರಕ್ಕೆ ಅನುಪಯುಕ್ತವಾದುವಲ್ಲ; ಏಕೆಂದರೆ ಈ ಭಾಷೆಯಲ್ಲಿಯೇ ತೊಂಬತ್ತಾರುಸಾಸಿರ ಗ್ರಂಥಸಂಖ್ಯೆಯುಳ್ಳ ಚೂಡಾಮಣಿ ಎಂಬ ತತ್ವಾರ್ಥಮಹಾಶಾಸ್ತ್ರವ್ಯಾಖ್ಯಾನವು ದೊರೆಯುತ್ತದೆ[1]—ಎಂದು ಬರೆದಿದ್ದಾನೆ. ದೇವಚಂದ್ರನು 84,000 ಗ್ರಂಥವೆಂದು ಹೇಳುತ್ತಾನೆ; ಭಟ್ಟಾಕಳಂಕನು 96,000 ಗ್ರಂಥವೆಂದು ಹೇಳುತ್ತಾನೆ. ಗ್ರಂಥಪ್ರಮಾಣದಲ್ಲಿ ಅವನ ಹೇಳಿಕೆಗೂ ಇವನ ಹೇಳಿಕೆಗೂ 12,000 ದಷ್ಟು ಹೆಚ್ಚುಕಡಮೆ ಇದೆ. ಈ 12,000 ಗ್ರಂಥವು ಸಂಗ್ರಹರೂಪವಾಗಿಯೋ ಅವತರಣಿಕೆಯ ರೂಪವಾಗಿಯೋ ಇರಬೇಕೆಂದೂ ಗ್ರಂಥಕ್ಕೆ ಸೇರಿದುದಲ್ಲವೆಂದೂ ಜೈನರಲ್ಲಿ ಪ್ರತೀತಿ ಇರುವಂತೆ ತಿಳಿಯುತ್ತದೆ. ಅಲ್ಲದೆ ಇಂದ್ರನಂದಿ ತನ್ನ ಶ್ರುತಾವತಾರದಲ್ಲಿ ತುಂಬಲೂರಾಚಾರ್ಯನು 84,000 ಗ್ರಂಥಸಂಖ್ಯೆಯುಳ್ಳ ಚೂಡಾಮಣಿವ್ಯಾಖ್ಯಾನವನ್ನು ಕನ್ನಡದಲ್ಲಿ ಬರೆದನೆಂದೂ ಆರನೆಯ ಖಂಡಕ್ಕೆ 7,000 ಗ್ರಂಥಸಂಖ್ಯೆಯುಳ್ಳ ಪಂಚಿಕೆಯನ್ನು ಪುನಃ ಮಾಡಿದನೆಂದೂ ಹೇಳುತ್ತಾನೆ.[2] ಇವನ ಹೇಳಿಕೆಯ ಪ್ರಕಾರ ಗ್ರಂಥಸಂಖ್ಯೆ 91,000 ಆಗುತ್ತದೆ. ಐದುಸಾವಿರ ಗ್ರಂಥಸಂಖ್ಯೆಯುಳ್ಳ ಮತ್ತೊಂದು ಪಂಚಿಕೆಯಿದ್ದರೂ ಇರಬಹುದು. ಆದುದರಿಂದ ಈ ವ್ಯತ್ಯಾಸವನ್ನು ನಾವು ಗಣನೆಗೆ ತರಬೇಕಾದುದಿಲ್ಲ. ಇಂದ್ರನಂದಿ ದೇವಚಂದ್ರರು ಗ್ರಂಥಕರ್ತನ ಹೆಸರು ತುಂಬುಲೂರಾಚಾರ್ಯನೆಂದು ಕಂಠೋಕ್ತವಾಗಿ ಹೇಳಿದ್ದಾರೆ; ಭಟ್ಟಾಕಳಂಕನು ಹೆಸರು ಹೇಳಿಲ್ಲ.

---

1. ನಚೈಷಾ (ಕರ್ಣಾಟಭಾಷಾ) ಶಾಸ್ತ್ರಾನುಪಯೋಗಿನೀ. ತತ್ವಾರ್ಥಮಹಾಶಾಸ್ತ್ರವ್ಯಾಖ್ಯಾನಸ್ಯ ಷಣ್ಣವತಿಸಹಸ್ರಪ್ರಮಿತಗ್ರಂಥಸಂದರ್ಭರೂಪಸ್ಯ ಚೂಡಾಮಣ್ಯಭಿಧಾನಸ್ಯ ಮಹಾಶಾಸ್ತ್ರಸ್ಯ * * * ಉಪಲಭ್ಯಮಾನತ್ವಾತ್

2. ಅಥ ತುಂಬಲೂರನಾಮಾಚಾರ್ಯೋಽಭೂತ್ತುಂಬಲೂರಸದ್ಗ್ರಾಮೇ |
ಷಷ್ಠೇನ ವಿನಾ ಖಂಡೇನ ಸೋಽ(ಪಿ) ಸಿದ್ಧಾಂತಯೋರುಭಯೋಃ ||
ಚತುರಧಿಕಾಶೀತಿಸಹಸ್ರಗ್ರಂಥರಚನಯಾ ಯುಕ್ತಾಂ | (?)
ಕರ್ಣಾಟಭಾಷಯಾಕೃತ ಮಹತೀಂ ಚೂಡಾಮಣಿಂ ವ್ಯಾಖ್ಯಾಂ ||
ಸಪ್ತಸಹಸ್ರಗ್ರಂಥಾಂ ಷಷ್ಠಸ್ಯ ಚ ಪಂಚಿಕಾಂ ಪುನರಕಾರ್ಷೀತ್ ||

ಆದರೆ ಗ್ರಂಥದ ಹೆಸರು ಚೂಡಾಮಣಿ ಎಂದೂ ಗ್ರಂಥವು ಕನ್ನಡದಲ್ಲಿ ಬರೆದಿದೆ ಎಂದೂ ಮೂವರೂ ಒಪ್ಪಿಕೊಳ್ಳುತ್ತಾರೆ. ಇದೂಅಲ್ಲದೆ ಶ್ರವಣಬೆಳ್ಗೊಳದ 67 ನೆಯ ಶಾಸನದಿಂದ (1129) ಚೂಡಾಮಣಿಯೆಂಬ ಹೆಸರುಳ್ಳ ಕಾವ್ಯವನ್ನು ರಚಿಸಿದವನು ಕವಿಚೂಡಾಮಣಿಯಾದ ಶ್ರೀವರ್ಧದೇವನೆಂದೂ [1] ಈತನನ್ನು ದಂಡಿ ಹೊಗಳಿದ್ದಾನೆಂದೂ ತಿಳಿಯುಬರುತ್ತದೆ. ಇದರಿಂದ ತುಂಬಲೂರಾಚಾರ್ಯ, ಶ್ರೀವರ್ಧದೇವ, ಎಂಬ ಎರಡು ಹೆಸರುಗಳೂ ಒಬ್ಬನಿಗೇ ಅನ್ವಯಿಸುತ್ತವೆ ಎಂಬುದು ವ್ಯಕ್ತವಾಗುತ್ತದೆ. ಇಂದ್ರನಂದಿ ದೇವಚಂದ್ರರೂ ಭಟ್ಟಾಕಳಂಕನೂ ಹೇಳಿರುವ ಚೂಡಾಮಣಿಯೆಂಬ ಹೆಸರೇ ಇಲ್ಲಿಯೂ ಹೇಳಿದೆ. ಆದರೆ ಇಲ್ಲಿ "ಚೂಡಾಮಣಿಕಾವ್ಯ" ವೆಂದು ಹೇಳಿದೆ. ಆದುದರಿಂದ ಶಾಸನಶ್ಲೋಕದಲ್ಲಿ ಹೇಳಿರುವ ಚೂಡಾಮಣಿಗ್ರಂಥವೂ ಇಂದ್ರನಂದಿ ಭಟ್ಟಾಕಳಂಕ ದೇವಚಂದ್ರರು ಹೇಳುವ ಚೂಡಾಮಣಿಗ್ರಂಥವೂ ಒಂದೇ ಆಗಿರಬಹುದೋ ಇಲ್ಲವೋ ಎಂಬ ಸಂಶಯವು ಸಾಧಾರಣವಾಗಿ ಹುಟ್ಟಬಹುದು. ಆದರೆ ಗ್ರಂಥವು ಕೇವಲ ವ್ಯಾಖ್ಯಾನವಲ್ಲದೆ ಸ್ವತಂತ್ರವಾಗಿದ್ದಲ್ಲಿ ಕಾವ್ಯಶಬ್ದವು ಅನುಚಿತವಲ್ಲ.

ಈ ಗ್ರಂಥಕರ್ತೃವಾದ ಶ್ರೀವರ್ಧದೇವನು ದಂಡಿಯಿಂದ ಸ್ತುತಿಸಲ್ಪಟ್ಟಿದ್ದಾನೆ ಎಂಬುದರಿಂದ ಈತನು ದಂಡಿಗೆ ಹಿಂದೆಯೋ ಅಥವಾ ಸಮಕಾಲದಲ್ಲಿಯೋ ಇದ್ದಿರಬೇಕು. ದಂಡಿಯು ಕಾವ್ಯಾದರ್ಶದಲ್ಲಿ ಉದಾಹೃತವಾದ ಹಲವು ಪದ್ಯಗಳನ್ನು **ನೃಪತುಂಗನು** (814—877) ತನ್ನ ಕವಿರಾಜಮಾರ್ಗದಲ್ಲಿ ಕನ್ನಡಕ್ಕೆ ಪರಿವರ್ತಿಸಿ ಬರೆದಿರುವುದರಿಂದ [2] ದಂಡಿ ನೃಪತುಂಗನಿಗಿಂತ ಬಹಳ ಹಿಂದೆ ಇದ್ದಿರಬೇಕು. ಈತನು 7 ನೆಯ ಶತಮಾನದ ಅಂತ್ಯಭಾಗದಲ್ಲಿದ್ದನೆಂಬುದಕ್ಕೆ ಆಧಾರಗಳಿವೆ.[3] **ಚಾವುಂಡರಾಯನು** (978) ತನ್ನ ಗ್ರಂಥದ ಕೊನೆಯಲ್ಲಿ ಹೇಳಿರುವ ಗುರುಪರಂಪರೆಯನ್ನು ನೋಡಿದರೆ ತೆಂಬುಳೂರಾಚಾರ್ಯನು ಅಥವಾ ಶ್ರೀವರ್ಧದೇವನು ಜಿನಸೇನನಿಗೆ (783) ಬಹಳ ಹಿಂದೆ ಇದ್ದಂತೆ ತಿಳಿಯುತ್ತದೆ. ಆದುದರಿಂದ ದಂಡಿಯಿಂದ ಸ್ತುತನಾದ ಶ್ರೀವರ್ಧದೇವನು ಸುಮಾರು 650 ರಲ್ಲಿ ಇದ್ದಿರಬಹುದು.

---

1. ಚೂಡಾಮಣಿಃ ಕವೀನಾಂ ಚೂಡಾಮಣಿನಾಮಸೇವ್ಯಕಾವ್ಯಕವಿಃ ।
ಶ್ರೀವರ್ಧದೇವ ಏವ ಹಿ ಕೃತಪುಣ್ಯಃ ಕೀರ್ತಿಮಾಹರ್ತುಂ ॥
ಯ ಏವಮುಪಶ್ಲೋಕಿತೋ ದಂಡಿನಾ .—
ಜಹ್ನೋಃ ಕನ್ಯಾಂ ಜಟಾಗ್ರೇಣ ಬಭಾರ ಪರಮೇಶ್ವರಃ ।
ಶ್ರೀವರ್ಧದೇವ ಸಂಧತ್ಸೇ ಜಿಹ್ವಾಗ್ರೇಣ ಸರಸ್ವತೀಂ ॥
2. ಕವಿರಾಜಮಾರ್ಗದ ಉಪೋದ್ಘಾತ, ಪುಟ 18—20.
3. *Indian Antiquary*, XLI, 92.

ಈತನ ಗ್ರಂಥವು ಇನ್ನೂ ಎಲ್ಲಿಯೂ ದೊರೆತಿಲ್ಲ. ಭಟ್ಟಾಕಳಂಕನು (1604) "ಸಮುಪಲಭ್ಯಮಾನತ್ವಾತ್" ಎಂದು ಹೇಳುವುದರಿಂದ ಅವನ ಕಾಲದಲ್ಲಿ ಈ ಗ್ರಂಥವು ಇದ್ದಂತೆ ತೋರುತ್ತದೆ. 7 ನೆಯ ಶತಮಾನದಲ್ಲಿಯೇ ಇಂಥ ಅಪಾರವಾದ ಗ್ರಂಥವು ಹುಟ್ಟಿರುವುದರಿಂದ ಆ ಕಾಲಕ್ಕೆ ಹಿಂದೆಯೂ ಅನೇಕ ಕರ್ಣಾಟಕಗ್ರಂಥಗಳು ಇದ್ದಿರಬೇಕು ಎಂಬುದರಲ್ಲಿ ಸಂಶಯವಿಲ್ಲ. ಅವುಗಳಲ್ಲಿ ಒಂದೂ ದೊರೆಯದೆ ಇರುವುದು ಶೋಚನೀಯವಾದ ವಿಷಯವಾಗಿದೆ.

---

### ಶ್ಯಾಮಕುಂದಾಚಾರ್ಯ. ಸು. 650.

ಈತನು ಜೈನಕವಿ. ಇವನು ಪ್ರಾಭೃತವನ್ನು ಕನ್ನಡದಲ್ಲಿ ಬರೆದಿರುವುದಾಗಿ ಇಂದ್ರನಂದಿಯ ಶ್ರುತಾವತಾರದಲ್ಲಿಯ

ಕಾಲೇ ತತಃ ಕಿಯತ್ಯಪಿ ಗತೇ ಪುನಃ ಶ್ಯಾಮಕುಂದಸಂಜ್ಞೇನ ।
ಪ್ರಾಕೃತಸಂಸ್ಕೃತಕರ್ಣಾಟಭಾಷಯಾ ಪದ್ಧತಿಃ ಪರಾ ರಚಿತಾ ॥

ಎಂಬ ಭಾಗದಿಂದ ತಿಳಿಯುತ್ತದೆ. **ಚಾವುಂಡರಾಯನು** (978) ತನ್ನ ಪುರಾಣದ ಅಂತ್ಯದಲ್ಲಿ ಕೊಟ್ಟಿರುವ ಗುರುಪರಂಪರೆಯಿಂದ ಈತನು ತುಂಬುಲೂರಾಚಾರ್ಯನ ಅಥವಾ ಶ್ರೀವರ್ಧದೇವನ ಕಾಲದಲ್ಲಿಯೋ ಅಥವಾ ಅವನ ಕಾಲಕ್ಕೆ ಸ್ವಲ್ಪ ಹಿಂದೆಯೋ ಇದ್ದಂತೆ ತಿಳಿಯುತ್ತದೆ. ಇವನ ಗ್ರಂಥವು ದೊರೆತಿಲ್ಲ.

---

### ನೃಪತುಂಗನು (814—877) ಹೇಳುವ ಪೂರ್ವದ ಕನ್ನಡ ಕವಿಗಳು.

ರಾಷ್ಟ್ರಕೂಟರಾಜರಲ್ಲಿ ಒಬ್ಬನಾದ **ನೃಪತುಂಗನು** (814-877) ಕನ್ನಡದಲ್ಲಿ ಕವಿರಾಜಮಾರ್ಗವೆಂಬ ಒಂದು ಅಲಂಕಾರಗ್ರಂಥವನ್ನು ಬರೆದಿದ್ದಾನೆ. ಈ ಗ್ರಂಥದಲ್ಲಿ ತನಗೆ ಹಿಂದೆ ಇದ್ದ ಕರ್ಣಾಟಕಗದ್ಯಪದ್ಯಗ್ರಂಥಕರ್ತರುಗಳಾದ ಕೆಲವುಮಂದಿ ಕವಿಗಳ ಹೆಸರುಗಳನ್ನು—

ಮಿಗೆ ಕನ್ನಡಕಬ್ಬಂಗಳೊ। ಳಗಣಿತಗುಣಗದ್ಯಪದ್ಯಸಮ್ಮಿಶ್ರಿತಮಂ।
ನಿಗದಿಸುವರ್ ಗದ್ಯಕಥಾ। ಪ್ರಗೀತಿಯಂ ತಚ್ಚಿರಂತನಾಚಾರ್ಯರ್ಕಳ್॥

ಗದ್ಯಗ್ರಂಥಕರ್ತೃಗಳ್ :—

ವಿಮಲೋದಯನಾಗಾರ್ಜುನ। ಸಮೇತಜಯಬಂಧುದುರ್ವಿನೀತಾದಿಗಳೀ।
ಕ್ರಮದೊಳ್ ನೆಗಳ್ಚಿ ಗದ್ಯಾ। ಶ್ರಮಪದಗುರುತಾಪ್ರತೀತಿಯಂ ಕೆಯ್ಕೊಂಡರ್॥

ಪದ್ಯಗ್ರಂಥಕರ್ತೃಗಳ್ :—

ಪರಮಶ್ರೀವಿಜಯಕವೀ। ಶ್ವರಪಂಡಿತಚಂದ್ರಲೋಕಪಾಲಾದಿಗಳೀ।
ನಿರತಿಶಯವಸ್ತುವಿಸ್ತರ। ವಿರಚನೆ ಲಕ್ಷ್ಯಂ ತದಾದ್ಯಕಾವ್ಯಕ್ಕೆಂದುಂ॥

ಎಂಬ ಪದ್ಯಗಳಲ್ಲಿ ಹೇಳಿದ್ದಾನೆ. ಈ ಕವಿಗಳಲ್ಲಿ ಒಬ್ಬಿಬ್ಬರು ನೃಪತುಂಗನ ಸಮಕಾಲದವರಾಗಿದ್ದಿರಬಹುದೆಂದು ತೋರುತ್ತದೆ. ನೃಪತುಂಗನ ಕಾಲಕ್ಕೆ ಹಿಂದೆಯೇ ಕನ್ನಡದಲ್ಲಿ ಅನೇಕ ಗದ್ಯಗ್ರಂಥಗಳು ಹುಟ್ಟಿದ್ದುವೆಂಬುದು ಜ್ಞಾಪಕದಲ್ಲಿ ಇಡತಕ್ಕ ವಿಷಯವಾಗಿದೆ.

ಈ ಕವಿಗಳಲ್ಲಿ ಹಲವರ ವಿಷಯವು ನಮಗೆ ತಿಳಿಯದು. ಆದರೂ ಒಬ್ಬೊಬ್ಬನನ್ನು ಕುರಿತು ಒಂದೆರಡು ಮಾತುಗಳನ್ನು ಬರೆಯುತ್ತೇವೆ.

I. ಗದ್ಯಗ್ರಂಥಕರ್ತೃಗಳು :—

## ವಿಮಲ.

**ವಿಮಲ**ನೆಂಬ ಒಬ್ಬ ಶ್ವೇತಾಂಬರಜೈನಕವಿ ಸಂಸ್ಕೃತದಲ್ಲಿ ಪ್ರಶ್ನೋತ್ತರಮಾಲೆ ಎಂಬ ಗ್ರಂಥವನ್ನು ಬರೆದಿರುವಂತೆ ಆ ಗ್ರಂಥದಿಂದ ತಿಳಿಯಬರುತ್ತದೆ. ಆ ವಿಮಲನು ಇವನಾಗಿರಲಾರನು ಎಂದು ತೋರುತ್ತದೆ. ಅಲ್ಲದೆ **ಶ್ರ. ಬೆ. ಶಾ.** 67 ರಲ್ಲಿ (1129) ವಿಮಲಚಂದ್ರನೆಂಬ ಒಬ್ಬ ದಿಗಂಬರಜೈನಕವಿಯನ್ನು ವಾದಿಶ್ರೇಷ್ಠನೆಂದು ವಿಶೇಷವಾಗಿ ಸ್ತುತಿಸಿದೆ. ಆತನು ನೃಪತುಂಗನಿಗೆ ಹಿಂದೆ ಇದ್ದವನಂತೆ ಕಾಣುವುದಿಲ್ಲ. ದುಂಡು ನಿರ್ಗುಂದಯುವರಾಜನ ಗುರುವಾದ ಒಬ್ಬ ವಿಮಲಚಂದ್ರನು 777 ರಲ್ಲಿದ್ದಂತೆ ತಿಳಿಯುತ್ತದೆ.[1] ಅವನೇ ಇವನಾಗಿರಬಹುದೆಂದು ತೋರುತ್ತದೆ.

---

## ಉದಯ.

ಸೋಮನಾಥನೆಂಬ ಚೋಳರಾಜನ ಮಗನಾದ **ಉದಯಾದಿತ್ಯನು** ಉದಯಾದಿತ್ಯಾಲಂಕಾರವೆಂಬ ಒಂದು ಗ್ರಂಥವನ್ನು ಬರೆದಿದ್ದಾನೆ. ಆ ಗ್ರಂಥದಲ್ಲಿ ತನ್ನ ಹೆಸರನ್ನು **ಉದಯ** ಎಂದೂ ಬರೆದುಕೊಂಡಿದ್ದಾನೆ. ಆದರೆ ಈತನು ಸುಮಾರು 1150 ರಲ್ಲಿ[2] ಇದ್ದಂತೆ ತಿಳಿವುದರಿಂದ ಇವನು ನೃಪತುಂಗನು ಹೇಳುವ ಉದಯನಲ್ಲ.

---

## ನಾಗಾರ್ಜುನ.

ಈ ಹೆಸರುಳ್ಳ ಒಬ್ಬನು ವೈದ್ಯದಲ್ಲಿ ಬಹಳ ನಿಪುಣನಾಗಿ ನಾಗಾರ್ಜುನಕಲ್ಪವೇ ಮೊದಲಾದ ಅನೇಕ ಗ್ರಂಥಗಳನ್ನು ಮಾಡಿದನೆಂದೂ ರಸವಾದದಲ್ಲಿ ಪಾರಂಗತನಾಗಿ ಬೆಟ್ಟಗಳನ್ನೆಲ್ಲಾ ಬಂಗಾರಮಾಡಿದನೆಂದೂ ಪ್ರತೀತಿಯಿದೆ.

1. *Ind. Ant.*, II ; Nāgamangala 85.
2. ಉದಯಾದಿತ್ಯನ ಚರಿತೆಯನ್ನು ನೋಡಿ.

**ರಾಜಾವಳೀಕಥೆಯಲ್ಲಿ**—ನಾಗಾರ್ಜುನನು ಪೂಜ್ಯಪಾದನ ಸೋದರದಳಿಯನೆಂದೂ ಪೂಜ್ಯಪಾದನ ಉಪದೇಶಮಹಿಮೆಯಿಂದ ಇವನು ಬಂಗಾರವಮಾಡುವುದನ್ನು ತಿಳಿದುಕೊಂಡು ದೇಶಾಟನಮಾಡುತ್ತ ಯಂತ್ರಮಂತ್ರತಂತ್ರಾದಿಗಳಂ ಕಲ್ಪಿಸಿ ಸಿದ್ಧನಾಗಾರ್ಜುನನೆಂಬ ಕೀರ್ತಿ ದಿಗಂತವ್ಯಾಪಿಯಾಗಿರಲು ಶ್ರೀಶೈಲವನ್ನೈದಿ ಮಲ್ಲಿಕಾರ್ಜುನಪ್ರತಿಷ್ಠೆಗೈದು ಉತ್ತರದೇಶಕ್ಕೆ ಹೋಗಿ ಒಂದೆರಡು ಬಿಟ್ಟಮಂ ಚಿನ್ನಮಂ ಮಾಡಲು ಯತ್ನಿಸಿ ಮುಂದಕ್ಕೆ ಹೋದಾಗ ಇಬ್ಬರು ಸ್ತ್ರೀಯರು ವಂಚಿಸಿ ಇವನನ್ನು ಕೊಂದರೆಂದೂ—ಹೇಳಿದೆ.

ನಾಗಾರ್ಜುನಕಕ್ಷಪುಟವೆಂಬ ಒಂದು ವೈದ್ಯಗ್ರಂಥವು ದೊರೆಯುತ್ತದೆ. ಅಲ್ಲದೆ, ನಂದಿಸೂತ್ರಗಳ ಮತ್ತು ಆವಶ್ಯಕಸೂತ್ರಗಳ ಆದಿಭಾಗದಲ್ಲಿ ಒಬ್ಬ ನಾಗಾರ್ಜುನನನ್ನು ವಿಶೇಷವಾಗಿ ಸ್ತುತಿಸಿರುವಂತೆ [1] ತಿಳಿಯಬರುತ್ತದೆ.

ಇವರಲ್ಲಿ ನೃಪತುಂಗನು ಹೇಳುವ ನಾಗಾರ್ಜುನನು ಒಬ್ಬನಾಗಿರಬಹುದೋ ಏನೋ ತಿಳಿಯದು.

---

## ಜಯಬಂಧು.

ಮದ್ರಾಸ್ ಪ್ರಾಚ್ಯಕೋಶಾಲಯದಲ್ಲಿ ನಮಗೆ ದೊರೆತ ಚಂಪೂರೂಪವಾದ ಒಂದು ಸೂಪಶಾಸ್ತ್ರಗ್ರಂಥದಲ್ಲಿ ಕೆಲವು ಪದ್ಯಗಳ ಕೊನೆಯಲ್ಲಿ "**ಜಯಬಂಧುನಂದನ**" ಎಂದಿದೆ. ಆ ಗ್ರಂಥದ ಶೈಲಿ ಪೂರ್ವಕಾಲದ ಜೈನಕವಿಗಳ ಶೈಲಿಯನ್ನು ಅನುಸರಿಸಿದೆ. ನೃಪತುಂಗನು ಹೇಳುವ ಜಯಬಂಧುವಿನ ಮಗನೇ ಆ ಗ್ರಂಥವನ್ನು ಬರೆದಿರಬಹುದೋ ಏನೋ ತಿಳಿಯದು.

**ಅರ್ಹದ್ದಾಸನು** (ಸು. 1300) ಬರೆದಿರುವ ರಟ್ಟಮತವೆಂಬ ಗ್ರಂಥದಲ್ಲಿ ಅವನ ಬಂಧುವಾದ ಕುಂಚತೇಜನೆಂಬ ಅಪರನಾಮಧೇಯವುಳ್ಳ ಒಬ್ಬ ಜಯಬಂಧುವಿನ ಹೆಸರು ಹೇಳಿದೆ. ಆದರೆ ಈ ಜಯಬಂಧು ಅರ್ಹದ್ದಾಸನ ಸಮಕಾಲದವನು ಎಂದು ಊಹಿಸುವುದಕ್ಕೆ ಕಾರಣವಿದೆ. [2]

---

## ದುರ್ವಿನೀತ. ಸು. 600.

ಗಂಗರಾಜರಲ್ಲಿ ಈ ಹೆಸರಿನವನೊಬ್ಬನಿದ್ದನು. ಕೆಲವು ತಾಮ್ರಶಾಸನಗಳಲ್ಲಿ ಈತನಿಗೆ "ಶಬ್ದಾವತಾರಕಾರಃ," "ದೇವಭಾರತೀನಿಬದ್ಧಬೃಹತ್ಕಥಃ", "ಕಿರಾತಾರ್ಜುನೀಯಪಂಚದಶಸರ್ಗಟೀಕಾಕಾರಃ" ಎಂಬ ವಿಶೇಷಣಗಳಿರುವುದರಿಂದ

1. *Ind. Ant.*, XVIII, 181.
2. ಅರ್ಹದ್ದಾಸನ ಚರಿತೆಯನ್ನು ನೋಡಿ

ಈತನು ಶಬ್ದಾವತಾರವನ್ನು ರಚಿಸಿದಂತೆಯೂ, ಗುಣಾಢ್ಯನ ಬೃಹತ್ಕಥೆಯನ್ನು ಸಂಸ್ಕೃತಕ್ಕೆ ಪರಿವರ್ತಿಸಿದಂತೆಯೂ, ಭಾರವಿಕೃತ ಕಿರಾತಾರ್ಜುನೀಯದ 15 ನೆಯ ಸರ್ಗಕ್ಕೆ ಟೀಕೆಯನ್ನು ಬರೆದಂತೆಯೂ ತಿಳಿಯುತ್ತದೆ. ಅವಂತಿಸುಂದರೀ ಕಥಾಸಾರ ಎಂಬ ಗ್ರಂಥದಿಂದ ಈತನು ಪಲ್ಲವರಾಜನಾದ ಸಿಂಹವಿಷ್ಣುವಿನ ಮತ್ತು ಪೂರ್ವದೇಶದ ಚಾಳುಕ್ಯರಾಜನಾದ ವಿಷ್ಣುವರ್ಧನನ (I) ಸಮಕಾಲದವನೆಂದೂ ಭಾರವಿ ಇವನ ಆಸ್ಥಾನದಲ್ಲಿ ಸ್ವಲ್ಪಕಾಲ ಇದ್ದನೆಂದೂ ತಿಳಿಯುತ್ತದೆ.[1] ಈ ಕಾರಣಗಳಿಂದ ಇವನ ಕಾಲವು ಸುಮಾರು 600 ಆಗಿರಬಹುದು. ನೃಪತುಂಗನು ಹೇಳುವ ಕನ್ನಡಕವಿ ಈತನೇ ಆಗಿರಬೇಕು. ನೃಪತುಂಗನು ಕರ್ಣಾಟಕಗದ್ಯಗ್ರಂಥಕರ್ತೃಗಳಲ್ಲಿ ಇವನ ಹೆಸರನ್ನು ಸೇರಿಸಿರುವುದರಿಂದ 6 ನೆಯ ಶತಮಾನದಲ್ಲಿಯೇ ಕನ್ನಡದಲ್ಲಿ ಗದ್ಯಗ್ರಂಥಗಳು ವಿಶೇಷವಾಗಿದ್ದುವು ಎಂದು ತಿಳಿಯಬಹುದಾಗಿದೆ. ಈ ವಿಷಯವು ಕನ್ನಡಿಗರಿಗೆ ಹೃದಯಂಗಮವಾಗದೆ ಇರಲಾರದು.

II. ಪದ್ಯಗ್ರಂಥಕರ್ತೃಗಳು :—

## ಶ್ರೀವಿಜಯ.

ಈತನು ಜೈನಕವಿ. ಇವನು ಕನ್ನಡದಲ್ಲಿ **ಚಂ**ದ್ರಪ್ರಭಪುರಾಣವನ್ನು ಚಂಪೂರೂಪವಾಗಿ ಬರೆದನೆಂದು **ಮಂಗರಸನು** (1508) ತನ್ನ **ನೇಮಿಜಿನೇಶಸಂಗತಿ**ಯಲ್ಲಿ—"ಕನ್ನಡದೊಳು ಚಂಪೂಕಾವ್ಯವ ನೆಱೆ ಪೇಳ್ದ । ಸನ್ನುತಸತ್ಕವೀಶ್ವರರ" ಹೇಳುತ್ತೇನೆ ಎಂದಾರಂಭಿಸಿ "ದೇವಚಂದ್ರಪ್ರಭರನು ಕೊಂಡಾಡಿದ । ಶ್ರೀವಿಜಯರ......" ಎಂಬ ಪದ್ಯದಲ್ಲಿ ಹೇಳಿದ್ದಾನೆ. ಮತ್ತು ಪಿರಿಯಪಟ್ಟಣದ **ದೊಡ್ಡಯ್ಯನು** (ಸು. 1550) ತನ್ನ **ಚಂ**ದ್ರಪ್ರಭಸಾಂಗತ್ಯದಲ್ಲಿ "ಚಂದ್ರಪ್ರಭಪುರಾಣವ ಪೇಳ್ದ ವಿಜಯಕವೀಂದ್ರ" ಎಂದು ಈತನನ್ನು ಸ್ತುತಿಸಿದ್ದಾನೆ. ಈ ಕವಿಯನ್ನು **ದುರ್ಗಸಿಂಹನು** (ಸು. 1145) ತನ್ನ **ಪಂಚತಂತ್ರ**ದಲ್ಲಿ "ಶ್ರೀ ವಿಜಯರ ಕವಿಮಾರ್ಗಂ । ಭಾವಿಪ ಕವಿಜನದ ಮನಕೆ ಕನ್ನಡಿಯುಂ ಕೈ । ದ್ದೀವಿಗೆಯುಮಾದುವದಱಿಂ । ಶ್ರೀವಿಜಯರ್ ದೇವರವರನೇವಣ್ಣಿಪುದೋ ॥" ಎಂಬ ಪದ್ಯದಲ್ಲಿ ಹೊಗಳಿದ್ದಾನೆ. **ಕೇಶಿರಾಜನು** (ಸು. 1260) ತನ್ನ **ಶಬ್ದಮಣಿದರ್ಪಣ**ದಲ್ಲಿ ಇತರಕವಿಗಳೊಡನೆ ಶ್ರೀವಿಜಯನನ್ನೂ ಹೇಳಿ ಇವರುಗಳ "ಸುಮಾರ್ಗಮಿದಱೊಳೆ ಲಕ್ಷ್ಯಂ" ಎಂದು ಹೇಳಿದ್ದಾನೆ.

**ಶ್ರ. ಬೆ. ಶಾ.** 67 ರಿಂದ (1129) ಒಬ್ಬ ಶ್ರೀವಿಜಯನು ಆವನೋ ಒಬ್ಬ ಗಂಗರಾಜನಿಗೆ ಗುರುವಾಗಿದ್ದಂತೆಯೂ ಹೇಮಸೇನಮುನಿ ಬಹುಕಾಲ ಕಷ್ಟ

---

1. *Mysore Archæological Report* for 1921, 28.

ಪಟ್ಟು ಸಾಧಿಸಿದ ವಿದ್ಯೆಯೂ ತಪಸ್ಸೂ ಈತನಲ್ಲಿ ಸ್ವಲ್ಪಕಾಲದಲ್ಲಿಯೇ ಸಂಕ್ರಮಿಸಿದುವು ಎಂದು ವಾದಿರಾಜದೇವನು ಸ್ತುತಿಸಿದಂತೆಯೂ ತಿಳಿಯುಬರುತ್ತದೆ. ಆದರೆ ಬೇಲೂರು 17 ನೆಯ ಶಾಸನದಿಂದ ಈ ಗಂಗರಾಜನು ಬೂತುಗನೆಂದು (938—953) ತಿಳಿಯುತ್ತದೆ. ಅಲ್ಲದೆ ಸುಮಾರು 915 ರಲ್ಲಿ ಅನುಪಮಕವಿ ಎಂಬ ಬಿರುದನ್ನು ಪಡೆದಿದ್ದ ಒಬ್ಬ ಶ್ರೀವಿಜಯದಂಡನಾಥನು ಇದ್ದುದಾಗಿ ತಿಳಿಯುಬರುತ್ತದೆ.[1] ಇವರಿಬ್ಬರೂ ನೃಪತುಂಗನ ಕಾಲಕ್ಕೆ ಈಚೆಯವರು. ಆದುದರಿಂದ ಚಂದ್ರಪ್ರಭಪುರಾಣಕರ್ತೃವಾದ ಶ್ರೀವಿಜಯನೇ ನೃಪತುಂಗನು ಹೇಳುವ ಕವಿಯೆಂದು ತೋರುತ್ತದೆ.

ಈತನು ನೃಪತುಂಗನ "ಸಭಾಸದ" ನಾಗಿದ್ದಂತೆಯೂ ಕವಿರಾಜಮಾರ್ಗಾಲಂಕಾರವನ್ನು ನೃಪತುಂಗನ ಹೆಸರಿನಲ್ಲಿ ಬರೆದಂತೆಯೂ ಊಹಿಸುವುದಕ್ಕೆ ಕಾರಣಗಳಿರುವಂತೆ ತೋರುತ್ತದೆ. ಈಯಂಶವು ನೃಪತುಂಗನ ಚರಿತೆಯಲ್ಲಿ ಚರ್ಚಿಸಿದೆ.

ದುರ್ಗಸಿಂಹನೂ ಕೇಶಿರಾಜನೂ ಈತನನ್ನು ಹೊಗಳಿರುವುದನ್ನು ನೋಡಿದರೆ ಈತನು ಪ್ರೌಢಕವಿಯಾಗಿದ್ದಿರಬೇಕೆಂದು ಧಾರಾಳವಾಗಿ ಹೇಳಬಹುದು. ಈತನ ಚಂದ್ರಪ್ರಭಚಂಪು ದೊರೆತಿಲ್ಲ. ಈತನು ಮತ್ತಾವ ಗ್ರಂಥಗಳನ್ನು ಬರೆದಿದ್ದಾನೆಯೋ ತಿಳಿಯದು.

---

## ಕವೀಶ್ವರ.

ಇದು ಬಿರುದೇ ಹೊರತು ಹೆಸರಲ್ಲ. ಈ ಬಿರುದನ್ನು ಪಡೆದಿದ್ದವನಾರೋ ತಿಳಿಯದು. ಕವಿರಾಜಮಾರ್ಗದ ದ್ವಿತೀಯಪರಿಚ್ಛೇದದ ಕೊನೆಯ ಪದ್ಯದಲ್ಲಿ "ಕಾವ್ಯದಿಂ ಶ್ರೀವಿಜಯಪ್ರಭೂತಮುದಮಂ ತನಗಾಗಿಸಿದಂ ಕವೀಶ್ವರಂ" ಎಂದು ಹೇಳಿದೆ. ನೃಪತುಂಗನು ಹೇಳುವ ಕವೀಶ್ವರನು ಇವನೇ ಆಗಿರಬಹುದು ಎಂದು ತೋರುತ್ತದೆ. ಈ ಪದ್ಯದ ಆಧಾರದಿಂದಲೂ ಇನ್ನು ಕೆಲವು ಕಾರಣಗಳಿಂದಲೂ ಕವಿರಾಜಮಾರ್ಗವು ನೃಪತುಂಗನ ಆಶ್ರಿತನಾದ ಕವೀಶ್ವರನೆಂಬವನಿಂದ ರಚಿತವಾಯಿತೆಂದು ಡಾಕ್ಟರ್ ಫ್ಲೀಟ್ ಅಭಿಪ್ರಾಯಪಟ್ಟಿದ್ದಾರೆ.[2]

---

## ಪಂಡಿತ.

ಇದೂ ಬಿರುದಿನಂತೆ ಕಾಣುತ್ತದೆಯೇ ಹೊರತು ಹೆಸರಿನಂತೆ ಕಾಣುವುದಿಲ್ಲ. ಶ್ರ. ಬೆ. ಶಾ. 254 ರಲ್ಲಿ (1398) ಪಂಡಿತಾರ್ಯ ಎಂಬ ಹೆಸರುಳ್ಳ ಒಬ್ಬ

---

1. ಇವನ ಚರಿತೆಯನ್ನು ನೋಡಿ.

2. *Ind. Ant.*, XXXIII, 258.

ಯತಿಯನ್ನು ವಾಗ್ಮಿಶ್ರೇಷ್ಠನೆಂದು ವಿಶೇಷವಾಗಿ ಕೊಂಡಾಡಿದೆ. ಆದರೆ ಈತನು ಆಧುನಿಕನಾದುದರಿಂದ ನೃಪತುಂಗನು ಹೇಳುವ ಪಂಡಿತನು ಬೇರೆ ಅಲ್ಲ.

---

## ಚಂದ್ರ.

**ಕೇಶಿರಾಜ** (ಸು. 1260), **ರುದ್ರಭಟ್ಟ** (ಸು. 1180), ರಟ್ಟಮತವನ್ನು ಬರೆದ **ಅರ್ಹದ್ದಾಸ** (ಸು. 1300), ಇವರುಗಳು ಚಂದ್ರಭಟ್ಟನೆಂಬ ಒಬ್ಬ ಕವಿಯನ್ನು ಸ್ತುತಿಸಿದ್ದಾರೆ. **ದುರ್ಗಸಿಂಹನೂ** (ಸು. 1145) ಒಬ್ಬ ಚಂದ್ರಭಟ್ಟನನ್ನು ಸ್ತುತಿಸುವಂತೆ ತೋರುತ್ತದೆ. ಈ ಚಂದ್ರಭಟ್ಟನು ಸುಮಾರು 1000 ದಲ್ಲಿಯೋ ಅದಕ್ಕೆ ಹಿಂದೆಯೋ ಇದ್ದಂತೆ ತೋರುತ್ತದೆ[1] ಮತ್ತೊಬ್ಬ ಚಂದ್ರಭಟ್ಟಕವಿ 1067 ರಲ್ಲಿ ಇದ್ದಂತೆ ತಿಳಿಯುತ್ತದೆ.[2] **ಚಂದ್ರರಾಜನೆಂಬ** ಒಬ್ಬ ಕವಿ **ಮದನತಿಲಕವೆಂಬ** ಗ್ರಂಥವನ್ನು ಬರೆದಿದ್ದಾನೆ. ಈತನು 1079 ರಲ್ಲಿ ಇದ್ದಂತೆ ಊಹಿಸುವುದಕ್ಕೆ ಕಾರಣವಿದೆ.[3] **ಜಾತಕತಿಲಕವನ್ನು** ಬರೆದ **ಶ್ರೀಧರಾಚಾರ್ಯನು** (1049) ಒಬ್ಬ ಚಂದ್ರಕವಿಯ ಹೆಸರನ್ನು ಹೇಳುತ್ತಾನೆ. ಅಭಿನವ ದಶಕುಮಾರಚರಿತವನ್ನು ಬರೆದ **ಚೌಂಡರಸನು** (ಸು. 1300) **ಚಂದ್ರನೆಂಬ** ಒಬ್ಬ ಕವಿಯನ್ನು ಹೊಗಳಿದ್ದಾನೆ. ನೃಪತುಂಗನು ಹೇಳುವ ಚಂದ್ರನು, ಶ್ರೀಧರಾಚಾರ್ಯನು ಹೇಳುವ ಚಂದ್ರನಾಗಿರಬಹುದೋ ಏನೋ ತಿಳಿಯದು.

---

## ಲೋಕಪಾಲ.

ಈತನ ವಿಷಯವಾಗಿ ನಮಗೇನೂ ತಿಳಿಯದು. ಇವನು ನೃಪತುಂಗನ ಸಾಮಂತ ಬಂಕರಸನ ಮಗನಾದ **ಲೋಕಾದಿತ್ಯನಾಗಿರಬಹುದೆಂದು**, ಮಿ. ರೈಸ್ ಹೇಳುತ್ತಾರೆ.[4] ಆದರೆ ಲೋಕಾದಿತ್ಯ, ಲೋಕಪಾಲ, ಎಂಬ ಹೆಸರುಗಳಿಗೆ ಬಹಳ ಭೇದವಿದೆ. ಒಂದುವೇಳೆ ಎರಡೂ ಒಬ್ಬನ ಹೆಸರೇ ಎಂದು ಭಾವಿಸಿದರೂ ನೃಪತುಂಗನು ತನ್ನ ಸಾಮಂತನ ಮಗನನ್ನು ಪುರಾಣಕವಿಗಳ ಗೋಷ್ಠಿಯಲ್ಲಿ ಸೇರಿಸಿ ಹೇಳುವುದು ಅಸಂಭವವಾಗಿ ತೋರುತ್ತದೆ.

ನೃಪತುಂಗನು ಹೇಳಿರುವ ಕನ್ನಡಕವಿಗಳಲ್ಲಿ ಶ್ರೀವಿಜಯನು ಚಂದ್ರಪ್ರಭಪುರಾಣವನ್ನು ಕನ್ನಡದಲ್ಲಿ ಚಂಪೂರೂಪವಾಗಿ ಬರೆದನೆಂದು, ಮಂಗರಸ,

1. ಚಂದ್ರಭಟ್ಟನ ಚರಿತೆಯನ್ನು ನೋಡಿ.
2. ಇವನ ಚರಿತೆಯನ್ನು ನೋಡಿ.
3. ಚಂದ್ರರಾಜನ ಚರಿತೆಯನ್ನು ನೋಡಿ.
4. ಶಬ್ದಾನುಶಾಸನ, ಉಪೋದ್ಘಾತ, ಪುಟ 22.

ದೊಡ್ಡೈಯ, ಇವರ ಗ್ರಂಥಗಳಿಂದ ತಿಳಿಯಬರುತ್ತದೆ. ಉಳಿದವರು ಕನ್ನಡದಲ್ಲಿ ಆವ ಗ್ರಂಥಗಳನ್ನು ಬರೆದಿರುವರೋ ತಿಳಿಯದು. ಇವರ ಗ್ರಂಥಗಳೆಲ್ಲಾ ದೊರೆತರೆ ನೃಪತುಂಗನಿಗೆ ಹಿಂದೆ ಕವಿಗಳು ಕನ್ನಡಭಾಷೆಯನ್ನು ಹೇಗೆ ಬರೆಯುತ್ತಿದ್ದರು, ಅವನ ಕಾಲಕ್ಕೂ ಹಿಂದಣಕಾಲಕ್ಕೂ ಭಾಷಾಶೈಲಿಯಲ್ಲಿಯೂ ರಚನೆಯಲ್ಲಿಯೂ ವ್ಯಾಕರಣಮರ್ಯಾದೆಯಲ್ಲಿಯೂ ಆವ ವ್ಯತ್ಯಾಸಗಳಿದ್ದುವು ಎಂಬ ವಿಷಯಗಳನ್ನು ತಿಳಿಯಬಹುದು. ನೃಪತುಂಗನು ಹಳಗನ್ನಡದ ಪದಗಳನ್ನು ವಿಶೇಷವಾಗಿ ಉಪಯೋಗಿಸಲಾಗದು ಎನ್ನುತ್ತಾನೆ. ಅವನ ಕಾಲದಲ್ಲಿದ್ದ ಹಳಗನ್ನಡದ ಸ್ವರೂಪವೆಂಥದೋ ತಿಳಿಯದು. ಅವನು ಹೇಳಿರುವ ಕವಿಗಳ ಗ್ರಂಥಗಳು ಪ್ರಾಯಶಃ ಆಕಾಲದ ಹಳಗನ್ನಡದಲ್ಲಿರಬಹುದು. ಅವು ದೊರೆತರೆ ಆಕಾಲದ ಹಳಗನ್ನಡದ ಸ್ವರೂಪವನ್ನು ತಿಳಿದುಕೊಳ್ಳುವುದಕ್ಕೆ ಸಾಧನಸಂಪತ್ತಿ ಉಂಟಾಗುವುದು.

---

## ಜಯಬಂಧುನಂದನ. ಸು. 800.

ಮದ್ರಾಸ್ ಪ್ರಾಚ್ಯಕೋಶಾಲಯದಲ್ಲಿ ಒಂದು ಸೂಪಶಾಸ್ತ್ರವು ದೊರೆತಂತೆಯೂ ಅದರಲ್ಲಿ ಕೆಲವು ಪದ್ಯಗಳ ಕೊನೆಯಲ್ಲಿ "**ಜಯಬಂಧುನಂದನ**" ಎಂಬ ಹೆಸರು ಇರುವಂತೆಯೂ ಹಿಂದೆಯೇ ತಿಳಿಸಿದೆಯಷ್ಟೆ.[1] ಈ ಜಯಬಂಧುನಂದನನು, ನೃಪತುಂಗನು ತನ್ನ ಹಿಂದೆ ಇದ್ದಹಾಗೆ ಹೇಳುವ ಜಯಬಂಧುವಿನ ಮಗನಾಗಿರಬಹುದು. ಪೂರ್ವದ ಜೈನಶೈಲಿಯನ್ನು ಅನುಸರಿಸುವ ಇವನ ಬಂಧವೂ ಈ ಅಭಿಪ್ರಾಯಕ್ಕೆ ಉಪಷ್ಟಂಭಕವಾಗಿದೆ. ಈ ಕವಿಯ ನಿಜವಾದ ಹೆಸರು ಗೊತ್ತಿಲ್ಲ. ಕನ್ನಡಕವಿಗಳು ತಮ್ಮ ಗ್ರಂಥಗಳಲ್ಲಿ ಕೆಲವು ಪದ್ಯಗಳ ಕೊನೆಯಲ್ಲಿ ತಮ್ಮ ಹೆಸರನ್ನಾಗಲಿ ಬಿರುದನ್ನಾಗಲಿ ಹೇಳಿಕೊಳ್ಳುವ ವಾಡಿಕೆಯುಂಟು: ಮಂಗರಾಜ, ಅರ್ಹದ್ದಾಸ, ಸುಜನೋತ್ತಂಸ ಮೊದಲಾದ ಕವಿಗಳ ಗ್ರಂಥಗಳನ್ನು ನೋಡಿದರೆ ಈ ವಿಷಯವು ಸ್ಪಷ್ಟವಾಗುತ್ತದೆ. ಈ ಸಂಪ್ರದಾಯಕ್ಕೆ ಅನುಸಾರವಾಗಿ ಈ ಸೂಪಶಾಸ್ತ್ರದಲ್ಲಿ ದೊರೆವ 'ಜಯಬಂಧುನಂದನ' ಎಂಬುದೂ ಕವಿಗೇ ಅನ್ವಯಿಸಬಹುದು.

ಈ ಸೂಪಶಾಸ್ತ್ರವು ಚಂಪೂರೂಪವಾಗಿದೆ; ಆದರೂ ಗದ್ಯಭಾಗವೇ ವಿಶೇಷವಾಗಿದೆ. ಇದರಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

ಕಾಸಿದ ಪಾಲೊಳಿಕ್ಕಿ ಮೊಸರಂ ನೆಱೆ ಪೊಟ್ಟಿಸೆವಂತಮತ್ತಯಂ ।
ಕಾಸಿ ಘೃತಾನ್ವಿತಂ ಕಳಮಚೂರ್ಣಮನಿಕ್ಕಿ ಬೞಕ್ಕೆ ಸೀರೆಯೊಳ್ ॥

---

1. ಪುಟ 12.

ಮಾಸರಮಾಗೆ ಸೇವಿಗೆಯನೊತ್ತಿ ಸಿತೋದಕದಿಂದೆ ಮತ್ತೆ ಸಂ।
ವಾಸಿಸಿ ಮಾಱ್ಕೆ ಲಡ್ಡುಗೆಯನೀತೆಱದಿಂ ಜಯಬಂಧುನಂದನಾ ॥ 1 ॥
ಅರೆದುರ್ದಿನ ಬೇಳೆಯನೊಂ। ದಿರೆ ಮೊಸರದಿ (?) ನೀರೊಳಿಂಗು ಜೀರಗೆ ಕೊತ್ತುಂ।
ಬರಿ ಮೆಣಸಲ್ಲಂ ಬೆರಸಿ। ದ್ದರಿಗೆಯನಡೆ ಕಂಪನಿಂಪುಮಂ ತಳೆದಿರ್ಕುಂ ॥ 2 ॥
ತುಱುವೆಯ ಬೇರನಿಕ್ಕಿ ತರುಹೇ• ಯ ದುಗ್ಧಮನರ್ಧಮಪ್ಪಿನಂ।
ಮಱುಗಿಸಿ ಬಂಧಮಾಗಿ ಘೃತಮುಂ ಬೆರಸಿಟ್ಟು... ಮತ್ತದಂ ॥
ಪೆಱವಱೊಳೇಂ ತ್ರಿಜಾತಕದೊಳೊಂದಿರೆ ವೇದಿಸಿ ಕಮ್ಮಿತಾಗೆ ಪಾಂ।
ಗಱದಮೃತೋಪಮಾನಮಿದು ತಾನೆನೆ ಮಾಡುಗೆ ಪಾಲೊಳುಂಡೆಯುಂ ॥ 3 ॥

---

## ಸೈಗೊಟ್ಟ ಶಿವಮಾರ. ಸು. 800.

ಈ ಗಂಗರಾಜನು ಶಿವಮಾರಮತವೆಂಬ ಒಂದು ಗಜಶಾಸ್ತ್ರವನ್ನು ಮಾಡಿದಂತೆ ನಗರದ 35 ನೆಯ ಶಾಸನದ ಈ ಭಾಗದಿಂದ ತಿಳಿಯುತ್ತದೆ:—

ಶಿವಮಾರದೇವಂ ಸೈಗೊಟ್ಟನೆಂಬೆರಡನೆಯ ಪೆಸರಂ ತಾಳ್ದಿ ಶಿವಮಾರಮತಮೆಂದು ಗಜಶಾಸ್ತ್ರಮುಂ ಮಾಡಿ ಮತ್ತಂ—

ಏವೇೞ್ವುದೊ ಶಿವಮಾರನ। ಹೀವಳಯಾಧಿಪನ ಸುಭಗಕವಿತಾಗುಣಮಂ।
ಭೂವಳಯದೊಳ್ ಗಜಾಷ್ಟಕ। ಮೋವನಿಗೆಯುಮೊನಕೆವಾಡುಮಾದುದೆ ಪೇೞ್ಗುಂ ॥

'ಒನಕೆವಾಡಾದುದು' ಎಂಬುದರಿಂದ ಇದು ಕನ್ನಡಭಾಷೆಯಲ್ಲಿದ್ದಿರಬಹುದು.

---

## ನೃಪತುಂಗ. 814—877.

ಈತನು ಕವಿರಾಜಮಾರ್ಗವನ್ನು ಬರೆದಿದ್ದಾನೆ; ಇನ್ನಾವ ಗ್ರಂಥಗಳನ್ನು ಬರೆದಿದ್ದಾನೆಯೋ ತಿಳಿಯದು.

ಇವನು ರಾಷ್ಟ್ರಕೂಟವಂಶದ ದೊರೆ; 814 ರಿಂದ 877 ರವರೆಗೆ ರಾಜ್ಯಭಾರಮಾಡಿದನು. ಈತನಿಗೆ ಅಮೋಘವರ್ಷ, ಅತಿಶಯಧವಳ ಎಂಬ ಹೆಸರುಗಳೂ ಉಂಟು. ಈತನು ಸಂಸ್ಕೃತದಲ್ಲಿ ಆದಿಪುರಾಣವನ್ನು ಬರೆದ ಜಿನಸೇನನ (783) ಶಿಷ್ಯನೆಂದು ಗುಣಭದ್ರನ (898) ಉತ್ತರಪುರಾಣದಿಂದ ತಿಳಿಯುತ್ತದೆ.[1]

1. ಯಸ್ಯ ಪ್ರಾಂಶುನಖಾಂಶುಜಾಲವಿಸರದ್ಧಾರಾಂತರಾವಿರ್ಭವ।
ತ್ಪಾದಾಂಭೋಜರಜಃಪಿಶಂಗಮುಕುಟಪ್ರತ್ಯಗ್ರರತ್ನದ್ಯುತಿಃ ॥
ಸಂಸ್ಮರ್ತಾ ಸ್ವಮಮೋಘವರ್ಷನೃಪತಿಃ ಪೂತೋಹಮದ್ಯೇತ್ಯಲಂ।
ಸ ಶ್ರೀಮಾನ್ ಜಿನಸೇನಪೂಜ್ಯಭಗವತ್ಪಾದೋ ಜಗನ್ಮಂಗಳಂ ॥

ಈತನ ರಾಜಧಾನಿ ಮಾನ್ಯಖೇಟಪುರ; ಇದು ಈಗ ಹೈದರಾಬಾದು ಸೀಮೆಯಲ್ಲಿರುವ ಮಾಲ್‌ಖೇಡ್ ಎಂಬುದೇ. ನೃಪತುಂಗನು 62 ವರ್ಷಗಳು ರಾಜ್ಯಭಾರ ಮಾಡಿದನು. ಬಳಿಕ ತಾನೇ ರಾಜ್ಯವನ್ನು ಬಿಟ್ಟಂತೆ ಅವನು ಸಂಸ್ಕೃತದಲ್ಲಿ ಬರೆದಿರುವ ಪ್ರಶ್ನೋತ್ತರಮಾಲೆಯೆಂಬ ಗ್ರಂಥದ ಅಂತ್ಯಶ್ಲೋಕದಿಂದ ತಿಳಿಯುತ್ತದೆ.[1]

ಇವನ ತಂದೆ ಅತಿಶಯಧವಳನೆಂದು, ಮಿ. ರೈಸ್ ಹೇಳುತ್ತಾರೆ.[2] ಆದರೆ ಅತಿಶಯಧವಳ ಎಂಬ ಹೆಸರು ಇವನದೇ ಎಂಬುದು ಶಾಸನಗಳಿಂದಲೂ ಇವನ ಗ್ರಂಥದಲ್ಲಿ ದೊರೆವ "ಅತಿಶಯಧವಳೋಕ್ತಕ್ರಮದೆ", "ಅತಿಶಯಧವಳೋರ್ವೀಶೋದಿತಾಲಂಕೃತಿ", "ಆಗದೆಂದನತಿಶಯಧವಳಂ", "ಅತಿಶಯಧವಳಧರಾಧಿಪಮತದಿಂದಂ" ಎಂಬ ಪದ್ಯಭಾಗಗಳಿಂದಲೂ ವ್ಯಕ್ತವಾಗುತ್ತದೆ. ಅಲ್ಲದೆ, "ನರಲೋಕಚಂದ್ರಮತದಿಂ", "ಕೃತಕೃತ್ಯಮಲ್ಲವಲ್ಲಭಮತದಿಂ", "ಪರಮಸರಸ್ವತೀತೀರ್ಥಾವತಾರನೃಪತುಂಗದೇವ" ಎಂಬುದಾಗಿ ಇವನ ಗ್ರಂಥದಲ್ಲಿ ಅಲ್ಲಲ್ಲಿ ದೊರೆವುದರಿಂದ ಈತನಿಗೆ ಅತಿಶಯಧವಳ ಎಂಬುದಲ್ಲದೆ ನರಲೋಕಚಂದ್ರ, ಕೃತಕೃತ್ಯಮಲ್ಲವಲ್ಲಭ, ಪರಮಸರಸ್ವತೀತೀರ್ಥಾವತಾರ ಎಂಬ ಬಿರುದುಗಳೂ ಇದ್ದಂತೆ ತೋರುತ್ತದೆ.

ಇವನ ಗ್ರಂಥ

## ಕವಿರಾಜಮಾರ್ಗ.

ಇದು ಅಲಂಕಾರಗ್ರಂಥ. ನಮಗೆ ದೊರೆತಿರುವ ಕನ್ನಡಗ್ರಂಥಗಳಲ್ಲೆಲ್ಲಾ ಇದೇ ಪುರಾತನವಾದುದು. ಈ ಗ್ರಂಥವು ಮೂರು ಪರಿಚ್ಛೇದಗಳಾಗಿ ಭಾಗಿಸಲ್ಪಟ್ಟಿದೆ:—(1) ದೋಷಾನುವರ್ಣನನಿರ್ಣಯ, (2) ಶಬ್ದಾಲಂಕಾರ, (3) ಅರ್ಥಾಲಂಕಾರ. ಗ್ರಂಥಾವತಾರದಲ್ಲಿ ಮೊದಲನೆಯ ಪದ್ಯದಲ್ಲಿ "ನೃಪತುಂಗ" ಎಂದೂ ಎರಡನೆಯ ಪದ್ಯದಲ್ಲಿ "ಅತಿಶಯಧವಳ" ಎಂದೂ ತನ್ನ ಹೆಸರುಗಳನ್ನು ಹೇಳಿಕೊಂಡು ಶ್ಲೇಷೆಯಿಂದ ವಿಷ್ಣುಸ್ತುತಿಯನ್ನು ಮಾಡಿ, ಬಳಿಕ ಸರಸ್ವತಿಯನ್ನೂ ಕವೀಶ್ವರರನ್ನೂ ಕಾವ್ಯಗಳನ್ನೂ ಹೊಗಳಿ, ಗದ್ಯಪದ್ಯಕಾವ್ಯಲಕ್ಷಣಗಳನ್ನು ಹೇಳಿ, ಇವುಗಳಿಗೆ ಲಕ್ಷ್ಯರೂಪವಾಗಿ ಗ್ರಂಥಗಳನ್ನು ಬರೆದಿರುವ ಸಂಸ್ಕೃತ ಕರ್ಣಾಟಕಕವಿಗಳ ಹೆಸರುಗಳನ್ನೂ ಹೇಳಿದ್ದಾನೆ. ಸಂಸ್ಕೃತಕವಿಗಳಲ್ಲಿ ಕಾದಂಬರೀಹರ್ಷಚರಿತಗಳೆಂಬ ಗದ್ಯಕಾವ್ಯಗಳ ಕರ್ತೃವಾದ ಬಾಣನನ್ನೂ

1. ವಿವೇಕಾತ್ತ್ಯಕ್ತರಾಜ್ಯೇನ ರಾಜ್ಞೇಯಂ ರತ್ನಮಾಲಿಕಾ ।
ರಚಿತಾಮೋಘವರ್ಷೇಣ ಸುಧಿಯಾ ಸದಲಂಕೃತಿಃ ॥

2. ಶಬ್ದಾನುಶಾಸನ, ಉಪೋದ್ಘಾತ, ಪುಟ 23.

ಪದ್ಯಕಾವ್ಯಕರ್ತೃಗಳಾದ ಗುಣಸೂರಿ ನಾರಾಯಣ ಭಾರವಿ ಕಾಳಿದಾಸ ಮಾಘಾದಿಗಳನ್ನೂ ಸ್ಮರಿಸಿದ್ದಾನೆ. ಕನ್ನಡಕವಿಗಳಲ್ಲಿ ಗದ್ಯಪದ್ಯಕಾವ್ಯಕರ್ತೃಗಳೆಂದು ಈತನು ಹೇಳಿರುವವರ ವಿಷಯವನ್ನು ಹಿಂದೆಯೇ ತಿಳಿಸಿದ್ದೇವೆ.[1]

ಆಮೇಲೆ ಕನ್ನಡಭಾಷೆ ಪ್ರಚಾರದಲ್ಲಿದ್ದ ಪ್ರದೇಶವನ್ನೂ ಆ ಭಾಷೆ ಉಚ್ಛ್ರಾಯದಶೆಯಲ್ಲಿದ್ದ ಸ್ಥಳಗಳನ್ನೂ ಆ ಸ್ಥಳದವರು ಆ ಭಾಷೆಯನ್ನು ಚೆನ್ನಾಗಿ ಅಭ್ಯಾಸಮಾಡಿದ್ದರು ಎಂಬ ವಿಷಯವನ್ನೂ ಸೂಚಿಸಿ, ತನ್ನ ಕಾಲದಲ್ಲಿ ಹಳಗನ್ನಡವೆಂಬ ಭಾಷೆಯಿದ್ದಿತೆಂದೂ, ಕನ್ನಡಭಾಷೆಯಲ್ಲಿ ದಕ್ಷಿಣೋತ್ತರಶೈಲಿಗಳೆಂಬ ಎರಡು ಭೇದಗಳು ಉಂಟೆಂದೂ, ಬೆದಂಡೆಚತ್ತಾಣಗಳೆಂಬ ಎರಡು ವಿಧವಾದ ಪದ್ಯಕಾವ್ಯಗಳನ್ನು ಪುರಾತನಕವಿಗಳು ಒಡಂಬಟ್ಟಿದ್ದಾರೆಂದೂ ಹೇಳುತ್ತಾನೆ. ತರುವಾಯ ಕಾವ್ಯದೋಷಗಳಲ್ಲಿ ದಿಕ್ಪ್ರದರ್ಶನಾರ್ಥವಾಗಿ ಕೆಲವನ್ನು ಉದಾಹರಿಸಿ ಪ್ರಥಮಪರಿಚ್ಛೇದವನ್ನು ಮುಗಿಸುತ್ತಾನೆ. ಎರಡನೆಯ ಪರಿಚ್ಛೇದದಲ್ಲಿ, ಕನ್ನಡದಲ್ಲಿ ಬರೆವುದಕ್ಕೆ ಕಷ್ಟವಾದ ಏಕಾಕ್ಷರದ್ವ್ಯಕ್ಷರಶ್ಲೋಕಗಳಿಗೂ ಚಿತ್ರಯಮಕಾದಿಗಳಿಗೂ ಉದಾಹರಣಗಳನ್ನು ಕೊಡುತ್ತಾನೆ. ಮೂರನೆಯ ಪರಿಚ್ಛೇದದಲ್ಲಿ ಸುಮಾರು 35 ಅಲಂಕಾರಗಳಿಗೆ ಲಕ್ಷ್ಯಲಕ್ಷಣಗಳನ್ನು ಹೇಳಿದ್ದಾನೆ. ಪ್ರತಿಪರಿಚ್ಛೇದದ ಕೊನೆಯಲ್ಲಿಯೂ "ನೃಪತುಂಗದೇವಾನುಮತಮಪ್ಪ ಕವಿರಾಜಮಾರ್ಗದೊಳ್" ಎಂದಿದೆ.

ಈ ಗ್ರಂಥದ ಕೆಲವು ಪದ್ಯಗಳು ಛಂದೋಂಬುಧಿಯಲ್ಲಿಯೂ ಶಬ್ದಮಣಿದರ್ಪಣದಲ್ಲಿಯೂ ಉದಾಹೃತವಾಗಿವೆ.[2]

ಯದ್ಯಪಿ ಈ ಗ್ರಂಥವು ನೃಪತುಂಗಕೃತವೆಂದು ಪ್ರತೀತಿಯಿದ್ದರೂ ಶ್ರೀವಿಜಯಕೃತವೋ ಎಂದು ಸಂದೇಹಪಡುವುದಕ್ಕೆ ಅವಕಾಶವಿದೆ. ಪ್ರಥಮಪರಿಚ್ಛೇದದ ಅಂತ್ಯಪದ್ಯದಲ್ಲಿ "ಶ್ರೀವಿಜಯಪ್ರಭೂತಮನಿದಂ ಕೆಯ್ಕೊಳ್ವುದಿಂ ಮಾಳ್ಕೆಯಿಂ" ಎಂದೂ, ದ್ವಿತೀಯಪರಿಚ್ಛೇದದ ಕಡೆಯ ಪದ್ಯದಲ್ಲಿ "ಕಾವ್ಯದಿಂ ಶ್ರೀವಿಜಯಪ್ರಭೂತಮುದಮಂ ತನಗಾಗಿಸಿದಂ ಕವೀಶ್ವರಂ" ಎಂದೂ, ಮೂರನೆಯ ಪರಿಚ್ಛೇದದ ಕೊನೆಯ ಪದ್ಯದಲ್ಲಿ "ಪರಮಶ್ರೀವಿಜಯಪ್ರಭೂತಿಜಯಶಸ್ಸ್ತ್ರೀಬಾಲವೃದ್ಧಾಹಿತಂ" ಎಂದೂ ದೊರೆಯುತ್ತದೆ. ಅಲ್ಲದೆ ಪ್ರತಿಪರಿಚ್ಛೇದದ ಕೊನೆಯ ಗದ್ಯದಲ್ಲಿಯೂ "ನೃಪತುಂಗದೇವಕೃತ" ಎನ್ನದೆ "ನೃಪತುಂಗದೇವಾನುಮತಮಪ್ಪ" ಎಂದಿದೆ. ಮೂರು ಪರಿಚ್ಛೇದಗಳ ಕೊನೆಯ ಪದ್ಯಗಳಲ್ಲಿಯೂ "ಶ್ರೀವಿಜಯಪ್ರಭೂತ" ವೆಂದಿರುವುದರಿಂದಲೂ ಮುಖ್ಯವಾಗಿ ಮೊದಲನೆಯ ಪರಿಚ್ಛೇದದ ಕಡೆಯ ಪದ್ಯದಲ್ಲಿ 'ಶ್ರೀವಿಜಯನು ಇದನ್ನು ಮಾಡಿದನು' ಎಂಬರ್ಥವು ತೋರುವುದರಿಂದಲೂ ಗ್ರಂಥದ ಅಂತ್ಯಭಾಗದಲ್ಲಿ "ಆಶ್ರಿತ ಮಹಾನೃಪತುಂಗಸಭಾಸದಂ...... ಕೂಡೆ

1. ಪುಟ 10.

2. ಛಂದೋಂಬುಧಿ, ಪುಟ 18, 19, 20, 21. ಶಬ್ದಮಣಿದರ್ಪಣ, ಪುಟ 71, 98.

ಪೇೞ್ದ ನುತಕಾವ್ಯಂ" ಎಂದಿರುವುದರಿಂದಲೂ "ನೃಪತುಂಗಾನುಮತಮಪ್ಪ" ಎಂಬು ದರಿಂದಲೂ ಒಂದು ವೇಳೆ ನೃಪತುಂಗನು ಪೂರ್ವಕವಿಗಳ ಗೋಷ್ಠಿಯಲ್ಲಿ ಹೇಳಿರುವ ಶ್ರೀ ವಿಜಯನೇ ಆತನ ಆಸ್ಥಾನಕವಿಯಾಗಿದ್ದು ಈ ಗ್ರಂಥವನ್ನು ರಚಿಸಿ ನೃಪತುಂಗನ ಅಂಕಿತ ದಿಂದ ಪ್ರಕಟಿಸಿದ್ದರೂ ಇರಬಹುದು. ಹಿಂದೆ[1] ಅನುವಾದಿಸಿರುವ ಶ್ರೀವಿಜಯಸ್ತುತಿರೂಪ ವಾದ ದುರ್ಗಸಿಂಹನ "ಶ್ರೀವಿಜಯರ ಕವಿಮಾರ್ಗಂ" ಎಂಬ ಪದ್ಯದಲ್ಲಿಯ 'ಕವಿಮಾರ್ಗಂ' ಎಂಬುದು 'ಕವಿರಾಜಮಾರ್ಗ' ಎಂಬ ಈ ಗ್ರಂಥಕ್ಕೆ ಅನ್ವಯಿಸುವುದಾದರೆ ಇದು ಶ್ರೀವಿಜಯ ಕೃತವೆಂಬ ಊಹೆಗೆ ಸಹಾಯಕವಾಗುತ್ತದೆ. ಆದರೆ ಈ ವಿಷಯದಲ್ಲಿ ಹೀಗೆಯೇ ಸರಿ ಎಂದು ನಿಶ್ಚಯಿಸಲಾಗುವುದಿಲ್ಲ. ಒಂದುವೇಳೆ ನೃಪತುಂಗನಿಗೆ ಶ್ರೀವಿಜಯ ಎಂಬ ಬಿರುದೂ ಇದ್ದಿ ರಬಹುದು ಎಂದರೆ ಅದಕ್ಕೆ ಶಾಸನಗಳಲ್ಲಿಯಾಗಲಿ ಈ ಗ್ರಂಥದಲ್ಲಿಯಾಗಲಿ ಆವ ಆಧಾರವೂ ಸಿಕ್ಕುವುದಿಲ್ಲ. ಈ ಗ್ರಂಥವು ನೃಪತುಂಗನ ಆಶ್ರಿತನಾದ ಕವೀಶ್ವರನಿಂದ ರಚಿತವಾಯಿತು, ಎಂಬ ಡಾಕ್ಟರ್ ಫ್ಲೀಟರ ಅಭಿಪ್ರಾಯವು ಹಿಂದೆಯೇ ಸೂಚಿಸಲ್ಪಟ್ಟದೆ.[2]

ಈ ಗ್ರಂಥದಲ್ಲಿ ಅನೇಕಪದ್ಯಗಳು ಉದಾಹೃತವಾಗಿವೆ. ಇವು ಪ್ರಾಯಶಃ ನೃಪತುಂಗನಿಗೆ ಹಿಂದೆ ಇದ್ದ ಕವಿಗಳ ಗ್ರಂಥಗಳಿಂದ ಉದ್ಧೃತವಾಗಿರಬಹುದು. ಈ ಪದ್ಯಗಳಲ್ಲಿ ರಾಮಾಯಣದ ಕಥೆಗೆ ಸಂಬಂಧಿಸಿದುವು ಕೆಲವಿವೆ. ಇದರಿಂದ ಈಗ ನಮಗೆ ದೊರೆತಿಲ್ಲದ ಆವುದೋ ಒಂದು ರಾಮಾಯಣವು ಆಕಾಲದಲ್ಲಿ ಇದ್ದಂತೆ ತೋರುತ್ತದೆ. ಈ ರಾಮಾಯಣದ ಪದ್ಯಗಳು **ನಾಗವರ್ಮನ** (ಸು. 990) ಛಂದೋಂಬುಧಿಯಲ್ಲಿಯೂ ಉದಾಹೃತವಾಗಿವೆ. ನೃಪತುಂಗನು ತನಗೆ ಹಿಂದೆ ಇದ್ದ ಭಾಷೆಯನ್ನು ಹಳಗನ್ನಡವೆಂದು ಹೇಳುವುದರಿಂದಲೂ ಇವನು ಉದಾ ಹರಿಸಿರುವ ಪದ್ಯಗಳ ಬಂಧಗೌರವದಿಂದಲೂ ಇವನ ಕಾಲಕ್ಕೆ ಬಹಳ ಹಿಂದೆಯೇ ಗ್ರಂಥರಚನೆ ಆರಂಭವಾಗಿ ಕನ್ನಡವು ಉತ್ತಮಸ್ಥಿತಿಗೆ ಬಂದಿದ್ದಿತೆಂದು ಊಹಿಸು ವುದಕ್ಕೆ ಅವಕಾಶವಿದೆ.

ಇವನು ಕೆಲವು ಪದ್ಯಗಳಲ್ಲಿದ್ದ ದೋಷಗಳನ್ನು ತಿದ್ದಿ ಪರಿಷ್ಕರಿಸಿ ಬರೆದಿ ದ್ದಾನೆ. ಅವುಗಳಲ್ಲಿ ಮೂರು ಪದ್ಯಗಳನ್ನು ತೆಗೆದು ಬರೆಯುತ್ತೇವೆ:—

(1) ಅರಸುಕುಮಾರನನಾಯತ। ತರಕಡೆಗಣ್ಣಿಂದೆ ನೋಡಿ ಕೆಳದಿಸಮೇತಂ।
ಪರಿಗತನಗೆಯಿಂದಿರ್ದಂ। ಗುರುನಾಣ್ಭರದಿಂದಮೆಱಗಿ ಮುಖತಾವರೆಯಂ॥[3]

**ಅಶುದ್ಧ**

ನರಪತಿತನಯನನಾಯತ। ತರಳಾಪಾಂಗದೊಳೆ ನೋಡಿ ಕೆಳದಿಯರೊಡನಾಂ।
ಪರಿಗತಹಾಸ್ಯದೊಳಿರ್ದಂ। ಗುರುಲಜ್ಜಾಭರದಿನೆಱಗಿ ಮುಖಸರಸಿಜಮಂ॥ **ಶುದ್ಧ**

1. ಪುಟ 13.
2. ಪುಟ 14.
3. ಶಬ್ದಮಣಿದರ್ಪಣ, ಪುಟ 98.

(2) ಬಹಿರಂತರುಪವನಂಗಳೊ। ಳಹರಹಮಾಪರಭೃತಂಗಳುಲಿವ ರವಂಗಳ್।
ಸಹಸಾ ತಳಮಳಗೊಳಿಸಿದು। ವಹೋ ಮನಂಗಳನಿತಸ್ತ್ರತಂ ವಿರಹಿಗಳಾ॥ **ಅಶುದ್ಧ**

ಬಹಿರುದ್ಯಾನಾಂತರದೊಳ್। ಸಹಸೋದಿತಮತ್ತಕೋಕಿಲೋಚ್ಚೈರ್ಧ್ವಾನಂ।
ಮುಹುರಾಕರ್ಣಿಸೆ ಪಡೆದ। ತ್ತಹರ್ನಿಶಂ ಪೆರ್ಚನಂತರಂಗಕ್ಕೆನ್ನಾ॥ **ಶುದ್ಧ**

(3) ಬರಿಸಿ ಕ್ಷಿತಿಪತಿಯಂ ಸ್ವೈ। ತಿರಿಸಿ ಪ್ರಿಯಕುಶಲವಾರ್ತೆಯಂ ಬೆಸಗೊಂಡು।
ಸ್ಥಿರವಿದುರ್ಗ ಪ್ರಭು ನುಡಿಯೆ। ಪ್ರರೂಢಮುದನಾದನಾತನೆಂಬುದು ದೂಷ್ಯಂ॥[1]
**ಅಶುದ್ಧ**

ಕ್ಷಿತಿಪತಿಯಂ ಬರಿಸಿ ಜಗ। ನ್ನುತನಂ ಸಂತೈಸಿ ಕುಶಲವಾರ್ತಾಂತರಮಂ।
ವಿತತವಚನಂ ಬೆಸಗೊಂಡತಿ। ವಿತೀರ್ಣಮುದನಾದನಾತನೆಂಬುದು ಮಾರ್ಗಂ॥ **ಶುದ್ಧ**

ಶಬ್ದಾಲಂಕಾರವನ್ನು ವಿವರಿಸುವ ಎರಡನೆಯ ಪರಿಚ್ಛೇದದಿಂದ ನಾಲ್ಕು ಪದ್ಯಗಳನ್ನು ತೆಗೆದು ಬರೆಯುತ್ತೇವೆ:—

[2] ಮುನ್ನಂ ತನ್ನಂ ತಾನೆ ತಾನೇ। ಕೆನ್ನಂ ಕೆನ್ನಂ ನಿರಂತರಂ।
ಖಿನ್ನಂ ಬಂದಿರ್ಪನಂತಿನ್ನುಂ। ತನ್ನಿಂ ತನಗಮೇವಳೋ॥ 4॥

ನಿನ್ನಿಂ ನಿನ್ನನೆನೇ ನಿನ್ನಾ। ನಾನಾನನನನನ್ನನಂ।
ನೀನೇ ನನ್ನನ್ನನಾನಾನಾ। ನಿನ್ನೀನೇನನನೂನನಂ॥ 5॥

ಮಾನಿನೀ ಮುನ್ನಮಾಂ ನೀನೇ। ನೀನಾನಿನ್ನನುಮಾನಮೇಂ।
ಮಾನಮಾನಾನೆಮುನ್ನನ್ನಿ। ಮಾನಮಾನನಮುನ್ನಿನಾ॥ 6॥

ಕಿಡಿಪಂ ಬಾರಗೇ ಮೆಯ್ಯುಂ। ಕಿಡಿಪಂ ಕಿಡಿಪಂತೆ ಮುಂ।
ಕಿಡಿಪಂ ಪೋಕುಮೇ ತಾಮುಂ। ಕಿಡಿಸಲ್ ಸುಡಿಸೋಲಮೇ॥ 7॥

ಇವನ ಬಂಧವನ್ನು ತೋರಿಸುವ್ರದಕ್ಕೆ ಎರಡು ಪದ್ಯಗಳನ್ನು ತೆಗೆದು ಬರೆಯುತ್ತೇವೆ:—

ಕುಜವಂತ್ರು ಪೆಜರ ಬಗೆಯಂ। ತೆಜೆದಿರೆ ಪೆಜರ್ಗಜುಪಲಾರ್ಪವಂ ಮಾತಜವಂ।
ಕಿಜದಜೊಳೆ ಪಿರಿದುಮರ್ಥಮ। ನಜಪಲ್ ನೆಜವಾತನಾತನಿಂದಂ ನಿಪುಣಂ॥ 8॥

ನುಡಿಯುಂ ಛಂದದೊಳೊಂದಿರೆ। ತೊಡರ್ಚಲಜವಾತನಾತನಿಂದಂ ಜಾಣಂ।
ತಡೆಯದೆ ಮಹಾಧ್ವಕೃತಿಗಳ। ನೊಡರಿಸಲಾಪಾರ್ತನೆಲ್ಲರಿಂದಂ ಬಲ್ಲಂ॥ 9॥

---

1. ಶಬ್ದಮಣಿದರ್ಪಣ, ಪುಟ 71.
2. ಇವುಗಳಲ್ಲಿ ತಪ್ಪು ಬಿದ್ದಿರುವಹಾಗೆ ತೋರುತ್ತದೆ; ಚೆನ್ನಾಗಿ ಅರ್ಥವಾಗುವುದಿಲ್ಲ.

## ಗುಣನಂದಿ. ಸು. 900.

**ಮಲ್ಲಿಕಾರ್ಜುನನು** (ಸು. 1245) ತನ್ನ ಸೂಕ್ತಿಸುಧಾರ್ಣವವೆಂಬ ಕರ್ಣಾಟಕಪದ್ಯಸಂಗ್ರಹದಲ್ಲಿ ಗುಣನಂದಿಯ ಗ್ರಂಥದಿಂದ ಪದ್ಯಗಳನ್ನು ಉದ್ಧರಿಸಿ ಬರೆದಿರುವಂತೆ ಹೇಳುತ್ತಾನೆ. **ಕೇಶಿರಾಜನು** (ಸು. 1260) ಪೂರ್ವದ ಕನ್ನಡ ಕವಿಗಳ ಗೋಷ್ಠಿಯಲ್ಲಿ ಇವನ ಹೆಸರನ್ನೂ ಸೇರಿಸಿ ಹೇಳಿದ್ದಾನೆ. **ನಂಜುಂಡನು** (ಸು. 1525) ತನ್ನ ಕುಮಾರರಾಮಕಥೆಯಲ್ಲಿ—

ಇಂಪುವಡೆದ ಕವಿತಾರಸಲಹರಿಯ । ಸೊಂಪಿನಿಂ ವಾದಿಗಳೆರ್ದೆಗೆ ।
ಕಂಪನವನು ಪುಟ್ಟಿಸುವ ಗುಣನಂದಿಯ । ನಾಂ ಪೊಗಟ್ಟುವೆ ಬಲಗೊಂಬೆ ॥

ಎಂದು ಈತನನ್ನು ಹೊಗಳಿದ್ದಾನೆ. ಆದುದರಿಂದ ಈತನು ಕನ್ನಡದಲ್ಲಿ ಗ್ರಂಥಗಳನ್ನು ಬರೆದಿರುವುದರಲ್ಲಿ ಸಂಶಯವಿಲ್ಲ. ಶಬ್ದಮಣಿದರ್ಪಣದಲ್ಲಿ[1]—

ಚುರ್ಚಿದಪೊಲ್ ಬಿಸಿಲಳುರೆ ಕಿ । ಮುಱ್ಱ್ದ ತಳಿರಂತೆ ನೊಂದು ಗುಣನಂದಿ ***

ಎಂಬ ಕಂದಭಾಗವು ಉದಾಹರಿಸಿದೆ. ಇದು ಗುಣನಂದಿಕೃತವಾದ ಗ್ರಂಥದಿಂದ ತೆಗೆದುದೋ ಇಲ್ಲವೇ ಅವನ ವಿಷಯವಾಗಿ ಹುಟ್ಟಿರುವ ಬೇರೆ ಗ್ರಂಥದಿಂದ ತೆಗೆದುದೋ ತಿಳಿಯದು.

ಈತನು ಪೂಜ್ಯಪಾದನ ಜೈನೇಂದ್ರವ್ಯಾಕರಣಕ್ಕೆ ವ್ಯಾಖ್ಯಾನರೂಪವಾಗಿ ಪ್ರಕ್ರಿಯಾವತಾರ ಎಂಬ ಸಂಸ್ಕೃತ ಗ್ರಂಥವನ್ನು ಬರೆದಿದ್ದಾನೆ. **ಭಟ್ಟಾಕಳಂಕನು** (1604) ಈತನ ಹೆಸರನ್ನು ಹೇಳುವಾಗಲೆಲ್ಲಾ "ಭಗವಾನ್ ಗುಣನಂದಿಃ" ಎಂದು ಗೌರವಿಸುತ್ತಾನೆ. ಈತನನ್ನು ಭಾಮನು ವಾಲ್ಮೀಕಿಸೂತ್ರವ್ಯಾಖ್ಯಾನದಲ್ಲಿ ಸ್ತುತಿಸಿದ್ದಾನೆ.

ಇವನು ತರ್ಕವ್ಯಾಕರಣಶಾಸ್ತ್ರಗಳಲ್ಲಿ ಪಂಡಿತನೆಂದೂ, ಸಾಹಿತ್ಯವಿದ್ಯಾಪತಿಯೆಂದೂ, ಈತನಿಗೆ ಮುನ್ನೂರುಜನ ಶಿಷ್ಯರಿದ್ದರೆಂದೂ, ಅವರಲ್ಲಿ ದೇವೇಂದ್ರಮುನಿ ಪ್ರಖ್ಯಾತನಾದವನೆಂದೂ ಶ್ರವಣಬೆಳ್ಗೊಳದ 66, 117, 127 ನೆಯ ಶಾಸನಗಳಿಂದ ತಿಳಿಯಬರುತ್ತದೆ.[2] ಈ ಶಾಸನಗಳಲ್ಲಿ 127 ನೆಯದು 1115 ರಲ್ಲಿ

---

1. ಪುಟ 39.
2. ತಚ್ಛಿಷ್ಯೋ ಗುಣನಂದಿಪಂಡಿತಯತಿಶ್ಚಾರಿತ್ರಚಕ್ರೇಶ್ವರಃ ।
ತರ್ಕವ್ಯಾಕರಣಾದಿಶಾಸ್ತ್ರನಿಪುಣಸ್ಸಾಹಿತ್ಯವಿದ್ಯಾಪತಿಃ ॥
ಮಿಥ್ಯಾವಾದಿಮದಾಂಧಸಿಂಧುರಘಟಾಸಂಘಟ್ಟಕಂಠೀರವೋ ।
ಭವ್ಯಾಂಭೋಜದಿವಾಕರೋ ವಿಜಯತಾಂ ಕಂದರ್ಪದರ್ಪಾಪಹಃ ॥
ತಚ್ಛಿಷ್ಯಾಸ್ತ್ರಿಶತಾ ವಿವೇಕನಿಧಯಶ್ಶಾಸ್ತ್ರಾಬ್ಧಿಪಾರಂಗತಾಃ ।
ತೇಷೂತ್ಕೃಷ್ಟತಮಾ ದ್ವಿಸಪ್ತತಿಮಿತಾಃ ಸಿದ್ಧಾಂತಶಾಸ್ತ್ರಾರ್ಥಕ ॥
ವ್ಯಾಖ್ಯಾನೇ ಪಟವೋ ವಿಚಿತ್ರಚರಿತಾಸ್ತೇಷು ಪ್ರಸಿದ್ಧೋ ಮುನಿಃ ।
ನಾನಾನೂನನಯಪ್ರಮಾಣನಿಪುಣೋ ದೇವೇಂದ್ರಸೈದ್ಧಾಂತಿಕಃ ॥

**ಹುಟ್ಟಿರುವುದರಿಂದಲೂ ದೇವೇಂದ್ರಮುನಿಯಿಂದೀಚೆಗೆ ಈ ಶಾಸನದ ಕಾಲದವರೆಗೆ ಗುರುಪರಂಪರೆಯಲ್ಲಿ ಏಳುಜನವಿದ್ದಂತೆ ತಿಳಿಯಬರುವುದರಿಂದಲೂ ಈ ದೇವೇಂದ್ರಮುನಿ ಆದಿಪಂಪನ (941) ಗುರುವಾದ ದೇವೇಂದ್ರಮುನಿಯೇ ಆಗಿರಬೇಕು. ಈತನ ಗುರುವಾದ ಗುಣನಂದಿ ಬಹುಶಃ 900 ರಲ್ಲಿ ಇದ್ದಿರಬಹುದು.**

---

## ಗುಣವರ್ಮ.

ವಿಚಾರಂ.

ಈ ಹೆಸರಿನವರು ಇಬ್ಬರು ಜೈನಕವಿಗಳಿದ್ದಂತೆ ತಿಳಿಯಬರುತ್ತದೆ. ಹರಿವಂಶವನ್ನು ಬರೆದವನು ಒಬ್ಬ ಗುಣವರ್ಮನು; ಪುಷ್ಪದಂತಪುರಾಣವನ್ನು ಬರೆದವನು ಮತ್ತೊಬ್ಬನು. ಪುಷ್ಪದಂತಪುರಾಣವನ್ನು ಬರೆದ ಗುಣವರ್ಮನು ಪೂರ್ವಕವಿಗಳನ್ನು ಸ್ತುತಿಸುವ

ಅನುಗುಣವಾಗಿ ಕೂಡೆ ಗುಣವರ್ಮನ ಪೆಯ್ಪುರಿ ಪಂಪನೋಜೆ ಪೊ |
ನ್ನನ ಪೊಸಪೇಸೆ ರನ್ನನ ಗುಣೋನ್ನತಿಯುಗ್ಗಳನೊಳ್ಪು ನಾಗವ ||
ರ್ಮನ ಬಹುರೀತಿ ಸೇವಿಯ ಚಮತ್ಕೃತಿ ಜನ್ನಿಗನಿಂಪು ನಾಗಚಂ |
ದ್ರನ ರಸವೃತ್ತಿ ರಂಜಿಸುಗೆ ನಿರ್ಣಯಮೆನ್ನಯ ನವ್ಯಕಾವ್ಯದೊಳ್ ||

ಎಂಬ ಪದ್ಯದಲ್ಲಿ ಒಬ್ಬ ಗುಣವರ್ಮನನ್ನು ಸ್ತುತಿಸುವುದರಿಂದ ಇವನಿಗೆ ಹಿಂದೆ ಒಬ್ಬ ಗುಣವರ್ಮನೆಂಬ ಕವಿ ಇದ್ದನೆಂಬುದು ಸ್ಪಷ್ಟವಾಗುತ್ತದೆ. ಈತನು ಅಗ್ಗಳನನ್ನೂ (1189) ಜನ್ನನನ್ನೂ (1209) ಸ್ತುತಿಸುವುದರಿಂದ ಆ ಕವಿಗಳಿಗಿಂತ ಈಚೆಯವನಾಗಿರಬೇಕು. ಅಲ್ಲದೆ ಮಲ್ಲಿಕಾರ್ಜುನನು (ಸು. 1245) ಇವನ ಪುಷ್ಪದಂತಪುರಾಣದಿಂದ ಪದ್ಯಗಳನ್ನು ಉದ್ಧರಿಸಿರುವುದರಿಂದ ಅವನಿಗೆ ಹಿಂದೆ ಇದ್ದಿರಬೇಕು. ಈ ಕಾರಣಗಳಿಂದ ಈತನು ಸುಮಾರು 1235 ರಲ್ಲಿ ಇದ್ದಿರಬಹುದು. ಹಿಂದಣ ಗುಣವರ್ಮನನ್ನು ನಯಸೇನನು (1112) ಸ್ತುತಿಸುವುದರಿಂದ ನಯಸೇನನಿಗಿಂತ ಆತನು ಹಿಂದಣವನೆಂಬುದು ವ್ಯಕ್ತವಾಗುತ್ತದೆ. **ಅಂತು ನಯಸೇನನಿಂದ ಸ್ತುತನಾದ ಗುಣವರ್ಮನಿಗೂ ಜನ್ನನನ್ನು ಸ್ತುತಿಸುವ ಗುಣವರ್ಮನಿಗೂ ಆವ ಸಂಬಂಧವೂ ಇಲ್ಲವೆಂಬುದು ಸ್ಪಷ್ಟವಾಗದೆ ಇರಲಾರದು.**

### ಗುಣವರ್ಮ I. ಸು. 900.

**ಕೇಶಿರಾಜನು (ಸು. 1260) 118 ನೆಯ ಸೂತ್ರದ ಕೆಳಗೆ—“ಓಲ್ ಪರಮಾದಲ್ಲಿಯುಂ ದೀರ್ಘಮುಂಟು” ಎಂದು ಹೇಳಿ, “ಈಂದ ಪುಲಿಯಾವೊಲಿ ದರ್ಳ್—ಎಂದು ಗುಣವರ್ಮನ ಹರಿವಂಶಪ್ರಯೋಗಂ” ಎಂಬುದರಿಂದ ಈತನು ಹರಿವಂಶವೆಂಬ ಗ್ರಂಥವನ್ನು ಬರೆದಿರುವಂತೆ ತಿಳಿಯುತ್ತದೆ. ಅಲ್ಲದೆ—**

ಗುಣವರ್ಮಂ ಸತ್ಕವಿತಾ | ಗುಣಮುಂ ಭವ್ಯತ್ವಗುಣಮುಮಾತ್ಮಯಶೋರ |
ಕ್ಷಣಮೆನೆ ಮೆಱೆದಂ ಪೆಸರಿಂ | ಪ್ರಣೂತಮೆನೆ ಪೇೞ್ದು ನೇಮಿನಾಥಾನ್ವಯಮಂ ||

ಎಂಬ **ಪಾರ್ಶ್ವಪಂಡಿತನ** (1205) ಪದ್ಯದಿಂದಲೂ ಈತನು ನೇಮಿನಾಥ ಪುರಾಣವನ್ನು—ಎಂದರೆ ಹರಿವಂಶವನ್ನು—ಬರೆದನೆಂಬುದು ವ್ಯಕ್ತವಾಗುತ್ತದೆ. ಮತ್ತು **ಅಭಿನವವಾದಿವಿದ್ಯಾನಂದನ** (1533) ಕಾವ್ಯಸಾರದಲ್ಲಿ ಶೂದ್ರಕ ವೆಂಬ ಗ್ರಂಥವು ಗುಣವರ್ಮನಿಂದ ರಚಿತವಾದುದೆಂದು ಕೆಲವು ಕಡೆ ಹೇಳಿ ಆ ಗ್ರಂಥದಿಂದ ಪದ್ಯಗಳು ಉದಾಹೃತವಾಗಿರುವುದರಿಂದ ಈತನು ಶೂದ್ರಕವೆಂಬ ಗ್ರಂಥವನ್ನೂ ಬರೆದಿರಬೇಕು. **ನಾಗವರ್ಮನು** II (ಸು. 1145) ಭಾಷಾ ಭೂಷಣದಲ್ಲಿ—

ಎನಿತ್ತೆನಿತ್ತಂಬುಜಪತ್ರನೇತ್ರೆಯಾ | ಘನಸ್ತನಂಗಳ್ ಬಳೆಗುಂ ಕಿರಾತೆಯಾ |
ಅನಿತ್ತನಿತ್ತಂ ವನದೊಳ್ ವನೇಚರಂ | ತನತ್ತು ಬಿಲ್ಲಾನದನೆತ್ತೆ ಕೇಸುಗುಂ ||

ಎಂಬ ಪದ್ಯವನ್ನು ಉದಾಹರಿಸಿ "ಗುಣವರ್ಮಕವೇರ್ಭುವನೈಕವೀರಸ್ಯ ಪ್ರಯೋಗಃ" ಎಂದು ಹೇಳುತ್ತಾನೆ. ಈ ಪದ್ಯವು ಈತನ ಆವ ಗ್ರಂಥದಿಂದ ಉದ್ಧೃತವಾಗಿದೆಯೋ ತಿಳಿಯದು. ನಾಗವರ್ಮನು ಹೇಳುವುದನ್ನು ನೋಡಿದರೆ ಇವನಿಗೆ ಭುವನೈಕವೀರ ಎಂಬ ಬಿರುದೂ ಇದ್ದಂತೆ ತಿಳಿಯುತ್ತದೆ. ಇದಲ್ಲದೆ ನಾಗವರ್ಮನು II ಕಾವ್ಯಾವಲೋಕನದಲ್ಲಿ ಅಧ್ವನ್ ಶಬ್ದಕ್ಕೆ ಪ್ರಯೋಗವನ್ನು ಹೇಳುವಾಗ—

ಪ್ರಣುತಗುಣರೆನಿಪ ವಿಬುಧಾ | ಗ್ರಣಿಗಳ್ ಕೆಯ್ಕೊಂಡು ಪೊಗೞೆ ಸಲೆನೆಗೞ್ದುವು ಧಾ |
ರಿಣಿಯೊಳಗೆ ನಾಗವರ್ಮನ | ಗುಣವರ್ಮನ ಶಂಖವರ್ಮನಧ್ವಾನಂಗಳ್ ||

ಎಂದು ಬರೆದಿದ್ದಾನೆ. ಇದರಿಂದ ಈ ಗುಣವರ್ಮನು ಲಕ್ಷಣಗ್ರಂಥಕಾರನಾಗಿಯೂ ಇದ್ದಂತೆ ತೋರುತ್ತದೆ. **ನಯಸೇನನು** (1112)—'ಗುಣವರ್ಮನ ಜಾಣ್ ನೆಲಸಿರ್ಕೆ ಮತ್ಕೃತಿಯೊಳ್' ಎಂದೂ **ರುದ್ರಭಟ್ಟನು** (ಸು. 1180)—'ಗುಣ ವರ್ಮನ ಬಂಧಗೌರವಂ ಇರ್ಕೆ ಮತ್ಕೃತಿಯೊಳ್' ಎಂದೂ ಇತರಕವಿಗಳು ಬೇರೆಬೇರೆ ವಿಧವಾಗಿಯೂ ಈತನ ಕವಿತಾಚಾತುರಿಯನ್ನು ಹೊಗಳಿರುವುದರಿಂದ ಈತನು ಬಹಳ ಪ್ರಸಿದ್ಧಕವಿಯಾಗಿದ್ದಿರಬೇಕು. ಶೂದ್ರಕಗ್ರಂಥದಿಂದ ಕಾವ್ಯ ಸಾರದಲ್ಲಿ ಉದಾಹೃತವಾಗಿರುವ ಪದ್ಯಗಳಲ್ಲಿ ಕೆಲವು **ಮಲ್ಲಿಕಾರ್ಜುನನ** (ಸು. 1245) ಸೂಕ್ತಿಸುಧಾರ್ಣವದಲ್ಲಿಯೂ ದೊರೆಯುತ್ತವೆ. ಈ ಪದ್ಯಗಳಲ್ಲಿ ಕವಿ ಮಹೇಂದ್ರಾಂತಕ, ಗಂಗಚಕ್ರಾಯುಧ, ಗಂಗರರ್ಜುನ, ಕಾಮದ ಎಂಬುವೇ ಮೊದಲಾದ ಬಿರುದುಗಳುಳ್ಳ ಒಬ್ಬ ಗಂಗರಾಜನನ್ನು ವಿಶೇಷವಾಗಿ ಸ್ತುತಿಸಿ

ಶೂದ್ರಕರಾಜನಿಗೆ ಹೋಲಿಸಿದ್ದಾನೆ. ಗಂಗರಾಜರಲ್ಲಿ ಮಹೇಂದ್ರಾಂತಕ, ಕಾಮದ ಎಂಬ ಬಿರುದುಗಳುಳ್ಳವನು 886 ರಿಂದ 913 ರ ವರೆಗೆ ಆಳಿದ ಎರೆಯಪ್ಪನು ಒಬ್ಬನೇ ಆದುದರಿಂದ ಕವಿ ಈ ರಾಜನ ಆಶ್ರಿತನಾಗಿದ್ದಿರಬೇಕು. ಆದುದರಿಂದ ಇವನ ಕಾಲವು ಸುಮಾರು 900 ಆಗಿರಬಹುದು.

ಶೂದ್ರಕದಿಂದ ಕಾವ್ಯಸಾರದಲ್ಲಿ ಅನುವಾದಿಸಿರುವ ಪದ್ಯಗಳಲ್ಲಿ ಕೆಲವನ್ನು ಉದ್ಧರಿಸಿ ಬರೆಯುತ್ತೇವೆ:—

### ಸಮುದ್ರ.

ಗಂಭೀರಸ್ಫಾರವೇಲಾಬಹಲಪರಿವರ್ತೋಲ್ಲೋಲಕಲ್ಲೋಲಮಾಲಾ ।
ರಂಭಪ್ರೋಡ್ಡೀನಫೇನಪ್ರಬಲಜಲಚರೋಲ್ಲೂಠಪಾಠೀನಶುಂಭ ॥
ಜ್ಜೃಂಭೀರಾಭೀಳನಕ್ರಪ್ರಕರಮಕರನೀರೇಭರತ್ನಪ್ರವಾಳೋ ।
ಜ್ಜೃಂಭತ್ಪ್ರೋದ್ಭಾಸಿವೀಚೀನಿಚಯಘನಘನಾರಾವರೌದ್ರಂ ಸಮುದ್ರಂ ॥ 10 ॥

ಮಿಳಿರ್ವರುಣಧ್ವಜಂಗಳ ನೆಟ್ಟಿಲ್ಗಳನೊಂದೆರೆಗೆತ್ತು ವಾರ್ಧಿಯೊಳ್ ।
ಪೊಳೆವೆಳವಾಳೆಗಳ್ ಕರ್ದುಕೆ ಬಾಳೆಗಳಂ ತಿಮಿ ನುಂಗೆ ನುಂಗಿದಾ ॥
ಗಳೆ ತಿಮಿಯುಂ ತಿಮಿಂಗಿಳನಡಂಗುವಿನಂ ತವೆ ನುಂಗೆ ತತ್ತಿಮಿಂ ।
ಗಿಳನುಮನಾತಿಮಿಂಗಿಳಗಿಳಂ ನೆಱ ನುಂಗುವುದೊಂದು ತಾಣದೊಳ್ ॥ 11 ॥

### ನದಿ.

ಪೆಱಗಿಸಿತಾಗಿ ಮುಂತಗಲಿತಪ್ಪುದಱಂದೆ ಧರಾತಳಂದಗು ।
ಳ್ದಿಱಪುದಱಂದೆ ಕೊಂಕಿ ಪರಿಯುತ್ತಿರವಿಂದೆ ಕೊಲಲ್ಕೆ ಮೊಕ್ಕಳಂ ॥
ನೆಱೆವುದಱಂದೆ ಸಪ್ತಮುಖದಿಂದೆ ವಿಷೋನ್ನತಿಯಿಂದೆ ಭೋಗದೊಳ್ ।
ತುಱುಗಿರವಿಂದೆ ಪೋಲ್ತುದು ಮಹಾನದಿ ರುಂದ್ರಫಣೀಂದ್ರರಾಜನಂ ॥ 12 ॥

### ಸೂರ್ಯೋದಯ.

ಪುದಿದು ಕವಿದಿಡಿದ ತಮಮಂ । ಧ್ವದಿರ್ವನಮೊವರ್ಪಲೊಳ್ದ ಕೞವೆಯಸಿಪೋಲ್ ।
ಕದಿರ್ಗಳೊಳೆ ತುಱುಗಿ ನುಡಿದ । ನುದಯಾದ್ರಿಯೊಳರುಣತರುಣಕಿರಣಪ್ರಸರಂ ॥ 13 ॥

### ಸೂರ್ಯಾಸ್ತ.

ಕಿರಣಂಗಳೆ ಕಾವುಗಳೆನೆ । ಹರಿದಶ್ವಂಗಳೆ ಪಸುರ್ತ ಪಸುರೆಲೆಯೆನೆ ತೋ ।
ರ್ಪರುಣದಿನಮಣಿ ಬಯಲ್ತಾ । ವರೆಯುನೆ ಪೋಲ್ತಿರ್ದನಪರಗಿರಿವರಶಿರದೊಳ್ ॥ 14 ॥

ಮುಂದಾಗಿ ದಿನಪನುದಯಾ । ನಂದದೊಳಸ್ತಮಯಸಮಯದೊಳ್ ಸಂಜೆ ಕರಂ ।
ಪಿಂದುೞದುದಂತೆ ಕೆಲರೊಡ । ವಂದಾದುದಯದೊಳೆ ಸಾರ್ವರೆಡರೊಳಗಲ್ವರ್ ॥ 15 ॥

### ಚಂದ್ರ.

ಒಡನೆ ಸುರಾಸುರರ್ ಕನಕಪರ್ವತಮಂ ಕಡೆಗೋಲ ಮಾಡಿ ಮೇಱ್ ।
ಪೆಡೆ ಪಲವಪ್ಪ ವಾಸುಕಿಮಹೋರಗನಂ ಕಡೆಗಣ್ಣೆಮಾಡಿ ಪಾ ॥

ಲ್ಗಡಲನುಪಾಯದಿಂ ಕಡೆಯೆ ರಾಹುಗೆ ವಾಯುಪಥಾಗ್ರಮೆಂಬ ಪೆ।
ರ್ಮಡಕೆಯೊಳಿಕ್ಕಿ ಕೊಟ್ಟ ಪೊಸಬೆಣ್ಣೆವೊಲಿರ್ದುದು ಚಂದ್ರಮಂಡಲಂ ॥ ॥ 16 ॥

## ಅಮಾತ್ಯಲಕ್ಷಣ.

ಕರಿಯವೊಲಪ್ಪುದಾಳ್ದನರಸರ್ಕ ? ಗಿವಲ್ಲಿ ನರೇಂದ್ರನರ್ಥಮಂ।
ಪೊರೆದಿರವಲ್ಲಿ ಪಂಕರುಹಪತ್ರದ ನೀರವೊಲಪ್ಪುದೆಟ್ಟಿ ಸು ॥
ಟ್ಟುರಿಯವೊಲಪ್ಪುದರ್ಥಮನುಪಾರ್ಜಿಸುವಲ್ಲಿ ನಿಜಾಭಿಮಾನಮಂ।
ಧರಿಯಿಸುವಲ್ಲಿ ಚಾದಗೆವೊಲಪ್ಪುದು ತಪ್ಪದಮಾತ್ಯಲಕ್ಷಣಂ ॥ ॥ 17 ॥

## ನೀತಿ.

ಒಡನೆ ದರಿದ್ರರೆಲ್ಲಮಭಿಮಾನಿಗಳಪ್ಪೊಡಮಾಳ್ವನಿಚ್ಚೆಯಂ।
ನುಡಿವವರೆಲ್ಲಮಾತನೆಡರೊಳ್ ನಿಲಲಾರ್ಪೊಡಮರ್ಥರಾಶಿಯಂ ॥
ಪಡೆವವರೆಲ್ಲಮೋಗಡಿಸದೀವೊಡಮಾಜಿಯೊಳುರ್ಚಿ ಕೆಯ್ದುವಂ।
ಪಿಡಿವವರೆಲ್ಲಮಣ್ಮು ಪೊಡಮಿಾಯುಗಮೇಕೆ ಕನಿಷ್ಠಮಪ್ಪುದೋ ॥ ॥ 18 ॥

## ಕಾಡು.

ಗಿರಿಯಿದು ಕರಿಯಿದು ಕರಿಯಿದು। ಗಿರಿಯಿದು ಗಿರಿಯಲ್ತು ಕರಿಯಿದಲ್ತು ಕರೀಂದ್ರಂ।
ಗಿರಿವರಮಿದು ಕರಿವರಮಂ। ದರಿದಱಯಲ್ ಗಹನದೊಳಗೆ ಗಿರಿಯಂ ಕರಿಯಂ ॥ 19 ॥

## ಸೂಕರ

ಮಿಱುಗುವ ದಾಡೆಯಿಂದಣೆದು ಪೆರ್ದರಿಯಂ ತರದಿಂದಮೆತ್ತುತುಂ।
ತುಱುತುಱುತೀಂಬ ಕಂಧರಮನೊತ್ತರಗೊಂಡು ಮಹಾಮಹೀಜದೊಳ್ ॥
ತಱತಱನಾಗೆ ಮಾಱೊಱಸುತುಂ ಮಲೆಯುತ್ತೊಲೆಯುತ್ತುಮಲ್ಲಿ ಕೆಯ್ ।
ಪಱದ ಗಜೇಂದ್ರನಂತೆ ಬರುತಿರ್ದುದು ಭೀಕರನೊಂದು ಸೂಕರಂ ॥ ॥ 20 ॥

## ಸೌಂದರ್ಯ.

ಸಣ್ಣಂನಡು ತಿಣ್ಣಂ ಮೊಲೆ। ಬಣ್ಣಂ ಪಸುರ್ವೆಸಱ ಬಣ್ಣಮಧರಂ ಮಧುರಂ।
ಕಣ್ಣಲರ್ಗಣ್ಣೆಮೆ ಮಂದಂ। ಬಣ್ಣಿಸಲರಿದಬ್ಜಜಂಗಮಾಕೆಯ ರೂಪಂ ॥ 21 ॥

## ಶೂದ್ರಕನ ಬೇಟೆ.

ತುಂಗಗಿರಿಶಿಖರದಿಂದಂ। ಲಂಘಿಸಿ ಶೂದ್ರಕನ ಪೊಳೆವ ಸುರಗಿಯ ಮೊನೆಯೊಳ್।
ಪೊಂಗಿ ಸೊಡರ್ಗುಡಿಯ ಮೇಲೆ ಪ। ತಂಗಂ ಪಾಯ್ವಂತೆ ಪಾಯ್ದು ಬಿಟ್ಟುದು ಸಿಂಗಂ
॥ 22 ॥

---

## ಕವಿವ್ಯಾಸ. ಸು. 900.

**ಆದಿಪಂಪನು** (941) ತನ್ನ **ಭಾರತದಲ್ಲಿ—ವ್ಯಾಸಮುನೀಂದ್ರರುಂದ್ರ ವಚನಾಮೃತವಾರ್ಧಿಯನೀಸುವೆಂ ಕವಿವ್ಯಾಸನೆನೆಂಬ ಗರ್ವಮೆನಗಿಲ್ಲ—ಎಂದು**

ಹೇಳುತ್ತಾನೆ. ಕವಿವ್ಯಾಸನೆನೆಂಬ ಗರ್ವಮೆನಗಿಲ್ಲ ಎಂಬುದರಿಂದ ಇವನಿಗೆ ಹಿಂದೆ ಆವನೋ ಒಬ್ಬ ಕವಿ ಕನ್ನಡದಲ್ಲಿ ಒಂದು ಭಾರತವನ್ನು ಬರೆದು ಕವಿವ್ಯಾಸನೆಂಬ ಹೆಸರಿಟ್ಟುಕೊಂಡಿದ್ದಂತೆ ಊಹಿಸಬಹುದಾಗಿದೆ. ತನಗೆ ಹಿಂದೆ ಅನೇಕರು ಭಾರತವನ್ನು ಬರೆದಿರುವಂತೆ ಪಂಪನೇ ಹೇಳಿದ್ದಾನೆ. ಅವರಲ್ಲಿ ಈ ಕವಿವ್ಯಾಸನೂ ಒಬ್ಬನಾಗಿರಬಹುದು. ಇವನೇ ಕುಮಾರವ್ಯಾಸನೆಂದು ಕೆಲವರು ಭ್ರಮಿಸುತ್ತಾರೆ. ಆದರೆ ಕುಮಾರವ್ಯಾಸನು ಆಧುನಿಕನು; ಸುಮಾರು 1430 ರಲ್ಲಿ ಇದ್ದನು. ಕವಿವ್ಯಾಸನ ಕಾಲವು ಸುಮಾರು 900 ಆಗಿರಬಹುದು.

---

## ಶ್ರೀವಿಜಯದಂಡನಾಥ. ಸು. 915.

ಕಡಪಾ ಡಿಸ್ಟ್ರಿಕ್ಟ್ ದಾನವುಲಪಾಡು ಎಂಬ ಗ್ರಾಮದಲ್ಲಿರುವ ಒಂದು ಶಾಸನದಲ್ಲಿ[1] ಈತನನ್ನು 'ಅನುಪಮಕವಿ' 'ಅಱಿವಿಂಗೋಜ' ಎಂದು ಹೊಗಳಿದೆ. ಈತನು ಕವಿಯಾಗಿದ್ದಿರಬಹುದು; ಆವ ಗ್ರಂಥವನ್ನು ಬರೆದಿದ್ದಾನೆಯೋ ತಿಳಿಯದು. ಈತನು ಜೈನನು, ಬಳಿಕುಲದವನು. ಇವನು ರಾಷ್ಟ್ರಕೂಟರಾಜನಾದ ಇಂದ್ರ III (915-917) ಎಂಬವನಲ್ಲಿ ದಂಡನಾಯಕನಾಗಿದ್ದಂತೆಯೂ ಬಹಳ ಪರಾಕ್ರಮಶಾಲಿಯಾಗಿದ್ದಂತೆಯೂ ಕೊನೆಗೆ ಸನ್ಯಾಸನವಿಧಿಯಿಂದ ನಿರ್ವಾಣವನ್ನು ಪಡೆದಂತೆಯೂ ಮೇಲಣ ಶಾಸನದಿಂದ ತಿಳಿಯುತ್ತದೆ. ಈ ಶಾಸನದಿಂದ ಇವನ ಸ್ತುತಿರೂಪವಾದ ಕೆಲವು ಪದ್ಯಗಳನ್ನು ಕೆಳಗೆ ಬರೆಯುತ್ತೇವೆ:—

ಪತಿಯ ಬೆಸದಿಂದಮಹಿತರ | ನತಿಕೋಪದಿನಿಕ್ಕಿ ಗೆಲ್ದು ಪರಿಪಾಳಿಸಿದಂ |
ಚತುರುದಧಿವಲಯಮೆಲ್ಲಮ | ನತಿರಥನೀದಂಡನಾಯಕಂ ಶ್ರೀವಿಜಯಂ || 23 ||

ತುರಗದಬಿಂಗಳನೊಡ್ಡಿದ | ಕರಿಘಟೆಯುಂ ಪಿರಿಯ ನೆರವಿಯುಂ ಬಲ್ಲಣಿಯುಂ |
ಧುರದೆಡೆಯೊಳಿಱಿದು ಗೆಲ್ದಂ | ಕರದಸಿ ಕರಮರಿದು ರಣದೊಳನುಪಮಕವಿಯಾ || 24 ||

ಅಷ್ಟವಿಧಕರ್ಮಮೆಲ್ಲಮ | ನಟ್ಟುಂಬರಿಗೊಂಡು ಕಿಡಿಪೆನೆಂಬುದೆ ಬಗೆಯಿಂ |
ಪುಟ್ಟಿದನುದಾತ್ತಸತ್ವಂ | ನೆಟ್ಟನೆ ವಿಬುಧೇಂದ್ರವಂದ್ಯನಱಿವಿಂಗೋಜಂ || 25 ||

ತಾನಱಿದು ತೊಱೆದು ನೆಟ್ಟನೆ | ಮಾನಿಸವಾಬೞೀವುದೆಂದು ಸನ್ಯಾಸನದೊಳ್ |
ಮಾನಿಕೆಗಿಡದೆ ಕೊಂಡೊನ | ನೂನಸುಖಾಸ್ಪದಮನಬ್ಬೆಯೊಳ್ ಶ್ರೀವಿಜಯಂ || 26 ||

---

1. *Epigraphia Indica*, X, 150.

## ರವಿನಾಗಭಟ್ಟ. 929.

ಈ ಕವಿ ಧಾರ್ವಾಡಜಿಲ್ಲೆಯ ನರುಗುಂದದ ಸಮೀಪದಲ್ಲಿರುವ ಒಂದು ಶಾಸನವನ್ನು[1] ಬರೆದುದಾಗಿ ಆ ಶಾಸನದ ಕೊನೆಯಲ್ಲಿರುವ

ಬರೆದೊನಿದಂ ಶ್ರೀವಿಜಯಂ। ನೆರೆದಿನ್ನೂರಿರ್ಪದಿಂಬರುಂ ಪೇೞೆನೆ ತಾಂ।
ಪರಿಣತನೀಕಬ್ಬಂಗಳ। ನೊರೆದಂ ರವಿನಾಗಭಟ್ಟನತ್ಯಾದರದಿಂ ॥

ಎಂಬ ಪದ್ಯದಿಂದ ವ್ಯಕ್ತವಾಗುತ್ತದೆ. ಈ ಶಾಸನವು ರಾಷ್ಟ್ರಕೂಟರಾಜನಾದ 3 ನೆಯ ಪ್ರಭೂತವರ್ಷನ (4 ನೆಯ ಗೋವಿಂದನ) ಆಳಿಕೆಯಲ್ಲಿ ಶಕ 841 ರಲ್ಲಿ ಬರೆದುದು. ಇದರಲ್ಲಿ ಕಂಠಮುಗೆರೆಗೆ ಕೆಲವರು ಭೂಮಿಯನ್ನೂ ಆಯವನ್ನೂ ಬಿಟ್ಟಂತೆ ಹೇಳಿದೆ. ರವಿನಾಗಭಟ್ಟ ಎಂಬಹೆಸರನ್ನು ನೋಡಿದರೆ ಈತನು ಬ್ರಾಹ್ಮಣನಾಗಿರಬಹುದೆಂದು ತೋರುತ್ತದೆ. ಹಾಗಿದ್ದ ಪಕ್ಷದಲ್ಲಿ ಈತನೇ ನಮಗೆ ತಿಳಿದು ಬಂದಿರುವ ಬ್ರಾಹ್ಮಣಕವಿಗಳಲ್ಲಿ ಆದಿಕವಿ. ಇವನು ಆದಿಪಂಪನ (902–941) ಸಮಕಾಲದವನು. ಶಾಸನದ ಪದ್ಯಗಳನ್ನು ನೋಡಿದರೆ ಈತನು ಪ್ರೌಢಕವಿಯೆಂಬುದು ಸ್ಪಷ್ಟವಾಗುತ್ತದೆ. ಈ ಕವಿಯ ಬಂಧವನ್ನು ತೋರಿಸುವುದಕ್ಕಾಗಿ ಈ ಶಾಸನದ ಬಹಳ ಭಾಗವನ್ನು ಕೆಳಗೆ ಬರೆಯುತ್ತೇವೆ:—

ಸ್ವಸ್ತಿಪ್ರಭೂತವರ್ಷಂ। ವಿಸ್ತೃತಕುವಳಯಮನುತ್ತರೋತ್ತರವಿಭವ।
ಪ್ರಸ್ತುತ್ಯತೆಯಿಂ ರಕ್ಷಿಪ। ವಿಸ್ತರದಂದೆಂಟುನೂಱನಾಲ್ವತ್ತವು ತಾಂ ॥ 27 ॥
ಶಕಕಾಲಂಗಳ್ ವರ್ಷಂ। ಪ್ರಕಟಂ ಪೆಸರಿಂ ಪ್ರಮಾಥಿ ವರ್ತಿಸೆ ದಿನಪಂ।
ಮಕರಕ್ಕೆ ವರ್ಷ ಸಂಕ್ರಮ। ಣಕಾಲದೊಳ್ ಕೂಡೆ ಬಂದ ಪೌಷದ ತಿಥಿಯೊಳ್ ॥ 28 ॥
ಪನ್ನಿರ್ಮರ್ತ್ತರ್ ಕೆಯ್ಯಂ। ಮಾನ್ಯಂಗುಡುಗೆಂದು ಪೇೞೆವೋ (?) ರನ ಬೆಸದೊಳ್।
ನನ್ನಿವೆಡೆಂಗಂ ಲಿ(ಂಗಮ್ ?)। ತನ್ನಱ್ತಯೆ ಕೊಟ್ಟು ಕೆಱೆಗೆ ಯುಶಮಂ ಪಡೆದಂ ॥ 29 ॥
ವಿಪ್ರರ ವಿವಾಹಮೂರೊಳ। ಗಪ್ಪನಿತಱೊಳೆಲ್ಲಮೊಸಗೆದ್ರಮ್ಮಂ ಮೂಱಂ।
ತಪ್ಪದೆ ಮಾಣಿಯೊಳೆರಡಂ। ಕೆಪ್ಪಿದರೀಶೂದ್ರಗಣದ ಮದುವೆಯೊಳೊಂದಂ ॥ 30 ॥
ಪ್ರಾಯಶ್ಚಿತ್ತನಿಮಿತ್ತದೊ। ೞಾಯದ ಪಣಮೆನಿತನಿತ್ತುಮೂರೊಳ್ ಸಹಿರ।
ಣ್ಯಾಯದ ಪಣಮುಂ ಪೆರ್ಗೆಱೆ। ಗಾಯಮಿದೆಂದೊಸೆದು ಕೊಟ್ಟೊರೀದ್ವಿಜಮುಖ್ಯರ್ ॥ 31 ॥
ನೆಱೆಯೆ ಗುಣಾಢ್ಯರ್ ಕಂಠಮ। ಗೆಱೆಗಿನಿತುಂ ದ್ರವ್ಯದಾಯಮುಂ ಕೊಟ್ಟವರ್ಗಳ್।
ತಱಸಂದೀಶಾಸನಮುಂ। ನಿಱಸಿದರಾಚಂದ್ರತಾರಕಾಂತಂಬರೆಗಂ ॥ 32 ॥
ಮಾತಿನೊಳೀನೀಸ್ಥಿತಿಯುಂ। ಘಾತಿಸಿ ಕಿಡಿಸಿದ ನರಂ ಚಿರಂ ಪಂಚಮಹಾ।
ಪಾತಕನ ಪೋದ ಲೋಕ। ಕ್ಕಾತಂ ತಾಂ ಪೋಕುಮೆಂದೊಡದುವೇಂ ಪಿರಿದೇ ॥ 33 ॥

---

1. *Ind. Ant.*, XII, 223.

## ಕವಿರಾಜರಾಜ. 930.

ಈತನು ಧಾರ್ವಾಡಜಿಲ್ಲೆಯ ಕಳಸದಲ್ಲಿರುವ ಒಂದು ಶಾಸನವನ್ನು[1] ಬರೆದುದಾಗಿ ಆ ಶಾಸನದ ಕೊನೆಯಲ್ಲಿರುವ

ಕವಿರಾಜರಾಜವಿಬುಧ। ಪ್ರವರಂ ಶ್ರೀಕಾಡಿಯೂರನಲ್ಲಿಯ ಕಮಲೋ।
ದ್ಭವವಂಶಪ್ರೋತ್ತಮರಂ । ನವೀನವರ್ಣನೆಯಿನೆಸೆಯಲಭಿವರ್ಣಿಸಿದಂ ॥

ಎಂಬ ಪದ್ಯದಿಂದ ತಿಳಿಯುತ್ತದೆ. ಈ ಶಾಸನವು ರಾಷ್ಟ್ರಕೂಟರಾಜನಾದ ಗೊಜ್ಜಿಗದೇವನ ಅಥವಾ 4 ನೆಯ ಗೋವಿಂದನ (918—933) ಆಳಿಕೆಯಲ್ಲಿ ಬರೆದುದು. ಇದರಲ್ಲಿ ರೇವದಾಸದೀಕ್ಷಿತ, ವೀಸೋತ್ತರದೀಕ್ಷಿತ ಎಂಬ ಇಬ್ಬರು ದಂಡನಾಯಕರಿಗೆ ದೊರೆ ಎರೆಯನಕಾಡಿಯೂರೆಂಬ ಗ್ರಾಮವನ್ನು ಸರ್ವನಮಸ್ಯವಾಗಿ ಶಕ 851 ರಲ್ಲಿ ಕೊಟ್ಟಂತೆ ಹೇಳಿದೆ. ಈ ಶಾಸನದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ :—

### ಗೊಜ್ಜಿಗದೇವ.

ನಗರಾಜಂ ಧೈರ್ಯದೊಂದೇೞ್ಗೆಯುನವನಿತಳಂ ಕ್ಷಾಂತಿಯೊಂದುರ್ವನಂಭೋ ।
ಧಿ ಗಭೀರೋಂದ್ವಾನಿಯೊಂದುನ್ನತಿಯುನೆಸೆವಿನಂ ತಾಳ್ದಿದತ್ತೊಳ್ದಿನಿಂ ಗೊ ॥
ಜ್ಜಗದೇವಂ ಕೊಟ್ಟೊಡೆಂದುತ್ತಮಬಿಬುಧಜನಂ ತಮ್ಮದೊಂದಟ್ಟಿಱಿಂದಂ ।
ಪೊಗೞಲ್ ಬಾಪ್ಪುಪ್ಪುಕೆಯ್ದಂ ನೃಪಗುಣಗಣಮಂ ರಟ್ಟಕಂದರ್ಪದೇವಂ ॥ 34 ॥

ಬೆಸೆದೊಡೊಸೆದೊಡೆ ಕೊಳಲ್ ರ। ಕ್ಷಿಸಲಂತಕರಾಜನಬ್ಜಸಂಭವನೆನಲೀ ।
ವಸುಧಾತಳದೊಳ್ ಕೋಪ। ಪ್ರಸಾದಮಂ ಪೊಗೞಲಾರ್ಪರಾರ್ ಗೊಜ್ಜಗನಾ॥ 35 ॥

### ಎರೆಯನಕಾಡಿಯೂರು.

ತುಱುಗಿ ಕವಲ್ತು ಕತ್ತಲಿಪ ಚೂತಕುಜಂಗಳೊಳೊಂದಿ ಕಂಪಿನೊಳ್ ।
ನೆಱೆದು ರಸಂಗಳಂ ತಳೆದ ಪಣ್ಗೊಲೆಯಂ ಗಿಳಿವಿಂಡು ಚಂಚುವಿಂ ॥
ದಿಱಿದೊಡೆ ಸೋರ್ವ ಸೋನೆಯೊಳೆ ದಾಂಗುಡಿಯಿಂದೆಸೆದಿರ್ಪುವೊಳ್ದಿನಿಂ ।
ದೆಱೆಯನಕಾಡಿಯೂರ ಲತೆವಳ್ಳಿಯುಮಲ್ಲಿಯ ನಾಗವಳ್ಳಿಯುಂ ॥ 36 ॥

ಪೊಱವೊೞಲೊಳ್ ಪೊದಳ್ದ ನವನಂದನಬೃಂದದಿನೊಳ್ಪನಾಳ್ವ ಪೆ ।
ರ್ಗಱೆಗಳಿನೊಲ್ದು ಗಾವರಿಸುತಿರ್ಪ ಮದಾಳಿಯಿನೆಯ್ದೆ ಪೂವ ಕಿ ॥
ಕ್ಕಿಱಿ ನಿಮಿರ್ದಿರ್ದ ಪಾದರಿಯಿನೂದುವ ತೆಂಬೆಲರಿಂ ಬೆಡಂಗುವೆ ।
ತ್ತೆಱೆಯನಕಾಡಿಯೂರ್ ಬಯಸಿ ನೋೞ್ಪರ ಕಣ್ಗೆಸೆದೊಪ್ಪಿ ತೋಱುಗುಂ ॥ 37 ॥

———

1. *Epigraphia Indica*, XIII, 327.

## ಆದಿಪಂಪ. 941.

ಈತನು ಕನ್ನಡದಲ್ಲಿ ಆದಿಪುರಾಣ, ಭಾರತ ಅಥವಾ ವಿಕ್ರಮಾರ್ಜುನ ವಿಜಯ, ಎಂಬ ಎರಡು ಗ್ರಂಥಗಳನ್ನು ಬರೆದಿದ್ದಾನೆ. ಇವನು ದುಂದುಭಿ ವರ್ಷದಲ್ಲಿ ಹುಟ್ಟಿದುದಾಗಿ ಆದಿಪುರಾಣದಲ್ಲಿರುವ

ದುಂದುಭಿಗಭೀರನಿನದಂ ದುಂದುಭಿಸಂವತ್ಸರೋದ್ಭವಂ

ಎಂಬ ಪದ್ಯಭಾಗದಿಂದ ತಿಳಿಯುತ್ತದೆ. ಮತ್ತು ಅದೇಗ್ರಂಥದ ಅಂತ್ಯದಲ್ಲಿರುವ

ಶಕವರ್ಷಮೆಂಟುನೂಱ। ರ್ಕೆ ಕಡೆಯೊಳಱುವತ್ತುಮೂಱು ಸಂದಂದು ಜಗ।
ತ್ಪ್ರಕಟಪ್ಲವಸಂವತ್ಸರ। ದ ಕಾರ್ತಿಕಂ ಮುದಮನೀಯೆ ನಂದೀಶ್ವರದೊಳ್॥
***ನೆಗಳ್ದುದಂದೀ। ಕೃತಿ ಜಗಪೊಳ್ ಪುದಿದು ಸಾಗರಾಂತಂಬರೆಗಂ॥

ಎಂಬ ಪದ್ಯಗಳಿಂದ ಆ ಗ್ರಂಥವನ್ನು, ಶಕ 863 ನೆಯ ಪ್ಲವಸಂವತ್ಸರದಲ್ಲಿ—ಎಂದರೆ ಕ್ರಿ. ಶ. 941 ರಲ್ಲಿ—ಬರೆದಂತೆ ವ್ಯಕ್ತವಾಗುತ್ತದೆ. ದುಂದುಭಿವರ್ಷದಲ್ಲಿ ಹುಟ್ಟಿದಂತೆ ಹೇಳುವುದರಿಂದ ಪ್ಲವವರ್ಷದಿಂದ ಹಿಂದಕ್ಕೆ ದುಂದುಭಿಯುವರೆಗೆ ಲೆಕ್ಕಮಾಡಿದರೆ ಇವನು ಕ್ರಿ. ಶ. 902 ನೆಯ ವರ್ಷದಲ್ಲಿ ಹುಟ್ಟಿದಂತೆ ತಿಳಿಯ ಬರುತ್ತದೆ. ಈ ಗ್ರಂಥವನ್ನು ಬರೆದಾಗ ಇವನಿಗೆ 39 ವರ್ಷವಾಗಿದ್ದಿತು.

ಭಾರತದ ಅಂತ್ಯಭಾಗದಲ್ಲಿ ಈತನು ತನ್ನ ವಂಶಾವಳಿಯನ್ನು ಹೀಗೆ ಹೇಳಿಕೊಂಡಿದ್ದಾನೆ:—ವೆಂಗಿಮಂಡಲದಲ್ಲಿ ವೆಂಗಿಪಳುವಿಗೆ ಸೇರಿದ ವಸಂತ, ಕೊಟ್ಟೂರು, ನಿಡುಗುಂದಿ, ವಿಕ್ರಮಪುರ ಎಂಬ ಅಗ್ರಹಾರಗಳಲ್ಲಿ ಅಗ್ರಗಣ್ಯನಾಗಿ ವತ್ಸಗೋತ್ರೋದ್ಭವನಾದ ಮಾಧವಸೋಮಯಾಜಿಯೆಂಬ ಬ್ರಾಹ್ಮಣನಿದ್ದನು. ಅವನ ಮಗ ಅಭಿಮಾನಚಂದ್ರ; ಆತನ ಮಗ ಕೊಮರಯ್ಯ; ಅವನ ಮಗ ಅಭಿರಾಮದೇವರಾಯ. ಈತನು ಮತಗಳೊಳಗೆಲ್ಲಾ ಜೈನಮತವೇ ಶ್ರೇಷ್ಠವೆಂದು ತಿಳಿದು ಜಿನಧರ್ಮವನ್ನು ಅವಲಂಬಿಸಿದನು. ಇವನ ಮಗನೇ ಆದಿಪಂಪನು.

ಈತನು ಜೈನಕವಿ; ಕೊಂಡಕುಂದಾನ್ವಯಕ್ಕೆ ಸೇರಿದವನೆಂದು ಹೇಳಿಕೊಂಡಿದ್ದಾನೆ. ಈತನಿಗೆ ಕವಿತಾಗುಣಾರ್ಣವ, ಪುರಾಣಕವಿ, ಸುಕವಿಜನ ಮನೋಮಾನಸೋತ್ತಂಸಹಂಸ, ಸರಸ್ವತೀಮಣಿಹಾರ, ಸಂಸಾರಸಾರೋದಯ—ಎಂಬ ಬಿರುದುಗಳಿದ್ದಂತೆ ತೋರುತ್ತದೆ. ಈತನ ಗುರು ದೇವೇಂದ್ರಮುನಿ. ಈ ಮುನಿ ರಾಜಪೂಜಿತನೆಂದೂ, ಭಾರತೀಭಾಳಪಟ್ಟನೆಂದೂ ಶ್ರ. ಬೆ. 66 ನೆಯ ಶಾಸನದಿಂದ ತಿಳಿಯುತ್ತದೆ.[1] ಈ ಕವಿ ಪುಲಿಗೆರೆಯ ರಾಜನಾದ ಚಳುಕ್ಯ

---

1. ಅಜನಿ ಮಹಿಪಚೂಡಾರತ್ನರಾರಾಜಿತಾಂಘ್ರಿಃ। ವಿಜಿತಮಕರಕೇತೂದ್ದಂಡದೋರ್ದಂಡಗರ್ವಃ।
ಕುನಯನಿಕರಭೂಧ್ರಾನೀಕದಂಭೋಳಿದಂಡಃ। ಸಜಯತುವಿಬುಧೇಂದ್ರೋ ಭಾರತೀಭಾಳಪಟ್ಟಃ॥

ವಂಶೋತ್ಪನ್ನನಾದ ಅರಿಕೇಸರಿಯ ಆಸ್ಥಾನಪಂಡಿತನಾಗಿದ್ದನು; "ಚತುರಂಗಬಳ ಭಯಂಕರಣಂ" ಎಂದೂ, "ಜೋಳದಪಾಟಿ[1] ನಿಜಾಧಿನಾಥನಾಹವದೊಳರಾತಿನಾಯ ಕರಪಟ್ಟವೆ ಸಾರಿಸೆ ಸಂದಪೆಂಪು......ಸಂದನೇಂ ಕಲಿಯೊ" ಎಂದೂ ಹೇಳಿಕೊಂಡಿರುವುದರಿಂದ ಅರಿಕೇಸರಿಯಲ್ಲಿ ದಂಡನಾಯಕನಾಗಿಯೂ ಇದ್ದಿರಬಹುದು. ತನ್ನ ಪೋಷಕನಾದ ಈ ಅರಿಕೇಸರಿಯ ವಂಶಾವಳಿಯನ್ನು ಭಾರತದ ಆದಿಭಾಗದಲ್ಲಿ ಹೀಗೆ ಹೇಳಿದ್ದಾನೆ :—

ಚಳುಕ್ಯವಂಶದಲ್ಲಿ ಪ್ರಸಿದ್ಧನಾದ ದೊರೆ ಯುದ್ಧಮಲ್ಲ. ಇವನು ಸಪಾದಲಕ್ಷ ಕ್ಷಿತೀಶ. ಇವನ ಮಗ ಅರಿಕೇಸರಿ. ಈತನ ಮಕ್ಕಳು ನರಸಿಂಹ, ಭದ್ರದೇವ. ನರಸಿಂಹನ ಮಗ ದುಗ್ಧಮಲ್ಲ. ಇವನ ಮಗ ಬದ್ದಗ. ಈತನ ಮಗ ದುಗ್ಧಮಲ್ಲ. ಇವನ ಮಗ ನರಸಿಂಹ. ಈತನು ಘೂರ್ಜರರಾಜನನ್ನು ಜಯಿಸಿ "ಗಂಗಾಪಾರ್ಥಿಯೊಳಾತ್ತ ತುರಂಗಮುಮಂ ಮಿಸಿಸಿದಂ." ಈತನ ಹೆಂಡತಿ ಜಾಕವ್ವೆ. ಇವರ ಮಗನೇ ಕವಿಯ ಪೋಷಕನಾದ ಅರಿಕೇಸರಿ. ಈ ರಾಜನು ಸಮಧಿಗತಪಂಚಮಹಾಶಬ್ದ ಎಂಬ ಪ್ರಶಸ್ತಿಯುಳ್ಳ ಸಾಮಂತ ಶ್ರೇಷ್ಠನು.

ಕವಿ, ಈ ದೊರೆಗೆ ಅರಿಗ, ಹರಿಗ, ಗುಣಾರ್ಣವ, ಇವೇ ಮೊದಲಾದ ಹಲವು ಹೆಸರುಗಳನ್ನು ಹೇಳಿದ್ದಾನೆ. ಭಾರತದಲ್ಲಿ ಅರಿಕೇಸರಿಯನ್ನು ಅರ್ಜುನನಿಗೆ ಹೋಲಿಸಿ ಅವನ ಪರಾಕ್ರಮಾದಿಗಳನ್ನು ಹೊಗಳಿದ್ದಾನೆ. ಈ ಕಾವ್ಯವನ್ನು ಕೇಳಿ ಸಂತೋಷಿಸಿ ಅರಿಕೇಸರಿ ಕವಿಗೆ ಬಚ್ಚೆಸಾಸಿರದಲ್ಲಿರುವ ಧರ್ಮಪುರವೆಂಬ ಶಾಸನದಗ್ರಹಾರವನ್ನು ಕೊಟ್ಟನು.

ಕವಿ ಭಾರತದಲ್ಲಿ ಲೌಕಿಕವನ್ನೂ ಆದಿಪುರಾಣದಲ್ಲಿ ಜಿನಾಗಮವನ್ನೂ "ಸಮಸ್ತಭೂತಳಕೆ ಬೆಳಗುವಂತೆ"ಯೂ ಒಂದನ್ನು ಆರುತಿಂಗಳಲ್ಲಿಯೂ ಮತ್ತೊಂದನ್ನು ಮೂರುತಿಂಗಳಲ್ಲಿಯೂ ತಾನು ಪ್ರತಿಜ್ಞೆಮಾಡಿದ ರೀತಿಯಲ್ಲಿಯೇ ಮುಗಿಸಿದಂತೆಯೂ ಹೇಳುತ್ತಾನೆ. ತನ್ನ ಗ್ರಂಥಗಳನ್ನು "ರಾಜಸುಧಾನಿಯ ಪುಟವಹ ಸಾಜದ ಪುಲಿಗೆಱೆಯ ತಿರುಳ ಕನ್ನಡದೊಳ್" ಬರೆದಿರುವಂತೆ ಹೇಳುತ್ತಾನೆ. ಇವನ ಗ್ರಂಥಗಳು "ಮುನ್ನಿನ ಕಬ್ಬಮನೆಲ್ಲಮಿಕ್ಕಿ ಮೆಟ್ಟಿದುವು." **ನಾಗವರ್ಮ, ಕೇಶಿರಾಜ** ಮೊದಲಾದ ಲಕ್ಷಣಗ್ರಂಥಕಾರರೆಲ್ಲಾ ಇವನ

---

1 ಈ ಪದವನ್ನು, ಮಿ. ರೈಸ್ ಜೋಳರಾಜ್ಯವೆಂದು ಭ್ರಮಿಸಿರುವಂತೆ ತೋರುತ್ತದೆ. ಈ ಶಬ್ದಕ್ಕೆ ಋಣ ಅಥವಾ ಹಂಗು ಎಂಬುದು ಅರ್ಥವೆಂದು ಈ ಪ್ರಯೋಗಗಳಿಂದ ಸ್ಪಷ್ಟವಾಗುತ್ತದೆ:—

ಜೋಳದಪಾಟಿಯುಂ ಬಗೆದುದಿಲ್ಲಾದ್ರೋಣನುಂ ದ್ರೌಣಿಯುಂ।— ರನ್ನ.

ಜೋಳದಪಾಟಿಗೆನ್ನ ಸುವನಿತ್ತಾಖ್ಯಾತಿಯುಂ ತಾಳ್ದುವೆಂ॥— ಕರ್ಣಪಾರ್ಯ.

ಸಲಹಿದೊಡೆಯನ ಜೋಳವಾಟಿಗೆ।

ತಲೆಯ ಮಾಱುವುದೊಂದು ಪುಣ್ಯ॥— ಕುಮಾರವ್ಯಾಸ.

ಗ್ರಂಥಗಳಿಂದ ಪದ್ಯಗಳನ್ನು ಉದಾಹರಿಸಿದ್ದಾರೆ. ಅಲ್ಲದೆ ಇವನಿಂದೀಚೆಗೆ ಕಾವ್ಯವನ್ನು ಬರೆದಿರುವ ಜೈನಕವಿಗಳೆಲ್ಲಾ ಪ್ರಾಯಶಃ ಇವನ ಹೆಸರನ್ನು ತಮ್ಮ ತಮ್ಮ ಗ್ರಂಥಗಳ ಆದಿಭಾಗದಲ್ಲಿ ಗೌರವಪುರಸ್ಸರವಾಗಿ ಹೇಳುತ್ತಾರೆ:—

ಚತುರಚಮತ್ಕೃತಿಯುಡ್ದಾ । ಟಿತರಮಣೀಯಂ ದಿಟಕ್ಕೆ ಪಂಪನ ಕೃತಿ ವಿ ।
ಕ್ಕಿತರರ ಕೃತಿತತಿಯುವಿಚಾ । ರಿತರಮಣೀಯಂ ವಿದಗ್ಧರಂ ಮೆಚ್ಚಿಕುವೇ ॥

[**ಪಾರ್ಶ್ವಪಂಡಿತ**. (1205)]

ಪಸರಿಪ ಕನ್ನಡಕ್ಕೊಡೆಯನೊರ್ವನೆ ಸತ್ಕವಿ ಪಂಪನಾವಗಂ ।
ವಸುಧೆಗೆ ಚಕ್ರಿಯಂತಮರಭೂಮಿಗೆ ವಾಸವನಂತೆ ಸಂತತಂ ॥
ರಸೆಗುರಗೇಂದ್ರನಂತೆ ಗಗನಕ್ಕೆ ವಿಕರ್ತನನಂತೆ ಧಾತ್ರಿಯೊಳ್ ।
ಪೆಸರ್ವಡೆದಿರ್ದನೀಗಳೆಮಗೀಗೆ ತದೀಯವಚೋವಿಳಾಸಮಂ ॥

[**ನಾಗರಾಜ**. (1331)]

ಆದಿಕವಿ ಪಂಪನೆಂದನು । ವಾದಿಸಿ ಪಾದಿಸಿ ವಿರೋಧಿ ವಿಪರೀತತೆಯಿಂ ।
ದೋದೆ ವಿಲೋಮದೆ ಪೆಸರಂ । ಮೇದಿನಿಯೊಳಗವನ ಪೆಸರೆ ಪೆಸರ್ವಡೆದೆಸೆಗುಂ ॥

[**ಮಧುರ**. (ಸು. 1385)] ಇತ್ಯಾದಿ.

ಈತನು ತನಗೆ ಹಿಂದೆ ಇದ್ದ ಆವ ಕನ್ನಡಕವಿಯನ್ನೂ ಸ್ಮರಿಸಿಲ್ಲ. ತನ್ನ ಅದ್ವಿತೀಯವಾದ ಕವಿತಾಪ್ರೌಢಿಯನ್ನೂ ಬಿರುದುಗಳನ್ನೂ ಅವಕ್ಕೆ ಕಾರಣವನ್ನೂ ಇತರವಿಷಯಗಳನ್ನೂ ಕೆಳಗಣ ಪದ್ಯಗಳಲ್ಲಿ ಹೇಳುತ್ತಾನೆ:—

ಕ್ಷಿತಿಗೆ ಸಮಸ್ತ ಭಾರತಮುಮಾದಿಪುರಾಣಮುಮಾಗಳೊಂದಳಂ ।
ಕೃತಿಯುವೊಲಿರ್ದುವೇಕಜೀಯ ಪೋದವರಾದವರೊಳ್ ಸರಸ್ವತೀ ॥
ಮತಿ ಕವಿತಾಗುಣಕ್ಕೆ ಪದೆದೆಯ್ದುವರಲ್ಲೆ ಕವೀಂದ್ರರಾರ್ ಸರ ।
ಸ್ವತಿಗೆ ವಿಳಾಸಮಂ ಪೊಸತುಮಾಡುವ ಪಂಪನ ವಾಗ್ವಿಳಾಸಮಂ ॥
ವತ್ಸಕುಲತಿಲಕನಭಿಜನ । ವತ್ಸಲನಭಿಮಾನಮೂರ್ತಿ ಸುಕವಿಯಶೋನಿ ।
ರ್ಮತ್ಸರನಮೃತಮಯೋಕ್ತಿಶ । ರತ್ನಮಯಸುಧಾಂಶುವಿಶದಕೀರ್ತಿವಿತಾನಂ ॥
ವಿದಿತಂ ಪ್ರಾತೀತಿಕಂ ಕೋಮಳಮತಿಸುಭಗಂ ಸುಂದರಂ ಸೂಕ್ತಿಗರ್ಭಂ ।
ಮೃದುಸಂದರ್ಭಂ ವಿಚಾರಕ್ಷಮಮುಚಿತಪದಂ ಶ್ರವ್ಯನವ್ಯಾತುಲಂ ವ್ಯಾ ॥
ಪ್ತದಿಗಂತಂ ಕಾವ್ಯಮೆಂದನ್ವಿತಸುಕವಿಜನಂ ಮೆಚ್ಚಿ ನಿಚ್ಚಂ ಮನಂಗೊ ।
ಳ್ವುದಜಿಂದಂ ನೆಟ್ಟನೀತಂ ಸುಕವಿಜನಮನೋಮಾನಸೋತ್ತಂಸಹಂಸಂ ॥
ಇದು ನಿಚ್ಚಂ ಪೊಸತರ್ಣವಂಬೊಲತಿಗಂಭೀರಂ ಕವಿತ್ವಂ ಜಗ ।
ಕ್ಕದಜಿಂದಂ ಕವಿತಾಗುಣಾರ್ಣವನಿಳಾಲೋಕೈಕವಿಖ್ಯಾತನ ॥
ಭ್ಯುದಯಪ್ರಾಪ್ತಿನಿಮಿತ್ತಮುನ್ನತಯಶಂ ಸಂಸಾರದೊಳ್ ಸಾರಮ ।
ಪ್ಪುದಜಿಂ ಧರ್ಮಮದಂ ನಿಮಿರ್ಚುವುದಜಿಂ ಸಂಸಾರಸಾರೋದಯಂ ॥

ಅತಿಸುಭಗೆಗೆ ಸಂದ ಸರ। ಸ್ವತಿಗೀತನ ಲಲಿತವಾಗ್ವಿಳಾಸಮೆ ಸದಲಂ।
ಕೃತಿಯುವೊಲೆಸೆದಪುದು ಜಗ। ತ್ಪ್ರತೀತನೀತನೆ ಸರಸ್ವತೀಮಣಿಹಾರಂ॥
ಕದಳೀಗರ್ಭಶ್ಯಾಮಂ। ಮೃದುಕುಟಿಲಶಿರೋರುಹಂ ಸರೋರುಹವದನಂ।
ಮೃದುಮಧ್ಯಮತನು ಹಿತಮಿತ। ಮೃದುವಚನಂ ಲಲಿತಮಧುರಸೌಂದರವೇಷಂ॥

ಇವನ ಗ್ರಂಥಗಳಲ್ಲಿ

## 1. ಆದಿಪುರಾಣ.

ಈ ಕಾವ್ಯವು ಆದಿತೀರ್ಥಕರನಾದ ಪುರುದೇವನ ಚರಿತವು; ಚಂಪೂ ರೂಪವಾಗಿದೆ. ಇದನ್ನು ಕಾವ್ಯರಚನೆಗೆ ಲಕ್ಷ್ಯಗ್ರಂಥವಾಗುವಂತೆ ಬರೆದುದಾಗಿ—

ಇದುವೆ ಸುಕವಿಪ್ರಮೋದ। ಪ್ರದಮಿದುವೆ ಸಮಸ್ತಭವ್ಯಲೋಕಪ್ರಮುದ।
ಪ್ರದಮೆನೆ ನೆಗಟ್ದಾದಿಪುರಾ। ಣದೊಳಜಂವುದು ಕಾವ್ಯಧರ್ಮಮುಂ ಧರ್ಮಮುಮಂ॥

ಎಂಬ ಪದ್ಯದಲ್ಲಿ ಹೇಳುತ್ತಾನೆ. ಗ್ರಂಥವು 16 ಆಶ್ವಾಸಗಳಾಗಿ ವಿಭಾಗಿಸಲ್ಪಟ್ಟಿದೆ. ಗ್ರಂಥಾವತಾರದಲ್ಲಿ ಕವಿ ಆದಿಬ್ರಹ್ಮನನ್ನು ಸ್ತುತಿಸಿದ್ದಾನೆ. ಬಳಿಕ ಸಿದ್ಧರನ್ನೂ ಆಚಾರ್ಯರನ್ನೂ ಉಪಾಧ್ಯಾಯರನ್ನೂ ಸಾಧುಗಳನ್ನೂ ಚಕ್ರೇಶ್ವರಿಯನ್ನೂ ವೃಷಭಯಕ್ಷನನ್ನೂ ಸರಸ್ವತಿಯನ್ನೂ ನುತಿಸಿ ಆಮೇಲೆ ಸಮಂತಭದ್ರನು ಮೊದಲುಗೊಂಡು ಅಕಳಂಕದೇವನ ವರೆಗೆ ಗುರುಗಳನ್ನು ಪರಿವಿಡಿಯಿಂದ[1] ಸ್ತುತಿಸಿದ್ದಾನೆ. ತರುವಾಯ ತನಗೆ "ಬುಧಸಮೂಹಂ" ಹಿಂದೆ ಹೇಳಿರುವ[2] ಬಿರುದುಗಳನ್ನು ಕೊಟ್ಟು "ಇದಂ ಪೇೞಿಂದೆನೆ ಪೇೞಲ್ಕಿಂ ಮನಂದಂದೆಂ" ಎನ್ನುತ್ತಾನೆ. ಈ ಕಥೆ "ಪರಂಪಗೆಯಿಂ ವಿಶ್ರುತವೀರಸೇನಜಿನಸೇನಾಚಾರ್ಯಪರ್ಯಂತಮಾಗಿರೆ ಬಂದುದು" ಎಂದು ಹೇಳುತ್ತಾನೆ. ನಾಭಿನಂದನನಾದ ವೃಷಭನು ಸಿಂಹಾಸನಾರೂಢನಾಗಿರುವಲ್ಲಿ ಭರತನು ಕೇಳಲು ವೃಷಭಸೇನಗಣಾಗ್ರಣಿ ಈ ಆದಿಪುರಾಣವನ್ನು ಹೇಳಿದನು. ವಿಪುಲಾದ್ರಿಯಲ್ಲಿ ವರ್ಧಮಾನಜಿನಸನ್ನಿಧಿಯಲ್ಲಿ ಗೌತಮನು ಮಗಧನಾಯಕನಿಗೆ ಅದನ್ನೇ ವಿಸ್ತಾರವಾಗಿ ಹೇಳಿದನು. ಆ ಕಥೆಯನ್ನೇ "ಅಪರಿಮಿತಭಕ್ತಿಯಿಂ ವಿರಚಿಸುವೆಂ" ಎಂದು ಹೇಳಿ ಕಥೆಯನ್ನು ಆರಂಭಿಸುತ್ತಾನೆ. ಆಶ್ವಾಸಗಳ ಕೊನೆಯಲ್ಲಿ—

---

1. ಸಮಂತಭದ್ರ, ಕವಿಪರಮೇಷ್ಠಿ, ಪೂಜ್ಯಪಾದ, ಗೃಧ್ರಪಿಂಛಾಚಾರ್ಯ, ಜಟಾಚಾರ್ಯ, ಶ್ರುತಕೀರ್ತ್ಯಾಚಾರ್ಯ, ಮಲಧಾರಿಸಿದ್ಧಾಂತಮುನೀಶ್ವರ, ದೇವೇಂದ್ರಮುನಿ, ಜಯನಂದಿಮುನಿ, ಅಕಳಂಕದೇವ.

2 ಪುಟ 30.

ಇದು ದೇವೇಂದ್ರಮುನೀಂದ್ರವಂದ್ಯಪರಮಜಿನೇಂದ್ರಮುಖಚಂದ್ರವಾಕ್ಚಂದ್ರಿಕಾ ಪ್ರಸರಪ್ರಸಾದೋದೀರ್ಣ ಸೂಕ್ತಿಕಲ್ಲೋಲಮಾಲಾಕೀರ್ಣ ಕವಿತಾಗುಣಾರ್ಣವಪ್ರಣೀತಮಪ್ಪಾದಿಪುರಾಣದೊಳ್

ಎಂಬ ಗದ್ಯವಿದೆ.

ಈ ಗ್ರಂಥವನ್ನು ಕವಿ ಉತ್ಕೃಷ್ಟಭಾಷಾಶೈಲಿಯಲ್ಲಿ ರಚಿಸಿದ್ದಾನೆ. ಪದದ ಜೋಡಣೆ ಕಿವಿಗಿಂಪಾಗಿಯೂ ಲಲಿತವಾಗಿಯೂ ಹೃದಯಂಗಮವಾಗಿಯೂ ಇದೆ. ಪದಗಳು ಮುತ್ತುಕೋದಂತೆ ಹೊಂದಿಕೆಯಾಗಿವೆ. ಬಂಧವು ಗಂಭೀರವಾಗಿಯೂ ಭಾವಗರ್ಭಿತವಾಗಿಯೂ ಇದೆ. ಇವನ ವಾಗ್ಧೋರಣೆ ಪ್ರಾಯಃ ಇತರ ಕನ್ನಡ ಕವಿಗಳಲ್ಲಿ ದೊರೆಯಲಾರದೆಂದು ತೋರುತ್ತದೆ.

ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

ಮಗಳಿಗೆ ತಂದೆತಾಯಿಗಳು ಹೇಳುವ ಬುದ್ಧಿವಾದ.

ಮನಮಱದಂಜಿ ಬೆರ್ಚಿ ಬೆಸಕೆಯ್ ನಿಜವಲ್ಲಭನೇನನೆಂದೊಡಂ ।
ಕಿನಿಸದಿರೊಂದಿದಗ್ರಮಹಿಷೀಪದದಲ್ಲಿ ಪದಸ್ಥೆಯಾಗು ನಂ ॥
ದನರನಗಣ್ಯಪುಣ್ಯಧನರಂ ಪಡೆಯೆಂದಮರ್ದಪ್ಪಿಕೊಂಡ ತ ।
ತ್ತನುಜೆಯುಗಲ್ಕೆಯೊಳ್ ನೆಗಪಿದರ್ ಬಸಮಲ್ಲದ ಬಾಷ್ಪವಾರಿಯಂ ॥ 38 ॥

ಅಳಿಯನಿಗೆ ಅತ್ತೆಮಾವಂದಿರು ಹೇಳುವ ಹಿತೋಕ್ತಿ.

ಬಗೆದುಂ ನಿನ್ನನ್ನವಾಯೋನ್ನತಿಯನಿವಳತಿಸ್ನೇಹಸಂಬಂಧಮಂ ನೀಂ ।
ಬಗೆದುಂ ಸಂದೆಮ್ಮ ನಣ್ಪಂ ಬಗೆದುಮಱಯದೇನಾನುಮೆಂದಾಗಳುಂ ಮೆ ॥
ಲ್ಲಗೆ ನೀಂ ಕಲ್ಪಿಪ್ಪುದೆಮ್ಮಂ ನೆನೆದೆರ್ದೆಗಿಡದಂತಾಗೆ ಪಾಲಿಪ್ಪುದಿಂತೀ ।
ಮೃಗಶಾಬೇಕ್ಷಾಕ್ಷಿಯಂ ಮನ್ನಿಸುವುದಿನಿತನಾಂ ಬೇಡಿದೆಂ ವಜ್ರಜಂಘಾ ॥ 39 ॥

ಅಗಲಿಕೆ.

ಪೊಡೆಮಡುವಪ್ಪಿಕೊಳ್ವ ನೆನೆಯುತ್ತಿರಿಮೆಂಬ ಸಮಸ್ತವಸ್ತುವಂ ।
ಕುಡುವ ಪಲರ್ಮೆಯಿಂ ಪರಸಿ ಸೇಸೆಯನಿಕ್ಕುವ ಬುದ್ಧಿವೇಳ್ವಕೆ ॥
ಯ್ಯೆಡೆ ನಿಮಗೆಂದೊಡಂಬಡಿಪ ನಲ್ಲರಗಲ್ಕೆಗೆ ಕಣ್ಣನೀರ್ಗಳಂ ।
ಮಿಡಿವ ಬಹುಪ್ರಕಾರಜನಸಂಕಟಮೊಪ್ಪಿದುದಾಪ್ರಯಾಣದೊಳ್ ॥ 40 ॥

ಪರ್ವತ ಪ್ರಾಂತ.

ಎಳನೀರೊತ್ತಿನೊಳೊತ್ತಿ ಬರ್ಪ ಪೊನಲೊಳ್ ಸಾಂದ್ರೇಂದುಕಾಂತೋಪಲೋ ।
ಚ್ಚಳಿತಾಚ್ಛಾಚ್ಛಜಳಪ್ರವಾಹಭರದೊಳ್ ಮಂದಾನಿಲಾಂದೋಳನಾ ॥

ಕುಳಿಶಾರಾಮಫಲಾಮೃತೋಪಮರಸಸ್ರೋತಂಗಳೊಳ್ ಸಾಲ್ವಿನಂ |
ಬೆಳೆದೋಱಂತೊಱಗಿರ್ದ ಶಾಲಿವನದಿಂ ಸೇವ್ಯಂ ನಗೋಪತ್ಯಕಂ ॥ 41 ॥

## ಮಾವು.

ತಳಿರೊಳ್ಗೊಂಬಿನೊಳೊಳ್ಪ ಕೋಕಿಲಕುಲಂ ಪೂಗೊಂಬಿನೊಳ್ ಪಾಡುತಿ |
ರ್ಪಳಿವೃಂದಂ ತುಱುಗಿರ್ದ ಬಲ್ಮಿಡಿಯ ತೂಗುಂಗೊಂಬಿನೊಳ್ ಪಾಯ್ದು ಬಂ |
ಡುಳಿಸುತ್ತಿರ್ಪ ಶುಕಾಳಿ ತಮ್ಮ ಬೆಸದಿಂ ತಂತಮ್ಮ ತಾಣಾಂತರಂ |
ಗಳೊಳಿರ್ದಂಗಜತಂತ್ರದಂತೆಸೆವಿನಂ ಚೆಲ್ವಾದುವಿಮ್ಮಾವುಗಳ್ ॥ 42 ॥

ತಳಿರೊಳ್ ನೀನೆ ಬೆಡಂಗನ್ಯೆ ನನೆಗಳೊಳ್ ನೀಂ ಸೀಱಿನ್ಯೆ ಪುಷ್ಪಸಂ |
ಕುಳದೊಳ್ ನೀನೆ ವಿಳಾಸಿಯ್ಯೆ ಮಿಡಿಗಳೊಳ್ ನೀಂ ಚೆಲ್ವನ್ಯೆ ಪಣ್ತ ಪ |
ಣ್ಗಳಿನೊಪ್ಪೋ ಪೆಱತೇನೊ ನೀನೆ ಭುವನಕ್ಕಾರಾಧ್ಯನ್ಯೆ ಭೃಂಗಕೋ |
ಕಿಳಕೀರಪ್ರಿಯ ಚೂತರಾಜ ತರುಗಳ್ ನಿನ್ನಂತೆ ಚೆನ್ನಂಗಳೇ ॥ 43 ॥

## ಮಂದಾನಿಲ.

ಅಳಿನಿನದದ ಮದಕೋಕಿಳ | ಕಳನಿನದದ ಜತಿಯೊಳಭಿನಯಂ ನೆಗೞ್ವೆಸೆಗಂ |
ಲಳಿತಮನೇನಾಡಿಸಿದನೊ | ಮಳಯಾನಿಳನರ್ತಕಂ ಲತಾನರ್ತಕಿಯಾ ॥ 44 ॥

## ಸುರಹೊನ್ನೆ.

ಎಸೞ್ಗಳನೆಂಬ್ದು ಕಂಡರಿಸಿ ಮುತ್ತಿನೊಳಲ್ಲಿ ಸುವರ್ಣಚೂರ್ಣಮಂ |
ಪಸರಿಸ ಕೇಸರಾಕೃತಿಯೊಳಲ್ಲಿಗೆ ಕರ್ಣಿಕೆಯಂದಮಾಗೆ ಕೀ |
ಲಿಸಿ ಹೊಸತಪ್ಪ ಮಾಣಿಕದ ನುಣ್ಬರಲಂ ಮಧು ಮನ್ಮಥಂಗೆ ಬ |
ಣ್ಣಿಸಿ ಸಮೆದಂತೆ ತೋಱುವುದು ಪೂಗಳೊಳೇಂ ಸುರಹೊನ್ನೆ ಚೆನ್ನನೋ ॥ 45 ॥

## ವಸಂತ.

ಎಳವಿಸಿಲೀಗಳೀಗಳೆ ಮುಡಿದ್ದುರ್ದು ಚೂತಕುಜಾತಮೀಗಳೀ |
ಗಳೆ ನನೆದೋಱಿತಿಂದೊಳದಿನುಣ್ಮಿದ ಷಟ್ಪದವೃಂದಮೀಗಳೀ ॥
ಗಳೆ ಮೊರೆದತ್ತು ಚಂದನದ ತಳ್ಕಬಲಾನಿಕರಕ್ಕದೀಗಳೀ |
ಗಳೆ ನೆಗೞ್ದತ್ತೆಲೇ ಪುಗಿಲದಾಗಳಿ ವೇಡ ವಸಂತರಾಜನಾ ॥ 46 ॥

## ಚಂದ್ರೋದಯ.

ಅದೊಂದಿನಿಸು ಬೇಗದಿಂ ನವಜಪಾಪ್ರಸೂನಾಭಮಾ |
ಯ್ತದೊಂದಿನಿಸು ಬೇಗದಿಂ ಕನಕಕುಂಭದಂತಾಯ್ತು ಮ |
ತ್ತದೊಂದಿನಿಸು ಬೇಗದಿಂ ಮೃದುಮೃಣಾಳಸಂಕಾಶಮಾ |
ಯ್ತದೇಂ ಬೞಿಕೆ ಬಿಂಬದುಜ್ಜ್ವಳಿಕೆಯೋ ಸುಧಾಸೂತಿಯಾ ॥ 47 ॥

### ಚಂಪಕ.

ಪಡೆದೊಡೆ ಕಂಪಂ ಬಣ್ಣಂ। ಬಡೆಯುವು ಬಣ್ಣಮನೆ ಪಡೆದುವಪ್ಪೊಡೆ ಕಂಪಂ।
ಪಡೆಯುವು ಬಿಡಲರ್ಗಳೆರಡುಮ। ನೊಡವೆಳೆದೀ ಚಂಪಕಕ್ಕೆ ಪೂಗಳ್ ದೊರೆಯೆ ॥48॥

## 2. ಭಾರತ ಅಥವಾ ವಿಕ್ರಮಾರ್ಜುನವಿಜಯ.

ಈ ಗ್ರಂಥವು ಚಂಪೂರೂಪವಾಗಿದೆ. ಇದರಲ್ಲಿ ಕವಿ ಪಾಂಡವರ ಜನನದಿಂದ ಕೌರವವಧೆಯವರೆಗೆ ಭಾರತಕಥೆಯನ್ನು ಸಂಕ್ಷೇಪವಾಗಿ ಹೇಳಿ ಕೊನೆಯಲ್ಲಿ ಅರ್ಜುನನಿಗೆ ಪಟ್ಟಾಭಿಷೇಕವಾದಂತೆ ವರ್ಣಿಸಿದ್ದಾನೆ. ತನ್ನ ಪೋಷಕನಾದ ಅರಿಕೇಸರಿಯೆಂಬ ಚಾಳುಕ್ಯರಾಜನನ್ನು ಅರ್ಜುನನಿಗೆ ಹೋಲಿಸಿದ್ದಾನೆ. ಈ ಗ್ರಂಥವನ್ನು ಅರಿಕೇಸರಿಯು ಅಪ್ಪಣೆಯುಮೇರೆಗೆ ಬರೆದುದಾಗಿ ಹೇಳುತ್ತಾನೆ. ಗ್ರಂಥವು 14 ಆಶ್ವಾಸಗಳಾಗಿ ಭಾಗಿಸಲ್ಪಟ್ಟಿದೆ. ಗ್ರಂಥಾವತಾರದಲ್ಲಿ ಅರಿಕೇಸರಿಯನ್ನು ವಿಷ್ಣುವಿಗೂ ಪರಮೇಶ್ವರನಿಗೂ ಸೂರ್ಯನಿಗೂ ಮನ್ಮಥನಿಗೂ ಹೋಲಿಸಿ ಬೇರೆ ಬೇರೆ ಮಂಗಳಶ್ಲೋಕಗಳನ್ನು ಮಾಡಿದ್ದಾನೆ. ಬಳಿಕ ಸರಸ್ವತಿಯನ್ನೂ ವಿನಾಯಕನನ್ನೂ ನುತಿಸಿದ್ದಾನೆ. ತರುವಾಯ—ಹಿಂದೆ ಅನೇಕರು ಭಾರತಕಥೆಯನ್ನು ಬರೆದಿದ್ದಾರೆ. ಆದರೆ ಆವ ಸಂಗತಿಯನ್ನೂ ಬಿಡದಂತೆ ಕ್ರಮವಾಗಿಯೂ ಮನೋಹರವಾಗಿಯೂ ಬರೆವುದಕ್ಕೆ ಇನ್ನಾರೂ ಸಮರ್ಥರಿಲ್ಲ—ಎಂದು ವಿದ್ವಾಂಸರು ಕೇಳಿಕೊಳ್ಳಲು "ಪೇಟಲೊಡರ್ಚಿದೆನೀಪ್ರಬಂಧಮಂ" ಎನ್ನುತ್ತಾನೆ. ಆಮೇಲೆ ತನ್ನ ಪೋಷಕನ ವಂಶಾವಳಿಯನ್ನು ಹೇಳಿ ಕಥೆಯನ್ನು ಆರಂಭಿಸುತ್ತಾನೆ. ಆಶ್ವಾಸಗಳ ಅಂತ್ಯದಲ್ಲಿ—

ಇದು ವಿವಿಧಬುಧಜನವಿನುತಜಿನಪದಾಂಭೋಜವರಪ್ರಸಾದೋತ್ಪನ್ನ ಪ್ರಸನ್ನಗಂಭೀರವಚನರಚನಚತುರ ಕವಿತಾಗುಣಾರ್ಣವವಿರಚಿತಮಪ್ಪ ವಿಕ್ರಮಾರ್ಜುನವಿಜಯದೊಳ್

ಎಂಬ ಗದ್ಯವಿದೆ.

ಈ ಗ್ರಂಥದ ಬಂಧವು ಆದಿಪುರಾಣದ ಬಂಧದಷ್ಟು ಲಲಿತವಾಗಿಲ್ಲ: ಪ್ರೌಢವಾಗಿಯೂ ಭಾವಗರ್ಭಿತವಾಗಿಯೂ ಇದೆ. ಅದರಲ್ಲಿ ಸಂಸ್ಕೃತಪದಗಳು ಹೆಚ್ಚು; ಇದರಲ್ಲಿ ಕನ್ನಡಪದಗಳು ಹೆಚ್ಚು.

ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ.—

### ರಾಜಧರ್ಮ (ಅರ್ಜುನೋಕ್ತಿ).

ಒತ್ತಿ ತಱುಂಬಿ ನಿಂದ ರಿಪುಭೂಜನಮಾಜದ ಬೇರ್ಗಳಂ ನಭ।
ಕ್ಕೆತ್ತದೆ ಬಂದು ತನ್ನ ಮಱೆವೊಕ್ಕೊಡೆ ಕಾಯದೆ ಚಾಗಮೊಳ್ಪಿನ॥
ಚೊತ್ತದೆ ಪೂಣ್ದುಬಾೞ್ವ ಪುೞುವಾನಸನೆಂಬನಜಾಂಡಮೆಂಬದೊಂ।
ದತ್ತಿಯ ಪಣ್ಣೊಳಿರ್ಪ ಪುೞುವಲ್ಲದೆ ಮಾನಸನೇ ಮುರಾಂತಕಾ ॥ 49 ॥

## ಸತ್ತವರಿಗಾಗಿ ದುಃಖಿಸುವುದು.

ಕೞಿದವರ್ಗಳ್ವದೞ್ತಡವರೇೞ್ವಡಮುಂತವರಿಂ ಬೞಿಕ್ಕೆ ತಾ ।
ಮುೞಿಪೊಡಮೇೞರಂತವರಣಂ ತಮಗಂ ಬೞಿಕಿಲ್ಲ ಧರ್ಮಮುಂ ॥
ಗೞಿಯಿಸಿಕೊಳ್ವುದೊಂದೆ ಚದುರಿಂತುಟು ಸಂಸ್ಕೃತಿಧರ್ಮಮೇಕೆ ಬಾ ।
ಯೞಿವುದದೇಕೆ ಚಿಂತಿಸುವುದೇಕೆ ಪಲುಂಬುವುದೇಕೆ ನೋವುದೋ ॥ 50 ॥

## ಧನಮದ.

ನುಡಿ ತಡವಪ್ಪುದೊಂದು ಮೊಗಮೊಳ್ ಮುಱುಕಂ ದೊರೆಕೊಳ್ವುದೊಂದು ನಾ ।
ಣ್ಗಡೆಗುಡಮಿರ್ಪುದೊಂದು ನುಡಿಗಳ್ ಮೊಱೆಯುಂ ಮಱೆಯುಪ್ಪುದೊಂದು ಕ ॥
ಳ್ಗಡಿದವರಂದಮಿಂತು ಸಿರಿ ಸಾರ್ತರೆ ಸಾರ್ಪುದದರ್ಕೆ ಸಂದೆಯಂ ।
ಬಡದೆ ಜಲಕ್ಕನೀಗಳಱಿದೆಂ ಸಿರಿ ಕಳ್ಗಡಪುಟ್ಟಿತೆಂಬುದಂ ॥ 51 ॥

## ಅರ್ಜುನನ ವಿರಹ.

ಅಲರಲರ್ಗಳ್ ಮುಗುಳ್ ನಗೆ ಮಡಲ್ ತೊಡೆ ತುಂಬಿ ಕುರುಳ್ ತಳಿರ್ ತಳಂ ।
ಗೊಲೆ ಪೊಲೆ ಕಂಪು ಕಂಪು ಕೊಸೆ ಸೆಳ್ಳುಗುರ್ಗಳ್ ಕುಡಿ ತೋಳ್ ನಯಂ ನಯಂ ॥
ನೆಲೆ ನೆಲೆ ಭಂಗಿ ಭಂಗಿ ಪದನಾರ್ ಬೆಳೆವಾರ್ಯರ್ ಪೆಱತಲ್ಲದೆಂತೊ ಕೋ ।
ಮಲಲತೆ ಪೇೞ್ ಮನಸ್ವಿನಿಯುಮಂ ಮಱೆಗೊಂಡುದೊ ಸೂಱೆಗೊಂಡುದೋ ॥ 52 ॥

## ನಂದನ.

ಕವಿವ ಮದಾಳಿಯುಂ ಮಸುಳಸಾಗಿ ಪಯೋಜರಜಂಗಳೊಳ್ ಕವಿ ।
ಲ್ಗವಿಲನುಮಾಗಿ ಬಂದ ಮಲಯಾನಿಲನೂಪೆ ತೆರಳ್ದ ಚೂತಪ ॥
ಲ್ಲವದ ತೆರಳ್ಕೆ ತದ್ವನವಿಲಾಸಿನಿಯುಟ್ಟ ದುಕೂಲಮೊಂದು ಪ ।
ಲ್ಲವದ ತೆರಳ್ಕೆಯಂತೆಸೆಯೆ ಕಣ್ಗೆಸೆದಿರ್ದುವು ನಂದನಾಳಿಗಳ್ ॥ 53 ॥

ಮಿಡಿದೊಡೆ ತನಿಗರ್ಬು ರಸಂ । ಬಿಡುವುವು ಬಿರಿಮೊಂದು ಮುಗುಳ ಕಂಪಿನೊಳೆ ಮೊಗಂ।
ಗಿಡುವುವು ತುಂಬಿಗಳಲ್ಕಮೆ।ವಡುವುವು ಕುಡಿದೊಂದು ಪಣ್ಣ ರಸಮೊಳ್ ಗಿಳಿಗಳ್ ॥54॥

## ವರ್ಷಾಕಾಲ.

ಪೆಸೆ ಪಸುರೇಱೆ ಪಚ್ಚೆಯೊಳೆ ಮುಚ್ಚಿ ಮುಸುಂಕಿದ ಮಾೞ್ಕೆಯಾದುದಾ ।
ಗಸಮಳಿನೀಳನೀಳಗಳಕಂಠತಮಾಳವಿನೀಳನೀರದ ॥
ಪ್ರಸರವಿಭಾಸಿಯಾದುದು ಸಮೀರನುದಾರಕದಂಬಕೇತಕೀ ।
ಪ್ರಸರರಜಸ್ಸ್ಫುರತ್ಪ್ರಕಟಪಾಂಸುಳಮಾದುದು ಮೇಘಕಾಲದೊಳ್ ॥ 55 ॥

ಪೊಳೆವಮರೇಂದ್ರಗೋಪದ ಪಸುರ್ತ್ತೆಳವುಲ್ಗಳ ತಳ್ತ ಕಾಮರ್ಗಿ ।
ಲ್ಗಳ ಕಿಱುಗೊಂಕುಗೊಂಕಿದ ಪೊನಲ್ಗಳ ಕೆಂಪು ಪಸುರ್ಪು ಕರ್ಪು ಬೆ ॥

ಳ್ಪೊಳಕೊಳೆ ಶಕ್ರಕಾರ್ಮುಕವಿಳಾಸಮನೇನೆರ್ದೆಗೊಂಡು ಬೇಟದ ।
ತ್ತಳಗಮನುಂಟುಮಾಡಿದುದೊ ಕಾಮನ ಕಾರ್ಮುಕದಂತೆ ಕಾರ್ಮುಕಂ ॥ 56 ॥

## ಶರತ್ಕಾಲ.

ಕಡವಿನ ಕಂಪಡಂಗಿದುದು ಜಾಡಿಯ ಸೊಂಪೆಸೆದತ್ತು ಸೋಗೆಯು ।
ರ್ಕುಡುಗಿದುದಂಚೆಯುರ್ಕು ಪೊಸತಾಯ್ತು ಮುಗಿಲ್ಗಳ ನೀಳ್ದ ಕರ್ಪುಮೋ ॥
ಗಡಿಸಿದುದಿಂದುವುಂಡಳದ ಕರ್ಪೆಸೆದತ್ತು ಘನಾಗಮಂ ಮೊದ ।
ಲ್ಗಿಡೆ ಶರದಾಗಮಂ ನೆಱೆಯೆ ಪರ್ಬೆ ಸಮಸ್ತಮಹೀವಿಭಾಗಮಂ ॥ 57 ॥

ಅಳಿ ಬಿರಿದಿರ್ದ ಜಾದಿಯೊಳೆ ಪಲ್ಮೊರೆಯುತ್ತಿರೆ ಹಂಸೆ ಪೂತ ಪೂ ।
ಗೊಳದೊಳೆ ರಾಗಿಸುತ್ತಿರೆ ಶುಕಾವಳಿ ಬಂಧುರಗಂಧಶಾಳಿಯಂ ॥
ಕುಳದೊಳೆ ಪಾಯ್ದು ಪಾಯ್ದು ನಲಿಯುತ್ತಿರೆ ಸಾರೆ ಚಕೋರಮಿಂದುಮಂ ।
ಡಳಗಳಿತಾಮೃತಾಸವಮನುಂಡುಸಿರುತ್ತಿರೆ ಚೆಲ್ವು ಶಾರದಂ ॥ 58 ॥

## ಭೀಷ್ಮಶರತಲ್ಪ.

ತಿಂತಿಣಿಯಾಗಿ ನಟ್ಟ ಕಣೆಯೊಳ್ ನೆಲಮುಟ್ಟದ ಮೆಯ್ಯೊಳತ್ತಮಿ ।
ತ್ತಂ ತೆಱೆದಿರ್ದ ಪುಣ್ಗಳೆಸೆವಕ್ಕರದಂತಿರೆ ನೋಡಿ ಕಲ್ಲಿಮಂ ॥
ಬಂತೆವೊಲಿರ್ದನಟ್ಟವಣೆಗೋಲ್ಗಳ ಮೇಲೆಸೆದಿರ್ದ ವೀರಸಿ ।
ದ್ಧಾಂತದ ಶಾಸನಂಬರೆದ ಪೊತ್ತಗೆಯಂತಮರಾಪಗಾತ್ಮಜಂ ॥ 59 ॥

## ರಾಜಸೇವೆ.

ಕಱಿಯನೆ ಪಂದೆಮಾೞ್ಪ ಕಡುವಂದೆಯನೊಳ್ಗಲಿಮಾೞ್ಪ ತಕ್ಕನಂ ।
ಪೊಲೆಯನ ಮಾೞ್ಪ ಮುಂ ಪೊಲೆಯನಂ ನೆಱೆ ತಕ್ಕನ ಮಾೞ್ಪ ತಮ್ಮೊಳ ॥
ಗ್ಗಲಿಸಿ ಪೊದೞ್ದು ಪರ್ವಿದವಿವೇಕಿತೆಯಿಂ ನೃಪಚಿತ್ತವೃತ್ತಿ ಸಂ ।
ಚಲಮುದಱಿಂದಮೋಲಗಿಸಿ ಬಾೞ್ವುದೆ ಕಷ್ಟಮಿಳಾಧಿನಾಥರಂ ॥ 60 ॥

## ಸ್ತ್ರೀಶೋಕ.

ಇಱಿವ ಪಿಣಿಲ್ ತೆರಳ್ದೊಱೆವ ಕಣ್ಬನಿ ಮಾಣದೆ ಪೋದೆ ಶೋಕದ ।
ಚ್ಚಿಱಿದವೊಲಿರ್ದ ಬಾಸುೞಿನಬೞಲ್ದು ಕಱೇಱ್ದು ಬೞಲ್ದು ಜೋಲ್ದ ಮೆಯ್ವರ್ ।
ಮಱುಗುವ ಬೇಗದೊಳ್ಪ್ರಗಮಣಂ ದಸೆಗಾಣದ ನೋಟಮಾರುಮಂ ।
ಮಱುಗಿಸೆ ಬಂದುದಂದು ಕರುಣಂ ಬರೆ ವೈರಿನೃಪಾಂಗನಾಜನಂ ॥ 61 ॥

## ದುರ್ಯೋಧನ ಪ್ರಲಾಪ.

ಒಡಲೆರಡೊಂದೆ ಜೀವಮಿವರ್ಗೆಂಬುದನೆಂಬುದು ಲೋಕಮೀಗಳಾ ।
ನುಡಿ ಪುಸಿಯಾಯ್ತು ನಿನ್ನಸು ಕಿರೀಟಿಯ ಶಾತಶರಂಗಳಿಂದೆ ಪೋ ॥

ಪೊಡವೆನಗಿನ್ನು ವಿಾಯೊಡಲೊಳಿರ್ದುದು ಸಾಣೆಲಿಜೀವವೆಂದೊಡಾ ।
ವೆಡೆಯೊಳೆ ನಿನ್ನೊಳಿನ್ನ ಕಡುಗೂರ್ಮೆಯುಮುಟ್ಟಿಜುಮುಂಗವಲ್ಲಭಾ ॥ 62 ॥

ಬನವಾಸಿ ದೇಶ.

ತೆಂಕಣ ಗಾಳಿ ಸೋಂಕಿದೊಡಮೊಳ್ನುಡಿಗೆಯ್ದೊಡಮಿಂಪನಾಳ್ದ ಗೇ ।
ಯುಂ ಕಿವಿವೊಕ್ಕೊಡಂ ಬಿರಿದ ಮಲ್ಲಿಗೆಗಂಡೊಡಮಾದ ಕೆಂದಲಂ ॥
ಪಂ ಕೆಳೆಗೊಂಡೊಡಂ ಮಧುಮಹೋತ್ಸವಮಾದೊಡಮೇನನೆಂಬೆನಾ ।
ರಂಕುಸಮಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿದೇಶಮಂ ॥ 63 ॥

---

## ಅಸಗ. ಸು. 945.

**ಪೊನ್ನನು** (ಸು. 950) ತನ್ನ **ಶಾಂತಿಪುರಾಣ**ದಲ್ಲಿ ಈ ಕವಿಯ ಹೆಸರನ್ನು ಹೇಳಿ ತಾನು "ಕನ್ನಡಕವಿತೆಯೊಳಸಗಂ । ಗನ್ನೊರ್ಮಡಿ" ಎಂದು ಹೇಳಿಕೊಂಡಿದ್ದಾನೆ. **ನಯಸೇನನು** (1112) ತನ್ನ **ಧರ್ಮಾಮೃತ**ದಲ್ಲಿ—"ಅಸಗನ ದೇಸೆ" ಎಂದು ಈತನ ಹೆಸರನ್ನು ಹೇಳಿದ್ದಾನೆ. **ದುರ್ಗಸಿಂಹನು** (ಸು. 1145) ಈತನನ್ನು ಮನಸಿಜ, ಚಂದ್ರ, ಇವರ ಜತೆಯಲ್ಲಿ ಸೇರಿಸಿ

ಪೊಸತೆನಿಸಿ ದೇಸೆಯಿಂ ನವ । ರಸಮೊಸೆಯುಟ್ಟೊಳ್ಪುವೆತ್ತ ಮಾರ್ಗದಿನೆಳಗೇ ।
ನೆಸೆದುವೊ ಸುಕವಿಗಳೆನೆ ನೆಗ । ಳ್ದಸಗನ ಮನಸಿಜನ ಚಂದ್ರ [ಭಟ್ಟನ ಕೃತಿಗಳ್॥]

ಎಂದು ಹೊಗಳಿದ್ದಾನೆ. **ಕೇಶಿರಾಜನೂ** (ಸು. 1260) ಪೂರ್ವಕವಿಗಳ ಗೋಷ್ಠಿಯಲ್ಲಿ ಈತನನ್ನು ಸೇರಿಸಿದ್ದಾನೆ. ಆದುದರಿಂದ ಈತನು ಪ್ರೌಢಕವಿಯಾಗಿದ್ದಿರಬೇಕು. ಇವನು ಆವ ಗ್ರಂಥಗಳನ್ನು ಬರೆದಿದ್ದಾನೆಯೋ ತಿಳಿಯದು.[1] ಪೊನ್ನನು (ಸು. 950) ಈತನ ಹೆಸರನ್ನು ಹೇಳುವುದರಿಂದ ಈತನು ಅವನಿಗಿಂತ ಹಿಂದೆ ಇದ್ದನೆಂಬುದು ವ್ಯಕ್ತವಾಗಿದೆ: ಸುಮಾರು 945 ರಲ್ಲಿ ಇದ್ದಿರಬಹುದೆಂದು ಊಹಿಸುತ್ತೇವೆ.

---

## ಪೊನ್ನ ಸು. 950.

ಈತನು **ಶಾಂತಿಪುರಾಣ**ವನ್ನೂ **ಜಿನಾಕ್ಷರಮಾಲೆ**ಯನ್ನೂ ಬರೆದಿದ್ದಾನೆ. **ಶಾಂತಿಪುರಾಣ**ದ ಕೊನೆಯಲ್ಲಿರುವ

ಪ್ರಕಟಂ ಲೋಕೋತ್ತರಲೌ । ಕಿಕಪರಿಣತಿ ಪೊನ್ನಿಗಂಗೆ ಶಾಂತೀಶ್ವರರಾ ।
ಮಕಥಾಪ್ರಶಸ್ತಿಯಿಂದಾ । ದ ಕೃತಿಗಳ್ . . . . . . . . . . . . . . . . . . . . ॥
ವಿದಿತಭುವನೈಕರಾಮಾ । ಭ್ಯುದಯಕ್ಕಂ ಬೆಲೆಗಮಾವುದಂತರಮಿಂತೀ ।
ಪದಿನಾಲ್ಕುಂ ಭುವನಂಗಳ್ । ಪದಿನಾಲ್ಕಾಶ್ವಾಸರಚನೆಗಂ ಬೆಲೆಯಕ್ಕುಂ ॥

---

1. ಇವನು ಸಂಸ್ಕೃತದಲ್ಲಿ ವರ್ಧಮಾನಪುರಾಣವನ್ನು ಬರೆದಿದ್ದಾನೆ.

ಎಂಬ ಪದ್ಯಗಳಿಂದ ಈತನು ಹದಿನಾಲ್ಕಾಶ್ವಾಸವುಳ್ಳ ರಾಮಕಥೆ ಅಥವಾ ಭುವನೈಕರಾಮಾಭ್ಯುದಯ ಎಂಬ ಗ್ರಂಥವನ್ನೂ ಬರೆದಿರುವಂತೆ ತಿಳಿಯಬರುತ್ತದೆ. ಅಲ್ಲದೆ "ಸಂದ ಗತಪ್ರತ್ಯಾಗತಮೊಂದೀಕೃತಿಯೊಂದಿವರ್ಕೆ" ಎಂಬುದರಿಂದ ಶಾಂತಿಪುರಾಣವೆಂಬ "ಈಕೃತಿ" ಯಲ್ಲದೆ "ಗತಪ್ರತ್ಯಾಗತ" ವಾದ ಮತ್ತೊಂದು ಕೃತಿಯೂ ಈತನಿಂದ ರಚಿತವಾಗಿರಬೇಕು. ಈ ರಾಮಕಥೆಯೂ ಗತಪ್ರತ್ಯಾಗತ ಕೃತಿಯೂ ನಮಗೆ ದೊರೆತಿಲ್ಲ. ಶಬ್ದಮಣಿದರ್ಪಣದಲ್ಲಿ—

ಉದಯಾಸ್ತೋನ್ನತಶೈಲಸೇತುಹಿಮವತ್ಕುತ್ಕೀಲಪರ್ಯಂತಸಂ |
ಪದೆಯಂ ವಾರ್ಧಿತರಂಗರಂಗನಿನದತ್ಕಾಂಚೀಕಲಾಪಾಂಚಿತಾ ||
ಸ್ಪದಯಂ ಸಾಧಿಸಿ ಕಬ್ಬಿಗಂಗೆ ನೆಲನಂ ನಿರ್ವ್ಯಾಜದಿಂದಂ ನಿಮಿ |
ರ್ಚಿದಗೆಲ್ಲಂ ಭುವನೈಕರಾಮಮುಹಿಪಂಗಕ್ಕುಂ ಪೆಜರ್ಗಕ್ಕುಮೇ ||[1]
. . . . . . . . . . . . . ಆನೆಯ ಮೇಲೆಯುಮಾಳ ಮೇಲೆಯುಂ |
ಕುದುರೆಯ ಮೇಲೆಯುಂ ಪರಿದುಪೊಂದೆ ಗಜಂ ಭುವನೈಕರಾಮನಾ ||[2]

ಎಂಬ ಪದ್ಯಗಳಲ್ಲಿ ಭುವನೈಕರಾಮ ಎಂಬ ಒಬ್ಬ ರಾಜನ ಹೆಸರು ಹೇಳಿದೆ. ಒಂದು ವೇಳೆ ಇದು ಪೊನ್ನನ ಭುವನೈಕರಾಮಾಭ್ಯುದಯದ ಪದ್ಯವಾಗಿದ್ದರೂ ಇರಬಹುದು. ಇವನ ಗತಪ್ರತ್ಯಾಗತಕೃತಿ ಸಂಸ್ಕೃತಭಾಷೆಯಲ್ಲಿರಬಹುದೆಂದು ತೋರುತ್ತದೆ. ಇವನು ಒಂದು ಅಲಂಕಾರಗ್ರಂಥವನ್ನೂ ಬರೆದಿರುವುದಾಗಿ ಕೆಲವರು ಹೇಳುತ್ತಾರೆ.

ಈತನು ಜೈನಕವಿ. ಇವನಿಗೆ ಪೊನ್ನ, ಪೊನ್ನಿಗ, ಪೊನ್ನಮಯ್ಯ, ಸವಣ, ಕುರುಳ್ಗಳ ಸವಣ ಎಂಬ ಹೆಸರುಗಳುಂಟು; ಕವಿಚಕ್ರವರ್ತಿ, ಉಭಯಕವಿಚಕ್ರವರ್ತಿ, ಸರ್ವದೇವಕವೀಂದ್ರ, ಸೌಜನ್ಯಕಂದಾಂಕುರ ಎಂಬ ಬಿರುದುಗಳೂ ಉಂಟು.

. . . . . . . . . . . . . . . ಕವಿತಾರಸಮಂ ಸದರ್ಥವಾ ||
ದಿತ್ವಮನಿಂದ್ರನಂದಿಮುನಿಯಿಂ ಪಡೆದೊಂ ದೊರೆಯಾರ್ ಕವಿತ್ವವಾ |
ದಿತ್ವಫಲಂ ಹಿ ಶಾಸ್ತ್ರಮೆನಿಪುನ್ನತಿಯಿಂ ಕವಿಚಕ್ರವರ್ತಿಯೊಳ್ ||

ಎಂಬುದರಿಂದ ಈತನ ಗುರು ಇಂದ್ರನಂದಿ[3] ಎಂದು ತಿಳಿಯುತ್ತದೆ.

ಭುವನದ ಕನ್ನಡಸಕ್ಕದ | ಕವಿಗಳ್ ಸಲೆ ಸಾಲೆ ಸೋಲೆ ಸವಣಂಗಿತ್ತಂ |
ಸವಿವೇಕಮುಭಯಕವಿಚ | ಕ್ರವರ್ತಿವೆಸರಂ ನಿಜಾಹಿತೋಷ್ಣಂ ಕೃಷ್ಣಂ ||

1. ಪುಟ 188.

2. ಪುಟ 146.

3. ಈ ಹೆಸರಿನ ಒಬ್ಬ ಜೈನಗುರು ಸಂಸ್ಕೃತದಲ್ಲಿ ಸಮಯಭೂಷಣವೆಂಬ ಒಂದು ಗ್ರಂಥವನ್ನು ಬರೆದಿದ್ದಾನೆ. ಇವನೇಯೋ ಏನೋ ತಿಳಿಯದು.

ಕವಿತಾವಿಳಾಸಮುಂ ಚ । ಕ್ರವರ್ತಿ ತಾನಿರ್ದು ಮೆಚ್ಚಿ ಪೆಸರ್ಗೊಂಡೆರಡುಂ ।
ಕವಿತೆಯೊಳಮುಭಯಕವಿಚ । ಕ್ರವರ್ತಿಯೆನೆ ನೆಗಳ್ದನೀಕುರುಳ್ಗಳ ಸವಣಂ ॥

ಎಂಬ ಪದ್ಯಗಳಿಂದ ಈತನಿಗೆ ಕೃಷ್ಣರಾಜನು ಉಭಯಕವಿಚಕ್ರವರ್ತಿಯೆಂಬ ಬಿರುದನ್ನು ಕೊಟ್ಟಂತೆ ತಿಳಿಯುತ್ತದೆ. ಈ ವಿಷಯವನ್ನು **ಜನ್ನನೂ** (1209) ತನ್ನ **ಯಶೋಧರಚರಿತ್ರೆಯಲ್ಲಿಯು—**

ಕನ್ನರನಾದ ಏಂ ಕುಡೆ । ಹೊನ್ನಂ ಮನವೊಸೆದು ತೈಲಪಂ ಕುಡೆ ರನ್ನಂ ।
ಮುನ್ನಿನಿ ಬಲ್ಲಾಳಂ ಕುಡೆ । ಜನ್ನಂ ಕವಿಚಕ್ರವರ್ತಿವೆಸರಂ ತಳೆದಂ ॥

ಎಂಬ ಪದ್ಯದಲ್ಲಿ ದೃಢಪಡಿಸುತ್ತಾನೆ. ಈ ಅಂಶವನ್ನೇ **ದುರ್ಗಸಿಂಹನು** (ಸು. 1145)

. . . . . . . . . . . . . . . . . . . . . . . . . . ಪಡೆದಂ ವಿಶ್ವಾ ।
ವನಿಪಾಲಂ ಕೃಷ್ಣನರೇಂ । ದ್ರನಿಂಯೆ ಕವಿಚಕ್ರವರ್ತಿವೆಸರಂ ಪೊನ್ನಂ ॥

ಎಂಬ ಪದ್ಯದಲ್ಲಿ ಹೇಳಿದ್ದಾನೆ.

**ರನ್ನನು** (993) ಈ ಕವಿಯನ್ನು ಹೊಗಳುವುದರಿಂದ ಈತನು ಆವನ ಹಿಂದೆ ಇದ್ದಿರಬೇಕು. ಅಲ್ಲದೆ ಈತನಿಂದ ಶಾಂತಿಪುರಾಣವನ್ನು ಬರೆಯಿಸಿದ ಮಲ್ಲಪ, ಪುನ್ನಿಮಯ್ಯ, ಎಂಬವರು ಮುಂದೆ ತೈಲಪನ ಚಮೂಪತಿಗಳಾದಂತೆ ರನ್ನನ ಅಜಿತಪುರಾಣದಿಂದ ತಿಳಿಯುತ್ತದೆ. ಈ ತೈಲಪನು 973 ರಿಂದ 997ರ ವರೆಗೆ ರಾಜ್ಯವಾಳಿದನು. ಆದುದರಿಂದ ಕವಿಗೆ ಉಭಯಕವಿಚಕ್ರವರ್ತಿಯೆಂಬ ಬಿರುದನ್ನು ಕೊಟ್ಟ ರಾಜನು 939 ರಿಂದ 968ರ ವರೆಗೆ ಆಳಿದ ಕನ್ನರ ಎಂಬ ಹೆಸರುಳ್ಳ ರಾಷ್ಟ್ರಕೂಟವಂಶದ 3 ನೆಯ ಕೃಷ್ಣರಾಜನಾಗಿರಬೇಕು. ಈ ಕಾರಣಗಳಿಂದ ಪೊನ್ನನು ಸುಮಾರು 950 ರಲ್ಲಿ ಇದ್ದಿರಬಹುದು.

ಈತನು ಬಹಳ ಪ್ರಸಿದ್ಧನಾದ ಕವಿ. ಇವನನ್ನು ಅನೇಕ ಕವಿಗಳು ಹೊಗಳಿದ್ದಾರೆ :—

ಚದುರರೆನಿಸಿದರ ಚಿತ್ತ । ಕ್ಕೆರು ಪೊಸತೆನಿಸಿರ್ದ ರೀತಿಯುಂ ನಿರ್ವಹಿಪ ।
ಗ್ಗದ ಬಲ್ಮೆ ಬಗೆಯ ತನಗ । ಲ್ಲದೆ ಪೆಱರ್ಗಿಲ್ಲೆನಿಪ ಪೊನ್ನನಂ ಪೊಗಳ್ದರಾರ್ ।

[**ಪಾರ್ಶ್ವಪಂಡಿತ** (1205)]

ಹೀಗೆಯೇ **ನಯಸೇನ** (1112), **ನಾಗವರ್ಮ** II (ಸು. 1145), **ರುದ್ರಭಟ್ಟ** (ಸು. 1180), **ಕೇಶಿರಾಜ** (ಸು. 1260), **ಮಧುರ**[1] (ಸು. 1385) ಮೊದಲಾದ ಕವಿಗಳೆಲ್ಲಾ ಸ್ತುತಿಸಿದ್ದಾರೆ. ಈತನ ಗ್ರಂಥಗಳಿಂದ ನಾಗವರ್ಮಕೇಶಿರಾಜಾದಿಲಕ್ಷಣಗ್ರಂಥಕಾರರು ಪದ್ಯಗಳನ್ನು ತೆಗೆದು ಉದಾಹರಿಸಿದ್ದಾರೆ. **ಪಂಪ, ಪೊನ್ನ,**

1. ರನ್ನನ ಚರಿತೆಯನ್ನು ನೋಡಿ

ರನ್ನ, ಈ ಮೂವರೂ "ರತ್ನತ್ರಯ" ವೆನಿಸಿಕೊಂಡಿದ್ದಂತೆ ರನ್ನನ ಅಜಿತ ಪುರಾಣದಲ್ಲಿಯು—

ಕವಿಜನದೊಳ್ ರತ್ನತ್ರಯ | ಪವಿತ್ರರೆನೆ ನೆಗೞ್ದ ಪಂಪನುಂ ಪೊನ್ನಿಗನುಂ |
ಕವಿರತ್ನನುಮಿಾಮೂವರ್ | ಕವಿಗಳ್ ಜಿನಸಮಯದೀಪಕರ್ ಪೆಱರೊಳರೇ ||

ಎಂಬ ಪದ್ಯದಿಂದ ತಿಳಿಯುತ್ತದೆ.

ಈ ಕವಿ ಪಂಪನಂತೆಯೇ ಆವ ಹಿಂದಣ ಕವಿಯನ್ನೂ ಸ್ಮರಿಸಿಲ್ಲ. ಆದರೆ—

ಕನ್ನಡಕವಿತೆಯೊಳಸಗಂ | ಗನ್ನೂರ್ಮಡಿ ರೇಖೆಗಗ್ಗಳಂ ಸಕ್ಕದದೊಳ್ |
ಮುನ್ನುಳ್ಳ ಕಾಳಿದಾಸಂ | ಗನ್ನೂರ್ಮಡಿ ರಚನೆಯೊಳ್ ಕುರುಳ್ಗಳಸವಣಂ ||

ಎಂಬ ಪದ್ಯದಲ್ಲಿ ಹಿಂದೆ ಇದ್ದ ಕನ್ನಡಕವಿಯಾದ ಅಸಗನನ್ನೂ ಸಂಸ್ಕೃತಕವಿಯಾದ ಕಾಳಿದಾಸನನ್ನೂ ಹೇಳಿ ಅವರಿಗಿಂತ ತಾನು ಚತುರನೆಂದು ಹೇಳಿಕೊಳ್ಳುತ್ತಾನೆ.

ಈತನು ಸಂಸ್ಕೃತದಲ್ಲಿಯೂ ಕನ್ನಡದಲ್ಲಿಯೂ ತನಗಿರುವ ಪ್ರೌಢಿಯನ್ನೂ ಅದ್ವಿತೀಯಪಾಂಡಿತ್ಯವನ್ನೂ ಈ ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ :—

ದೊರೆಯಿಲ್ಲೆನೆ ಪೊರೆಯಿಲ್ಲೆನೆ | ನೆರಮಿಲ್ಲೆನೆ ಸಮಱೆ ಸಕ್ಕದಂ ಕನ್ನಡಮುಂ |
ಬೆರಡುಂ ಕವಿತೆಯುನಮುಳ್ವ | ತ್ತರಂತಿರೊಡನಡಪಿದಂ ಕುರುಳ್ಗಳಸವಣಂ ||

ಇದಿರ್ಗೆ ಬರೆ ಪೊನ್ನಿಗಂ ಕಿಡಿ | ಸದಿರಂ ಕವಿಗಮಕಿವಾದಿವಾಗ್ಮಿಗಳ ಕವಿ |
ತ್ವದ ಗಮಕಿತ್ವದ ವಾದಿ | ತ್ವದ ವಾಗ್ಮಿತ್ವದ ಪೊಡರ್ಪುಮಂ ದರ್ಪಮುಮಂ ||

ನೇರಿದುವೆನಿಪೆರಡುಂ ಕವಿ | ತಾರಸಮಿಾಸವಣನೊರ್ವನೊಳ್ ನೆಲಸಿದುವಿ |
ನ್ನಾರಾರ ಕವಿತ್ವಮುಮವಿ | ಚಾರಿತರಮಣೀಯಮಲ್ಲಿ ಪುರುಳಱಸುವುದೇ ||

ಎರಡೆಡೆಗೆ ವರ್ಪನುಂ ಮ | ಚ್ಚರಿಸುವನುಂ ನುಡಿಗೆ ಸಕ್ಕದಂ ಕನ್ನಡಮುಂ |
ಬೆರಡುಂ ಕವಿತೆಯು ಬಚ್ಚಿಗೆ | ಬೆರಲೆತ್ತಿದನಿಳೆಯೊಳೀ ಕುರುಳ್ಗಳಸವಣಂ ||

ಜಸವುಡಿಗಿಡೆ ಪೆಱರಿಂ ಪೇ | ೞಿಸದ ಪೆಸರ್ ಪೆಱರಪೆಸಿಸಿ ಪೆಱರಿಂದಂ ಸೋ |
ಲಿಸದ ಪೆಱಂಗಿಸಿಸೆಡೆಗುಡ | ದಸಹಾಯಕವೀಶ್ವರಂ ಕುರುಳ್ಗಳಸವಣಂ ||

ನೋಡಿರೆ ಪೇೞ್ವ ಮೂಱುವರೆ[1] ಭಾಷೆಗಳಂ ಪೆಱರರ್ಥಮಂ ಪೆಱರ್ |
ಮಾಡಿದ ದೇಸೆಯುಂ ಪೆಱರ ಬಿನ್ನಣಮುಂ ಪೆಱರೋಜೆಯುಂ ಕಡಂ ||
ಮಾಡುವ ಕಳ್ವ ಕೊಳ್ವ ಖಳರಿರ್ಕೆಮ ಕಬ್ಬಿಗಗಳ್ಳರೆಂದು ಕೂ |
ಸಾಡಿಸಲಾಗದಕ್ಕರದ ರಾಜ್ಯದೊಳೀಕವಿಚಕ್ರವರ್ತಿಯಾ ||

ಕಂಡೊಡನಾಡಿದಕ್ಕರಿಗನಕ್ಕರಿಗಂ ಗೆಡೆಗೊಂಡ ಪಂಡಿತಂ |
ಪಂಡಿತನೆಯ್ದೆ ಕಲ್ತ ಚದುರಂ ಚದುರಂ ಸಭೆಗುಕ್ತಿ ಮಂಡನಂ ||

1. 1ನೆಯ ನಾಗವರ್ಮನ ಚರಿತೆಯನ್ನು ನೋಡಿ.

ಮಂಡನಮುಜ್ವಳತೆಯುಂ ಕಿಡಿಸದಾಳ್ದ ನೃಪಂ ನೃಪನಿರ್ದ ಮಂಡಲಂ ।
ಮಂಡಲವೆಂದೊಡೆಯ್ದುಲರಿದುನ್ನತಿಯುಂ ಕವಿಚಕ್ರವರ್ತಿಯಾ ॥

ಈತನ ಗ್ರಂಥಗಳಲ್ಲಿ

## 1. ಶಾಂತಿಪುರಾಣ.

ಇದು 16 ನೆಯ ತೀರ್ಥಂಕರನಾದ ಶಾಂತಿನಾಥನ ಚರಿತವು; ಚಂಪೂರೂಪವಾಗಿದೆ; ಹನ್ನೆರಡು ಆಶ್ವಾಸಗಳಾಗಿ ಭಾಗಿಸಲ್ಪಟ್ಟಿದೆ. ಈ ಕಾವ್ಯಕ್ಕೆ ಕವಿ **ಪುರಾಣಚೂಡಾಮಣಿ** ಎಂಬ ಹೆಸರಿಟ್ಟಿರುವಂತೆ—

ಶಾಂತಿಜಿನಜನ್ಮಜಲಧಿಗೆ। ಶಾಂತಿಪುರಾಣಮೆ ಪರಾರ್ಥ್ಯರತ್ನಮಿದಂ ಪೇ ।
ಳ್ದಂತು ಕವಿಚಕ್ರವರ್ತಿಯೆ । ನೋಂತಂ ಪೆಸರಿಂ ಪುರಾಣಚೂಡಾಮಣಿಯಂ ॥

ಎಂಬ ಪದ್ಯದಲ್ಲಿಯೂ ಆಶ್ವಾಸಗಳ ಕೊನೆಯ ಗದ್ಯಗಳಲ್ಲಿಯೂ ಹೇಳುತ್ತಾನೆ. ಈ ಗ್ರಂಥವನ್ನು ಬರೆವುದಕ್ಕೆ ಕಾರಣವನ್ನು ಈ ರೀತಿಯಾಗಿ ಹೇಳುತ್ತಾನೆ:—

ವೆಂಗಿವಿಷಯದಲ್ಲಿಯ ಕಮ್ಮೆನಾಡಿನ ಪುಂಗನೂರೆಂಬ ಗ್ರಾಮದಲ್ಲಿ ಕೌಂಡಿನ್ಯಗೋತ್ರೋದ್ಭವನಾದ ಯಾಜ್ಞವಲ್ಕ್ಯಾನ್ವಯನಾದ ನಾಗಮಯ್ಯನೆಂಬ ಜೈನಬ್ರಾಹ್ಮಣನಿದ್ದನು. ಆತನಿಗೆ ಮಲ್ಲಪನೆಂದೂ ಪುನ್ನಮಯ್ಯನೆಂದೂ ಇಬ್ಬರು ಮಕ್ಕಳಿದ್ದರು. ಇವರು ತಮ್ಮ ಗುರುವಾದ ಜಿನಚಂದ್ರದೇವನ ಪರೋಕ್ಷವಿನಯಪ್ರದರ್ಶನಾರ್ಥವಾಗಿ ಒಂದು ಗ್ರಂಥವನ್ನು ಬರೆವಂತೆ ಕೇಳಿಕೊಳ್ಳಲು ಕವಿ ಈ ಗ್ರಂಥವನ್ನು ಬರೆದನು.

ಗ್ರಂಥಾವತಾರದಲ್ಲಿ ಶಾಂತಿನಾಥನನ್ನು ಸ್ತುತಿಸಿದ್ದಾನೆ. ಬಳಿಕ ಸಿದ್ಧಾಚಾರ್ಯೋಪಾಧ್ಯಾಯಸಾಧುಗಳನ್ನೂ ಯಕ್ಷ ಯಕ್ಷಿಗಳನ್ನೂ ಸರಸ್ವತಿಯನ್ನೂ ಕ್ರಮವಾಗಿ ನುತಿಸಿದ್ದಾನೆ. ತರುವಾಯ ಜಿನಚಂದ್ರಮುನಿಯ ಗುರುಪರಂಪರೆಯನ್ನು[1] ಕೊಟ್ಟು ಆ "ಜಿನಚಂದ್ರನಂ ಶಾಂತೀಶ್ವರಕಥೆಗೆ ಪತಿಯೆನಲ್ಕೆ ಪೇಳ್ದೆಂ ಕೃತಿಯಂ" ಎಂದು ಹೇಳಿ, ಗ್ರಂಥವನ್ನು ಬರೆಯಿಸಿದ ಮಲ್ಲಪಯ್ಯ ಪುನ್ನಮಯ್ಯರ ವಂಶಾವಳಿಯನ್ನು ವಿವರಿಸಿ ಕಥೆಯನ್ನು ಆರಂಭಿಸಿದ್ದಾನೆ. ಆಶ್ವಾಸಗಳ ಕೊನೆಯಲ್ಲಿ—

ಇದು ಜಿನೇಂದ್ರಚರಣಸರಸೀರುಹಶಿಲೀಮುಖಾಯಮಾನ ಶ್ರೀಮದುಭಯಕವಿಚಕ್ರವರ್ತಿನಿರ್ವರ್ತಿತಮುಂ ಅಮ್ಮನಭಕ್ತಾಭಿಧಾನವಿದ್ಯಾನಿಧಾನಮಲ್ಲಪಾರ್ಯ ತದನುಜಾತಾಭಿಜಾತಸಾರಸ್ವತಪುನ್ನಮಾರ್ಯಕಾರಿತಮುಮಪ್ಪ ಪುರಾಣಚೂಡಾಮಣಿಯೊಳ್

ಎಂಬ ಗದ್ಯವಿದೆ.

---

1. ಕಾನೂರ್ಗಣದ ಅರ್ಹದ್ಬಲಿ ಯತಿಯ ಶಿಷ್ಯ ಅರ್ಹಣಂದಿಯೋಗಿ; ಆತನ ಶಿಷ್ಯ ವೀರಣಂದಿಮುನಿ; ಅವನ ಶಿಷ್ಯ ಬೆಟ್ಟದರಾಮಣಂದಿ; ಆತನ ಶಿಷ್ಯ ಚಂಡಿನಂದಿ; ಅವನ ಶಿಷ್ಯನೇ ಕಥೆಗೆ ಪತಿಯಾದ ಜಿನಚಂದ್ರಮುನಿ; ಈತನು ಒಂದು ಪೂಜ್ಯಪಾದಚರಿತವನ್ನು ಬರೆದಿರುವಂತೆ ಕವಿ ಹೇಳುತ್ತಾನೆ.

ಇವನ ಬಂಧವು ಪ್ರೌಢವಾಗಿದೆ. ಈ ಪುರಾಣದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

### ಪ್ರಭಾತ.

ದೆಸೆಗಳ್ ಮೃಗಮದಕರ್ದಮ | ದೆಸಕದಿನಣ್ಪಿಕ್ಕಿ ಪಾಲೊಳೋಲಾಡಿದವೋಲ್ |
ಎಸೆದಿರ್ದುವೊಯ್ಯನೊಯ್ಯನೆ | ಮಸುಳ್ದುವು ತಾರಗೆಗಳೊಣಗಿದಗೆಗಳ ತೆಱದಿಂ ॥ 64 ॥

### ಚಂದ್ರೋದಯ.

ಉದಯಕ್ಷ್ಮಾಭೃತ್ತಟಂ ರಂಗಮನುಡುತತಿ ಪುಷ್ಪಾಂಜಲಿಕ್ಷೇಪಮಂ ಸ |
ರ್ವಿದಗುರ್ವಷ್ಟಂಧಕಾರಂ ನವಯುವನಿಕೆಯುಂ ನಾಲ್ಕುಜಾವಂಗಳುಂ ತ ॥
ಪ್ಪದೆ ನಾಲ್ಕಂಕಂಗಳಂ ಪೋಲ್ತಮರ್ದಿರೆ ಹಿಮಕ್ಷ್ಮಾಸ್ಫಾಟಿಕಾಸೂತ್ರಧಾರಾ |
ಭ್ಯುದಯಪ್ರಾರಂಭಮಿಂದ್ರಾಶೆಯೊಳೆಸೆಯೆನೆ ಚೆಲ್ವಾಯ್ತು ಶೀತಾಂಶುಬಿಂಬಂ ॥ 65 ॥

### ಮಾವು.

ಪುದಿದೆಳಗಾಯ್ಗಳ್ ಬಸಂತದ ಮೊದಲ್ ನೆರೆದೊಪ್ಪುವ ಮೋಱೆಗಾಯ್ಗಳ್ ಬಸಂ |
ತದ ನಡು ಪಣ್ ಬಸಂತದ ಸೆಱಂಗೆನೆ ತನ್ನಯಮುಪ್ಪಿನಂ ಬಸಂ ॥
ತದ ನಿಮಿದಾರ್ವಿ ಮುಗ್ಧಮವಸಾನಮೊಡಂಬಡೆ ತನ್ನೊಳಂ ಬಸಂ |
ತದೊಳಮರ್ದಂ ಬಸಂತದಪಗುಂತಿಗೆ ಬಾಱಿತ್ತುದಲಾಯ್ತು ಮಾಮರಂ ॥ 66 ॥

### ಸರಸ್ಸು.

ವಿದಳಿತಹೇಮತಾಮರಸಸಾಂದ್ರಲಸನ್ಮಕರಂದಸಿಕ್ತಷ |
ಟ್ಪದತತಿ ಪಾಯ್ದು ಪಾಯ್ದು ಸರಸೀರುಹದಿಂ ಸರಸೀರುಹಕ್ಕೆ ಪೋ ॥
ಲ್ತುದು [ಮಧುವುಂ] ಮನೋಭವನುಮಿಱ್ತಯೊಳಾಡುವ ಪೊನ್ನ ಬಟ್ಟನೊ |
ವೊರ್ದಲೆ ಮನೋಜಕಾಂತೆ ಮುಳಿಸಿಂ ಪೆಸೆಗೋವದೆ ಸೂಸುವಂದಮಂ ॥ 67 ॥

### ವನ.

ಮೆಯ್ಪಸಮೊಂದೆ ಪೂವಿನೊಳೆ ಪೋಗೆ ತೆಱಂದಿರಿದಳ್ಳಿಗೊಂಬಿನೊಳ್ |
ಪಾಯ್ವುದುಮೊಂದೆ ಪಣ್ಣ ರಸಮಂ ಸವಿಗಾಱದೆ ಚಂಚುವಂ ನೆಲ ॥
ಕ್ಕುಯ್ವುದುಮೊಂದೆ ಕೋರಕದೊಳಟ್ಟುಮೆವಟ್ಟವಚತ್ತು ಲಂಘನಂ |
ಗೆಯ್ವುದುಮಾದುದಾಮಧುಪಕೀರಪಿಕಾಳಿಗೆ ನಂದನಂಗಳೊಳ್ ॥ 68 ॥

ನಯಮುಳವಟ್ಟು ಪಚ್ಚೆ ಸಹಕಾರದೊಳಿಂಗುಳಿಕಂ ತಳಿರ್ತಶೋ |
ಕೆಯೊಳರಿದಾಳವುಳ್ಳಲರ್ದ ಸಂಪಗೆಯೊಳ್ ಕಡುಗರ್ಪು ಭೃಂಗಕೋ ॥
ಟಿಯೊಳೆಸೆದಿರ್ದ ನೀಲಿ ಗಿರಿಮಲ್ಲಿಗೆಯೊಳ್ ಸಮನಾಗೆ ಚೀರಘು |
ಟ್ಟಿಯೆ ಬರೆದಿಟ್ಟ ಚಿತ್ರದ ಬನಕ್ಕೆಣೆಯಾಯ್ತು ಬನಂ ವಿದೇಹದೊಳ್ ॥ 69 ॥

### ವಸಂತ.

ಸಕಲಮಧುವ್ರತಪ್ರಚಯಮೆಂಬ ಪಿಕಾವಳಿಯೆಂಬ ಸದ್ವಚ |
ಶ್ಶುಕಕುಳಮೆಂಬ ನೆಚ್ಚಿಸಿದ ಗಾಯಕಸತ್ತತಿಹಾರವೃತ್ತಪಾ ||
ರಕತತಿಗಿತ್ತನಗ್ಗಳದ ಮಾವಿನ ಪೂವಿನ ಮಾವಿನಂಕುರ |
ಪ್ರಕರದ ಮಾವಿನೊಳ್ತಿಡಿಯ.... ಜೀವಿತಮಂ ಬಸಂತದೊಳ್ || 70 ||

### ಅಶೋಕ.

ಭ್ರಾಜಿತಧೂಮಮಾಳೆ ಮಧುಪಾವಳಿ ಕೇಸುರಿ ಕೆಂದಳಿರ್ ತದು |
ರ್ವೀಜಮುದಗ್ರವಹ್ನಿಯೆನೆ ಯಾತ್ರೆಯೊಳಂಗಜಸಿಕ್ತಚಾಪಮಂ ||
ಪೂಜಿಸಿ ಮೀನಕೇತನಮನರ್ಚಿಸಿ ವಾಜಿಯನಾಜಿಗೆಂದು ನೀ |
ರಾಜಿಸಲೆಂದು ಪೊತ್ತಿಸಿದ ದೀಪ್ರಮೆನಿಪ್ಪುವು ತಳ್ತಶೋಕೆಗಳ್ || 71 ||

### ಮಲ್ಲಿಗೆ.

ಕುಸುಮಕುಲಕ್ಕೆ ನಿನ್ನರಸೆ ನಿನ್ನ ವಿಳಾಸಮೆ ನಿನ್ನ ಚೆಲ್ವೆ ನಿ |
ನ್ನೆಸಕಮೆ ನಿನ್ನ ಸಲ್ಗೆ ಮಧುಲಕ್ಷ್ಮಿಯೊಳಾಮಲಯಾನಿಲೇಂದುಗಳ್ ||
ಪೊಸಯಿಸೆ ನಿನ್ನ ಸೌರಭಮನೆಂದಭಿಷೇಕಪುರಸ್ಸರಂ ಸ್ಮರಂ |
ನಸುವಿರಿದಿರ್ದ ಮಲ್ಲಿಗೆಗೆ ಕಟ್ಟಿದನಂಕದ ರಾಜ್ಯಪಟ್ಟಮಂ || 72 ||

## 2. ಜಿನಾಕ್ಷರಮಾಲೆ.

ಇದು ಜಿನಸ್ತುತಿರೂಪವಾದ ಗ್ರಂಥವು; ಇದರಲ್ಲಿ 39 ಕಂದಪದ್ಯಗಳಿವೆ. ಈ ಪದ್ಯಗಳು ಕಕಾರದಿಂದ ಳಕಾರದ ವರೆಗೆ ವರ್ಣಾನುಕ್ರಮವಾಗಿ ಆರಂಭಿಸುವುದಲ್ಲದೆ ಅಂತಾದಿಯಾಗಿಯೂ ಇವೆ.

ಳಾಂತಂಬರಂ ಬುಧರ್ ಪೊಗ | ೞ್ವಂತಕ್ಕರಮಾಲೆಯುಂ ಜಿನಸ್ತವದೊಳಗೋ |
ರಂತಿರೆ ಪೇೞ್ದಂ ಹಿಮಸೇ | ತ್ವಂತವರಂ ಪರೆವಿನಂ ಕುರುಳ್ಗಳಸವಣಂ ||

ಎಂಬ ಕೊನೆಯ ಪದ್ಯದಿಂದ ಗ್ರಂಥರಚನಾಕ್ರಮವೂ ಕವಿಯ ಹೆಸರೂ ಗೊತ್ತಾಗುತ್ತವೆ.

ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

ಘನದುಷ್ಕೃತಬಳನಿರ್ವೇ | ದನಕರಚಾರಿತ್ರ ಚಿತ್ರಮಾಗಿರೆ ಪೊಗೞ್ಗಂ |
ಜಿನನಾಥ ಭವದ್ಗುಣಮಂ | ವಿನತೋರ್ವೀಜನಮನಂತ ಮತ್ತ್ರಿಸಜಾತ್ರಾ || 73 ||

[1] ಜವನಂ ಭಾವಲಯಂ ಸಿಂ | ಹವಿಷ್ಟರಂ ಚಮರಮುಮರತೂರ್ಯಮಶೋಕಂ |
ಧವಳಚ್ಛತ್ರಂ ಸುರಪು | ಷ್ಪವೃಷ್ಟಿ ಜಿನನಾಥ ನಿಮ್ಮೊಳೆಸೆವುದು ನಿಚ್ಚಂ || 74 ||

1. ಈ ಪದ್ಯವು ಶಬ್ದಾನುಶಾಸನದಲ್ಲಿ ಉದಾಹೃತವಾಗಿದೆ. ಸೂ. 65

ಝುಷಕುಲಿಶಾಂಕಿತಪದಯುಗ । ವೃಷಭಧ್ವಜ ವೃಷಭನಾಥ ಸುಚರಿತ್ರ ಗಜ ।
ದ್ವಿಷವಿಷ್ಟರ ಪೊಗಜಿಲ್ ವು । ದ್ವಿಷಯುವೆ ನಿನ್ನಮಲಗುಣಗಣಂ ಸರ್ವಜ್ಞಾ ॥ 75 ॥
ಜೊಬ್ಬಿನ ಸೊಡರಿಂ ಚರುವಿಂ । ಚಿಬ್ಬಂಬೊಯ್ದ್ದುಲಿಯಿನಲರಿನಕ್ಷತೆಯಿಂದಂ ।
ಮೆಬ್ಬರಿಸಿ ನಿನ್ನನರ್ಚಿಸಿ । ನಿಬ್ಬರವಾಗಿರ್ದ ನರಕಗತಿಯೊಳ್ ಬೀಳಿಂ ॥ 76 ॥

---

## ಚಾವುಂಡರಾಯ. 978.

ಈತನು ಚಾವುಂಡರಾಯಪುರಾಣವನ್ನು ಬರೆದಿದ್ದಾನೆ. ಈ ಗ್ರಂಥದ ಕೊನೆಯಲ್ಲಿರುವ—

ನವಶತಸಂಖ್ಯೆಯಾಗೆ ಶಕಕಾಲಸಮಂ ನೆಗಳ್ದೀಶ್ವರಾಬ್ದಮು ।
ತ್ಸವಕರಮಾಗೆ ಫಾಲ್ಗುಣಸಿತಾಷ್ಟಮಿ ರೋಹಿಣಿ ಸೋಮವಾರಮುಂ ॥
ಬಿವು ಶುಭದಂಗಳಾಗೆ ಪರಮೋತ್ಸವದಿಂ ಗುಣರತ್ನಭೂಷಣಂ ।
ಕವಿಜನಶೇಖರಂ ಬರೆದು ಪುಸ್ತಕಕೇಜಿಸಿದಂ ಪುರಾಣಮುಂ ॥

ಎಂಬ ಪದ್ಯದಿಂದ ಈ ಪುರಾಣವು ಶಕ 900 ನೆಯ ಈಶ್ವರ ಸಂವತ್ಸರದಲ್ಲಿ—ಎಂದರೆ ಕ್ರಿ. ಶ. 978 ರಲ್ಲಿ—ಹುಟ್ಟಿದಂತೆ ವ್ಯಕ್ತವಾಗುತ್ತದೆ. ಈ ಗ್ರಂಥದಿಂದ ಈತನ ವಿಷಯವಾಗಿ ಅನೇಕ ಸಂಗತಿಗಳು ತಿಳಿಯುತ್ತವೆ:—ಇವನು ಬ್ರಹ್ಮಕ್ಷತ್ರಿಯವಂಶದಲ್ಲಿ ಹುಟ್ಟಿದವನು. ಇವನಿಗೆ ಅಜಿತಸೇನಾಚಾರ್ಯಶಿಷ್ಯನಾದ "ಗಂಗಕುಲಾಬ್ಧಿಚಂದ್ರ, ಗಂಗಕುಲಚೂಡಾಮಣಿ, ಜಗದೇಕವೀರ, ಧರ್ಮಾವತಾರ, ನೊಳಂಬಕುಲಾಂತಕದೇವ" ಎಂಬ ಬಿರುದುಗಳುಳ್ಳ ರಾಚಮಲ್ಲನು (974-984) 'ಪರಮಸ್ವಾಮಿ.' ಈ ರಾಚಮಲ್ಲನಲ್ಲಿ ಈತನು ಸೇನಾನಾಯಕನಾಗಿಯೂ ಮಂತ್ರಿಯಾಗಿಯೂ ಇದ್ದನು. ಇವನೂ ಅಜಿತಸೇನಾಚಾರ್ಯನ ಶಿಷ್ಯನು. ಈತನು ಶ್ರವಣಬೆಳ್ಗೊಳದಲ್ಲಿ ಅಪರಿಮಿತವಾಗಿ ಧನವ್ಯಯಮಾಡಿ ಗೊಮ್ಮಟೇಶ್ವರಪ್ರತಿಷ್ಠೆಯನ್ನು ಮಾಡಿಸಿದನು. ರಾಚಮಲ್ಲನು ಇವನ ಔದಾರ್ಯಕ್ಕೆ ಮೆಚ್ಚಿ "ರಾಯ" ಎಂಬ ಬಿರುದನ್ನು ಕೊಟ್ಟನು. ಶ್ರ. ಬೆ. 345 ನೆಯ ಶಾಸನದಲ್ಲಿಯ—"ಸ್ಥಿರಜಿನಶಾಸನೋದ್ಧರಣರಾದಿಯೊಳಾರೆನೆ ರಾಚಮಲ್ಲಭೂ। ವರವರಮಂತ್ರಿ ರಾಯನೆ ಬಟಿಕ್ಕೆ ***" ಎಂಬ ಪದ್ಯಭಾಗದಲ್ಲಿಯೂ ಇವನಿಗೆ "ರಾಯ" ಎಂಬ ಹೆಸರು ಉಪಯೋಗಿಸಲ್ಪಟ್ಟಿದೆ. ಈತನಿಗೆ "ಅಣ್ಣ" ನೆಂದೂ ಒಂದು ಹೆಸರು ಇದ್ದಂತೆ ತಿಳಿಯುತ್ತದೆ. ಈತನು ಗೋವಿಂದರಾಜನನ್ನು ಬೆಂಕೊಂಡು ರಾಚಯನನ್ನು ಕೊಂದು ಕೀರ್ತಿಯನ್ನು ಹೊಂದಿದಂತೆ ಹೇಳಿಕೊಳ್ಳುತ್ತಾನೆ; ಬಹಳ ಪರಾಕ್ರಮಶಾಲಿಯಾಗಿದ್ದಂತೆ ತಿಳಿಯಬರುತ್ತದೆ. ತನಗೆ ಇದ್ದ ಬಿರುದುಗಳನ್ನೂ ಅವಕ್ಕೆ ಕಾರಣಗಳನ್ನೂ ಹೀಗೆ ಹೇಳುತ್ತಾನೆ:—

ಆಳ್ದನ ಬೆಸದಿಂ ಖೇಡಗಕಾಳೆಗದೊಳ್ ವಜ್ವಳದೇವನಂ ಗೆಲ್ದ ಸಾಹಸದಿಂ ಸಮರಧುರಂಧರಂ ; ಗೋನೂರ ಬಯಲೊಳ್ ಬಂದೊಡ್ಡಿದ ನೊಳಂಬರ ಕಾಳೆಗದೊಳ್ ಜಗದೇಕವೀರನಮುಂತೆ ತನ್ನ ಬಲಮಂ ಮೆಱೆದುದಱಿಂ ವೀರಮಾರ್ತಾಂಡಂ ; ಉಚ್ಚಂಗಿಯ ಕೋಟೆಯೊಳ್ ರಾಜಾದಿತ್ಯನೊಳ್ ಒರ್ವನೆ ರಣಮಂ ಮೆಱೆದುದಱಿಂದೆ ರಣರಂಗಸಿಂಗಂ ; ಬಾಗೆಯೂರ ಕೋಟೆಯೊಳ್ ತ್ರಿಭುವನವೀರನಂ ಕೊಂದು ಗೋವಿಂದರನಂ ಪುಗಿಸಿದುದಱಿಂ ವೈರಿಕುಲಕಾಲದಂಡಂ ; ನೃಪಕಾಮನ ಕೋಟೆಯೊಳ್ ರಾಜ, ಬಾಸ, ಸಿವರ, ಕೂಣಾಂಕ ಮೊದಲಾದ ಕಲಿಗಳಂ ಒಂದೆ ಮಯ್ಯೊಳ್ ಪೆಣೆವಿಱಿದುದಱಿಂ ಭುಜವಿಕ್ರಮಂ ; ತನ್ನ ತಮ್ಮನಂ ನಾಗವರ್ಮನಂ ಕೊಂದ ಪಗೆಗೆ ಚಲದಂಕಗಂಗನುಂ ಗಂಗರ ಭಟನುಮೆನಿಸಿದ ಮುದುರಾಚಯನಂ ಕೊಂದುದಱಿಂ ಸಮರಪರಶುರಾಮಂ, ಜಟ್ಟಿಗರನಟ್ಟಿದ ದಂಡಿನೊಳೆ ನಿಷ್ಕಂಟಕಂ ಮಾಡಿದುದಱಿಂ ಪ್ರತಿಪಕ್ಷರಾಕ್ಷಸಂ ; ವೀರಭಟಕೋಟಿಯುಂ ತವೆ ಕೊಂದುದಱಿಂ ಭಟಮಾರಿ ; ನಿಶ್ಶಂಕಾದಿಗುಣಪರಿರಕ್ಷಣೈಕಕಾರಣನಪ್ಪುದಱಿಂ ಗುಣವಂಕಾವಂ; ಸತ್ಯತ್ಯಾಗಾದಿಸಮನ್ವಿತನಪ್ಪುದಱಿಂ ಸಮ್ಯಕ್ತ್ವರತ್ನಾಕರಂ ; ಪರಾಂಗನಾಪರದ್ರವ್ಯಪರಾಙ್ಮುಖನಪ್ಪುದಱಿಂ ಶೌಚಾಭರಣಂ, ಪರಿಹಾಸದೊಳಂ ಸೂನೃತವಚನನಪ್ಪುದಱಿಂ ಸತ್ಯಯುಧಿಷ್ಠಿರಂ; ಅತಿಪ್ರಚಂಡವೀರಮಾಂಡಲಿಕಶಿಖಂಡಮಂಡನಮಣಿಯಪ್ಪುದಱಿಂ ಸುಭಟಚೂಡಾಮಣಿ.

ವೀರಮಾರ್ತಾಂಡನೆಂಬ ತನ್ನ ಬಿರುದನ್ನು—

ಚಂಡಪ್ರತಾಪರೂರ್ಜಿತ । ಮಂಡಲರಪ್ರತಿಮತೇಜರೆಂವೆಂದೆ ಭಯಂ ।
ಗೊಂಡೆಱಗುಗುಂ ಜನಂ ಮಾ । ರ್ತಾಂಡಂಗಂ ನೆಗೞ್ದ ವೀರಮಾರ್ತಾಂಡಂಗಂ ॥

ಎಂಬ ಪದ್ಯದಲ್ಲಿಯೂ ಹೇಳಿಕೊಂಡಿದ್ದಾನೆ. ಶ್ರ. ಬೆ. 281 ನೆಯ ಶಾಸನದಲ್ಲಿ (ಸು. 983) ಈತನ ವಿಜಯಗಳೂ ಬಿರುದುಗಳೂ ಹೇಳಿವೆ. ಈತನಿಗೆ 'ಗುಣರತ್ನಭೂಷಣ' 'ಕವಿಜನಶೇಖರ' ಎಂಬ ಬಿರುದುಗಳೂ ಇದ್ದಂತೆ ತಿಳಿಯುತ್ತದೆ. ಈತನು ಕವಿರನ್ನನಿಗೆ (993) ಪೋಷಕನಾಗಿದ್ದನೆಂದು ಅಜಿತಪುರಾಣದಿಂದ ತಿಳಿಯುತ್ತದೆ.

ಈತನ ಗ್ರಂಥ

## ಚಾವುಂಡರಾಯಪುರಾಣ ಅಥವಾ ತ್ರಿಷಷ್ಟಿಲಕ್ಷಣ ಮಹಾಪುರಾಣ.

ಇದು ಚತುರ್ವಿಂಶತಿತೀರ್ಥಕರರ ಚರಿತವು. ಈ ಮಹಾಪುರಾಣವನ್ನು ಆದಿಯಲ್ಲಿ ಕೂಚಿಭಟ್ಟಾರಕನೂ ನಂದಿಮುನೀಶ್ವರನೂ ವಿರಚಿಸಿದರು. ಅನಂತರ ಕವಿಪರಮೇಶ್ವರನು ತ್ರಿಷಷ್ಟಿಶಲಾಕಾಪುರುಷಪುರಾಣವನ್ನು ಬರೆದನು. ಅದನ್ನೇ ಜಿನಸೇನ ಮುನೀಶ್ವರನು "ಭವ್ಯಾಳಿಗೆ ಪೇೞ್ದು ಮಾಣೆ ಗುಣಭದ್ರಮುನೀಶ್ವರರ್

ತ್ರಿಷಷ್ಟಿಪುರುಷಪ್ರತಿಬಂಧಪುರಾಣ" ವನ್ನು ಬರೆದರು. ಆದನ್ನೇ ಚಾವುಂಡರಾಯನು "ಭವ್ಯಕೋಟಿಗೆ ಅಱಿಪಿದೆಂ" ಎಂದು ಹೇಳುತ್ತಾನೆ.

ಗ್ರಂಥಾವತಾರದಲ್ಲಿ ವೃಷಭಜಿನೇಂದ್ರಾದಿಚತುರ್ವಿಂಶತಿ ಜಿನರನ್ನು ಸ್ತುತಿಸುತ್ತಾನೆ. ಬಳಿಕ ಗೃಧ್ರಪಿಂಛಾಚಾರ್ಯನು ಮೊದಲುಗೊಂಡು ಅಜಿತಸೇನಾಚಾರ್ಯನ ವರೆಗೆ ಗುರುಗಳನ್ನು ಕ್ರಮವಾಗಿ ಸ್ತುತಿಸಿದ್ದಾನೆ.[1] ತರುವಾಯ (1) ಋಷಭ (2) ಅಜಿತ (3) ಶಂಭವ (4) ಅಭಿನಂದನ (5) ಸುಮತಿ (6) ಪದ್ಮಪ್ರಭ (7) ಸುಪಾರ್ಶ್ವ (8) ಚಂದ್ರಪ್ರಭ (9) ಪುಷ್ಪದಂತ (10) ಶೀತಲ (11) ಶ್ರೇಯಾಂಸ (12) ವಾಸುಪೂಜ್ಯ (13) ವಿಮಲ (14) ಅನಂತ (15) ಧರ್ಮ (16) ಶಾಂತಿನಾಥ (17) ಕುಂಥು (18) ಅರ (19) ಮಲ್ಲಿ (20) ಮುನಿಸುವ್ರತ (21) ನಮಿ (22) ನೇಮಿ (23) ಪಾರ್ಶ್ವ (24) ವರ್ಧಮಾನ, ಎಂಬ ಚತುರ್ವಿಂಶತಿ ತೀರ್ಥಕರರ ಚರಿತವನ್ನು ಬರೆದಿದ್ದಾನೆ.

ಗ್ರಂಥದ ಅಂತ್ಯದಲ್ಲಿ ಶ್ರುತಕೇವಲಿಗಳು, ಕೇವಲಿಗಳು, ದಶಪೂರ್ವಧರರು, ಏಕಾದಶಾಂಗಧರರು, ಆಚಾರಾಂಗಧರರು, ಪೂರ್ವಾಂಗದೇಶದೇಶಧರರು, ಇವರುಗಳ ಸಂಖ್ಯೆಯನ್ನೂ ಹೆಸರುಗಳನ್ನೂ ಹೇಳಿ, ಅನಂತರ ಅರ್ಹದ್ಬಲಿ, ಮಾಘಣಂದಿ, ಭೂತಬಲಿ, ಪುಷ್ಪದಂತ, ಶ್ಯಾಮಕುಂದಾಚಾರ್ಯ, ತೆಂಬುಳೂರಾಚಾರ್ಯ, ಸಮಂತಭದ್ರ, ಶುಭನಂದಿ, ರವಿನಂದಿ, ಏಲಾಚಾರ್ಯ, ವೀರಸೇನ, ಜಿನಸೇನ, ಇವರನ್ನು ಹೇಳಿ—

ಇಂತಯ್ಯತೊಂಬಜಿನಮುನಿ । ಸಂತತಿಯಿಂದಂ ಶ್ರುತಾವತಾರಂ ಧರೆಗೋ ।
ರಂತೆ ನಿಮಿರ್ದೆೞ್ದುದವರ್ಗಳ । ಸಂತತಿಯೊಳ್ ನೆಗೞ್ದರಜಿತಸೇನಾಚಾರ್ಯರ್ ॥

ಎಂದು ತನ್ನ ಗುರುಗಳ ವಿಷಯವನ್ನು ತಿಳಿಸಿದ್ದಾನೆ.

ಗ್ರಂಥದ ಅಂತ್ಯಭಾಗದಲ್ಲಿ ಮಾತ್ರ—

ಇದು ಸಕಲಭುವನಜನವಂದ್ಯಮಾನ ಸಂಯಮಸಮಾಧಾನವಿಜಿತದುರಿತಾರಾತಿಸೇನ ಶ್ರೀಮದಜಿತಸೇನಭಟ್ಟಾರಕಪಾದಪದ್ಮಪ್ರಸಾದಾಸಾದಿತರತ್ನತ್ರಯಾಲಂಕೃತ ಧರ್ಮವಿಜಯ ಶ್ರೀಮಚ್ಚಾವುಂಡರಾಯವಿರಚಿತಮಪ್ಪ ತ್ರಿಷಷ್ಟಿಲಕ್ಷಣಮಹಾಪುರಾಣದೊಳ್

1. ತತ್ತ್ವಾರ್ಥಸೂತ್ರವನ್ನು ಬರೆದ ಗೃಧ್ರಪಿಂಛಾಚಾರ್ಯ; ಕವಿತಾಚತುರನಾದ ಸಿದ್ಧಸೇನಾಚಾರ್ಯ; ತತ್ತ್ವಾರ್ಥಭಾಷ್ಯವನ್ನೂ ತರ್ಕಶಾಸ್ತ್ರವನ್ನೂ ಬರೆದ ಸಮಂತಭದ್ರ; ರತ್ನತ್ರಯವೆನಿಸಿದ ಸಮಂತಭದ್ರತ್ರಯ; ವ್ಯಾಕರಣಕರ್ತೃವೂ ಗಗನಗಮನಸಾಮರ್ಥ್ಯನೂ ತಾರ್ಕಿಕತಿಳಕನೂ ಆದ ಪೂಜ್ಯಪಾದಭಟ್ಟಾರಕ; ಚರಿತಪುರಾಣದಲ್ಲಿ ಒಂದನ್ನೂ ತ್ರಿಷಷ್ಟಿಶಲಾಕಾಪುರುಷರ ಪುರಾಣವನ್ನೂ ಬರೆದ ಕವಿಪರಮೇಶ್ವರ; ವೀರಸೇನಭಟ್ಟಾರಕ; ಜಿನಸೇನಭಟ್ಟಾರಕ; ಗುಣಭದ್ರದೇವ; ಸರ್ವಸಾಧುಭಟ್ಟಾರಕ; ಧರ್ಮಸೇನಾಚಾರ್ಯ; ಮುಳ್ಗುಂದದೊಳ್ ಸನ್ಯಸನವಂ ಮಾಡಪೋಗಿ ಬಳಿಕ ಕೊಪಣಾದ್ರಿಯಲ್ಲಿ ಮುಡಿಪಿದ ಸುಕುಮಾರಸೇನಮುನಿ; ನಾಗಸೇನ ವೀರಸೇನ ಚಂದ್ರಸೇನ ಮುನಿಪುಂಗವರು; ಆರ್ಯನಂದಿಮುನಿ; ನಯಸೇನಮುನಿಶಿಷ್ಯನೂ ತನ್ನ ಗುರುವೂ ಆದ ಅಜಿತಸೇನಾಚಾರ್ಯ.

ಎಂಬ ಗದ್ಯವಿದೆ. ಆದರೆ ಉಳಿದ ಕಡೆಯಲ್ಲಿ—

ಇದು ಸಕಲಶಾಸ್ತ್ರ ಸಂಯಮಸಂಪನ್ನ ಶ್ರೀಮದಜಿತಸೇನಭಟ್ಟಾರಕಚರಣಕಮಲ ಚಂಚರೀಕ ಧರ್ಮವಿಜಯ * * † ಪುರಾಣದೊಳ್

ಎಂದಿದೆ.

ಚಾವುಂಡರಾಯಪುರಾಣವು ಪ್ರಾಯಃ ಗದ್ಯರೂಪವಾಗಿದೆ. ಆದ್ಯಂತಗಳಲ್ಲಿ ಕೆಲವು ಪದ್ಯಗಳಿವೆ. ಗ್ರಂಥದ ಮಧ್ಯದಲ್ಲಿಯೂ ಅಲ್ಲಲ್ಲಿ ಒಂದೆರಡು ಪದ್ಯಗಳು ದೊರೆಯುತ್ತವೆ. ಇತರ ಕವಿಗಳು ಬರೆದಿರುವ ಜಿನಪುರಾಣಗಳು ಹೀಗಿಲ್ಲ; ಅವುಗಳಲ್ಲಿ ಅಲ್ಲಲ್ಲಿ ಗದ್ಯಗಳಿದ್ದರೂ ಪದ್ಯಗಳೇ ವಿಶೇಷವಾಗಿವೆ. ನೃಪತುಂಗನ ಕಾಲಕ್ಕೆ ಹಿಂದೆಯೇ ಕನ್ನಡದಲ್ಲಿ ಅನೇಕ ಗದ್ಯಗ್ರಂಥಗಳು ಹುಟ್ಟಿದುದಾಗಿ ತಿಳಿಯ ಬರುತ್ತದೆ. ಅವುಗಳಲ್ಲಿ ಆವುದೂ ದೊರೆತಿಲ್ಲ. ಈಗ ದೊರೆತಿರುವ ಗದ್ಯಗ್ರಂಥ ಗಳಲ್ಲಿ ಚಾವುಂಡರಾಯಪುರಾಣವೇ ಅತಿಪುರಾತನವಾದುದು. ಈ ದೊಡ್ಡ ಗದ್ಯಗ್ರಂಥವು ಹತ್ತನೆಯ ಶತಮಾನದ ಭಾಷಾಶೈಲಿಯನ್ನು ತಿಳಿವುದಕ್ಕೆ ಬಹಳ ಉಪಯೋಗವಾದ ಸಾಧನವಾಗಿದೆ.

ಈ ಗ್ರಂಥದಿಂದ ಒಂದೆರಡು ಪದ್ಯಗಳನ್ನೂ ಸ್ವಲ್ಪ ಗದ್ಯಭಾಗವನ್ನೂ ಉದ್ಧ ರಿಸಿ ಬರೆಯುತ್ತೇವೆ—

### ಚಾವುಂಡರಾಯನ ಕೀರ್ತಿ.

ಸುರಶೈಲಂ ಪಿರಿದಲ್ತು ವಾರ್ಧಿ ಪಿರಿದಲ್ತಾಮೇರುಗಂ ವಾರ್ಧಿಗಂ ।
ಪಿರಿದುರ್ವೀತಳಮಲ್ತು ಮೇರುಗಿರಿಗಂ ವಾರಾಶಿಗಂ ಧಾತ್ರಿಗಂ ॥
ಪಿರಿದಾಶಾಂತರಮಲ್ತು ಮಂದರಸಮುದ್ರೋರ್ವೀದಿಗಂತಂಗಳಿಂ ।
ಪಿರಿದುಗ್ರಾರಿಜಯಾರ್ಜಿತೋರ್ಜಿತಯಶಂ ಶ್ರೀವೀರಮಾರ್ತಾಂಡನಾ ॥ 77 ॥

### ವಸಂತ.

ಕಳಕಂಠೀನಾದಮಾದಂ ಬಗೆಗೊಳೆ ಲಲಿತಾಶೋಕಧಾತ್ರೀರುಹಂ ಕ ।
ಣ್ಗೊಳೆ ಚೇತೋಹಾರಿಚೂತದ್ರುಮಮವನಿಜನಪ್ರೇಮಮಂ ಶೋಭೆಯಿಂದೀ ॥
ಟ್ಗೊಳೆ ಕಾಮಂ ಪೂವಿನಂಬಂ ತೆಗೆದುಕೊಳೆ ಮುಗುಳ್ಮಲ್ಲಿಕಾಮಾಲೆ ಚಿತ್ತಂ ।
ಗೊಳೆ ಬಂದತ್ತಂದು ಮಾದ್ಯನ್ಮಧುಕರಕುಳಝುಂಕಾರಕಾಂತಂ ವಸಂತಂ ॥ 78 ॥

### ಸೀತಾಪಹಾರ.

ರಾವಣಂ ಶೂರ್ಪನಖಿಯ ಮಾತಂ ನಿಶ್ಚಯಿಸಿ ಮಾರೀಚಂಬೆರಸು ಪುಷ್ಪಕವಿಮಾ ನಾರೂಢನಾಗಿ ನಭಸ್ಸ್ಥಲಕ್ಕೊಗೆದು ಚಿತ್ರಕೂಟೋದ್ಯಾನವನಮನೆಯ್ದಿ ಮಾರೀಚನಂ ಪರಾರ್ಥ್ಯಮಣಿಹರಿಣಪೋತಕಂಮಾಡಿ ಸೀತೆಯ ಮುಂದೆ ಸುಳಿಯಲ್ವೇಳ್ದೊಡದಂ

ಸೀತೆ ಕಂಡರಸಂಗೆ ತೋಱೆ ವಿಚಿತ್ರವರ್ಣಮೃಗಮಿದು ರಾಜಭವನಯೋಗ್ಯಮೆಂಬುದು ಮರಸನಾಕೆಯ ಬೞಿಯಂ ತೀರ್ಚಲೆಂದು ಮೃಗದ ಬೞಿಯಂ ತಗುಳ್ದೊಡದು ದೂರಮುಮಾಸನ್ನಮುಮಲ್ಲದಾಸೆದೋಱೆ ಕಿಱಿದೆಡೆಯನುಯ್ದಾಕಾಶಕ್ಕೆ ಪಾಱುವುದುಮದಱ ಪೋಬೞಿಯನಱಿಯದೆ ಮಗುೞ್ವನನ್ನೆಗಮಿತ್ತ ರಾವಣಂ (ರಾಮ) ವೇಷಧರನಾಗಿ ಸೀತೆಯಲ್ಲಿಗೆ ವಂದು, ಮಣಿಮೃಗಪೋತಕಮಂ ಪಿಡಿದು ಪೊೞಲ್ಗಟ್ಟಿದೆನೀಗಳಸ್ತಮಯ ಸಮಯಮಾದುದು ಪೊೞಲ್ಗೆ ಪೋಪಂ ಸಿಬಿಗೆಯನೇಱೆಂದು ಶಿಬಿಕಾಕಾರಮಾಗಿರ್ದ ಪುಷ್ಪಕವಿಮಾನಮನೇಱಿಸಿ ಸಿಬಿಗೆಯ ಕೆಲದೊಳ್ ತಾನುಂ ತುರಗಾರೂಢನಾಗಿ ಬರ್ಪಂದಮಂ ಮಾಯೆಯಿಂ ಮಾಡಿ ತನಗೆ ಮೃತ್ಯುದೇವತೆಯನುಯ್ವಂತುಯ್ದು ಲಂಕೆಯನೆಯ್ದಿ ಪೊಱಪೊೞಲೊಳಿರ್ದು ಮಾಯಾವಿಧಿಯಂ ಪಿಂಗಿಸಿ ತನ್ನ ತಂದಾವೃತ್ತಾಂತಮನಱಿಪಿ ಹರಿನೀಲೋಜ್ಜ್ವಲವರ್ಣಮಪ್ಪ ನಿಜರೂಪಮಂ ತೋಱೆ. ಜನಕಾತ್ಮಜೆ ಲಜ್ಜೆಯೊಳಂ ಭಯದೊಳಂ ರಾಮನ ವಿರಹದೊಳಂ ಮೂರ್ಛಾಗತೆಯಾಗೆ, ಶೀಲವತಿಯಪ್ಪ ಸೀತೆಯ ಕೋಮಲಾಂಗಸ್ಪರ್ಶನದಿನಾಕಾಶಗಾಮಿನಿವಿದ್ಯಾವಿನಾಶಮಕ್ಕುಮೆಂಬ ಭಯದಿಂ ಮುಟ್ಟಲಂಜ ವಿದ್ಯಾಧರಿಯರಂ ಬರಿಸಿ ಶೀತಲಕ್ರಿಯೆಗಳಿಂ ಸೀತೆಯನೆೞ್ಚಱಿಸಿದೊಡಿದಾವ ಪ್ರದೇಶಮೆನೆ, ಲಂಕಾಪುರಬಹಿರುದ್ಯಾನವಿಹಾರಪ್ರದೇಶಮಿಲ್ಲಿಗೆ ನಿನ್ನಂ ರಾವಣಂ ತಂದನಾತಂಗೆ ನೀಂ ಮಹಾದೇವಿಯಾಗಿ ಶೀಲವತಿಯಪ್ಪಳಂ ಸುಖಮಿರ್ಪುದು ಪೆಱದಂ ಬಗೆಯದಿರೆಂಬುದುಮದಂ ಕೇಳ್ದು ಶೋಕಾಕುಳೆಯಾಗಿ ವಿನಶ್ವರಾತ್ಮಕಮಪ್ಪೀಲಿಗ ಮಸುಗಮೆನ್ನ ಶೀಲಮಂ ಕಿಡೆ ನೆಗೞ್ವನಲ್ಲೆನೆನ್ನರಸನಂ ಕಾಣ್ಬನ್ನೆಗಮಾರೊಳಂ ನುಡಿವೆನಲ್ಲೆನಾತನ ಕ್ಷೇಮವಾರ್ತೆಯಂ ಕೇಳ್ವನ್ನೆಗಮಾನುಣಸಲ್ಲೆನಾತಂಗೆ ಪೊಲ್ಲದಾದಂದು ಬಾಹ್ಯಾಭ್ಯಂತರಗ್ರಂಥಪರಿತ್ಯಾಗದಿಂ ಸನ್ನ್ಯಸನಂಗೆಯ್ದು ಸಾವೆನೆಂದು ಪರಿಚ್ಛೇದಂಗೆಯ್ದು ದಿವಮಾ (?) ಲಕ್ಷಣಮಪ್ಪ ಕೇವಲಾಭರಣಂಗಳನಿರಲಿತ್ತು ಬೞಿದುವನೆಲ್ಲಮಂ ಕಳೆದು ನೀಮಿನ್ನೆನ್ನಂ ಮುಟ್ಟದಿರಿಮೆಂದು ಖೇಚರಿಯರಂ ಬಾರಿಸಿ ಮೌನವ್ರತದಿಂದಿರ್ಪಿನಂ ಲಂಕೆಗೊಳನೇಕಮುತ್ಪಾತಂಗಳಾಗೆ ಚಕ್ರರತ್ನಮಾಯುಧಾಗಾರದೊಳ್ ಪುಟ್ಟೆ ತದುತ್ಪಾತಂಗಳಂ ಕಂಡು ಬೆಱಗಾಗಿ ಪುರೋಹಿತಾದಿಗಳ್ ಬಂದ ಸೀತೆಯಂ ತಂದು ಪೊಲ್ಲಕೆಯ್ದೆ, ನಿನಗಹಿತಮುಮಪಖ್ಯಾತಿಯುಮಪ್ಪಂತು ಮಾಡಿದೆಯಿಂ ಮಗುೞ್ಚಿ ಕುಡುವುದೊಳ್ಳಿತೆನೆ, ರಾವಣಂ ಸೀತೆಯಂ ತಂದ ಕಾರಣದಿನೆನಗೆ ಸಕಲಭುವನಾಧಿಪತ್ಯಮಂ ಮಾೞ್ಪ ಚಕ್ರಂ ಪುಟ್ಟಿದುದದಱಿಂ ನೀಮಿದರ್ಕೆ ಮಾರ್ಕೊಳ್ಳದಿರಿಮೆಂದು ಬಾರಿಸಿದಂ ॥ 79 ॥

---

## ಕಮಳಾದಿತ್ಯ. 978.

ಈತನು ಬೆಳ್ಗಾಂ ಡಿಸ್ಟ್ರಿಕ್ಟಿನಲ್ಲಿಯ ಸೊಗಲ್ ಎಂಬ ಗ್ರಾಮದಲ್ಲಿರುವ ಒಂದು ಶಾಸನವನ್ನು[1] ಬರೆದುದಾಗಿ ಆ ಶಾಸನದ ಕೊನೆಯಲ್ಲಿರುವ

1. *Epigraphia Indica*, XVI, 3

ಭ ವನಂ ವನನಿಧಿ ಸುರಗಿರಿ । ದಿವಕುಳಮಿನಚಂದ್ರರುಳ್ಳಿನಂ ಧರ್ಮವಿದು ।
ಧ್ರುವವಾಗಿ ನಡೆಗೆ ಶಾಸನ । ಕವಿ ಕಮಳಾದಿತ್ಯರಚಿತಕಾವ್ಯಾದೇಶಂ ॥

ಎಂಬ ಪದ್ಯದಿಂದ ತಿಳಿಯುತ್ತದೆ. ಇವನು ಬ್ರಾಹ್ಮಣಕವಿಯೆಂದು ತೋರುತ್ತದೆ. ಈ ಶಾಸನದಲ್ಲಿ ಚಾಳುಕ್ಯರಾಜನಾದ ನೂರ್ಮಡಿ ತೈಲನ ಆಳಿಕೆಯಲ್ಲಿ ಕಂಚಿಯಬ್ಬೆ ಸುವರ್ಣಾಕ್ಷಿ ದೇವಾಲಯಕ್ಕೆ 978 ರಲ್ಲಿ ದತ್ತಿಯನ್ನು ಬಿಟ್ಟಂತೆ ಹೇಳಿದೆ. ಇದರಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

### ಸುವರ್ಣಾಕ್ಷಿ ದೇವಸ್ಥಾನದ ಪ್ರದೇಶ

ಪಂಕಜಷಂಡದಿಂದೆಸೆವ ನೆಯ್ದಿಲ ಪೂಗೊಳದಿಂ ತಳಿರ್ತ ಮಾ ।
ವಿಂ ಕುಸುಮೋದಿತಂ ಕೊಸಗು ಪಾದರಿ ನೇಱಲಶೋಕೆ ಬಾೞೆಯಿಂ ॥
ಬಂಕದ ವೃಕ್ಷಜಾತಿಗಳಿಸಂಚರದಿಂ ಪುಗಲೆಂಬ ಕೋಕಿಲಾ ।
ಳಂಕೃತದಿಂದೆ ಸಾಲ ಬನಮೊಪ್ಪುವುದೀವಿಷಯಾಂತರಾಳದೊಳ್ ॥ 80 ॥

ಪುಲಿಗಳ್ ಧರ್ಮಶ್ರವಣಮು । ನೆಲೆ ವಿಡುಕದೆ ಕೇಳುತಿರ್ಪ ವರಗಿಳಿಗಳ್ ನಿ ।
ರ್ಮಲಮುನಿಪರೋದುವೋದಂ । ಚಳವಾಪಡೆಯುೞಿವು ಪೇಱ್ವವಿರುಳುಂ
ಪಗಲುಂ ॥ 81 ॥

ಪಾಪಿ ಪುಗಲ್ ಪುಗಲುಗ್ರದ । ಕೋಪಿ ಪುಗಲ್ ಪುಗಲಶೇಷಧರ್ಮದ್ರೋಹ ।
ವ್ಯಾಪಾರಿ ಪುಗಲ್ ಪುಗಲೆಂ । ದಾಪೊಟ್ಟಿಂ ಕೋಕಿಲಂಗಳುಲಿಗುಂ ಬನದೊಳ್ ॥ 82 ॥

ಗಱಿಪುವರಗಿಳಿಯು ಕುಕಿಲುವ । ಕಳಹಂಸೆಯು ಗಾವರಿಪ್ಪ ಪೆಣ್ದುಂಬಿಯು ಬಾ ।
ವಳಿಸುವ ಪುರುಳಿಯ ಕೋಡಂ । ಗಳ ನಗಿಸುವ ರವಮೆ ನಗದ ನಾಲ್ಕುಂದೆಸೆಯೊಳ್ ॥ 83 ॥

### ಕಂಚಿಯಬ್ಬೆ

ಹರಚರಣಾಬ್ಜಭೃಂಗಿ ಕಪಟೋದಯವರ್ಜಿತೆ ನಿರ್ಮಲಾಂಗಿ ಭಾ ।
ಸುರತರಮೂರ್ತಿ ನಿರ್ಮಳಿನಕೀರ್ತಿ ದಯಾಪರೆ ದಾನಧರ್ಮತ ॥
ತ್ಪರಗುಣಯುಕ್ತೆ ದೇವಗುರುಭಕ್ತೆ ಸುಗೋತ್ರಪವಿತ್ರೆಯೆಂದು ವಿ ।
ಸ್ತರದೊಳೆ ಕೀರ್ತಿಕುಂ ವಸುಧೆ ಸಂತಸದಿಂದಮೆ ಕಂಚಿಕಬ್ಬೆಯಂ ॥ 84 ॥

### ಫಲಸ್ತುತಿ

ಮೇಳಿಸಿ ನಾಯುಡಗಂ ಚಂ । ಡಾಳಿ ಕಪಾಳದೊಳೆ ಕಳ್ಳನೆಱೆದಡುತುಂ ತ ।
ತ್ಕಾಳದೆ ಕೆರ್ಪಿನಂ ಮುಚ್ಚಿಸ । ಮಾಳೋಕದೊಳಿಂದ್ರನಾಕೆಯುಂ ಬೆಸಗೊಂಡಂ ॥
ದೇವಸ್ವಂ ಬ್ರಹ್ಮಸ್ವಮ । ನಾವು. . . .ಂದ ಪಾತಕನ ಪಾದರಜಂ ।
ಭಾವಿಸಲಘೋಜ್ರಮೆನಲಾ । ದೇವಸ್ವಮನೞಿವನಿಂ ನಿಕೃಷ್ಟರುಮೊಳರೇ[1] ॥ 85 ॥

1. ಇಂದ್ರಃ ಪೃಚ್ಛತಿ ಚಂಡಾಲೀಂ ಕಿಮಿದಂ ಪಚ್ಯತೇ ತ್ವಯಾ ।
ಶ್ವಮಾಂಸಂ ಸುರಯಾ ಸಿಕ್ತಂ ನೃಕಪಾಲೇ ಚಿತಾಗ್ನಿನಾ ॥
ದೇವಬ್ರಾಹ್ಮಣವಿತ್ತಾನಿ ಬಲಾದಪಹರಂತಿ ಯೇ ।
ತೇಷಾಂ ಪಾದರಜೋಭೀತ್ಯಾ ಚರ್ಮಣಾ ಪಿಹಿತಂ ಮಯಾ ॥

# ನಾಗವರ್ಮ.

## ವಿಚಾರಂ.

ಈ ಹೆಸರಿನವರು ಇಬ್ಬರು ಕವಿಗಳು ಇದ್ದಂತೆ ತಿಳಿಯಬರುತ್ತದೆ. ಛಂದೋಂಬುಧಿಯನ್ನೂ ಕಾದಂಬರಿಯನ್ನೂ ಬರೆದವನು ಒಬ್ಬ ನಾಗವರ್ಮನೆಂದೂ, ಕಾವ್ಯಾವಲೋಕನ ವಸ್ತುಕೋಶ ಕರ್ಣಾಟಕಭಾಷಾಭೂಷಣಗಳನ್ನು ಬರೆದವನು ಬೇರೊಬ್ಬ ನಾಗವರ್ಮನೆಂದೂ ನಿರ್ಧರಿಸುವುದಕ್ಕೆ ಸಾಕಾದ ಕಾರಣಗಳಿವೆ.

ಮ॥ ಕಿಟ್ಟಲ್ ಅಚ್ಚುಹಾಕಿಸಿರುವ ಛಂದೋಂಬುಧಿಯಲ್ಲಿ ಗ್ರಂಥಾದಿಯಲ್ಲಿದ್ದ ಮಂಗಳಶ್ಲೋಕಗಳಲ್ಲಿ ಕವಿಯ ಕಾಲವೇ ಮೊದಲಾದ ಅಂಶಗಳನ್ನು ನಿಶ್ಚಯಿಸುವುದಕ್ಕೆ ಸಹಕಾರಿಯಾದ ಕೆಲವು ಪದ್ಯಗಳು ಬಿಟ್ಟುಹೋಗಿವೆ. ನಾವು ನೋಡಿದ ನಾಲ್ಕು ಓಲೆಯ ಪುಸ್ತಕಗಳಲ್ಲಿಯೂ—

ಅರಸಂ ರಕ್ಕಸಗಂಗಂ। ಗುರುಗಳ್ ನೆಗಳ್ದಜಿತಸೇನದೇವರ್ ಗಯಿಯಿಂ।
ಪೊರೆವ ನೃಪನಣ್ಣನೆನೆ ಮ। ಚ್ಚರಿಸುವರಾರ್ ನಾಕಿಯಿರುಳೊಳೇಂ ಪುಟ್ಟಿದನೇ॥
ಗಂಡರ ಮೂಕುತಿಯೆನಿಸಿದ। ಮಾಂಡಳಿಕರ ಮಂತ್ರಿ ಸಂಧಿವಿಗ್ರಹಿ ರಾಯಂ।
ಕೊಂಡಾಡಿ ಪೊರೆದನೆನೆ ಧರೆ। ಕೊಂಡಾಡದೆ ಕೊಂಡುಕೊನೆಯದೇ ನಾಕಿಗನಂ॥

ಎಂಬ ಪದ್ಯಗಳು ದೊರೆಯುತ್ತವೆ. ಈ ಪದ್ಯಗಳಿಂದ ಛಂದೋಂಬುಧಿಯನ್ನು ಬರೆದ ನಾಗವರ್ಮನ ಕಾಲವನ್ನು ನಿಸ್ಸಂದೇಹವಾಗಿ ನಿಶ್ಚಯಿಸಬಹುದು :

1. (1) ರಕ್ಕಸಗಂಗ.—ಈ ರಾಜನು ರಾಚಮಲ್ಲನ (974—984) ತಮ್ಮನೆಂದೂ ಆತನ ಕಾಲವಾದಮೇಲೆ ಸುಮಾರು 984 ರಿಂದ ರಾಜ್ಯಭಾರಮಾಡಿದನೆಂದೂ ಶಾಸನಗಳಿಂದ ತಿಳಿಯಬರುತ್ತದೆ. (2) ಅಜಿತಸೇನದೇವ.—ಇವನು ರಾಚಮಲ್ಲನಿಗೂ ಆತನ ಮಂತ್ರಿಯಾದ ಚಾವುಂಡರಾಯನಿಗೂ ಗುರು. (3) ಅಣ್ಣ; ರಾಯ.—ಈ ಹೆಸರುಗಳು ಚಾವುಂಡರಾಯನಿಗೆ ಉಂಟೆಂದು ಅವನ ಚರಿತೆಯಲ್ಲಿ ತಿಳಿಸಿದ್ದೇವೆ. ಆದುದರಿಂದ ಈ ನಾಗವರ್ಮನು ರಕ್ಕಸಗಂಗನ ಕಾಲದಲ್ಲಿ ಚಾವುಂಡರಾಯನಿಂದ ಪೋಷಿತನಾಗಿಯೂ ಅಜಿತಸೇನದೇವನ ಶಿಷ್ಯನಾಗಿಯೂ ಇದ್ದನೆಂಬುದು ವ್ಯಕ್ತವಾಗದಿರಲಾರದು.

ಅಲ್ಲದೆ ಕಾದಂಬರಿಯ ಕೊನೆಯಲ್ಲಿ ಕುದುರೆಗಳನ್ನು "ಸತ್ಕೃತಿವನಿತಗಿದೌ ಚಿತ್ರಮೆಂದಿತ್ತನಶ್ವತ್ತವಮಿಂ ವಿದ್ವತ್ಸಭಾಮಂಡಲಿ ತಣಿವಿನೆಗಂ ಭೋಜರಾಜಕ್ಷಿತೀಶಂ" ಎಂದು ಹೇಳಿದೆ. ಧಾರಾಪುರದ ಭೋಜರಾಜನು 10 ನೆಯ ಶತಮಾನದ ಅಂತ್ಯಭಾಗದಲ್ಲಿ ಆಳುವುದಕ್ಕೆ ಆರಂಭಿಸಿದಂತೆ ತಿಳಿಯುತ್ತದೆ. ಮೇಲಣ ಪದ್ಯಭಾಗದಲ್ಲಿ ಹೇಳಿರುವ ಭೋಜರಾಜನು ಇವನೇ ಆಗಿರಬಹುದು. **ಈ ಕಾರಣಗಳಿಂದ ಈ ನಾಗವರ್ಮನು ಸುಮಾರು 990 ರಲ್ಲಿ ಇದ್ದಿರಬೇಕು.**

ಕಾವ್ಯಾವಲೋಕನದಲ್ಲಿ—

ಪ್ರಣುತಗುಣರೆನಿಪ ವಿಬುಧಾ । ಗ್ರಣಿಗಳ್ ಕೆಯ್ಕೊಂಡುಪೊಗಟ್ಟಿ ಸಲೆ ನೆಗಟ್ದುವುಧಾ ।
ರಿಣಿಯೊಳಗೆ ನಾಗವರ್ಮನ । ಗುಣವರ್ಮನ ಶಂಖವರ್ಮನಧ್ಯಾನಂಗಳ್ ॥

ಎಂಬ ಪದ್ಯವು ಉದಾಹೃತವಾಗಿದೆ. ಇದರಿಂದ ಈ ಗ್ರಂಥಕರ್ತೃವಾದ ನಾಗವರ್ಮನಿಗೆ ಹಿಂದೆಯೇ ಬೇರೆ ಒಬ್ಬ ಲಕ್ಷಣಗ್ರಂಥಕಾರನಾದ ನಾಗವರ್ಮನು ಪ್ರಖ್ಯಾತನಾಗಿದ್ದನೆಂಬುದು ವ್ಯಕ್ತವಾಗುತ್ತದೆ. ಅಲ್ಲದೆ ಕಾವ್ಯಾವಲೋಕನವನ್ನು ಬರೆದ ನಾಗವರ್ಮನಿಗೆ ಅದೇ ಗ್ರಂಥದಲ್ಲಿಯು—

ಅಭಿಮತಶಬ್ದಸಂಸ್ಕರಣದಿಂ ಜನಮುಂ ತಿಳಿವಂತುಮಾಡಿ ನಾ ।
ಗಭವಮುದಪ್ರತರ್ಕ್ಯಮೆನೆ ಸಂದೆಸಕಂ ದೆಸೆಯುಂತನೆಯ್ದೆ ತ ॥
ತ್ಸಭೆಯೊಳಗಗ್ರಪೂಜೆವಡೆದೊಂದು ಮಹಾಮಹಿಮಾನುಭಾವದಿಂ ।
ದಭಿನವಶರ್ವವರ್ಮನಿವನೆಂದಪುದುರ್ವರೆ ನಾಗವರ್ಮನಂ ॥

ಎಂಬ ಪದ್ಯದಿಂದ **ಅಭಿನವಶರ್ವವರ್ಮ** ನೆಂಬ ಬಿರುದಿದ್ದಂತೆ ತಿಳಿಯುತ್ತದೆ.

ಜನ್ನನು ಅನಂತನಾಥಪುರಾಣದಲ್ಲಿ—ಜನನಾಥಂ ಜಗದೇಕನಲ್ಲಿ ಕಟಕೋಪಾಧ್ಯಾಯನಾನಾಗವ । ರ್ಮನಿದಾನೀಂತನಶರ್ವವರ್ಮನೆ ಗಡಂ ಜನ್ನಂಗುಪಾಧ್ಯಾಯಂ**— ಎಂಬುದರಿಂದ **ಇದಾನೀಂತನಶರ್ವವರ್ಮ**ನೆನಿಸಿದ ನಾಗವರ್ಮನು ಜನ್ನನಿಗೆ ಉಪಾಧ್ಯಾಯನಾಗಿದ್ದಂತೆಯೂ ಜಗದೇಕನಲ್ಲಿ ಕಟಕೋಪಾಧ್ಯಾಯನಾಗಿದ್ದಂತೆಯೂ ತಿಳಿಯುತ್ತದೆ. ಈ ನಾಗವರ್ಮನೇ ಕಾವ್ಯಾವಲೋಕನವನ್ನು ಬರೆದವನಾಗಿರಬೇಕು. ಚಾಳುಕ್ಯರಾಜರಲ್ಲಿ ಜಗದೇಕಮಲ್ಲ ಎಂಬವನು 1138 ರಿಂದ 1150 ರ ವರೆಗೆ ಆಳಿದ ಹಾಗೆ ತಿಳಿಯಬರುತ್ತದೆ. **ಆದುದರಿಂದ ಈ ನಾಗವರ್ಮನು ಸುಮಾರು 1145 ರಲ್ಲಿ ಇದ್ದಿರಬೇಕು.** ಜನ್ನನು 1209 ರಲ್ಲಿ ಯಶೋಧರಚರಿತವನ್ನೂ 1230 ರಲ್ಲಿ ಅನಂತನಾಥಪುರಾಣವನ್ನೂ ಬರೆದಂತೆ ಆ ಗ್ರಂಥಗಳಿಂದ ತಿಳಿಯಬರುವುದರಿಂದ ಈ ನಾಗವರ್ಮನು ಜನ್ನನಿಗೆ ಉಪಾಧ್ಯಾಯನಾದಾಗ ಬಹಳ ವೃದ್ಧನಾಗಿದ್ದಿರಬೇಕು.

II. (1) ಛಂದೋಂಬುಧಿಯನ್ನು ಬರೆದ ನಾಗವರ್ಮನು ತನ್ನ ತಂದೆ ವೆಣ್ಣಮಯ್ಯನೆಂದು ಹೇಳಿಕೊಂಡಿದ್ದಾನೆ. ಎರಡನೆಯ ನಾಗವರ್ಮನು ಕಾವ್ಯಾವಲೋಕನದ ಕೊನೆಯಲ್ಲಿ "ಪೇಟ್ದಂ ದಾಮೋದರತನಯನೀವಚೋಲಂಕೃತಿಯಂ" ಎಂದೂ ವಸ್ತುಕೋಶದ ಕೊನೆಯಲ್ಲಿ "ದಾಮೋದರಪ್ರಿಯಸುತಂ" ಎಂದೂ ಹೇಳಿಕೊಂಡಿದ್ದಾನೆ. (2) ಮೊದಲನೆಯ ನಾಗವರ್ಮನಿಗೆ ನಾಕಿ, ಸಯ್ಯಡಿಯಾತಂ, ಎಂಬ ಹೆಸರುಗಳು ಇದ್ದಂತೆ ತಿಳಿಯುತ್ತದೆ. ಕಾವ್ಯಾವಲೋಕನಾದಿಗ್ರಂಥಗಳಲ್ಲಿ ಈ ಹೆಸರುಗಳು ಸಿಕ್ಕುವುದಿಲ್ಲ. (3) ಮೊದಲನೆಯವನಿಗೆ "ಕವಿರಾಜಹಂಸ" ಎಂಬ ಬಿರುದುಂಟು; ಎರಡನೆಯವನಿಗೆ "ಕವಿತಾಗುಣೋದಯ" ಎಂಬ ಬಿರುದಿದೆ. (4) ಮೊದಲನೆಯವನು ಛಂದೋಂ

ಬುಧಿಯ ಆದಿಭಾಗದ ಸ್ತೋತ್ರದಿಂದಲೂ ಅಧಿಕಾರಗಳ ಆದಿಪದ್ಯಗಳಿಂದಲೂ ಕೆಲವು ಓಲೆಯ ಪುಸ್ತಕಗಳ ಪ್ರಕಾರ ಅಧಿಕಾರಾಂತ್ಯದ ಗದ್ಯಗಳಿಂದಲೂ ಕಾದಂಬರಿಯ ಆದಿಶ್ಲೋಕದಿಂದಲೂ ಜೈನನೋ ಅಲ್ಲವೋ ಎಂಬ ಸಂದೇಹವನ್ನು ಉಂಟುಮಾಡು ತ್ತಾನೆ. ಆದರೆ ತನ್ನ ಗುರು ಅಜಿತಸೇನಾಚಾರ್ಯನೆಂದು ಹೇಳುವುದರಿಂದ ಜೈನನೇ ಆಗಿರ ಬೇಕು. ಚಾವುಂಡರಾಯಪುರಾಣದಿಂದ ಚಾವುಂಡರಾಯನಿಗೆ ನಾಗವರ್ಮನೆಂಬ ಒಬ್ಬ ತಮ್ಮನಿದ್ದಂತೆ ತಿಳಿಯುತ್ತದೆ.[1] ಮೇಲೆ ಬರೆದಿರುವ "ಅರಸಂ ರಕ್ಕಸಗಂಗಂ" ಎಂಬ ಪದ್ಯ ದಲ್ಲಿ ತನ್ನ ಪೋಷಕನು "ಅಣ್ಣ" ನೆಂಬುದರಿಂದ ಇವನೇ ಅವನ ತಮ್ಮನಾಗಿರ ಬಹುದೋ ಎಂಬ ಸಂದೇಹವು ಹುಟ್ಟುತ್ತದೆ. ಆದರೆ ತಾನು ವೆಣ್ಣಮಯ್ಯನ ಜ್ಯೇಷ್ಠ ಪುತ್ರನೆಂದು ಹೇಳುವುದರಿಂದ ಇವನು ತದ್ಭಿನ್ನನೆಂದು ತೋರುತ್ತದೆ. ಎರಡನೆಯವನು ಜೈನ ನೆಂಬುದರಲ್ಲಿ ಸಂದೇಹವೇ ಇಲ್ಲ. ಈ ವಿಷಯವು ಕಾವ್ಯಾವಲೋಕನ, ವಸ್ತುಕೋಶ, ಕರ್ಣಾಟಕಭಾಷಾಭೂಷಣ, ಇವುಗಳಲ್ಲಿಯ ಆದಿಭಾಗದ ಸ್ತುತಿಪದ್ಯಗಳಿಂದಲೂ ಅಂತ್ಯಭಾಗದ ಗದ್ಯದಿಂದಲೂ ಜನ್ನನು ಜೈನಪುರಾಣಕರ್ತೃಗಳಲ್ಲಿ ಇವನನ್ನೂ ಸೇರಿಸಿ ಹೇಳಿರುವುದರಿಂದಲೂ ದೃಢಪಡುತ್ತದೆ.

ಈಯಿಬ್ಬರು ನಾಗವರ್ಮರಲ್ಲದೆ ಬೇರೊಬ್ಬ ನಾಗವರ್ಮನೆಂಬ ಬ್ರಾಹ್ಮಣನು ಚಂದ್ರಚೂಡಾಮಣಿಶತಕವೆಂಬ ಗ್ರಂಥವನ್ನು ಬರೆದಿದ್ದಾನೆ.[2]

## ನಾಗವರ್ಮ I. ಸು. 990.

ಇವನು ಛಂದೋಂಬುಧಿಯನ್ನೂ ಕರ್ಣಾಟಕ ಕಾದಂಬರಿಯನ್ನೂ ಬರೆದಿ ದ್ದಾನೆ. ಛಂದೋಂಬುಧಿಯಿಂದ ಈತನ ವಿಷಯವಾಗಿ ಈಯಂಶಗಳು ತಿಳಿಯು ತ್ತವೆ:—ವೆಂಗಿವಿಷಯದಲ್ಲಿಯ ಸಪ್ತಗ್ರಾಮಗಳಲ್ಲಿ ಮನೋಹರವಾದ ವೆಂಗಿಪ ಳುವಿನಲ್ಲಿ ಕೌಂಡಿನ್ಯಗೋತ್ರೋದ್ಭವನಾದ ವೆಣ್ಣಮಯ್ಯನೆಂಬ ಬ್ರಾಹ್ಮಣನಿದ್ದನು. ಅವನ ಪತ್ನಿ ಕೌಂಡಿಕಬ್ಬೆ; ಮಗ ದಾಮಮಯ್ಯ. ಇವನ ಹೆಂಡತಿ ಕುಂದಕಬ್ಬೆ; ಜ್ಯೇಷ್ಠಪುತ್ರ ವೆಣ್ಣಮಯ್ಯ; ಇವನ ಹೆಂಡತಿ ಪೋಳಕಬ್ಬೆ; ಜ್ಯೇಷ್ಠಪುತ್ರ ನಾಗ ವರ್ಮ I. ಈತನಿಗೆ ಕವಿರಾಜಹಂಸ, ಬುಧಾಬ್ಜವನಕಳಹಂಸ, ಕಂದಕಂದರ್ಪ, ನೆಗಟ್ತೆಗೋಜ ಎಂಬ ಬಿರುದುಗಳಿದ್ದಂತೆ ತೋರುತ್ತದೆ. ಅಲ್ಲದೆ ನಾಕಿ, ಸಯ್ಯಡಿ ಯಾತ[3] ಎಂಬ ಹೆಸರುಗಳೂ ಇದ್ದಂತೆ ತಿಳಿಯುತ್ತದೆ. "ಬೀರಸಿರಿಯಕ್ಕೆ ಭುಜಾ ಸಿಗೆ ನಾಗವರ್ಮನಾ" ಎಂದೂ, "ಕುಂತೀಪುತ್ರಂ ಪೊಣರ್ದ ರಣದೊಳ್" ಎಂದೂ ಹೇಳಿಕೊಳ್ಳುವುದರಿಂದ ಈತನು ಯುದ್ಧವೀರನಾಗಿದ್ದಂತೆ ತೋರುತ್ತದೆ.

1. ಪುಟ 47. 2. ನಾಗವರ್ಮಾಚಾರ್ಯನ ಚರಿತೆಯನ್ನು ನೋಡಿ.

3. ಸಯ್ಯಡಿಯೆಂಬುದು ಕರ್ಣಾಟಕ ದೇಶದ ಕಿಸುಕಾಡುನಾಡಿನಲ್ಲಿ ಒಂದು ಅಗ್ರಹಾರವೆಂದು ತಿಳಿಯಬರುತ್ತದೆ—ದುರ್ಗಸಿಂಹನ ಪಂಚತಂತ್ರ, ಪುಟ 8

ಈತನ ಕಾಲವೇ ಮುಂತಾದ ಕೆಲವು ವಿಷಯಗಳು ಹಿಂದಣ ವಿಚಾರದಲ್ಲಿ ವಿವರಿಸಿವೆ. ತನ್ನ ಕವಿತಾಚಾತುರ್ಯವನ್ನೂ ಗುಣಗಳನ್ನೂ ಈ ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ:—

ನವರಸಮುಣ್ಮೆ ಮಾತು ಪೊಸತಾಗಿರೆ ದೇಸೆಯ ದೇಸೆವೆತ್ತುದಂ ।
ಬವೊಲಿರೆ ಜಾಣ್ ಮನಂಗೊಳಿಸೆ ಪೂಣ್ದಿರದರ್ಥಕೃತಿಪ್ರಬಂಧಮಂ ॥
ಕಿವಿಗಿನಿದಾಗೆ ಪೊಚ್ಚಪೊಸತಾಗೆ ಮನೋಹರಮಾಗೆ ಪೇೞ್ದ ಸ ।
ತ್ಕವಿ ಕವಿರಾಜಹಂಸನೆನೆ ಪೇೞಲೊಡರ್ಚಿದನೀಪ್ರಬಂಧಮಂ ॥

ರಚಿತಪದಪ್ರಸನ್ನಪರಿಪೂರ್ಣರಸಾವಹಮರ್ಥಯುಕ್ತಮಾ ।
ಗುಚಿತಪುರಾಣಮಾರ್ಗಪದಪದ್ಧತಿಬಂಧುರಬಂಧಮೆಂಬಿನಂ ॥
ರಚಿಯಿಸೆ ವಾಚ್ಯವಾಚಕ ವಿಶೇಷ್ಯವಿಶೇಷಣ ಲಕ್ಷ್ಯಲಕ್ಷಣ ।
ಪ್ರಚುರತೆ ಕಾಳಿದಾಸನುಮನೇಳಿಸಿತೀಕವಿರಾಜಹಂಸನಾ ॥

ಹರಹಾಸಕ್ಕೊಂದೆರಡುಱ್ ದಿಕ್ಕರಿರದನಕೆರಡ್ಮೂಱು ನಾಕಾಧಿನಾಥ ।
ದ್ವಿರದಕ್ಕಂ ಮೂಱುನಾಲ್ಕಿಂದುವಿನ ರುಚಿಗೆ ನಾಲ್ಕಯ್ದು ದುಗ್ಧಾಬ್ಧಿಗಯ್ದಾ ॥
ಱರವಿಂದಕ್ಕತ್ತಲಾಱೇೞಮರನದಿಗಮೇೞೆಂಟು ಕೈಲಾಸಧಾತ್ರೀ ।
ಧರಕೆಂಟೊಂಬತ್ತು ಪತ್ತೆಂದೆನೆ ಪಸರಿಸಿದಂ ಕೀರ್ತಿಯಂ ನಾಗವರ್ಮಂ ॥

ಕುಂತೀಪುತ್ರಂ ಪೊಣರ್ದ ರಣದೊಳ್ ಪದ್ಮಜಂ ಶಾಸ್ತ್ರದೊಳ್ ಶ್ರೀ ।
ಕಾಂತಾಕಾಂತಂ ಪಿರಿಯ ಸಿರಿಯೊಳ್ ಸಿಂಧುಜಂ ಶೌಚದೊಳ್ ಕ ॥
ರ್ಣಂ ತಪ್ಪಿಲ್ಲೆಂದೆನಿಪ ನುಡಿಯೊಳ್ ವಿಕ್ರಮಾದಿತ್ಯನಾತೋರ್ ।
ರಂತೀನೌದಾರತೆಯೊಳೆಸೆದಂ ಕಂದಕಂದರ್ಪನೆಂದುಂ ॥

ತನುವಿಂದೊಂದು ಗುಣಂಗಳಿಂದೆರಡು ಸಾಹಿತ್ಯಂಗಳಿಂ ಮೂಱು ಮೇಣ್ ।
ಮನದಿಂ ನಾಲ್ಕುಮುಳತ್ತ್ವದಂಯ್ದುಸೆ ಸುಚಾರಿತ್ರಂಗಳಿಂದಾಱು ಸ ॥
ಜ್ಜನದಿಂದೇೞು ಪುತತ್ತ್ವದಿಂದೆ ತಳೆದೆಂಟಂಗಂ ಭುಜದ್ವಂದ್ವದೊಳ್ ।
ತನಗಿನ್ನಾರ್ ಸರಿ ನಾಗವರ್ಮನೊಳೆ ದಾಸರ್ ಕಾಳಿದಾಸಂಬರಂ ॥

ಮತಿವಂತರ್ ಸಮನೆಂಬುದಾವುದದಱೊಳ್ ಮತ್ತೊರ್ವರಿಲ್ಲಬ್ಧಿವೇ ।
ಷ್ಟಿತಭೂಚಕ್ರದೊಳೆಂತು ಮೇರುಗಿರಿಯಿಂ ಮತ್ತೊಂದು ಶೈಲೇಂದ್ರಮು ॥
ನ್ನತಮಿಲ್ಲೆಂತುಟೆ ನಾಕಿಗಂಗೆನುತುಮಾ ಮತ್ತೇಭವಿಕ್ರೀಡಿತಂ ।
ಪ್ರತಿವಸ್ತೂಪಮೆಯಿಂ ತಗುಳ್ದು ಪೊಗೞ್ಗುಂ ವಿಶ್ವಂಭರಾಮಂಡಲಂ ॥

ಜಿತಬಾಣಂ ಹರಿಯುಂ ತಧಃಕೃತಮಯೂರಂ ತಾರಕಾರಾತಿಯುಂ ।
ತತಿಮಾಘಂ ಶಿಶಿರಾಂತ್ಯದಂತೆ ಸುರಪಪ್ರೋಚ್ಚಂಡಕೋದಂಡದಂ ॥

ತೆ ತಿರೋಭೂತಗುಣಾಢ್ಯನಬ್ಬವನಸಂತಾವಿರ್ಭವದ್ದಂಡಿ ಭಾ |
ರತದಂತಾತ್ತಧನಂಜಯೈಕವಿಭವಂ ವಾಗ್ಗುಂಫದೊಳ್ ನಾಕಿಗಂ ||

ಕೊನೆಯ ಪದ್ಯದಲ್ಲಿ ಶ್ಲೇಷೆಯಿಂದ ತನಗೆ ಹಿಂದೆ ಇದ್ದ ಸಂಸ್ಕೃತಕವಿಗಳ ಹೆಸರನ್ನು ಹೇಳುತ್ತಾನೆ. ಈ ಪದ್ಯಗಳಲ್ಲಿ ಕುಕವಿಗಳನ್ನು ನಿಂದಿಸುತ್ತಾನೆ:—

ಹಱಗವಿಗಳ ಕಬ್ಬಂಗಳ | ಪೊಱಗೊಳಗಕ್ಕರದ ಪೊಲ್ಲ ಬಿರ್ಚಿದೊಡೆಲ್ಲಂ |
ಬಱತಾಱಗಬೀಱಗವೆ | ತ್ತಱತತ್ತಱವೆಕ್ಕಸಕ್ಕಮುಸ್ತವ್ಯಸ್ತಂ ||[1]
ಮಱಿಯುಲ್ಲದೆ ಪೊಯ್ಯುರಿಂ | ಬೆಳೆಗುಮೆ ಧರೆ ಮಱುಗಿ ಕುದಿದು ಶಾಸ್ತ್ರದ ಬಲದಿಂ |
ದಳಿಪಿಂ ಸೇಱಿಸ್ಱಿಡವುದು ಕೋ | ಮಳಮಕ್ಕುಮೆ ಸಹಜಮಿಲ್ಲದಾತನ ಕಬ್ಬಂ ||

ಇವನ ಗ್ರಂಥಗಳಲ್ಲಿ—

## 1. ಛಂದೋಂಬುಧಿ.

ಇದು ಛಂದಶ್ಶಾಸ್ತ್ರ. ಕನ್ನಡಛಂದಸ್ಸಿಗೆ ನಮಗೆ ದೊರೆತಿರುವ ಲಕ್ಷಣಗ್ರಂಥಗಳಲ್ಲಿ ಇದೇ ಪುರಾತನಗ್ರಂಥವು. ಈಶ್ವರನು ಉಮೆಗೆ ಉಪದೇಶಮಾಡಿದ ಛಂದಸ್ಸು ಪಿಂಗಳನಿಂದ ಭೂಲೋಕದಲ್ಲಿ ವಿಸ್ತೃತವಾದಂತೆಯೂ ಅದನ್ನು ತಾನು ಕಲಿತು ತನ್ನ ಹೆಂಡತಿಗೆ ಉಪದೇಶಮಾಡಿದಂತೆಯೂ ಹೇಳುವುದರಿಂದ ಈ ಕವಿ ಪಿಂಗಳನನ್ನು ಅನುಸರಿಸುವಂತೆ ತಿಳಿಯುತ್ತದೆ. ಸಂಸ್ಕೃತಪಿಂಗಳ, ಪ್ರಾಕೃತ ಪಿಂಗಳ, ಎಂದು ಇಬ್ಬರು ಪಿಂಗಳರು ಇದ್ದಂತೆ ಕೆಲವರು ಅಭಿಪ್ರಾಯಪಡುತ್ತಾರೆ. ಆದರೆ ಒಬ್ಬ ಪಿಂಗಳನೇ ಸಂಸ್ಕೃತಛಂದಸ್ಸನ್ನೂ ಪ್ರಾಕೃತಛಂದಸ್ಸನ್ನೂ ಬರೆದಂತೆ ಪ್ರತೀತಿಯಿದೆ. ಈ ಕವಿ ಈಯೆರಡುಲಕ್ಷಣಗ್ರಂಥಗಳನ್ನೂ ಅನುಸರಿಸಿರುವಂತೆ ತೋರುತ್ತದೆ. ಆದರೆ ಆನುಪೂರ್ವಿಯಲ್ಲಿಯೂ ವೃತ್ತಗಳ ಹೆಸರಿನಲ್ಲಿಯೂ ಪಿಂಗಳ ಛಂದಸ್ಸಿಗೂ ಇವನ ಗ್ರಂಥಕ್ಕೂ ಬಹಳ ವ್ಯತ್ಯಾಸವಿದೆ. ವೃತ್ತರತ್ನಾಕರ, ಶ್ರುತ ಬೋಧ, ಈ ಗ್ರಂಥಗಳಲ್ಲಿರುವಂತೆಯೇ ವೃತ್ತದ ಲಕ್ಷಣವನ್ನು ಹೇಳುವ ಪದ್ಯವೇ ಆ ವೃತ್ತಕ್ಕೆ ಲಕ್ಷ್ಯವಾಗುವಂತೆ ಬರೆದಿದ್ದಾನೆ. ಈ ಗ್ರಂಥವು ಆರು ಆಶ್ವಾಸಗಳಾಗಿ ಭಾಗಿಸಲ್ಪಟ್ಟಿದೆ. ಪೀಠಿಕಾನಂತರ (1) **ಸಂಜ್ಞಾಧಿಕಾರ**—ಇದರಲ್ಲಿ ಪ್ರಾಸಗಳ ವಿಷಯವನ್ನು ಹೇಳುವಾಗ ಪ್ರಾಯಶಃ ನೃಪತುಂಗನ ಉದಾಹರಣಪದ್ಯಗಳನ್ನೇ ತೆಗೆದು ಬರೆದಿದ್ದಾನೆ. ಭಾಷೆಗಳ ವಿಷಯದಲ್ಲಿ

ಸಂಸ್ಕೃತಂ ಪ್ರಾಕೃತಮಪಭ್ರಂಶಂ ಪೈಶಾಚಿಕಮೆಂಬ ಮೂಱುವರೆ ಭಾಷೆಗಳೊಳ್ ಪುಟ್ಟುವ ದ್ರವಿಡಾಂಧ್ರಕರ್ಣಾಟಾದಿಷಟ್ಪಂಚಾಶತ್ಸರ್ವವಿಷಯಭಾಷಾಜಾತಿಗಳಕ್ಕುಂ

ಎಂದು ಹೇಳಿದ್ದಾನೆ. ಅನಂತರ ಕನ್ನಡಕ್ಕೆ ಅಸಾಧಾರಣವಾಗಿರುವ "ಜಾತಿ[2]" ಗಳನ್ನು—

---

1. ಈ ಪದ್ಯವು ಹರಿಹರನ ಗಿರಿಜಾಕಲ್ಯಾಣದಲ್ಲಿಯೂ ದೊರೆಯುತ್ತದೆ.
2. ವೃತ್ತಮಕ್ಷರಸಂಖ್ಯಾತಂ ಜಾತಿರ್ಮಾತ್ರಾಕೃತಾ ಭವೇತ್ |

ಮದನವತಿಯಕ್ಕರಂ ಚೌ । ಪದಿ ಗೀತಿಕೆಯೇಳೆ ತಿವದಿಯುತ್ಸಾಹಂ ಷ ।
ಟ್ಪದಿಯಕ್ಕರಿಕೆ ಕರಂ ಚಿ । ತ್ರೋದವಿದ ಛಂದೋವತಂಸಮಬ್ಜದಳಾಕ್ಷೀ ॥

ಎಂಬ ಪದ್ಯದಲ್ಲಿ ಹೇಳಿದ್ದಾನೆ. (2) **ಸಮವೃತ್ತವಿವರಣ**: ಇದರಲ್ಲಿ ಉಕ್ತೆಯಿಂದ ಉತ್ಕೃತಿಯ ವರೆಗೆ 26 ಛಂದಸ್ಸುಗಳನ್ನು ಹೇಳಿದ್ದಾನೆ. ಮೂರನೆಯ ಆಶ್ವಾಸದಲ್ಲಿ ಇತರ ಸಮವೃತ್ತಗಳನ್ನೂ ಅರ್ಧಸಮವೃತ್ತವಿಷಮವೃತ್ತಗಳನ್ನೂ ಮಾತ್ರಾಚ್ಛಂದಗಳನ್ನೂ ಮಾತ್ರಾಗಣಚ್ಛಂದಗಳನ್ನೂ ಹೇಳಿದ್ದಾನೆ. ನಾಲ್ಕನೆಯ ಆಶ್ವಾಸದಲ್ಲಿ ಇತರ ಮಾತ್ರಾಗಣಚ್ಛಂದಗಳನ್ನೂ ಐದನೆಯದರಲ್ಲಿ ಕನ್ನಡಮಾತ್ರಾಗಣಚ್ಛಂದಗಳನ್ನೂ ಆರನೆಯದರಲ್ಲಿ ಷಟ್ಪ್ರತ್ಯಯಗಳನ್ನೂ ವಿವರಿಸಿದ್ದಾನೆ. ಆಶ್ವಾಸಗಳ ಅಂತ್ಯದಲ್ಲಿ ಮ॥ ಕಿಟಲ್ ಅಚ್ಚುಹಾಕಿಸಿರುವ ಪುಸ್ತಕದಲ್ಲಿ

ಇದು ಸಮಸ್ತಸುರಾಸುರೇಂದ್ರಮುನೀಂದ್ರಮಣಿಮಕುಟಘಟಿತಶ್ರೀಮದ್ಭಗವದರ್ಹತ್ಪರಮೇಶ್ವರಚಾರುಚರಣಾರವಿಂದದ್ವಂದ್ವಮಕರಂದಮತ್ತಮಧುಕರಾಯಮಾನ ವಿಬುಧಜನಮನಃಪದ್ಮಿನೀರಾಜಹಂಸ ಶ್ರೀಮತ್ಕವಿರಾಜಹಂಸ ನಾಗವರ್ಮನಿರ್ಮಿತಮಪ್ಪ ಛಂದೋಂಬುಧಿಯೊಳ್

ಎಂಬ ಗದ್ಯವಿದೆ. ಆದರೆ ನಾವು ನೋಡಿದ ಕೆಲವು ಓಲೆಯ ಪುಸ್ತಕಗಳಲ್ಲಿ ಈ ಗದ್ಯವು—ಇದು ಪರಮೇಶ್ವರಚರಣಾರವಿಂದಮರಂದಮಧುಕರಾಯಮಾಣ—ಎಂದು ಆರಂಭಿಸುತ್ತದೆ. ಇನ್ನೊಂದು ಪ್ರತಿಯಲ್ಲಿ—ಇದು ಭಗವದ್ಭವಾನೀವಲ್ಲಭಪಾದಾರವಿಂದ—ಎಂದು ಆರಂಭಿಸುತ್ತದೆ.

ಮ॥ ಕಿಟಲ್ ಅಚ್ಚುಹಾಕಿಸಿರುವ ಪುಸ್ತಕದಲ್ಲಿ—ಗ್ರಂಥಾವತಾರದಲ್ಲಿರುವ ಮಂಗಳಶ್ಲೋಕಗಳೂ ಆಶ್ವಾಸಗಳ ಆದಿಯಲ್ಲಿರುವ ದೇವತಾಸ್ತುತಿರೂಪವಾದ ಪದ್ಯಗಳೂ ಗ್ರಂಥದ ಆದ್ಯಂತಗಳಲ್ಲಿರುವ ಕವಿವಿಷಯಕವಾದ ಕೆಲವು ಪದ್ಯಗಳೂ ಬಿಟ್ಟಿವೆ. ಈ ಕವಿಯ ರಚನೆಯನ್ನು ತೋರಿಸುವುದಕ್ಕೋಸ್ಕರ ಈ ಬಿಟ್ಟಿರುವ ಪದ್ಯಗಳಲ್ಲಿ ಕೆಲವನ್ನು ಇಲ್ಲಿ ಉದ್ಧರಿಸಿ ಬರೆಯುತ್ತೇವೆ:—

## ಮಂಗಳಶ್ಲೋಕಗಳು.

### ವಿಷ್ಣು.

ಶ್ರೀವಧುವಂ ಪಯೋಧಿಮಥನೋದ್ಭವವಸ್ತುಸಮೂಹದೊಳ್ ಮಹಾ ।
ದೇವಸಮೇತಮಿರ್ದಸುರರುಂ ಸುರರುಂ ಕುಡೆ ತನ್ನ ಮೆಚ್ಚುಗೊಂ ॥
ಡಾವನಶೇಷಭೂಭುವನಮಂಡಲವಲ್ಲಭನಾದ ದೇವನೀ ।
ಗಾವಗಮೆಮ್ಮ ಬೇಳ್ಪ ವರದುನ್ನತಿಯಂ ಸುಕವೀಂದ್ರವಲ್ಲಭಂ ॥ 86 ॥

### ಶಿವ.

ಜಡೆಗಳ ಬಂಬಲೊಪ್ಪುವಳಕಾವಳಿ ಭೀಷಣಮಪ್ಪ ಪಾವಿನೊ ।
ಳ್ಪಡಿಗೆ ಪೊದಟ್ಟ ಪೊಂದುಡಿಗೆ ಶಕ್ತಿ ವಿರಾಜಿಪ ಶಕ್ತಿ ಶೂಲಮಾ ॥

ಪಿಡಿದ ಕರಾಸಿ ಗೌರಿ ನಿಜವಲ್ಲಭೆಯಾಗಿರೆ ಮಿಕ್ಕ ನಾಕಿ ಸ ।
ಯ್ಯಡಿಯು ಪಿನಾಕಿ ಕೂರ್ತು ನಮಗೀಗೆ ವರಂಗಳನುತ್ಸವಂಗಳಂ ॥ 87 ॥

## ಪಾರ್ವತಿ.

ನಗೆಮೊಗಮಂ ಪೊದಟ್ಟಿ ಪೊಸಜವ್ವನಮಂ ಮಿಗಿಲಪ್ಪ ಗಾಡಿಯಂ ।
ಸೊಗಯಿಪ ಮುದ್ದುಗೆಯ್ತುಮನೊಜಲ್ದಿನಿಸಂ ಮನವಾಜಿ ನೋಡಿ ತೊ ॥
ಟ್ಟಗೆ ಕೊಳೆ ಮೇಲೆ ವಾಯ್ದು ಮಹಿಷಾಸುರನಂ ತವೆ ಕೊಂದಳಾವಳಾ ।
ಭಗವತಿ ಕೂರ್ತು ಬೀರಸಿರಿಯುಕ್ಕೆ ಭುಜಾಸಿಗೆ ನಾಗವರ್ಮನಾ ॥ 88 ॥

## ವಿನಾಯಕ.

ಸಕಳಕಳಾಗಮಾಭರಣನೀಶ್ವರತತ್ವಸಮಸ್ತವಸ್ತುರೂ ।
ಪಕನಕಲಂಕನಭ್ಯುದಯಕಾರಣವಾರಣವಕ್ತ್ರನಾಪ್ತಲೌ ॥
ಕಿಕಮತನನ್ಯತಾಗಮಪದಾರ್ಥಪರಂಪರನಾದನಾವಿನಾ ।
ಯಕಗಣನಾಯಕಂ ಕೃತಿಗೆ ನಾಯಕನಕ್ಕೆ ನೆಗೞ್ತೆಗೋಜನಾ ॥ 89 ॥

## ಸೂರ್ಯ.

ಒದವಿದ ಕೌಮುದಂ ಮುಗಿಯೆ ಧಾರಿಣಿಯಂ ಕಡುಮಂದವಾಗಿ ಪ ।
ರ್ವಿದ ತಮಮೆಲ್ಲಮೋಸರಿಸೆ ತನ್ನನೆ ಕೀರ್ತಿಪ ಶಿಷ್ಟಕೋಟಿಗ ॥
ಭ್ಯುದಯಮನಾವಗಂ ನಿಜಕರಂ ದಯೆಗೆಯ್ದರೆ ತಾನೆ ದೇವನಾ ।
ದುದಯದಿವಾಕರಂ ಕರಮೊಲರ್ಚುಗೆ ನನ್ನ ಮುಖಾರವಿಂದಮಂ ॥ 90 ॥

## ಸರಸ್ವತಿ.

ಅತಿಮಧುರಪ್ರಸನ್ನಪರಿಪೂರ್ಣರಸೋಚಿತರಂಜಿತಾರ್ಥಸಂ ।
ಯುತೆ ಸಕಲಾಗಮೋಕ್ತಿಯುತೆ ಲಕ್ಷಣಲಕ್ಷ್ಯಸಮಸ್ತವಸ್ತುಸಂ ॥
ಯುತೆ ಸರಸೀಜಗರ್ಭನ ಮುಖಾಂಬುಜದಿಂದಮಗಲ್ದು ಬಂದು ವಾ ।
ಕ್ಸತಿ ನೆಲಸಿರ್ಕೆ ಕೂರ್ತು ಮುಖಪಂಕಜದೊಳ್ ಕವಿರಾಜಹಂಸನಾ ॥ 91 ॥

## ಮೂರನೆಯ ಆಶ್ವಾಸದ ಮೊದಲನೆಯ ಪದ್ಯ.

ಶ್ರೀರಮಣನಖಿಳಸುರವಿ । ಸ್ತಾರಕನಮರೇಂದ್ರಮಕುಟತಾಟಿತಚರಣಾಂ ।
ಭೋರುಹನಶೇಷತತ್ವಾ । ಗಾರಂ ದಯೆಗೆಯ್ಗೆ ನಾಗವರ್ಮಂಗೊಳ್ಪಂ ॥ 92 ॥

## ನಾಲ್ಕನೆಯ ಆಶ್ವಾಸದ ಮೊದಲನೆಯ ಪದ್ಯ.

ಶ್ರೀರಮಣೀರಮಣಂ ಕವಿ । ತಾರಮಣೀರಮಣನಧಿಕಸೌಭಾಗ್ಯದ ಗೌ ।
ರೀರಮಣೀರಮಣಂ ಕುಡು । ಗಾರೋಗ್ಯಾಯುಷ್ಯವೃದ್ಧಿಯಂ ನಾಕಿಗನೊಳ್ ॥ 93 ॥

ಕನ್ನಡಚಂಪೂಕಾವ್ಯಗಳಲ್ಲಿ ವಿಶೇಷವಾಗಿ ದೊರೆವ ಷಡ್ವಿಧವೃತ್ತಗಳನ್ನು ಕಂಡುಹಿಡಿವುದಕ್ಕೆ ಸುಲಭೋಪಾಯವನ್ನು ಹೇಳುವ ಈ ಪದ್ಯವನ್ನು ತೆಗೆದು ಬರೆಯುತ್ತೇವೆ:—

ಗುರುವೊಂದಾದಿಯೊಳುತ್ಪಲಂ ಗುರು ಮೊದಲ್ಮೂಱಾಗೆ ಶಾರ್ದೂಲಮಾ।
ಗುರು ನಾಲ್ಕಾಗಿರಲಂತು ಸ್ರಗ್ಧರೆ ಗುರುದ್ವಂದ್ವಂ ಲಘುದ್ವಂದ್ವಮಾ॥
[1] ಗಿರೆ ಮತ್ತೇಭಮದೊಂದೆ ನಾಲ್ಕು ಲಘುವಿಂದಾಚಂಪಕಂ ಮತ್ತಮಾ।
ಹರಿಣೀವೃತ್ತಮುದಕ್ಕುಮಯ್ದುಲಘುವಿಂ ಪಂಕೇಜಪತ್ರೇಕ್ಷಣೇ॥ ॥ 94 ॥

ಒಂದು ಪ್ರತಿಯಲ್ಲಿ ಗ್ರಂಥಾಂತ್ಯದಲ್ಲಿ ಈ ಪದ್ಯವು ದೊರೆಯುತ್ತದೆ:—

ಗಿರಿಬಾಣಾನಲಚಂದ್ರದಿಗ್ಗಜಖರಾಂಭೋರಾಶಿಯುಗ್ಮಂಗಳಂ।
ಬರೆದಟ್ಟಲ್ ತೆಗೆದಾಗಳಬ್ಧಿಗುಣರತ್ನಾದ್ರಿದ್ವಯಂ ದ್ರವ್ಯಭೂ॥
ಶರಮೆಂಬೀಕ್ರಮದಿಂದಮೋಜೆಯೊಳೆ ಕೇಳ್ ಪಙ್ಕ್ತಿಕ್ರಮಂ ತಪ್ಪದಿಂ।
ತಿರದೋದಲ್ ಸಲೆ ಗೂಢಲೇಖನಮಿದುಂ ಪಂಕೇಜಪತ್ರೇಕ್ಷಣೇ ॥ 95 ॥

---

## 2. ಕಾದಂಬರಿ.

ಇದು ಬಾಣಕೃತವಾದ ಸಂಸ್ಕೃತಕಾದಂಬರಿಗೆ ಚಂಪೂರೂಪವಾದ ಕರ್ಣಾಟಕಭಾಷಾಂತರವು. ಇದರಲ್ಲಿ ಪ್ರಾಯಶಃ ಸಂಸ್ಕೃತಗ್ರಂಥದ ಆನುಪೂರ್ವಿಯೇ ಅನುಸರಿಸಲ್ಪಟ್ಟಿದ್ದರೂ ವರ್ಣನಾಭಾಗಗಳಲ್ಲಿ ಅಲ್ಲಲ್ಲಿ ಕೆಲವು ಬಿಟ್ಟು ಹೋಗಿವೆ. ಕವಿ ತನ್ನ ಗ್ರಂಥದ ಉತ್ಕೃಷ್ಟತೆಯನ್ನು ಈ ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ:—

ಸತ್ಕೃತಿ ಸಂಸ್ಕೃತದಿಂದೆ ಜ। ಗತ್ಕೌತುಕವಾಗಿ ಮತ್ತೆ ಕರ್ಣಾಟದೊಳಂ।
ಸತ್ಕವಿನಿವಹಂ ಪೊಗೞ್ವ ಚ। ಮತ್ಕೃತಿಯುಂ ಪಡೆದು ಸೊಬಗುವಡೆದತ್ತೀಗಳ್॥
ಇದು ಚೋದ್ಯಂ ಕವಿಹೃದ್ಗತಂ ನವರಸಂ ನಿರ್ದೋಷಮೆಂದೀಗಳಾ।
ಮುದು ಕಾದಂಬರಿ ಸೇವ್ಯಮಾದುದನಿತುಂ ತಾನೆಯ್ದೆ ಭೂಭಾಗದೊಳ್॥
ವಿದಿತಶ್ರೀಕವಿನಾಗವರ್ಮನ ವಚಸ್ಸಂದೋಹದಿಂ ದೋಷಮೊಂ।
ದದಳಂಕಾರದ ವಸ್ತುಬಂಧಮಿದು ತಾನೇಂ ಮಾಡದೇಂಗೆಯ್ವುದೋ॥

ಗ್ರಂಥಾವತಾರದಲ್ಲಿ ಈಶ್ವರಶಿರೋಮಣಿಯಾದ ಚಂದ್ರನನ್ನು ಸ್ತುತಿಸಿ ಬಳಿಕ ಸರಸ್ವತಿಯನ್ನೂ ಬಾಣಕವಿಯನ್ನೂ ಹೊಗಳಿ ಕಥೆಯನ್ನು ಆರಂಭಿಸಿದ್ದಾನೆ.

---

1 ಗಿರೆ ಮತ್ತೇಭ ಲಘುದ್ವಯತ್ರಿಗುರುವಿಂದಕ್ಕುಂ ಮಹಾಸ್ರಗ್ಧರಂ।
ಹರಿಣಾಕ್ಷೀ ಲಘುನಾಲ್ಕು ಚಂಪಕಮಿವಾಱುಂ ಖ್ಯಾತಕರ್ಣಾಟಕಂ॥ ಎಂಬ ಪಾಠವೂ ಇದೆ.

ಗ್ರಂಥದ ಕೊನೆಯಲ್ಲಿ

ಶ್ರೀನಾಗವರ್ಮವಿರಚಿತಮಪ್ಪ ಕರ್ಣಾಟಕಾದಂಬರಿಯೊಳ್

ಎಂದಿದೆ.

ಈ ಕವಿಯ ಬಂಧವು ಲಲಿತವಾಗಿಯೂ ಮಧುರವಾಗಿಯೂ ಭಾವಗರ್ಭಿತವಾಗಿಯೂ ಹೃದಯಂಗಮವಾಗಿಯೂ ಇದೆ. ಇವನ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

### ಗಿಳಿ.

ಜಳಜದ ಮೊಗ್ಗೆಯಂತೆ ಮುಗುಳಂತೆಳೆವೀರ್ಕೆಯ ಕಾಯ್ಗಳಂತೆ ಶಾ |
ಲ್ಮಲಿಕುಸುಮಂಗಳಂತೆ ತರುನೀಡನಿಕಾಯದಿನೆಲ್ಲಮಾಗಳಾ ||
ಗಳೆ ಗಜಿವೊಯ್ವ ಕಣ್ದೆಱೆವ ತುಪ್ಪುೞಿಯೊಡರ್ಚುವ ಕೆಂಪನಾಳ್ವ ಕೋ |
ಮಳಶುಕಶಾಬಕಪ್ರಕರಮಂ ತೆಗೆದಂ ದಯೆಗೆಟ್ಟು ಲುಬ್ಧಕಂ || 96 ||

### ಅಳುವುದು.

ನಸುದೆಱೆಯುತ್ತುಮಿರ್ದ ಪೊಸಮುತ್ತಿನ ಸಿಂಪಿನ ಸಂಪುಟಂಗಳಿಂ |
ಸುಸುಳ್ವ ಸುಪಾಣಿಯಾಗಿ ಪೊಱಪೊಣ್ಮುವ ಮುತ್ತಿನ ಸಾಲೆಯಂದದಿಂ ||
ಮಿಸುಗಿ ನಿರಂಜನಂಗಳೆನಿಪಕ್ಷಿಪುಟಾಂತರದಿಂದಮೇಕೆ ಪೇೞ್ |
ಪಸರಿಸಿ ಸೀಳ್ವು ಪೊಣ್ಮಿದುವು ಕಣ್ಬನಿಗಳ್ ತರಳಾಯತೇಕ್ಷಣೇ || 97 ||

### ಕುದುರೆ.

ಮೊಗದಿಂದಂ ನೀರ್ವನಾಳ್ವಂತುರದಿನಗಲಿತಾದಂತೆ ಪಾರ್ಶ್ವಂಗಳಿಂ ನೂ |
ರ್ಬ್ಬಿಗದತ್ತಂಬಂತೆ ಪಾಶ್ಚಾತ್ತ್ಯದೆ ಸವಡಿಸಿತೆಂಬಂತಿರುದ್ಗ್ರೀವದಿಂ ಪ ||
ರ್ವುಗೆವೆತ್ತಂತಂಗಕಾಂತಿಪ್ರಕರದೆ ಪಸರಿಪ್ಪಂತೆ ಮುಂಗಾಲ್ಗಳಿಂದಂ |
ಮುಗಿಲಂ ಮುಟ್ಟಿಪ್ಪುದೆಂಬಂತತಿಜವಮಿದಿರೊಳ್ ಬಂದುದಿಂದ್ರಾಯುಧಾಶ್ವಂ || 98 ||

### ಸಜ್ಜನರು.

ಜನಪತಿಗಳ್ ನುಡಿಯಲ್ ಮಾ | ರ್ದನಿಯಂತನುವದಿಸಿ ಬರ್ದುಕಲೊಲ್ಲದೆ ಮಾರ್ಕೊಂ|
ಡನುಚಿತಮಿದೆಂದು ಮಾಣಿಪ | ಮನುಜೋತ್ತಮರೆಲ್ಲಿಯಾನುಮಿರ್ಪರ್ ಜಗದೊಳ್
[|| 99 ||

### ಲಕ್ಷ್ಮಿ.

ಸುರೆಯಿಂ ಸೊರ್ಕಂ ಸುರೋರ್ವೀರುಹಕಿಸಲಯದಿಂ ರಾಗಮಂ ಕೌಸ್ತುಭಪ್ರ |
ಸ್ತರದಿಂ ನೈಷ್ಠುರ್ಯಮಂ ದುರ್ವಿಷಮವಿಷದಿನುನ್ಮೋಹಮಂ ಮುಗ್ಧದೋಷಾ ||
ಕರನಿಂ ವಕ್ರತ್ವಮಂ ದುಶ್ಚ್ಯವನನ ಹಯದಿಂ ವೇಗಮಂ ತಾಳ್ದಿ ನೀರಾ |
ಕರದಿಂದೇೞ್ತಂದಳಂತಾಸಿರಿ ಸಹಭವರಂ ಪೋಲ್ವುದೇಂ ಚೋದ್ಯಮಾಯ್ತೇ || 100 ||

ಶ್ರುತಮಂ ಕೆಯ್ಕೊಳ್ಳಳಾಚಾರಮನವಧರಿಸಳ್ ಸತ್ಯಮಂ ಬಾೞ್ತಿಗೆಯ್ಯಳ್ |
ಮತಿಯಂ ಬಿಪ್ಪಂಡಿಪಳ್ ಲಕ್ಷಣಮನೆಣಿಸಳೌದಾರ್ಯಮಂ ಚಿಂತಿಸಳ್ ಸಂ ||
ಗತಿಯಂ ವಿಶ್ವಾಸಿಸಳ್ ಸುಂದರತರವಪುವಂ ನೋಡಳೆಂತುಂ ವಿಶೇಷ |
ಜ್ಞತೆಯಂ ತಾನೇತಕೆಂಬಳ್ ಸಿರಿಯನಱಿಯುತುಂ ಬಣ್ಣಿಪಂ ಗಾಂಪನಲ್ತೇ || 101 ||

## ನೃಪರು.

ಮೊದಲೊಳ್ ತಮ್ಮನೆ ನೋಡಲಿತ್ತ ಪದದೊಳ್ ಕೆಯ್ಕೊಂಡವರ್ ತಾಮೆ ನೋ |
ಡಿದೊಡೋರಂತುಪಕಾರಮಂ ಮಱೆದವರ್ ಮಾತಾಡಿದಂದರ್ಥರಾ ||
ಜ್ಞದ ಪೆಂಪಂ ದಯೆಗೆಯ್ವವರ್ ಬೆಸಸಿದಂದಾಗಳ್ ವರಂಗೊಟ್ಟವರ್ |
ಪದಪಿಂ ಮುಟ್ಟಿದೊಡೆಯ್ದೆ ರಕ್ಷಿಸಿದವರ್ ಭೂಪರ್ ಧರಾಚಕ್ರದೊಳ್ || 102 ||

## ಪುಂಡರೀಕನು ಮೃತನಾದಾಗ ಕಪಿಂಜಳನ ಪ್ರಳಾಪ.

ಪರಿಚಯಮಿಲ್ಲ ಕಂಡಱಿಯಯೋ ಸಖ ತೊಟ್ಟನಲಿಂತು ಬಿಟ್ಟು ಪೋ |
ಪರೆ ಕಠಿನಾತ್ಮನಾದೆ ನೆರವಾರೆನಗಿರ್ದಪರೆತ್ತ ಪೋಪೆನೊ ||
ರ್ವರುಮೆನಗಾಸೆಯಿಲ್ಲ ದೆಸೆ ಪಾೞ್ಸಗಿರ್ದಪುದಂಧನಾದೆನಾರ್ |
ಶರಣೆನಗೆನ್ನ ಬಾೞ್ಕೆಯೆ ನಿರರ್ಥಕಮೆಂದೆನುತುಂ ಪಲುಂಬಿದಂ || 103 ||

ಒಡನುಂಡೊಡನಿರ್ದೊಡವಳೆ | ದೊಡನಾಡಿಗಳಾಗಿ ನೃತ್ಯಗೀತಂ ಮೊದಲಾ |
ಗೊಡನೊಡನೆ ಕಲ್ತ ಕಲೆಗಳ | ನೆಡೆವಿಡದಿರ್ದರ್ಗಮಾಯ್ತು ಪರಮಪ್ರೇಮಂ || 104 ||

## ಸಂಧ್ಯೆ.

ದೆಸೆದೆಸೆಯೊಳ್ ಪಸರಿಸುತಿರೆ | ಪೊಸ ತೊಂಡೆಯ ಪಣ್ಣ ಬಣ್ಣಮಂ ಮಸುಳಿಪ ಕೆಂ |
ಬಿಸಿಲ ಮಿಸುಪಿನಿಸು ಪಡುವಣ | ದೆಸೆಗವಲಂಬಿಸಲೊಡರ್ಚಿದತ್ತಿನಬಿಂಬಂ || 105 ||

## ಹಾರ.

ಪೊಳೆವೆಳದಿಂಗಳೊಳ್ಮುಱಿಗಳಿಂ ಸುರಸಿಂಧುವ ಶೀಕರಂಗಳಿಂ |
ಜಳನಿಧಿಯುಲ್ಲಿ ಮಾರ್ಪೊಳೆವ ತಾರೆಗಳಿಂ ಸಮೆದಂತೆ ಶಾರದಂ ||
ಗಳ ಜಸದೇೞ್ಗೆ ಲಕ್ಷ್ಮಿಯ ಮುಗುಳ್ನಗೆ ಜೊನ್ನದ ಬಾೞ್ಕೆ ರತ್ನಸಂ |
ಕುಳದಧಿದೈವಮೆಂದೆಸೆದುದುಜ್ಜ್ವಳಮೌಕ್ತಿಕಹಾರಮುಂಡಳಂ || 106 ||

## ಮಹಾಶ್ವೇತೆ.

ಕಡೆದರೊ ಶಂಖದಿಂ ತೆಗೆದರೋ ನವಮೌಕ್ತಿಕದಿಂ ಮೃಣಾಳದಿಂ |
ಪಡೆದರೊ ದಂತದಿಂದೆಸೆಯೆ ಮಾಡಿದರೋ ರುಚಿರೋಜ್ಜ್ವಳಾಂಗಮಂ ||
ಬಿಡದಮೃತಾಂಶುರಶ್ಮಿಗಳ ಕುಂಚಿಗೆಯಿಂದಮೆ ಕರ್ಚಿ ಪಾರದಂ |
ದೊಡೆದರೊ ಪೇೞಿನಲ್ ಕರಮೆ ಕಣ್ಗೆಸೆದಿರ್ದುದು ರೂಪು ಕಾಂತೆಯಾ || 107 ||

## ಕೇಶಿದಂಡನಾಯಕ. ಸು. 990.

ಈತನು ರನ್ನನ (993) ಸಾಹಸಭೀಮವಿಜಯವನ್ನು ತಿದ್ದಿದಂತೆ ಆ ಗ್ರಂಥದ—

ವನರುಹಭವನೆನಿಸಿದ ದಂ | ಡನಾಯಕಂ ಕೇಶಿ ತಿರ್ದೆ ಪೇೞ್ದಂ

ಎಂಬ ಪದ್ಯಭಾಗದಿಂದ ತಿಳಿಯುತ್ತದೆ. ಈ ಕೇಶಿದಂಡನಾಯಕನಾರೋ ತಿಳಿಯದು. ರನ್ನನ ಗ್ರಂಥವನ್ನು ತಿದ್ದಬೇಕಾದರೆ ಈತನು ದೊಡ್ಡ ಪಂಡಿತನಾಗಿದ್ದಿರಬೇಕು. ಈತನ ವಿಷಯವಾಗಿ ಇನ್ನೇನೂ ತಿಳಿಯಬಂದಿಲ್ಲ.

---

## ರನ್ನ. 993.

ಈತನು ಅಜಿತಪುರಾಣವನ್ನೂ ಸಾಹಸಭೀಮವಿಜಯವನ್ನೂ ರನ್ನಕಂದವೆಂಬ ಒಂದು ನಿಘಂಟುವನ್ನೂ ಬರೆದಿದ್ದಾನೆ. ಅಲ್ಲದೆ, ಅಜಿತಪುರಾಣದ ಕೊನೆಯಲ್ಲಿರುವ—

ಕರಮೆಸೆದುವು ರತ್ನತ್ರಯ | ಪರಿಕಲ್ಪದೆ ಪರಶುರಾಮಚರಿತಂ ಚಕ್ರೇ |
ಶ್ವರಚರಿತಮಜಿತತೀರ್ಥೇ | ಶ್ವರ ಚರಿತಂ ರತ್ನನಿಂದೆ ಭುವನತ್ರಯದೊಳ್ ||

ಎಂಬ ಪದ್ಯದಿಂದ ಈತನು ಪರಶುರಾಮಚರಿತ, ಚಕ್ರೇಶ್ವರಚರಿತ, ಎಂಬ ಬೇರೆ ಎರಡು ಗ್ರಂಥಗಳನ್ನು ಸಹ ಬರೆದ ಹಾಗೆ ತಿಳಿಯುತ್ತದೆ. ಸಾಹಸಭೀಮವಿಜಯದಲ್ಲಿಯ "ಗಂಗಮಂಡಲಚಕ್ರೇಶ್ವರಕಟಕೋತ್ತಮನಾಯಕವಿರಚನೆಯಿನನರ್ಘ್ಯರತ್ನಮಾದಂ ರತ್ನಂ" ಎಂಬ ವಾಕ್ಯವನ್ನು ನೋಡಿದರೆ ಈತನ ಚಕ್ರೇಶ್ವರಚರಿತೆ ಗಂಗರಾಜನ ಸೇನಾನಾಯಕನಾದ ಮತ್ತು ತನ್ನ ಪೋಷಕನಾದ ಚಾವುಂಡರಾಯನ ವಿಷಯವಾದ ಗ್ರಂಥವೆಂದು ತೋರುತ್ತದೆ. ಈ ಪರಶುರಾಮಚರಿತವೂ ಚಕ್ರೇಶ್ವರಚರಿತವೂ ನಮಗೆ ದೊರೆತಿಲ್ಲ.

ಈ ಕವಿಯ ವಿಷಯವಾಗಿ ಇವನ ಗ್ರಂಥಗಳಿಂದ ಈ ಸಂಗತಿಗಳು ತಿಳಿಯುತ್ತವೆ:—

ಈತನು ಜೈನಕವಿ; ಬೆಳುಗರೆ ನಾಡಿನಲ್ಲಿರುವ ಬೆಳುಗಲಿ ಐನೂರಿನಲ್ಲಿಯ ಜಂಬುಖಂಡಿ ಎಪ್ಪತ್ತರಲ್ಲಿ ಶ್ರೇಷ್ಠವಾದ ಮುದುವೊಳಲಲ್ಲಿ ಸೌಮ್ಯಸಂವತ್ಸರದಲ್ಲಿ (949) ಹುಟ್ಟಿದನು; ಬಳೆಗಾರಕುಲಕ್ಕೆ ಸೇರಿದವನು. ಈತನ ತಾಯಿ ಅಬ್ಬಲಬ್ಬೆ; ತಂದೆ ಜಿನವಲ್ಲಭೇಂದ್ರ; ಸಹೋದರರು ದೃಢಬಾಹು, ರೇಚಣ, ಮಾರಯ್ಯ; ಹೆಂಡತಿಯರು ಜಕ್ಕಿ, ಶಾಂತಿ; ಮಗ ರಾಯ; ಮಗಳು ಅತ್ತಿಮಬ್ಬೆ. ಇವನ ಗುರು ಅಜಿತಸೇನಾಚಾರ್ಯ[1]; ಸ್ವಾಮಿ ಚಾವುಂಡರಾಯ. ಇವನಿಗೆ ತೈಲಪನು (973–997)

---

1. ಈತನೇ ಚಾವುಂಡರಾಯನಿಗೂ ಮೊದಲನೆಯ ನಾಗವರ್ಮನಿಗೂ ಗುರು.

**ಕವಿಚಕ್ರವರ್ತಿಯೆಂಬ ಬಿರುದನ್ನು ಕೊಟ್ಟನು.**[1] **ಈತನು ಮೊದಲು ಸಾಮಂತ** ರಲ್ಲಿಯೂ ಮಂಡಲೇಶ್ವರರಲ್ಲಿಯೂ ಇದ್ದು ಬಳಿಕ ಸತ್ಯಾಶ್ರಯನಲ್ಲಿ (997–1009) "ಉದಯಪರಂಪರೆಯು" ನ್ನು ಹೊಂದಿದನು; ಕನಕದಂಡ, ಚಾಮರ, ಆನೆ, ಛತ್ರ ಮೊದಲಾದ ಬಿರುದುಗಳನ್ನು ಪಡೆದಿದ್ದನು. ಅಜಿತಪುರಾಣವನ್ನು ಶಕ 915 ನೆಯ ವಿಜಯವರ್ಷದಲ್ಲಿ—ಎಂದರೆ ಕ್ರಿ. ಶ. 993 ರಲ್ಲಿ—ಬರೆದನು.

ಈತನಿಗೆ ಕವಿರತ್ನ, ಅಭಿನವಕವಿಚಕ್ರವರ್ತಿ, ಕವಿಕುಂಜರಾಂಕುಶ. ಕವಿಚಕ್ರವರ್ತಿ, ಉಭಯಕವಿ,' ಎಂಬ ಬಿರುದುಗಳುಂಟು. ಅಲ್ಲದೆ—

ಕವಿಮುಖಚಂದ್ರಂ ಕವಿಚ । ಕ್ರವರ್ತಿ ಕವಿರಾಜಶೇಖರಂ ಕವಿರಾಜಂ ।
ಕವಿಜನಚೂಡಾರತ್ನಂ । ಕವಿತಿಲಕಂ ಕವಿಚತುರ್ಮುಖಂ ಕವಿರತ್ನಂ ॥

ಎಂಬ ಪದ್ಯದಲ್ಲಿ ಇತರ ಬಿರುದುಗಳನ್ನೂ ಹೇಳಿಕೊಂಡಿದ್ದಾನೆ.

ಈತನು ತನಗೆ ಹಿಂದೆ ಇದ್ದ ಕವಿಗಳಲ್ಲಿ ಪಂಪನನ್ನೂ ಹೊನ್ನನನ್ನೂ ಹೊಗಳಿ ಅವರ ವಿಷಯವಾಗಿಯೂ ತನ್ನ ವಿಷಯವಾಗಿಯೂ ಹೀಗೆ ಬರೆದಿದ್ದಾನೆ —ಪಂಪನಿಂದ 'ವಾಗ್ವಿಭವೋನ್ನತಿ ನೆಗಟ್ದುದು.' 'ಅವನ ಗುಣದೊಳಗೆಸೆದಿರ್ದ' ಉಭಯಕವಿಚಕ್ರವರ್ತಿಗೂ (ಹೊನ್ನ) ಅಭಿನವಕವಿಚಕ್ರವರ್ತಿಗೂ (ತಾನು) ಸಮಾನರುಂಟೇ? ಕವಿಗಳಲ್ಲಿ ಕವಿತಾಗುಣಾರ್ಣವ (ಪಂಪ), ಕವಿರತ್ನ, ಇವರಿಬ್ಬರೇ ಪುಣ್ಯವಂತರು; ಇವರಿಬ್ಬರೇ ಕೃತಾರ್ಥರು. ಆದಿಪುರಾಣವನ್ನು ರಚಿಸಿದುದರಿಂದ ಪಂಪನು ದ್ವಿಜವಂಶಧ್ವಜವಾದನು. ಅಜಿತಪುರಾಣವನ್ನು ರಚಿಸಿದುದರಿಂದ ರನ್ನನು ವೈಶ್ಯವಂಶಧ್ವಜವಾದನು. ಹಿಂದೆ ಪಂಪನೂ ಪೊನ್ನನೂ ರಟ್ಟರಾಜ್ಯದಲ್ಲಿ ಪ್ರಖ್ಯಾತರಾದರು; ಉಭಯಕವಿಯಾದ ಕವಿರತ್ನನು ಚಾಳುಕ್ಯರಾಜ್ಯದಲ್ಲಿ ಪ್ರಖ್ಯಾತನಾದನು.

ಈ ಕವಿಯನ್ನು **ಅಭಿನವಪಂಪ** (ಸು. 1100), **ನಯಸೇನ** (1112), **ಪಾರ್ಶ್ವ** (1205), **ಮಧುರ** (ಸು. 1385), **ಮಂಗರಸ** (1508), ಮೊದಲಾದ ಕವಿಗಳು ಹೊಗಳಿದ್ದಾರೆ. **ನಾಗವರ್ಮಕೇಶಿರಾಜರು** ಇವನ ಗ್ರಂಥಗಳಿಂದ ಪದ್ಯಗಳನ್ನು ಉದಾಹರಿಸಿದ್ದಾರೆ.

ಈತನು ಸಂಸ್ಕೃತಕವಿಗಳಲ್ಲಿ ರಾಮಾಯಣಭಾರತಕರ್ತೃಗಳಾದ ವಾಲ್ಮೀಕಿ ವ್ಯಾಸರನ್ನೂ ಪದ್ಯರಚನೆಯಲ್ಲಿ ಖ್ಯಾತನಾದ ಕಾಳಿದಾಸನನ್ನೂ ಗದ್ಯರಚನೆಯಲ್ಲಿ ಖ್ಯಾತನಾದ ಬಾಣನನ್ನೂ ಕನ್ನಡಕವಿಗಳಲ್ಲಿ ಪಂಪಪೊನ್ನರನ್ನೂ ಸ್ತುತಿಸಿದ್ದಾನೆ.

---

1. ಪಡೆಯೆಡೆಯ ಕಡೆಯ ಒಡವರ್ । ಕುಡೆ ಪಡೆದನೊ ಚಕ್ರವರ್ತಿಯೊಳ್ ತೈಲಪನೊಳ್ ।
ಪಡೆದಂ ಮಹಿಮೋನ್ನತಿಯಂ । ಪಡೆದಂ ಕವಿಚಕ್ರವರ್ತಿವೆಸರಂ ರನ್ನಂ ॥
ಜನ್ನನೂ ಈಯಂಶವನ್ನು ಹೇಳಿದ್ದಾನೆ. ಜನ್ನನ ಚರಿತೆಯನ್ನು ನೋಡಿ.

ಇವನು ಕ್ಲಿಷ್ಟಕವಿತೆಯನ್ನು—

ಕಾರಕಪೂರಕವಸ್ತುವಿ । ಚಾರಕನಿಸ್ತಾರಕರ್ಕಶೋಳಿಯೆ ಸಭೆಗೊ ।
ಟ್ಟೋರಂತೆ ನಾಲ್ವರಿರ್ದು ವಿ । ಚಾರಂಬೇೞ್ವಂತೆ ಪೇೞ್ದ ಕೃತಿಯುಂ ಕೃತಿಯೇ ? ॥
ದರವುರಮುವುಂಟಸುಂಟಿಯು । ಮರಿಪೊರಕನುಮೆನಿಸಿ ತರತರಂ ನುಡಿದು ಸಭಾಂ ।
ತರದೊಳ್ ರಂಜಿಪುದೆ ರಸಾಂ । ತರಂಗಳಂ ಮುಟ್ಟಿ ನುಡಿದು ರಂಜಿಸವೇಡಾ ॥
ಸರಸತಿಯನಬಲೆಯುಂ ಗೋ । ಣ್ಮರಿಗೊಂಡರ್ಥಕ್ಕೆ ಕುದಿದು ನೋಯಿಸುವವನ ।
ಕ್ಕರಿಗನೆ ಪಾತಕನಾತನೆ । ಸರಸ್ವತೀದ್ರೋಹನವನನಾರ್ ಮುಟ್ಟುವರೋ ॥

ಎಂಬ ಪದ್ಯಗಳಲ್ಲಿ ನಿಂದಿಸಿ, ತನ್ನ ಸರ್ವೋತ್ಕೃಷ್ಟವಾದ ಉಭಯಕವಿತಾಚಾತು ರ್ಯಾದಿಗಳನ್ನು ಈ ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ :—

ಕೊಂಡಾಟದ ಸಾಮಂತರ । ಮಂಡಲಿಕರ ಸಕಲಚಕ್ರವರ್ತಿಗಳ ಸಭಾ ।
ಮಂಡಲದೊಳುಭಯಕವಿಮುಖ । ಮಂಡನಮಾಗಿರ್ಪ ರತ್ನಮಾಕವಿರತ್ನಂ ॥
ವಸುಧೆಯೊಳಗೊಂದು ರತ್ನಮ । ದೆಸೆದಿರ್ದುದು ಪಲವು ರತ್ನಮಿಲ್ಲಿಂಬಿನಮೇಂ ।
ಮುಸುಳಿಸಿದನೊ ಬಹುರತ್ನಾ । ವಸುಂಧರಾ ಎಂಬ ವಾಕ್ಯಮಂ ಕವಿರತ್ನಂ ॥
ಆರಾತಿಯಕವಿಪುಂಗವ । ರಾರುಂ ಮುನ್ನಾರ್ತರಿಲ್ಲ ವಾಗ್ದೇವಿಯ ಭಂ ।
ಡಾರದ ಮುದ್ರೆಯನೊಡೆದಂ । ಸಾರಸ್ವತಮನಿಪ ಕವಿತೆಯೊಳ್ ಕವಿರತ್ನಂ ॥
ಕನ್ನಡಮೆರಡಱುನೂಱಱ । ಕನ್ನಡಮಾತಿರುಳ ಕನ್ನಡಂ ಮಧುರವ್ಯೋ ।
ತ್ಪನ್ನಂ ಸಂಸ್ಕೃತಮೆನೆ ಸಂ । ಪನ್ನಂ ನೆಗೞ್ದುಭಯಕವಿತೆಯೊಳ್ ಕವಿರನ್ನಂ ॥
ರತ್ನಪರೀಕ್ಷಕನಾಂ ಕೃತಿ । ರತ್ನಪರೀಕ್ಷಕನೆನೆಂದು ಫಣಿಪತಿಯು ಫಣಾ ।
ರತ್ನಮುಮಂ ರನ್ನನ ಕೃತಿ । ರತ್ನಮುಮಂ ಪೇೞಿಮ್ ಪರೀಕ್ಷಿಪಂಗೆಂಟೆರ್ದೆಯೇ ? ॥
ರಸಮಂ ಭಾವಮುಮಂ ಕಾ । ಳಸಮಂ ಕುಣಿಕೆಯುಮನಱಿದು ಕವಿಮಾರ್ಗದೊಳಂ ।
ಪೊಸದೇಸೆಯ ನುಡಿಗಳೊಳಂ । ಪೊಸಯಿಪ ಬಲ್ಮೆಗೆ ಚತುರ್ಮುಖಂ ಕವಿರನ್ನಂ ॥
ಅವನಿಪರೊಳ್ ನಿಜಭುಜಚ । ಕ್ರವರ್ತಿ ರಣಜಯಕೆ ತೈಲನೆಂತಸಹಾಯಂ ।
ಕವಿಗಳೊಳಮಂತೆ ಕವಿಚ । ಕ್ರವರ್ತಿ ಕವಿರತ್ನನಂತು ಕೃತಿಗಸಹಾಯಂ ॥
ಮತಿ ಕೋಶಂ ಪದವಿದ್ಯೆ ಕಂಠಿಕೆ ಜಸಂ ಶ್ವೇತಾತಪತ್ರಂ ಸರ ।
ಸ್ವತಿ ಮಾದೇವಿ ಪದೋಕ್ತಿ ಭೇರಿ ಕಳಿತಂ ಸಿಂಹಾಸನಂ ಸಂದಲಂ ॥
ಕೃತಿ ಚಂಚಚ್ಚಮರೀಜಮಾಗೆ ಕವಿತಾಸಾಮ್ರಾಜ್ಯಮಂ ತಾಳ್ದಿದು ।
ನ್ನತಿಯಿಂದಂ ಕವಿಚಕ್ರವರ್ತಿವೆಸರೇಂ ರನ್ನಂಗೆ ಮೆಯ್ವೆತ್ತುದೋ ॥

ಇವನ ಗ್ರಂಥಗಳಲ್ಲಿ—

## 1. ಅಜಿತಪುರಾಣ.

**ಇದು ಎರಡನೆಯ ತೀರ್ಥಕರನಾದ ಅಜಿತನಾಥನ ಚರಿತೆ; ಚಂಪೂರೂಪವಾಗಿದೆ; 12 ಆಶ್ವಾಸಗಳಾಗಿ ಭಾಗಿಸಲ್ಪಟ್ಟಿದೆ. ಈ ಪುರಾಣಕ್ಕೆ ಕವಿ 'ಕಾವ್ಯರತ್ನ,' 'ಪುರಾಣತಿಲಕ' ಎಂಬ ಹೆಸರುಗಳನ್ನು ಇಟ್ಟಿದ್ದಾನೆ. ಇದರ ಉತ್ಕೃಷ್ಟತೆಯನ್ನು–**

ಇನಿತುಪಪತ್ತಿಯಿಲ್ಲಿನಿತು ಬಿನ್ನಣಮಿಲ್ಲಿನಿತರ್ಥದೃಷ್ಟಿಯಿ |
ಲ್ಲಿನಿತುಚಿತೋಕ್ತಿಯಿಲ್ಲಿನಿತಳಂಕೃತಿಯಿಲ್ಲಿನಿತಾಗಮಾರ್ಥಮಿ ||
ಲ್ಲಿನಿತುವರಂ ಪ್ರಬೋಧಮಣಮಿಲ್ಲ ಪೆಱಗ್ಗಿದು ಕಾವ್ಯರತ್ನಮಂ |
ಡನಮೆನೆ ಮೆಚ್ಚಿ ಬಣ್ಣಿಸದರಾರ್ ಕವಿರತ್ನನ ಕಾವ್ಯರತ್ನಮಂ ||

**ಎಂಬ ಪದ್ಯದಲ್ಲಿ ಹೇಳುತ್ತಾನೆ.[1]**

**ಈ ಗ್ರಂಥವನ್ನು ಬರೆವುದಕ್ಕೆ ಕಾರಣವನ್ನು ಹೀಗೆ ಹೇಳುತ್ತಾನೆ:—**

ಪೊನ್ನನಿಂದ ಶಾಂತಿಪುರಾಣವನ್ನು ಬರಯಿಸಿದ ಮಲ್ಲಪನೂ ಪುನ್ನಿಮಯ್ಯನೂ ತೈಲಪನ (973–997) ಚಮೂಪತಿಗಳಾಗಿದ್ದರು. ಅವರಲ್ಲಿ ಪುನ್ನಿಮಯ್ಯನು ಗೋವಿಂದರನೆಂಬ ದ್ರೋಹಿಯೊಡನೆ ಯುದ್ಧಮಾಡಿ ಕಾವೇರಿಯ ತೀರದಲ್ಲಿ ಮೃತನಾದನು. ಮಲ್ಲಪನು ತೈಲಪನ ಕಾಲವಾದಮೇಲೆ ರಾಜ್ಯವಾಳಿದ, ಇಱಿವಬೆಡಂಗ ಎಂಬ ಬಿರುದುಳ್ಳ, ಸತ್ಯಾಶ್ರಯನ (997–1009) ಆಸ್ಥಾನದಲ್ಲಿ ಮುಖ್ಯಾಧಿಕಾರಿಯಾಗಿದ್ದನು. ಈತನಿಗೆ ಐವರು ಗಂಡುಮಕ್ಕಳೂ ಮೂವರು ಹೆಣ್ಣುಮಕ್ಕಳೂ ಇದ್ದರು. ಹೆಣ್ಣುಮಕ್ಕಳಲ್ಲಿ ಅತ್ತಿಮಬ್ಬೆ, ಗುಂಡಮಬ್ಬೆ ಎಂಬಿಬ್ಬರನ್ನು ಚಾಳುಕ್ಯಚಕ್ರವರ್ತಿಯ ಮಹಾಮಂತ್ರಿಯಾದ ದಲ್ಲಿಪನ ಮಗ ನಾಗದೇವನಿಗೆ ವಿವಾಹಮಾಡಿಕೊಟ್ಟನು. ಈಯತ್ತಿಮಬ್ಬೆಯ ಗರ್ಭದಲ್ಲಿ ಪಡೆವಳತೈಲ ಎಂಬ ಬಿರುದುಳ್ಳ ಅಣ್ಣಿಗದೇವನೆಂಬ ಪುತ್ರನು ಜನಿಸಿದನು. ಹೀಗಿರುತ್ತಿರಲು ನಾಗದೇವನು ಕುಮುರರ ಕಾಳಗದಲ್ಲಿ ತನ್ನ ಸಾಹಸವನ್ನು ತೋರಿಸಿ ಮಹಾರಾಜನನ್ನು ಮೆಚ್ಚಿಸಿ ಸೇನಾಪತಿಪದವಿಯನ್ನು ಹೊಂದಿದನು. ಅನಂತರ ಪಂಚಲನನ್ನು ಜಯಿಸಿ ಕರಹಡದೇಶದಿಂದ ಮಲ್ಲಮನನ್ನು ಓಡಿಸಿದನು. ಹೀಗೆ ಇನ್ನೂ ಅನೇಕ ಯುದ್ಧಗಳಲ್ಲಿ ಜಯವನ್ನು ಪಡೆದು ಕೊನೆಗೆ ಮೃತನಾದನು. ಆಗ ಅವನ ಕಿರಿಯ ಹೆಂಡತಿ ಗುಂಡಮಬ್ಬೆ ತನ್ನ ಅಕ್ಕನಾದ ಅತ್ತಿಮಬ್ಬೆಯ ಬಳಿಗೆ ಹೋಗಿ—"ನೀನು ಪುತ್ರವತಿಯಾದುದರಿಂದ ಮಗನನ್ನು ಪರಾಮರಿಸಿ ಕೊಂಡಿರು. ನಾನು ಪತಿಯೊಡನೆ ಸಹಗಮನವನ್ನು ಮಾಡುತ್ತೇನೆ" ಎಂದು ಹೇಳಿ ಪತಿಯೊಡನೆ ದೇಹತ್ಯಾಗಮಾಡಿದಳು. ಬಳಿಕ ಅತ್ತಿಮಬ್ಬೆ ವ್ರತನಿಷ್ಠಳಾಗಿ ಸಾವಿರಾರು

---

1. ಈ ಕವಿಯ ಗ್ರಂಥವನ್ನು ಪಾರ್ಶ್ವಪಂಡಿತನು (1205)—

ರತ್ನಕೃತಿಪದಕಮಂ ನುತ | ನೂತ್ನಾರ್ಥವ್ಯಕ್ತಿಯುಕ್ತಮಂ ಸತ್ಕೃತಿಯಂ |
ಯತ್ನದೆ ಸುಜನರ್ ವಿಜಿತಸ | ಪತ್ನಮನತಿಪೃಥುಳಹೃದಯದೊಳ್ ತಳೆಯದರಾರ್ ||

ಎಂದು ಸ್ತುತಿಸಿದ್ದಾನೆ.

ಮಣಿಕನಕಮಯಜಿನಪ್ರತಿಮೆಗಳನ್ನು ಮಾಡಿಸಿ ವಿಶೇಷಪ್ರಖ್ಯಾತಿಹೊಂದಿ ತನ್ನ ತ್ಯಾಗದಿಂದ ಜಗವೆಲ್ಲಾ ದಾನಚಿಂತಾಮಣಿ ಎಂದು ತನ್ನನ್ನು ಹೊಗಳುವಂತೆ ಮಾಡಿದಳು. ಆಕೆಯ ಇಷ್ಟಾನುಸಾರವಾಗಿ ಕವಿ ಈ ಪುರಾಣವನ್ನು ಬರೆದನು.

ಗ್ರಂಥಾವತಾರದಲ್ಲಿ ಕವಿ ಅಜಿತಜಿನನನ್ನು ಸ್ತುತಿಸಿದ್ದಾನೆ. ಬಳಿಕ ಸಿದ್ಧಾದಿಗಳನ್ನು[1] ಸ್ತುತಿಸಿ, ಮಲ್ಲಪ, ಪುನ್ನಿಮಯ್ಯ ಇವರ ವಂಶಾದಿಗಳನ್ನು ಹೇಳಿ, ದಾನಚಿಂತಾಮಣಿಯೆಂದು ಪ್ರಸಿದ್ಧಳಾಗಿದ್ದ ಅತ್ತಿಮಬ್ಬೆಯನ್ನು ವಿಶೇಷವಾಗಿ ಹೊಗಳಿ,[2] ತರುವಾಯ ಕಥೆಯನ್ನು ಆರಂಭಿಸಿದ್ದಾನೆ. ಆಶ್ವಾಸಗಳ ಕೊನೆಯಲ್ಲಿ—

ಇದು ಸಕಲಮುನೀಂದ್ರವೃಂದವೃಂದಾರಕ ಶ್ರೀಮದಜಿತಸೇನಭಟ್ಟಾರಕಶ್ರೀಪಾದ ಪದ್ಮಪ್ರಸಾದಾಸಾದಿತರತ್ನತ್ರಯಾಲಂಕೃತ ಶ್ರೀಮದುಭಯಕವಿಚಕ್ರವರ್ತಿ ಕವಿರತ್ನಸುನಿರ್ಮಿತ ಶ್ರೀದಾನಚಿಂತಾಮಣಿನಿವಾರ್ಪಿತ ಶ್ರೀಮದಜಿತತೀರ್ಥಕರಪುರಾಣತಿಲಕದೊಳ್

ಎಂಬ ಗದ್ಯವಿದೆ.

ಈಕವಿ ಬಹಳ ಪ್ರಸಿದ್ಧನು. ಇವನ ಬಂಧವು ಸರಸವಾಗಿಯೂ ಪ್ರೌಢವಾಗಿಯೂ ಇದೆ. ಇವನ ಪದಸಾಮಗ್ರಿಯೂ ರಚನಾಶಕ್ತಿಯೂ ಬಂಧಗೌರವವೂ ಆಶ್ಚರ್ಯಾವಹವಾಗಿವೆ. ಪದ್ಯವನ್ನು ಆರಂಭಿಸಿದರೆ ಮಧ್ಯದಲ್ಲಿ ಅವ ತಡೆಯೂ ಇಲ್ಲದೆ ಕೊನೆಯವರೆಗೂ ಪ್ರವಾಹರೂಪವಾಗಿಯೂ ಹೃದಯಂಗಮವಾಗಿಯೂ ಪದಗಳು ಹೊರಡುವಂತೆ ಕಾಣುತ್ತವೆ. ಈ ಕಾರಣದಿಂದಲೇ **ಮಧುರನು** (ಸು. 1385) ಧರ್ಮನಾಥಪುರಾಣದಲ್ಲಿ ಹೊನ್ನ ರನ್ನ ಇವರ ಚಾತುರಿಯನ್ನು

ಬಿನ್ನಣದ ಕುಸುರಿ ಪಸರಿಸು | ವನ್ನಂ ಗುಣಜಾತಿಬಂಧಮುಳವಡ ನೆಗಳ್ದಾ |
ಪೊನ್ನಂ ರನ್ನಂ ಕೂಡಿದೊ | ಡಿನ್ನಾಗಳುಗೆ ಭೂಷಣಂ ಪಱತುಂಟೇ ||

ಎಂದು ಚಮತ್ಕಾರವಾಗಿ ವರ್ಣಿಸಿದ್ದಾನೆ.

ಈ ಪುರಾಣದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ.—

ವಸಂತ.

ಎಳವೆಳಲ ಮಾವೆ ಕೆಂದಳಿರೆ ನಾಲಗೆ ಮಾಮರನಗ್ರಗೊಂಬಿನೊಳ್ |
ಪೊಳೆವೆಳವಕ್ಕಿ ಪಾಡುಮರೆದೆಂಗಳೆ ಕಾವನುಂಬಿನಂ ಮಸಂ ||

---

1 ಸಿದ್ಧರು, ಆಚಾರ್ಯರು, ಉಪಾಧ್ಯಾಯರು, ಸಾಧುಗಳು, ಶಾಸನದೇವಿಯರು, ತನ್ನ ಗುರುವಾದ ಅಜಿತಸೇನಮುನಿ, ಆರ್ಹತ್ಸಿದ್ಧಸಾಧುಧರ್ಮ, ಜಿನಾಗಮ, ಗಣಧರಸೇನಾನಾಯಕನಾದ ಸಿಂಹಸೇನ, ಸರಸ್ವತಿ, ಯಕ್ಷಿಯಕ್ಷರು, ಧರ್ಮಚಕ್ರ.

2. ಈಕೆಯನ್ನು ಸ್ತುತಿಸುವಾಗ—ದಾನಮಾಡುವುದರಲ್ಲಿ ಬೂತುಗ, ನೊಳಂಬಾಂತಕ, ಚಾವುಂಡರಾಯ, ಶಂಕರಗಂಡ, ಇವರು ಪ್ರಸಿದ್ಧರು. ಇವರಿಗಿಂತ ಈಕೆ ಪ್ರಸಿದ್ಧಳು—ಎಂದು ಹೇಳುತ್ತಾನೆ

ಗೊಳೆ ಮಧುಮಾಸಕೇಸರಿ ವಿಯೋಗಿಗಳೆಂಬ ಮೃಗಂಗಳಂ ಭಯಂ |
ಗೊಳಿಸಿದುದುತ್ಕಕೀರಮದಕೋಕಿಲಗರ್ಜಿತತರ್ಜಿತಂಗಳಿಂ [1] || 108 ||

ನವಸಹಕಾರದಂಕುರದಿನಂಕುರಿಸಿತ್ತು ಪೊಸಟ್ಟು ನೀಳ್ದ ಪ |
ಲ್ಲವತತಿಯಿಂದೆ ಪಲ್ಲವಿಸಿತುನ್ಮದಭೃಂಗಕುಳಕ್ಕೆ ಕಂಪುವೀ ||
ಱುವ ಕುಸುಮಂಗಳಿಂ ಕುಸುಮಿಸಿತ್ತು ಶುಕವ್ರಜಮುತ್ಸುಕತ್ವದಿಂ |
ಸವಿವ ಫಲಂಗಳಿಂ ಫಲಿತಮಾಯ್ತು ಮನೋಜಮನೋರಥದ್ರುಮಂ || 109 ||

## ಚಂದ್ರ.

[2] ಜಗದಾಲೋಕನದರ್ಪಣಂ ಪ್ರಥಮದಿಕ್ಕಾಂತಾನನಂ ಕಂತುರಾ |
ಜಗಜೋದ್ದೀಪನಸಿಂಧುಮಂಬರಸರಸ್ಸತ್ತ್ವಂಸಹಂಸಂ ವಿಯೋ ||
ಗಿಗಣಾಕೂತಕುರಂಗಪ್ರೋತಭಯಕೃತ್ಕಂಠೀರವಂ ಚೆಲ್ವನೆ |
ತ್ತೊಗೆದತ್ತರ್ಣವವೀಚಿನರ್ತನನಟಂ ಬಿಂಬಂ ಸುಧಾಸೂತಿಯಾ || 110 ||

## ಚಂದ್ರಿಕೆ.

[2] ಬೆಲಗಸೆದಿಪ್ಪಿಕೊಂಡು ಕುಡಿಯಲ್ ಮೊಗೆಯಲ್ ಕೊಡಗೊಂಡು ತಿರ್ದಿ ಬ |
ಚ್ಚಲನೆಳಸೋಂಟಿಮೊಳ್ ಪರಿಯಿಸಲ್ ಪಜಿಗೋಲ್ಗಳಸಿಕ್ಕಿ ಪಾಯಿಸಲ್ ||
ನೆಱೆಯಿಸಿಸೆಂದು ಸೊಂದಿಕೊಳವೊಕ್ಕು ಘುಡುಮ್ಮಿ ಜಿಂದಾಡಲೀಸಲ |
ಗ್ಗಲಿಸಿದಲಂಪಿನಿಂ ಬಗೆದುದಂದು ಜನಂ ಘನಚಂದ್ರಿಕಾಂಬುವಂ || 111 ||

## ಸೂರ್ಯೋದಯ.

ನಾಸವದಿಕ್ತಟಂ ಪಮದ ಮೂಷ ತಮಂ ಸುರಿದಿರ್ದಲಬ್ಬಸಂ |
ನಾಸಿ ಸಮಾಪನೇರಣೆಗನಾಗ ಸ್ಪದಾಘದ ದೀಪ್ತಿವರ್ತಿಯೊಳ್ ||
ಕಾಸೆ ತೆರಳ್ದು ಪಿಂಜರಿಯುತ್ತೋಲ್ ಕೆಸುಸಂಜೆ ತೆರಳ್ಸಿನಂ ಪದಂ |
ಗಾಸಿನ ಪೊನ್ನ ಗಟ್ಟಿಯುಪ್ರೊಲೊಪ್ಪಿದುದುಷ್ಣಕಭಾನುಮಂಡಲಂ || 112 ||

## ಪ್ರಭಾತ.

ಕೇಳ್ವನಜಾನನೇ ಪಥರಜೋಚನೆ ಪದ್ಮಿನಿ ಪದ್ಮಬಾಂಧವಂ |
ಬಳ್ವಳಿಸಿಡಿದಂ ಕರಸಹಸ್ರಮನೆಂದು ಕಳಸ್ವನಂ ಮಸಂ ||
ಗೊಳ್ವಸೆಗಂ ಕಲಕ್ಕಳಿಸಿ ಸಂತಸವಾರ್ತಿಸ ಪೂರ್ಣಪಾತ್ರಮಂ |
ಕೊಳ್ವವೊಲೀಟ್ಟುಕೊಂಡುವಳಿಗಳ್ ಸುಮನೋಮಕರಂದಗಂಧಮಂ || 113 ||

---

1. ಶಬ್ದಮಣಿದರ್ಪಣದಲ್ಲಿ ಉದಾಹೃತವಾಗಿದೆ—ಪು. ೩1
2. ನಾಗವರ್ಮನ ಕಾವ್ಯಾವಲೋಕನದಲ್ಲಿ ಉದಾಹೃತವಾಗಿದೆ.

### ಸ್ತ್ರೀಜನ.

ವಿಳಸಿತಪುಂಡರೀಕಚರಣಂ ಕುಮುದೇಕ್ಷಣಕಾಂತಮುಂಜನಾ |
ಕುಳಿತವಿಲೋಚನಂ ಸ್ವಗತನಾಮಗಮನ್ವಿತಸುಪ್ರತೀಕಮು ||
ಜ್ವಳತರಪುಷ್ಪಗಂತಮುಮರೇಭಗತಂ ಗೃಹಸಾರ್ವಭೌಮುಮು |
ಗ್ಗಳಮೆಸೆದತ್ತು ದಿಗ್ವಳಯದಂತೆ ನಿಶಾಂತದೊಳಂಗನಾಜನಂ || 114 ||

### ಸ್ತ್ರೀಶೋಕ.

ಪಡಪಡನಾಯ್ತು ಮೆಲ್ಲೆರ್ದೆಗಳಂ ಕರಯುಗ್ಮದಿನೊತ್ತಿ ಕಣ್ಣ ನೀ |
ರಡಿಗಡಿಗುಣ್ಮಿ ಪಾಯ್ತರೆ ಮುಖೇಂದು ಬಿಗುರ್ತಿರೆ ಸುಯ್ಯು ಬೆಂಕೆಯಾ ||
ನಿಡುಪಮುಳುಂಬಮುಪ್ಪಿನೆಗವಿಾಶನದೆಲ್ಲಿದನೆತ್ತವೋದನಾ |
ವೆಡೆಯುನಧೀಶನೆಂದು ಪಲವಾಡಿದರಂದಜಿತಾಂಗನಾಜನಂ || 115 ||

### ವಿರಕ್ತಿ.

ಸಾರದೆ ಸಾರಮಪ್ಪ ಜಿನಧರ್ಮಮನಾತ್ಮನಸಾರಮಪ್ಪುದಂ |
ಸಾರಮಿದೆಂದು ನಂಬಿ ತನಗಲ್ಲದುದಂ ತನಗಪ್ಪುದೆಂದು ಕೇ ||
ದಾರವಿಹಾರಸೋದರಕೃಶೋದರಸುಂದರದಾರದಾರಕೋ |
ದಾರವಿಮೋಹದೊಳ್ ತೊಡರ್ದು ದಾರುಣದುಃಖಮನೆಯ್ದುದಿರ್ಕಮೇ || 116 ||

## 2. ಸಾಹಸಭೀಮವಿಜಯ ಅಥವಾ ಗದಾಯುದ್ಧ.

ಈ ಗ್ರಂಥವು ಚಂಪೂರೂಪವಾಗಿದೆ; 10 ಆಶ್ವಾಸಗಳಾಗಿ ಭಾಗಿಸಲ್ಪಟ್ಟಿದೆ. ಇದರಲ್ಲಿ—ಭೀಮನು ದ್ರೌಪದಿಯ ಮುಂದೆ ಪ್ರತಿಜ್ಞೆಮಾಡಿದಂತೆ ದುರ್ಯೋಧನನ ಮಕುಟವನ್ನೂ ತೊಡೆಗಳನ್ನೂ ಗದಾಯುದ್ಧದಲ್ಲಿ ಭಂಗಿಸಿ ಅವನನ್ನು ಕೊಂದು ಪಟ್ಟಾಭಿಷಿಕ್ತನಾದನು–ಎಂದು ವರ್ಣಿಸಿದೆ. ಇರಿವ ಬೆಡೆಂಗ, ಸಾಹಸಭೀಮ, ಚಾಳುಕ್ಯನಾರಾಯಣ, ಅಕಳಂಕಚರಿತ, ಅಮ್ಮನ ಗಂಧವಾರಣ, ಸಾಹಸಾಂಕ ಎಂಬ ಬಿರುದುಗಳುಳ್ಳ ಸತ್ಯಾಶ್ರಯನ (997—1009) ಸಾಹಸಗಳನ್ನು ವರ್ಣಿಸಬೇಕೆಂದು ತನಗೆ ಆಶೆ ಹುಟ್ಟಿದುದರಿಂದ ಈ ರಾಜನನ್ನು ಕಥಾನಾಯಕನನ್ನಾಗಿ ಮಾಡಿ "ಭೀಮನೊಳ್ ಪೋಲಿಸಿಪೇಟ್ಟೆನೀಗದಾಯುದ್ಧಮಂ" ಎಂದು ಕವಿ ಹೇಳುತ್ತಾನೆ. ಈ ರಾಜನು "ನರಪತಿತೈಲಪಂ ಬೆಸಸೆ ಘೂರ್ಜರಸೇನೆಗೆ ಸೂಚಿಯಾನೆಯುಂ ಪರಿಯಿಸಿ ಗೆಲ್ದಂ" "ಕೊಂಕಣೇಶ್ವರನನಿದಿರ್ಚಿ ಸಾಧಿಸಿದಂ" "ಬಲವತ್ತುಂಗಕಳಿಂಗರಾಜಮದವನ್ಮಾತಂಗಸಿಂಗಂ" ಎಂದೂ, "ಸರ್ವಗ್ರಾಸಂಗೊಂಡತ್ತಪರಾದಿತ್ಯನ ಮಂಡಲಮಂ ಬಾಹುರಾಹು ಸತ್ಯಾಶ್ರಯನಾ" ಎಂದೂ ಹೇಳಿದ್ದಾನೆ. ಈ ಸತ್ಯಾಶ್ರಯನ ವಂಶಪರಂಪರೆಯನ್ನು ಈರೀತಿಯಾಗಿ ವರ್ಣಿಸಿದ್ದಾನೆ:—

ಅವರ ಪೂರ್ವಜರಪ್ಪರಸುಗಳೊಳಗೆ ಅಯೋಧ್ಯಾಪುರಪರಮೇಶ್ವರನುಂ ದಿಶಾದಂತಿ ಪ್ರಕಟಪ್ರಭಾವನುಮಪ್ಪ ಸತ್ಯಾಶ್ರಯವಲ್ಲಭನಿಂ, ವಿಷ್ಣುವರ್ಧನಾಪರನಾಮಧೇಯನಿಂ, ರಾಷ್ಟ್ರಕೂಟಗಜಘಟಾವಿಘಟನಸಿಂಹನೆನಿಸಿದ ಜಯಸಿಂಹದೇವನಿಂ, ಅತಿಪ್ರಬಲರಣರಾಮನೆನಿಸಿದ ರಣರಂಗಸಿಂಹನಿಂ, ವಾತಾಪಿಪುರವರೇಶ್ವರನೆನಿಸಿದ ಪುಲಕೇಶಿದೇವನಿಂ, ಪರಿರಕ್ಷಿತಪವಿತ್ರವರ್ಮನೆನಿಸಿದ ಕೀರ್ತಿವರ್ಮನಿಂ, ತತ್ತನಯನಪ್ಪೆರಡನೆಯ ಸತ್ಯಾಶ್ರಯದೇವನಿಂ, ಅವನ ಕಿಱಿಯ ಮಗನಪ್ಪ ಮಂಗಳಾರ್ಣವನಿಂ, ಸತ್ಯಾಶ್ರಯನಪ್ಪೆರಡನೆಯ ಸತ್ಯವ್ರತಿಯಿಂ, ತತ್ತನಯನಪ್ಪಾದಿತ್ಯವರ್ಮನಿಂ, ತದಪತ್ಯನಪ್ಪ ವಿಕ್ರಮಾದಿತ್ಯನಿಂ, ತತ್ಪುತ್ರನಪ್ಪ ದುರ್ಧರಮಲ್ಲನಿಂ, ತನ್ನಂದನನಪ್ಪ ನಿರವದ್ಯಾಪರನಾಮಧೇಯನಪ್ಪ ವಿಜಯಾದಿತ್ಯಭಟ್ಟಾರಕನಿಂ, ತತ್ಸೂನುಮಿತ್ರನಪ್ಪ ವಿಕ್ರಮಾರ್ಣವನೆನಿಸಿದ ಕೊಂಕಣವಿಕ್ರಮಾದಿತ್ಯನಿಂ, ತತ್ಸೂನುಮಿತ್ರನಪ್ಪ ಕೀರ್ತಿವರ್ಮನಿಂ, ಆತನ ಕಿಱಿಯ ಮಗನಪ್ಪ ಭೀಮಪರಾಕ್ರಮನಿಂ, ತಜ್ಜಾತನಪ್ಪೆರಡನೆಯ ಕೀರ್ತಿವರ್ಮನಿಂ, ತತ್ಸೂನುವಪ್ಪ ಪಿರಿಯ ತೈಲಪನಿಂ, ಆತನ ಮಗನಪ್ಪ ಮುಕುಂದಿಯ ಕೊಂದ ಕುಂದಿಯ ಭೀಮನಿಂ, ಆತನ ಮಗನಪ್ಪ ವಿಕ್ರಮಾದಿತ್ಯದೇವನಿಂ, ಆತನ ಮಗನಪ್ಪ ರಣರಂಗಮಲ್ಲನೆನಿಪ್ಪಯ್ಯಣದೇವನಿಂ, ಆತನ ಮಗನುತ್ತುಂಗಮಲ್ಲನೆನಿಸಿದ ವಿಕ್ರಮಾದಿತ್ಯನಿಂ, ಚಾಳುಕ್ಯಕುಲೋದ್ಭವನಪ್ಪ ವಿಕ್ರಮಾದಿತ್ಯದೇವಂಗಂ ಚೈದ್ಯಕುಲೋದ್ಭವೆಯಪ್ಪ ಬೊಂಕಾದೇವಿಗಂ ಪುಟ್ಟಿದ ಕರಹಟಭಯಂಕರಂ, ಪಲ್ಲಿಕೋಟೋಲ್ಲಂಘನಂ, ಭದ್ರಕವಿದ್ರಾವಣಂ, ಕೊಂಕಣಭಯಂಕರಂ, ಯಾದವಕುಲಾಂಬರದ್ಯುಮಣಿ, ರಣರಂಗಭೀಷಣಂ, ಸಾಮಂತಮೃಗಶಾರ್ದೂಲ, ರಣರಂಗರಾಕ್ಷಸ, ಅಕಲಂಕರಾಮ, ತಳವರ್ಗತಳಪ್ರಹಾರ, ಅರಿಷ್ಟಘರಟ್ಟ, ರಾಷ್ಟ್ರಕೂಟಕಾಳಕೂಟಂ, ಪಾಂಚಾಲಮದೇಭಪಂಚಾನನಂ, ಉತ್ಪಕ್ಕಮಲ್ಲಂ, ಶ್ರೀಮನ್ನೂರ್ಮಡಿತೈಲಪನೆನಿಸಿದಾಹವಮಲ್ಲದೇವನಿಂ ಚಾಳುಕ್ಯವಂಶಮುದಿತೋದಿತಮಾದುದು.

ಈ ಗ್ರಂಥವನ್ನು 'ವನರುಹಭವನೆನಿಸಿದ ದಂಡನಾಯಕಂ ಕೇಶಿ ತಿರ್ದೆಪೇೞ್ದಿಂ' ಎಂದು ಹೇಳುತ್ತಾನೆ. ಈ ಕೇಶಿದಂಡನಾಯಕನಾರೋ ತಿಳಿಯದು. ಕವಿ ಈ ಗ್ರಂಥದಲ್ಲಿ ಭಾರತದ ಕಥೆಯನ್ನೆಲ್ಲಾ "ಸಿಂಹಾವಲೋಕನಕ್ರಮ" ದಿಂದ ತಿಳಿಸಿರುವಂತೆ ಹೇಳುತ್ತಾನೆ. ಗ್ರಂಥಾವತಾರದಲ್ಲಿ ಶ್ಲೇಷೆಯಿಂದ ಚಾಳುಕ್ಯನಾರಾಯಣನನ್ನು ನಾರಾಯಣನಿಗೆ ಹೋಲಿಸಿ ವಿಷ್ಣುಸ್ತುತಿಮಾಡಿದ್ದಾನೆ. ಬಳಿಕ ಇದೇ ರೀತಿಯಾಗಿ ಈಶ್ವರನನ್ನೂ ಬ್ರಹ್ಮನನ್ನೂ ಸೂರ್ಯನನ್ನೂ ಮನ್ಮಥನನ್ನೂ ಕ್ರಮವಾಗಿ ಸ್ತುತಿಸಿ ಅನಂತರ ಸರಸ್ವತಿಯನ್ನೂ ಗಣನಾಯಕನನ್ನೂ ಸ್ತುತಿಸಿದ್ದಾನೆ. ಆಶ್ವಾಸಗಳ ಅಂತ್ಯದಲ್ಲಿ--

ಇದು ಸಮಸ್ತಭುವನವಲ್ಲಭ ಶ್ರೀಮದಾಹವಮಲ್ಲದೇವ ಶ್ರೀಪಾದಕಲ್ಪಪಾದಪಸದಾಶ್ರಯಾಸನ್ನವರ್ತಿ ಕವಿಚಕ್ರವರ್ತಿ ಕವಿರನ್ನ ವಿರಚಿತಮಪ್ಪ ಚಾಳುಕ್ಯಚಕ್ರವರ್ತಿ ಶ್ರೀಸಾಹಸಭೀಮವಿಜಯದೊಳ್

ಎಂಬ ಗದ್ಯವಿದೆ.

ನಮಗೆ ದೊರೆತ ಈ ಗ್ರಂಥದ ಪ್ರತಿಗಳೆರಡರ ಕೊನೆಯಲ್ಲಿಯೂ—

ಶಕಸಮಗತಿಋತುಯುಗಶಶಿ । ನಿಕರಾಂಕಂ ಚಿತ್ರಭಾನು . . . . ಕಾ ।
ರ್ತಿಕಸಿತಸಪ್ತಮಿ . . . . । ಸುಕರಂ ಬುಧಸೇವ್ಯಮಾಯ್ತು ರನ್ನನ ಕಾವ್ಯಂ ॥

ಎಂಬ ಅಸಮಗ್ರವಾದ ಪದ್ಯವಿದೆ. ಈಪದ್ಯದ ಅರ್ಥವು ವಿಶದವಾಗಿಲ್ಲ. ವರ್ಷಸಂಖ್ಯೆಯನ್ನು ನೋಡಿದರೆ ನಾಲ್ಕು ಅಂಕಗಳು ಇರುವಂತೆ ತೋರುತ್ತದೆ. ಶಕವರ್ಷ ಸಾವಿರವೂ ಚಿಲ್ಲರೆಯಾದರೆ ಅಜಿತಪುರಾಣವನ್ನು ಬರೆದ ಶಕ 915 ಕ್ಕೂ ಇದಕ್ಕೂ ಸಂಬಂಧವೇ ತೋರುವುದಿಲ್ಲ. 'ಶಶಿ' ಎಂಬುದಕ್ಕೆ ಒಂದು ಎಂಬ ಸಂಕೇತವುಂಟು. ಆದರೆ ಈ ಪದ್ಯದಲ್ಲಿರುವ "ಶಶಿನಿಕರ" ಎಂಬುದಕ್ಕೆ ಏನರ್ಥವೋ ತಿಳಿಯದು. ಈಪದ್ಯವು ಸಮಗ್ರವಾಗಿಯೂ ಸುಬದ್ಧವಾಗಿಯೂ ದೊರೆವ ವರೆಗೆ ಇದರ ಅರ್ಥವನ್ನು ನಿಶ್ಚಯಿಸುವುದು ಕಷ್ಟವಾಗಿದೆ. ಚಿತ್ರಭಾನುವರ್ಷ ಎಂಬುದರಿಂದ ಅಜಿತಪುರಾಣವನ್ನು ಬರೆದ ವಿಜಯವರ್ಷದಿಂದ ಈಚೆಯ ಚಿತ್ರಭಾನು ಎಂದು ಊಹಿಸುವಪಕ್ಷಕ್ಕೆ ಆ ಗ್ರಂಥವನ್ನು ಬರೆದ 49 ವರ್ಷಗಳ ಮೇಲೆ, ಕವಿಗೆ 93 ವರ್ಷಗಳಾಗಿದ್ದಾಗ, ಈ ಕೃತಿಯನ್ನು ರಚಿಸಿರಬೇಕಾಗುತ್ತದೆ; ಅಲ್ಲದೆ ಆಕಾಲದ ರಾಜನೇ ಬೇರೆ; ಆದುದರಿಂದ ವಿಜಯವರ್ಷಕ್ಕೆ ಹಿಂದಣ ಚಿತ್ರಭಾನುವಿನಲ್ಲಿ—ಎಂದರೆ, ಶಕ 905 ರಲ್ಲಿಯೇ (982)—ಈ ಗ್ರಂಥವನ್ನು ಬರೆದಿರಬೇಕು.

ಈ ಗ್ರಂಥದಲ್ಲಿ ಕವಿ ತನ್ನ ವಾಕ್ಪ್ರೌಢಿಮೆಯ ಪರಾಕಾಷ್ಠೆಯನ್ನು ತೋರಿಸಿದ್ದಾನೆ; ಮುಖ್ಯವಾಗಿ ವೀರರಸವನ್ನು ಬಹಳಶ್ಲಾಘ್ಯವಾಗಿ ನಿರೂಪಿಸಿದ್ದಾನೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ:—

ದುರ್ಯೋಧನವಧಾನಂತರ "ಇದುವರೆಗಂ ಕುರುಮಹೀಪತಿಯೊಳ್ ನೆಲಸಿರ್ದನೀಗಳುತ್ತಮಪುರುಷೋತ್ತಮಂ ಬಯಸೆ ಪಾಂಡವರೊಳ್ ನೆಲಸಲ್ಕೆ ಪೋದಪೆಂ" ಎಂದು ಹೇಳಿದ ಲಕ್ಷ್ಮಿಯನ್ನು ನೋಡಿ ಅಶ್ವತ್ಥಾಮನುಕ್ತಿ—

ಕಲಿ ಪಂದೆಯೆಂದು ಬಗೆಯದೆ । ಕುಲಜಂ ಕುಲಹೀನನೆಂದು ಬಗೆಯದೆ ತರುಣಂ ।
ಸಲೆ ವೃದ್ಧನೆಂದು ಬಗೆಯದೆ । ನೆಲಸುವೆ ನಿನ್ನಿಂ ನಿಕೃಷ್ಟರೆಂಬರುಮೊಳರೇ ॥ 117 ॥

ಇಱಿಯಿಸುವೆ ತಂದೆಮಕ್ಕಳ । ನಿಱಿಯಿಸುವಯ್ ಸೋದರರ್ಕಳಂ ತಮ್ಮೊಳ್ ತ ।
ಳ್ತಿಱಿಯಿಸುವಯ್ ಗುರುಶಿಷ್ಯರ । ನಱಗುಲಿ ನಿನ್ನಂತು ಕಷ್ಟೆಯಾದರುಮೊಳರೇ ॥ 118 ॥

ಪೊಡಮಡೆ ಪರಸವೆ ಬಿನ್ನವಿ । ಪೊಡೆ ಕೇಳದೆ ಮುಂದೆ ನಿಂದರಂ ಕಾಣದೆ ತ ।
ಕ್ಕಡೆಯೊಳ್ ಕಡೆಗಣಿಸುವ ನೃಪ । ರಿಡಂಬಮಿವು ಲಕ್ಷ್ಮಿ ನಿನ್ನ ದೂಸಣನಲ್ತೇ ॥ 119 ॥

ಗುಣಿಗಳ ನೆರೆಪೊರ್ದದ ನಿ । ರ್ಗುಣರಂ ಪೊರ್ದುವ ವಿಶಿಷ್ಟರಂ ದುಷ್ಟರೊಳಂ ।
ಗಣಿಯಿಸಿ ಸಮನೆಂಬವಗುಣ । ಗಣಂಗಳಿವು ಲಕ್ಷ್ಮಿ ನಿನ್ನ ದೂಸಣನಲ್ತೇ ॥ 120 ॥

### ಭೀಮಸೇನನು ಕೊಳದಲ್ಲಿ ಮುಳುಗಿದ್ದ ದುರ್ಯೋಧನನನ್ನು ಮೂದಲಿಸುವುದು.

ಹರಿ ಸಂಧಾನಕ್ಕೆ ವಂದಂದವಘಡಿಸಿದಹಂಕಾರಮೆಲ್ಲಿತ್ತೊ ಕೃಷ್ಣಾಂ |
ಬರಕೇಶಾಕೃಷ್ಟಿಯುಂ ಮಾಡಿಸಿದ ಮದಮದೆಲ್ಲಿತ್ತೊ ಕೌಂತೇಯರಂ ಮ ||
ಚ್ಚರದಿಂ ಕಾಂತಾರದೊಳ್ ತಿಱ್ರನೆ ತಿರುಪಿದ ಸೊರ್ಕೀಗಳೇನಾದುದೆಂದಾ |
ಕುರುವಂಶಾಧೀಶನಂ ಮೂದಲಿಸಿದನದಟಂ ಭೀಮನುದ್ದಾಮಭೀಮಂ || 121 ||

### ಭೀಮನ ಗದಾಪ್ರಹಾರ.

ಇದು ಲಾಕ್ಷಾಗೇಹದಾಹಕ್ಕಿದು ವಿಷಮವಿಷಾನ್ನಕ್ಕಿದಾಸಾಡ ಜೂದಿಂ |
ಗಿದು ಪಾಂಚಾಲೀಪ್ರಪಂಚಕ್ಕಿದು ಕೃತಕಸಭಾಲೋಕನಭ್ರಾಂತಿಗೆಂದೋ ||
ವದೆ ಪೊಯ್ದುಂ ಕಾಲ್ಗಳಂ ತೋಳ್ಗಳನಗಲ್ದುರಮಂ ಕೆನ್ನೆಯಂ ನೆತ್ತಿಯಂ ಕೋ |
ಪದಿನಯ್ದುಂ ದುರ್ಣಯಕ್ಕಯ್ದುಡೆಯನುರುಗದಾದಂಡದಿಂ ಭೀಮಸೇನಂ || 122 ||

### ದುರ್ಯೋಧನನು ಯುದ್ಧರಂಗದಲ್ಲಿ ಮೃತನಾದ ಕರ್ಣನನ್ನು ನೋಡಿ ಪ್ರಲಾಪಿಸುವುದು.

ಕೆಳೆಯಂಗಾಯ್ತುಸುಮೋಕ್ಷಮಾಗದೆನಗಂ ಬಾಷ್ಪಾಂಬುಮೋಕ್ಷಂ ಧರಾ |
ತಳಮಂ ಕೊಟ್ಟನಿವಂ ಜಳಾಂಜಳಿಯುಮಂ ನಾಂ ಕೊಟ್ಟೆನಿಲ್ಲನ್ಯಮಂ||
ಡಳಮಂ ಸುಟ್ಟನಿವಂ ಪ್ರಕೋಪಶಿಖಿಯಿಂದಾನೀತನಂ ಸತ್ಕ್ರಿಯಾ |
ನಳನಿಂ ಸುಟ್ಟೆನುಮಿಲ್ಲ ಮತ್ತಿಯುತಮಂ ಕರ್ಣಂಗಿದೇಕೂರ್ತನೋ || 123 ||

### ರಣರಂಗದಲ್ಲಿ ಮೃತನಾದ ದುಶ್ಶಾಸನನನ್ನು ನೋಡಿ ದುರ್ಯೋಧನನು ಪ್ರಲಾಪಿಸುವುದು.

ಜನನೀಸ್ತನ್ಯಮನುಂಡೆನಾಂ ಬೞಿಕೆ ನೀಂ ಸೋಮಾಮೃತಂ ದಿವ್ಯಭೋ |
ಜನಮುಂಬಿಂತಿವನುಂಡೆನಾಂ ಬೞಿಕೆ ನೀಂ ಬಾಲತ್ವದಿಂದೆಲ್ಲಿಯುಂ ||
ವಿನಯೋಲ್ಲಂಘನಮಾದುದಿಲ್ಲ ಮರಣಕ್ಕೆನ್ನಿಂದೆ ನೀಂ ಮುಂಚಿದಯ್ |
ಮೊನೆಯೊಳ್ ಸೂೞ್‌ತ್ರಡವಾಯ್ತುದೊಂದೆಡೆಯೊಳಂ ಹಾ ವತ್ಸ ದುಶ್ಶಾಸನಾ || 124 ||

## 3. ರನ್ನಕಂದ.

ನಮಗೆ ದೊರೆತ ಈ ನಿಘಂಟುವಿನ ಒಂದು ಅಸಮಗ್ರಪ್ರತಿಯಲ್ಲಿ 12 ಕಂದಗಳಿವೆ. ಇವು ಪ್ರಾಯಿಕವಾಗಿ "ಕವಿರತ್ನ" ಎಂದು ಮುಗಿಯುತ್ತವೆ. ಇವುಗಳಲ್ಲಿ ಎರಡನ್ನು ಉದಾಹರಿಸುತ್ತೇವೆ :—

ಸಣ್ಣದೆನಲ್ ಕಿಱಿದಕ್ಕುಂ | ಪಣ್ಣನೆ ಮಾಡೆಂಬವಾಚಿ ಬಱಿಯೆನೆ ವಂಕಂ |
ಎಣ್ಣನೆ ಲೆಕ್ಕಿಪುದುಂ ಬಿಸು | ಗಣ್ಣನೆನಲ್ ಗೊರವನಪ್ಪುದೆಲೆ ಕವಿರತ್ನಾ || 125 ||

ಕೋಸಿತನಲ್ ಪೋಣಿಸಿದುದು | ಸೂಸಿದುಪೆಸೆ ತುಳ್ಕಿತುಂಬುದುಂ ಪರಿಮಳಮುಂ |
ವಾಸಿತಮೆನೆ ಕಂಪುಂ ಮಿಗೆ | ನೌಸವಮೆನೆ ಸಮ್ಮದಾರ್ಥಮೆಲೆ ಕವಿರತ್ನಾ || 126 ||

---

## ಗಜಾಂಕುಶ. ಸು. 1000.

**ಮಲ್ಲಿಕಾರ್ಜುನನು** (ಸು. 1245) **ಸೂಕ್ತಿಸುಧಾರ್ಣವ**ದಲ್ಲಿ "ಗಜಾಂಕುಶರಾಜನ ಚಿತ್ತವೃತ್ತಿ" ಎಂದು ಈತನನ್ನು ಸ್ತುತಿಸಿ ಈತನ ಗ್ರಂಥಗಳಿಂದ ಪದ್ಯಗಳನ್ನು ಉದ್ಧರಿಸಿರುವಂತೆ ಹೇಳಿರುವುದರಿಂದ ಈತನು ಕನ್ನಡದಲ್ಲಿ ಗ್ರಂಥಗಳನ್ನು ಬರೆದಿರಬೇಕು. **ನಯಸೇನನು** (1112) **ಧರ್ಮಾಮೃತ**ದಲ್ಲಿ "ಗಜಾಂಕುಶನೊಳ್ಪುವೆತ್ತು ರಂಜಿಸುವ ಸದರ್ಥದೃಷ್ಟಿ" ಎಂದು ಈ ಕವಿಯನ್ನು ಸ್ತುತಿಸಿದ್ದಾನೆ. **ದುರ್ಗಸಿಂಹನು** (ಸು. 1145) ಈತನನ್ನು ಸ್ತುತಿಸುವ—

ತ್ರಿಜಗನ್ನುತವಾಗ್ವಿಭವದಿ । ನಜಂಗೆ ನೂರ್ಮಡಿಯೆನಿಪ್ಪ ಪೆಂಪಂ ತಳೆದಂ ।
ವಿಜಿತಾರಿ ದಂಡನಾಯಕ । ಗಜಾಂಕುಶಂ ಕುಶಲವಾಂಛಿತಪ್ರಿಯಶೌರ್ಯಂ ॥

ಎಂಬ ಪದ್ಯದಿಂದ ಈತನು ದಂಡನಾಯಕನಾಗಿಯೂ ದೊಡ್ಡ ಕವಿಯಾಗಿಯೂ ಇದ್ದಂತೆ ತಿಳಿಯುತ್ತದೆ. ಈತನಿಗೆ ಗಜಗ[1] ಎಂಬ ಹೆಸರೂ ಉಂಟು. **ಶ್ರೀಧರಾಚಾರ್ಯನು** (1049) ತನ್ನ **ಜಾತಕತಿಲಕ**ದಲ್ಲಿ ಇವನ ಹೆಸರನ್ನು ಹೇಳಿರುವುದರಿಂದ ಈತನು 1049 ಕ್ಕೆ ಹಿಂದೆ ಇದ್ದಿರಬೇಕು. ಸುಮಾರು 1000 ದಲ್ಲಿ ಇದ್ದಿರಬಹುದೆಂದು ಊಹಿಸುತ್ತೇವೆ; ಇನ್ನೂ ಹಿಂದೆ ಇದ್ದಿದ್ದರೂ ಇರಬಹುದು. ಈ ಕವಿಯನ್ನು ಹಿಂದೆ ಹೇಳಿದವರಲ್ಲದೆ **ರುದ್ರಭಟ್ಟ, ಆಂಡಯ್ಯ, ಕೇಶಿರಾಜ, ಕುಮುದೇಂದು, ವಾಣೀವಲ್ಲಭ** ಮೊದಲಾದ ಕವಿಗಳೂ ಹೊಗಳಿರುವುದರಿಂದ ಈತನು ಪ್ರೌಢಕವಿಯಾಗಿದ್ದಿರಬೇಕು. ಇವನ ಗ್ರಂಥಗಳು ಆವುವೂ ದೊರೆತಿಲ್ಲ. **ಶಬ್ದಮಣಿದರ್ಪಣ**ದಲ್ಲಿ ಉದಾಹೃತವಾದ ಕೆಲವು ಪದ್ಯಗಳಲ್ಲಿ ಒಂದೆರಡು ಕಡೆ ಗಜಗ ಎಂಬ ಹೆಸರು ದೊರೆಯುತ್ತದೆ. ಈ ಪದ್ಯಗಳು ಇವನ ಗ್ರಂಥದಿಂದ ಉದ್ಧೃತವಾದುವೋ ಏನೋ ತಿಳಿಯದು.

---

## ಮನಸಿಜ. ಸು. 1000.

**ಶ್ರೀಧರಾಚಾರ್ಯನು** ತನ್ನ **ಜಾತಕತಿಲಕ**ದಲ್ಲಿ (1049) ಈ ಕವಿಯ ಹೆಸರನ್ನು ಹೇಳಿದ್ದಾನೆ. **ದುರ್ಗಸಿಂಹನು** (ಸು. 1145) ಈತನನ್ನು ಅಸಗ, ಚಂದ್ರ[ಭಟ್ಟ], ಈ ಕವಿಗಳೊಡನೆ ಸೇರಿಸಿ—

---

1 ರತ್ನಶೇಖರಚರಿತವನ್ನು ಬರೆದ ಪದ್ಮಾಭಿರಾಮನು (ಸು 1725) ಪೂರ್ವಕವಿಗಳನ್ನು ಸ್ತುತಿಸುವಾಗ ಗಜಗ, ಗಜಾಂಕುಶ ಎಂಬವರನ್ನು ಪ್ರತ್ಯೇಕಪ್ರತ್ಯೇಕವಾಗಿ ಸ್ತುತಿಸಿದ್ದಾನೆ. ಈ ಹೆಸರುಗಳು ಬೇರೆಬೇರೆ ಇಬ್ಬರು ಕವಿಗಳಿಗೆ ಅನ್ವಯಿಸುವಂತೆ ಈತನು ತಿಳಿದುಕೊಂಡಿದ್ದ ಹಾಗೆ ಕಾಣುತ್ತದೆ. ಆದರೆ ನಮಗೆ ದೊರೆತ ಆವ ಜೈನಗ್ರಂಥಗಳಲ್ಲಿಯೂ ಇಂಥ ತಿಳಿವಳಿಕೆಗೆ ಅವಕಾಶವಿಲ್ಲ. ಗಜಗ ಎಂಬುದು ಗಜಾಂಕುಶ ಎಂಬುದಕ್ಕೆ ಸಂಕ್ಷೇಪವಾದ ರೂಪವು. ಜನ್ನಿಗ, ಜನಾರ್ದನ; ನಾಕಿಗ, ನಾಗವರ್ಮ; ಬಾಚಿಗ, ಭಾಸ್ಕರ; ಎಂಬಿವುಗಳನ್ನು ನೋಡಿದರೆ ಈ ವಿಷಯವು ವ್ಯಕ್ತವಾಗುತ್ತದೆ.

ಪೊಸತೆನಿಸಿ ದೇಸೆಯಿಂ ನವ। ರಸಮೆಸೆಯಲ್ಕೊಳ್ಪವೆತ್ತಮಾರ್ಗದಿನಿಳೆಗೇ।
ನೆಸೆದುವೊ ಸುಕವಿಗಳೆನೆ ನೆಗ। ೞ್ದಸಗನ ಮನಸಿಜನ ಚಂದ್ರ [ಭಟ್ಟನ ಕೃತಿಗಳ್]॥

ಎಂಬ ಪದ್ಯದಲ್ಲಿ ಸ್ತುತಿಸಿದ್ದಾನೆ. **ರುದ್ರಭಟ್ಟ** (ಸು. 1180), **ಕೇಶಿರಾಜ** (ಸು. 1260) ಇವರೂ ಈ ಕವಿಯನ್ನು ಹೊಗಳಿದ್ದಾರೆ. **ಕವಿಕಾಮನು** (ಸು. 1200) ಶೃಂಗಾರವನ್ನು ಬರೆದ ಕವಿಗಳನ್ನು ಹೇಳುವಾಗ "ಮನಸ್ಸಂಜಾತ" ಎಂಬ ಒಬ್ಬ ಕವಿಯನ್ನು ಹೇಳುತ್ತಾನೆ. ಈ ಮನಸ್ಸಂಜಾತನು ಈ ಕವಿಯೇ ಆಗಿದ್ದ ಪಕ್ಷದಲ್ಲಿ ಈತನು ಆವುದೋ ಒಂದು ಶೃಂಗಾರಗ್ರಂಥವನ್ನು ಬರೆದಿರುವಂತೆ ಊಹಿಸಬಹುದಾಗಿದೆ. **ಈಶ್ವರಕವಿ** (ಸು. 1500) ತನ್ನ ಕವಿಜಿಹ್ವಾಬಂಧನದಲ್ಲಿಯು—

ಚಿತ್ತಜನಾಗವರ್ಮಸುಧಿಯಂ ಕಪಿಕೇಶವರನ್ನಮುಖ್ಯರಂ।
ಚಿತ್ತದೊಳಿಟ್ಟು ಪೇೞ್ವೆ........॥

ಎಂಬ ಪದ್ಯದಲ್ಲಿ ಹೇಳಿರುವ "ಚಿತ್ತಜ" ಎಂಬವನು ಈ ಕವಿಯೇ ಆಗಿರಬಹುದು. ಶ್ರೀಧರಾಚಾರ್ಯನು ಇವನ ಹೆಸರನ್ನು ಹೇಳುವುದರಿಂದ ಈತನು 1049 ಕ್ಕೆ ಹಿಂದೆ ಇದ್ದಿರಬೇಕು. ಎಷ್ಟು ಹಿಂದೆ ಇದ್ದನೋ ತಿಳಿಯದು; ಸುಮಾರು 1000 ದಲ್ಲಿ ಇದ್ದಿರಬಹುದೆಂದು ಊಹಿಸುತ್ತೇವೆ. ಇವನು ಬರೆದಿರುವ ಗ್ರಂಥಗಳು ಆವುವೂ ದೊರೆತಿಲ್ಲ.

---

## ಚಂದ್ರಭಟ್ಟ. ಸು. 1000.

**ರುದ್ರಭಟ್ಟನು** (ಸು. 1180) ಪೂರ್ವಕವಿಗಳನ್ನು ಸ್ತುತಿಸುವಾಗ "ಚಂದ್ರಭಟ್ಟನ ಜತಿ........ಮತ್ಕೃತಿಯೊಳ್ಕರ್" ಎಂದೂ, **ಕೇಶಿರಾಜನು** (ಸು. 1260) ಇತರಕವಿಗಳೊಡನೆ ಇವನನ್ನೂ ಸೇರಿಸಿ "ಚಂದ್ರಭಟ್ಟನ...... ಸುಮಾರ್ಗಮಿದಱೊಳಿ ಲಕ್ಷ್ಯಂ" ಎಂದೂ ಈ ಕವಿಯ ಹೆಸರನ್ನು ಗೌರವಪುರಸ್ಸರವಾಗಿ ಹೇಳಿದ್ದಾರೆ. ಈತನು ಆವ ಗ್ರಂಥಗಳನ್ನು ಬರೆದಿದ್ದಾನೆಯೋ ತಿಳಿಯದು. **ರಟ್ಟಕವಿ** (ಸು. 1300) ತನ್ನ ರಟ್ಟಮತದಲ್ಲಿ "ಚಂದಿರಭಟ್ಟರ ದಯೆಯಿಂ ಸಂದೆಯಮಣಮಿಲ್ಲದಂತು ಕಲ್ಪುದು ಮೞೆಯಂ" ಎಂದು ಹೇಳುತ್ತಾನೆ. ರುದ್ರಭಟ್ಟಕೇಶಿರಾಜರು ಹೇಳುವ ಚಂದ್ರಭಟ್ಟನೂ ರಟ್ಟನು ಹೇಳುವ ಚಂದಿರಭಟ್ಟನೂ ಒಬ್ಬನೇ ಆಗಿದ್ದ ಪಕ್ಷದಲ್ಲಿ ಈತನು ಒಂದು ವೃಷ್ಟಿಶಾಸ್ತ್ರಗ್ರಂಥವನ್ನೂ ಬರೆದಿರಬೇಕು. **ದುರ್ಗಸಿಂಹನೂ** (ಸು. 1145) ಈ ಕವಿಯನ್ನು ಸ್ತುತಿಸಿರುವಂತೆ ತೋರುತ್ತದೆ. ಅಲ್ಲದೆ ಶ್ರೀಧರಾಚಾರ್ಯನು (1049) ತನ್ನ ಜಾತಕ

ತಿಲಕದಲ್ಲಿ ಅಂಬುಜಾರಿ (ಚಂದ್ರ) ಎಂದು ಸೂಚಿಸಿರುವ ಕವಿ ಈತನೇ ಆಗಿದ್ದರೂ ಇರಬಹುದು. ಹಾಗಿದ್ದಪಕ್ಷದಲ್ಲಿ ಇವನ ಕಾಲವು ಸುಮಾರು 1000 ಆಗಬಹುದು. ಒಂದು ವೇಳೆ ಇನ್ನೂ ಹಿಂದೆ ಇದ್ದರೂ ಇರಬಹುದು.

---

## ಕಪ್ಪಣಭಟ್ಟ. 1032.

ಸೊರಬದ 184 ನೆಯ ಶಾಸನದ ಕೊನೆಯಲ್ಲಿ—ಶ್ರೀಮತ್ಕವಿರಾಜವಲ್ಲಭಂ ಕಪ್ಪಣಭಟ್ಟರ ಲಿಖಿತಂ—ಎಂದಿದೆ. ಈತನನ್ನು "ಶ್ರೀಮತ್ಕವಿರಾಜವಲ್ಲಭಂ" ಎಂದು ವಿಶೇಷಿಸಿ ಹೇಳಿರುವುದರಿಂದ ಇವನು ಕವಿಯಾಗಿದ್ದಿರಬೇಕು. 'ಲಿಖಿತಂ' ಎಂಬುದರಿಂದ ಈ ಶಾಸನವು ಏತದ್ರಚಿತವೋ ಅಲ್ಲವೋ ಎಂಬ ಸಂದೇಹಕ್ಕೆ ಅವಕಾಶವಿದೆ. ಇದು ಚಾಳುಕ್ಯರಾಜನಾದ 1 ನೆಯ ಜಯಸಿಂಹನ ಆಳಿಕೆಯಲ್ಲಿ ಆಂಗೀರಸ ವರ್ಷದಲ್ಲಿ (1032) ಹುಟ್ಟಿದುದು.

---

## ನಾರಾಯಣಭಟ್ಟ. ಸು. 1040.

ಪೂರ್ವದೇಶದ ಚಾಳುಕ್ಯರಾಜನಾದ ರಾಜರಾಜನ (1022-1063) ಆಸ್ಥಾನಕವಿಯಾದ ನನ್ನಯ್ಯಭಟ್ಟನಿಗೆ ತೆಲುಗುಭಾರತವನ್ನು ಬರೆವುದರಲ್ಲಿ ಸಹಾಯಕನಾಗಿದ್ದ ನಾರಾಯಣಭಟ್ಟನು ಕನ್ನಡದಲ್ಲಿಯೂ ಕವಿಯಾಗಿದ್ದಂತೆಯೂ ಕವೀಭವಜ್ರಾಂಕುಶ ಎಂಬ ಬಿರುದನ್ನು ಪಡೆದಿದ್ದಂತೆಯೂ ಈ ಶ್ಲೋಕಗಳಿಂದ ತಿಳಿಯುತ್ತದೆ—

> ಯಸ್ಸಂಸ್ಕೃತ ಕರ್ಣಾಟ ಪ್ರಾಕೃತಪೈಶಾಚಿಕಾಂಧ್ರಭಾಷಾಸು ।
> ಕವಿರಾಜಶೇಖರ ಇತಿ ಪ್ರಥಿತಸ್ಸುಕವಿತ್ವವಿಭವೇನ ॥
> ಕವೀನ್ ಮುಸೀಷಾಲವದುರ್ವಿದಗ್ಧಾನ್ ಮನೋಹರಾಭಿರ್ನಿಜಸೂಕ್ತಿಭಿರ್ಯಃ ।
> ಕುರ್ವನ್ನಗರ್ವಾನ್ ಪಟುಭಿರ್ಬಿಭರ್ತಿ ಕವೀಭವಜ್ರಾಂಕುಶನಾಮ ಸಾರ್ಥಂ ॥

ಈತನ ಕಾಲವು ಸುಮಾರು 1040 ಆಗಿರಬಹುದು. ಇವನು ಕನ್ನಡದಲ್ಲಿ ಆವ ಗ್ರಂಥವನ್ನು ಬರೆದಿದ್ದಾನೆಯೋ ತಿಳಿಯದು.

---

## ವಿಚವು. 1041.

ಮದ್ರಾಸ್ ಪ್ರಾಚ್ಯಕೋಶಾಲಯದಲ್ಲಿ ನಮಗೆ ದೊರೆತ ಶಕ 963 ರಲ್ಲಿ ಬರೆದ ಒಂದು ಶಾಸನದಲ್ಲಿ ಇವನನ್ನು ವಿಶೇಷವಾಗಿ ಸ್ತುತಿಸಿ ಈತನ ವಿಷಯವಾಗಿ ಈ ಪದ್ಯವು ಬರೆದಿದೆ—

ಭರತನೊಳಂ ಮೇಣ್ ನಾರದ। ಗೊರವನೊಳಂಭೋಜಭವನೊ......ಳಂ।
ಕುರಿಸಿದ ಭರತಾಗಮಲತೆ। ಧರೆಯೊಳ್ ಪಲ್ಲವಿಸಿತೀಗಳೀಚಮುನಿಂದಂ॥

ಇದರಿಂದ ಈತನು ಒಂದು ಭರತಶಾಸ್ತ್ರವನ್ನು ಬರೆದಿರುವಂತೆ ತೋರುತ್ತದೆ.

---

## ಶ್ರೀಧರಾಚಾರ್ಯ. 1049.

ಈತನು **ಜಾತಕತಿಲಕ**ವನ್ನು ಬರೆದಿದ್ದಾನೆ. **ಚಂದ್ರಪ್ರಭಚರಿತೆ**ಯನ್ನೂ ಬರೆದಿರುವಂತೆ ಜಾತಕತಿಲಕದ ಅಂತ್ಯಭಾಗದಲ್ಲಿರುವ

ಸುಭಗವಚಂ ಕಾವ್ಯಕವಿ। ತ್ವಭೂಷಣಂ ಶ್ರೀಧರಾರ್ಯರಚಿತಂ ಚಂದ್ರ।
ಪ್ರಭಚರಿತಂ ಶಾಸ್ತ್ರಕವಿ। ತ್ವಭೂಷಣಂ ಧರೆಗೆ ನೆಗಟ್ದಿ ಜಾತಕತಿಲಕಂ॥
ಅದಿದೆನ್ನದೆ ಜಾತಕತಿಲ। ಕದೊಳಱಿವುದು ಗಣಿತಧರ್ಮಮಂ ಸಕಳಜಗ।
ದ್ವಿದಿತಂ ಚಂದ್ರಪ್ರಭಚರಿ। ತದೊಳಱಿವುದು ಕಾವ್ಯಧರ್ಮಮಂ ಬುಧನಿವಹಂ॥

ಎಂಬ ಪದ್ಯಗಳಿಂದ ತಿಳಿಯುತ್ತದೆ. ಆದರೆ ಈ ಗ್ರಂಥವು ನಮಗೆ ದೊರೆತಿಲ್ಲ.

ಇವನು ಜೈನಕವಿ. ಇವನ ಸ್ಥಳ ಬೆಳುವಲನಾಡಿನಲ್ಲಿರುವ ನರಿಗುಂದ. "ವಿಪ್ರಕುಲೋತ್ತಮಂ" ಎಂದು ಹೇಳಿಕೊಂಡಿದ್ದಾನೆ. "ಇದುವರೆಗೂ ಆರೂ ಕನ್ನಡದಲ್ಲಿ ಜ್ಯೋತಿಷವನ್ನು ಬರೆದಿಲ್ಲ; ನೀನು ಜಾತಕತಿಲಕವನ್ನು ಬರೆಯಬೇಕು" ಎಂದು ವಿದ್ವಾಂಸರು ಹೇಳಲು ಈ ಗ್ರಂಥವನ್ನು ಬರೆದಂತೆ ಕವಿ ಹೇಳುತ್ತಾನೆ. ಇದರಿಂದ ಕನ್ನಡದಲ್ಲಿ ಜ್ಯೋತಿಷವನ್ನು ಬರೆದವರಲ್ಲಿ ಇವನೇ ಪ್ರಥಮಕವಿಯೆಂದು ತಿಳಿಯುತ್ತದೆ. ಈಯಂಶವನ್ನು **ಬಾಹುಬಲಿ** ( ಸು. 1560) ತನ್ನ **ನಾ**ಗಕುಮಾರಕಥೆಯ ಆದಿಭಾಗದಲ್ಲಿಯ ಈ ಪದ್ಯದಲ್ಲಿ ದೃಢೀಕರಿಸುತ್ತಾನೆ—

ಜ್ಯೋತಿಷವಿದ್ಯೆಗೆ ಮೊದಲಿಗ ಸಜೆ ವಾದಿ। ನ್ಯಾತಭಯಂಕರನೆನಿಪ।
ಖ್ಯಾತಿಗೆ ನೆಲೆಯಾದ ಶ್ರೀಧರಾಚಾರ್ಯರ। ಪ್ರೀತಿ ಕ್ಷೇಮಿಗೆ ಬಲಗೊಂಬೆ॥

ಈ ಗ್ರಂಥವನ್ನು "ಧರಣಿಗಿರಿನಿಧಿಶಕಾಂಕಂ ವಿರೋಧಿಸಂವತ್ಸರದಲ್ಲಿ" ಎಂದರೆ ಶಕ 971 (1049) ರಲ್ಲಿ ಬರೆದಂತೆ ಹೇಳುತ್ತಾನೆ. ಗ್ರಂಥಾಂತ್ಯದಲ್ಲಿ "ಧಾತ್ರಿಯನಾಹವಮಲ್ಲಭೂಮಿಪಾಳಕನೆಸೆದಾಳ್ಗೆ" ಎಂಬುದರಿಂದ ಕವಿ ಚಾಳುಕ್ಯರಾಜನಾದ ಆಹವಮಲ್ಲನ (1042–1068) ಆಳಿಕೆಯಲ್ಲಿದ್ದನೆಂದು ತಿಳಿಯುತ್ತದೆ.

ಈ ಕವಿಗೆ ಗದ್ಯಪದ್ಯವಿದ್ಯಾಧರ, ಬುಧಮಿತ್ರ ಎಂಬ ಬಿರುದುಗಳುಂಟು. ತನ್ನ ಗುಣಾದಿಗಳನ್ನೂ ಕವಿತಾಪ್ರೌಢಿಯನ್ನೂ ಈ ಪದ್ಯಗಳಲ್ಲಿ ಹೇಳಿದ್ದಾನೆ:—

ವಿಧುವಿಶದಯಶೋನಿಧಿ ಕಾ । ವ್ಯಧರ್ಮಜಿನಧರ್ಮಗಣಿತಧರ್ಮಮಹಾಂಭೋ ।
ನಿಧಿಯೆನೆ ನೆಗಲ್ದಂ ಜಗದೊಳ್ । ಬುಧಮಿತ್ರಂ ನಿಜಕುಲಾಂಬುಜಾಕರಮಿತ್ರಂ ॥
ರಸಭಾವಸಮನ್ವಿತನೆಂ । ದು ಸುಭಗನೆಂದಖಿಳವೇದಿಯೆಂದನ್ವಿತನೆಂ ।
ದು ಸಮಗ್ರನೆಂದು ಸಲೆ ಬ । ಣ್ಣಿಸುವುದು ಧರೆ ಗದ್ಯಪದ್ಯವಿದ್ಯಾಧರನಂ ॥

ಅನವದ್ಯಂ ಕವಿತಾಗುಣಾರ್ಣವನಿಳಾದೇವಾನ್ವಯಾಬ್ಧ್ಯಂಬುಜಾ ।
ರಿನಿಭಂ ಪ್ರೌಢವಿಳಾಸಿನೀಮನಸಿಜಂ ಶ್ರೀಶೀಲಭದ್ರಂ ದ್ವಿಷ ॥
ಜ್ಜನದುರ್ವಾರಗಜಾಂಕುಶಂ ಸುಜನರತ್ನಂ ತಾನೆನಲ್ಕೀಂ ಕೃತಾ ।
ರ್ಥನೊ ಕರ್ಣಾಟಕವೀಂದ್ರಸದ್ಗುಣ ? ಗುಣಾಗಂಜ್ಞಾಧರಂ ಶ್ರೀಧರಂ ॥

**ಕೊನೆಯ ಪದ್ಯದಲ್ಲಿ ಆದಿಪಂಪ(ಕವಿತಾಗುಣಾರ್ಣವ), ಚಂದ್ರ ಅಥವಾ ಚಂದ್ರ ಭಟ್ಟ(ಅಂಬುಜಾರಿ), ಮನಸಿಜ,? ಗುಣವರ್ಮ(ಶೀಲಭದ್ರ), ಗಜಾಂಕುಶ, ರನ್ನ** ಎಂಬ ಪೂರ್ವಕವಿಗಳ ಹೆಸರನ್ನೂ ಸೂಚಿಸಿದ್ದಾನೆ.[1]

"ಧರಣೀಸ್ತುತಾರ್ಯಭಟನಂ । ನಿರತಿಶಯೋಜ್ವಳಯಶಃಪ್ರಕೋರಕನಂ ಶ್ರೀ । ಕರಣ" ಎಂಬ ಅಸಮಗ್ರವಾದ ಪದ್ಯದಲ್ಲಿ ಆರ್ಯಭಟನ ಹೆಸರು ಹೇಳಿದೆ.

ಇವನ ಗ್ರಂಥ—

## ಜಾತಕತಿಲಕ

ಇದು ಜ್ಯೋತಿಷಗ್ರಂಥ ; ಕಂದವೃತ್ತಗಳಲ್ಲಿ ಬರೆದಿದೆ ; 24 ಅಧಿಕಾರಗಳಾಗಿ ಭಾಗಿಸಲ್ಪಟ್ಟಿದೆ. ಅಧಿಕಾರಗಳ ಹೆಸರು—ಸಂಜ್ಞಾ, ಬಲಾಬಲ, ಗರ್ಭ, ಜನ್ಮ, ತಿರ್ಯಗ್ಜನ್ಮ, ಅರಿಷ್ಟ, ಅರಿಷ್ಟಭಂಗ, ಆಯುರ್ದಾಯ, ದಶಾಂತರ್ದಶಾ, ಅಷ್ಟಕವರ್ಗ, ಜೀವ, ರಾಜಯೋಗ, ನಾಭಿಸಂಯೋಗ, ಚಂದ್ರಯೋಗ, ದ್ವಿತ್ರಿಯೋಗ, ದೀಕ್ಷಾಯೋಗ, ರಾಶಿ, ಲಗ್ನಭಾವ, ದ್ರೇಕ್ಕಾಣ, ದೃಷ್ಟ, ಅನಿಷ್ಟ, ಸ್ತ್ರೀಜಾತಕ, ನಿರ್ಯಾಣ, ನಷ್ಟಜಾತಕ. ಈ ಗ್ರಂಥದ ಉತ್ಕೃಷ್ಟತೆಯನ್ನು ಕವಿ ಈ ಪದ್ಯಗಳಲ್ಲಿ ಹೇಳಿದ್ದಾನೆ:—

ಪದಪೂರಣಮನಣಂ ಪುಗಿ । ಸದೆ ಕುಡಿದು ವೃಥಾಕ್ಷರಂಗಳಂ ಪ್ರಾಸದೊಳಿ ।
ಕ್ಕದೆ ಶಾಸ್ತ್ರಾರ್ಥಮುಂ ಬಿಸು । ಡದೆ ಪೂಣ್ಕೆಯಿನೋದುವೇಟ್ಟಿಡಾರ್ ಮೆಚ್ಚರಿದಂ ॥

ಅಮಿತಾರ್ಥಂ ಸಕಲಾಚಾ । ರ್ಯಮತಾಂತಸ್ಸಾರಮತಿಗಭೀರಂ ಪ್ರದಯಂ ।
ಗಮುಮನ್ಯಶಾಸ್ತ್ರಸಿರಪೇ । ಕ್ಷಮೆಂಬಿನಂ ಖ್ಯಾತಮಾಯ್ತು ಜಾತಕತಿಲಕಂ ॥

ಸುಕರಮುಚಿತಕ್ರಿಯಾಕಾ । ರಕಮುಪಶಬ್ದಪ್ರದೂರಮುಪನೇಯಂ ಸಾ ।
ರ್ಥಕಪದವಿನ್ಯಾಸಂ ಜಾ । ತಕತಿಲಕಮಿದೆಂದು ಕೊಂಡುಕೊನೆಯದರೊಳರೇ ॥

1 ಇದರಿಂದ ಈ ಕವಿಗಳೆಲ್ಲಾ 1049 ಕ್ಕೆ ಹಿಂದೆ ಇದ್ದವರೆಂಬುದು ವ್ಯಕ್ತವಾಗುತ್ತದೆ.

ಲಲಿತವಚೋಲಲನಾನನ । ತಿಲಕಂ ದೈವಜ್ಞವದನತಿಲಕಂ ವಿದ್ವ ।
ತ್ಕುಲಮುಖತಿಲಕಂ ಜಾತಕ । ತಿಲಕಂ ತ್ರೈಲೋಕ್ಯತಿಲಕಮಿದು ಕೇವಲಮೇ ॥

ಗ್ರಂಥಾವತಾರದಲ್ಲಿ ಜಿನಸ್ತುತಿಯೂ ಸರಸ್ವತೀಸ್ತುತಿಯೂ ಇವೆ. ಅಧಿಕಾರಾಂತ್ಯದಲ್ಲಿ ಈ ಗದ್ಯವಿದೆ—

ಇದು ಭಗವದರ್ಹತ್ಪರಮೇಶ್ವರಚರಣಸರಸಿರುಹಷಟ್ಪದಾಯಮಾನಂ ಸರಸಪ್ರಸನ್ನಂ ವಚೋಲಕ್ಷ್ಮೀಧರಂ ಗದ್ಯಪದ್ಯವಿದ್ಯಾಧರಂ ಶ್ರೀ ಶ್ರೀಧರಾಚಾರ್ಯಪ್ರಣೀತಮಪ್ಪ ಜಾತಕತಿಲಕದೊಳ್

ಈ ಗ್ರಂಥದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ—

## ಜ್ಯೋತಿಷದ ಪ್ರಯೋಜನ

ಭವಬದ್ಧಶುಭಾಶುಭಕ । ರ್ಮವಿಪಾಕದ ಫಲಮನಱಿವುಗುಂ ಜ್ಯೋತಿಜ್ಞಾ ।
ನವದೆಂತೆನೆ ಕತ್ತಲೆವನೆ। ಯ ವಸ್ತುವಂ ತೋರ್ಪ ಸೊಡರ ಬೆಳಗಿನ ತೆಱದಿಂ ॥127॥

## ಗ್ರಹಬಲ

ಶನಿಯಿಂದಂ ಮಹಿಜಾತನಾಮಹಿಜನಿಂದಂ ಸೌಮ್ಯನಾಸೋಮನಂ ।
ದನನಿಂದಂ ಗುರುವಾಸುರೇಂದ್ರಗುರುವಿಂದಂ ಶುಕ್ರನಾಶುಕ್ರನಿಂ ॥
ವನಜಾತಾಹಿತನಾವನೇಜರಿಪುವಿಂ ಪಂಕೇಜಮಿತ್ರಂ ಬಳಾ ।
ಢ್ಯನೆನಿಕ್ಕುಂ ಕ್ರಮದಿಂದಮೀಗ್ರಹಬಳಂ ನೈಸರ್ಗಿಕಂ ನಾಮದಿಂ ॥128॥

## ಸ್ತ್ರೀಪುಂಜನನ

ಅಸಮಾಲಯದೊಳ್ ನಿಲೆ ಸೂ । ರ್ಯಸುರೇಜ್ಯರ್ ಬಳಯುತರ್ ನರಂ ಪುಟ್ಟುಗುಮಾ ।
ಅಸಿತೇಂದುಗಳತಿಬಳರಾ । ಗಿ ಸಮದೊಳಿರೆ ರಮಣಿ ಪುಟ್ಟುಗುಂ ಬುಧಮಿತ್ರಾ ॥129॥

## ಪ್ರಸವದಿನ

ವಿದಿತಂ ಕಾಂತೆಗೆ ಪೊಟ್ಟುತೀವಿದುದು ಪೇೞ್ಪನ್ನಾವುದಕ್ಕುಂ ಪ್ರಗೂ ।
ತದಿನಂ ತಾನೆನೆ ಚಂದ್ರನಾವ ಗೃಹದೊಳ್ ತತ್ಕಾಲದೊಳ್ ಸಿಂದನಾ ॥
ಸದನದ್ವಾದಶಭಾಗಮಂತೆನಿತು ಸಲ್ಗುಂ ಮುಂತೆ ತತ್ಸಂಖ್ಯೆ ಗೇ ।
ಹದಿನತ್ತಲ್ ? ನಿಶಚಂದ್ರಮಂ ಪ್ರಸವಕಾಲಂ ಕಾಂತೆಗಂತಾದಿನಂ ॥130॥

## ಅರಿಷ್ಟನಾಶ

ಸಿರಿದು ಪಳಾಳದೊಳೇಂ ಸುರ । ಗುರುಪೊರ್ವನೆ ವೀರ್ಯವಂತನುಂ ಕಾಂತನುಮಾ ।
ಗಿರೆ ಜನ್ಮಲಗ್ನದೊಳ್ ಸಂ । ಹರಿಸುಗುಮಘಮಂ ಕರೀಂದ್ರಮಂ ಸಿಂಹದವೋಲ್ ॥131॥

### ಶಿಶುಮರಣ

ಬರೆ ಕನ್ಯಾಲಗ್ನಂ ಭಾ । ಸ್ಕರನಲ್ಲಿರೆ ಮೀನದೊಳ್ ಶನೈಶ್ಚರನಿರೆ ಸುಂ ।
ದರಿ ಸಾಗುಮುದಯದಯ್ದನೆ । ಯ ರಾಶಿಯೊಳ್ ಭೂಜನಿರೆ ತನೂಜಂ ಸಾಗುಂ ॥132॥

### ನಕ್ಷತ್ರವನ್ನು ಕಂಡುಹಿಡಿವುದು

ಸಮನಿಸಿದ ಪೃಚ್ಛಕನ ಪೆಸ । ರ ಮಾತ್ರೆಯೊಳ್ ಕೂಡಿಕೊಂಡು ಛಾಯಾಂಗುಳಿಮಾ।
ನಮನಿರ್ಪ್ಪತ್ತೇೞಱಿಂ ನೆ । ತ್ತ ಮಿಕ್ಕುದಕ್ಕುಂ ಧನಿಷ್ಠೆ ಮೊದಲೆನೆ ಭಗಣಂ ॥133॥

### ದೀರ್ಘಾಯು

ತ್ರಿದಶಾಧೀಶ್ವರಮಂತ್ರಿ ಶೀತಕರರೆಂಬೀಯಿರ್ವರುಂ ಕರ್ಕಗೇ ।
ಹದೊಳಿರ್ದಂದು ಶಶಾಂಕಸೂನುಸಿತರೆಂಬೀಯಿರ್ವರುಂ ಕೇಂದ್ರಗೇ ॥
ಹದೊಳಿರ್ದಂದು ರಿಪುತ್ರಿಲಾಭಗೃಹದೊಳ್ ಮಿಕ್ಕಸ್ತರಿರ್ದಂದು ಪು ।
ಟ್ಟಿದ ಮರ್ತ್ಯಂಗೆ ಚಿರಾಯು ಸಂಭವಿಸುಗುಂ ಸಂಯುಕ್ತ ರತ್ನಾಕರಾ ॥134॥

---

## ಕವಿಮಲ್ಲ. 1057.

ಈತನು ಹೆಗ್ಗಡದೇವನಕೋಟೆ 18 ನೆಯ ಶಾಸನವನ್ನು ಬರೆದುದಾಗಿ ಆ ಶಾಸನದ ಕೊನೆಯಲ್ಲಿರುವ—

ಮಜುಪರ ಚಕ್ರಂ ದ್ವಿಜರೊಳ್ । ಕಜಮಜೆಯಲ್ಲೆನಿಸ ಕುಜಬನಾದಿತ್ಯಂ ನಂ ।
ದಜಕೆಯುವಗಾದ ಮಲ್ಲಂ । ಜಜುಚದ ಕವಿ ರಾಜಬಾಂಧವಂ ಬರೆಪಸಿದಂ ॥

ಎಂಬ ಪದ್ಯದಿಂದ ತಿಳಿಯಬರುತ್ತದೆ. ಈ ಶಾಸನವು ರಾಜೇಂದ್ರದೇವನ ಆಳಿಕೆಯಲ್ಲಿ ಶಕ 979 ನೆಯ ಹೇಮಲಂಬಿಯಲ್ಲಿ—ಎಂದರೆ 1057 ರಲ್ಲಿ—ಬರೆದುದು. ಇದರಲ್ಲಿ—ಚೋಳರಾಜನಲ್ಲಿ ಮಂಡಳಿಕನಾಗಿಯೂ ನುಗುನಾಡಧಿಪನಾಗಿಯೂ ಇದ್ದ ರವಿಗನು ತನ್ನ ಮಗಳಾದ ದೇಕಬ್ಬೆಯನ್ನು ನವಿಲೆನಾಡಧಿಪತಿಯಾದ ಏಚಸಿಗೆ ಕೊಟ್ಟು ಮದುವೆಮಾಡಿದ್ದಂತೆಯೂ ಈ ಏಚನು ತನ್ನ ದಾಯಿಗರನ್ನು ಕೊಂದುದರಿಂದ ರಾಜನು ಇವನನ್ನು ತಲೆಕಾಡಿಗೆ ಒಯ್ದು ಕೊಲ್ಲಿಸಲು, ದೇಕಬ್ಬೆ ಪತಿಯೊಡನೆ ಸಹಗಮನವನ್ನು ಮಾಡಿದಂತೆಯೂ ಅವಳ ಜ್ಞಾಪಕಾರ್ಥವಾಗಿ ರವಿಗನು ಈ ಶಿಲಾಸ್ತಂಭ ಶಾಸನವನ್ನು ನಡಿಸಿದಂತೆಯೂ ಹೇಳಿದೆ. ಈ ಶಾಸನದಲ್ಲಿರುವ ವೃತ್ತ ಕಂದ ಅಕ್ಕರ ಇವುಗಳ ಬಂಧವನ್ನು ನೋಡಿದರೆ ಬರೆದವನು ಪ್ರೌಢಕವಿಯೆಂದು ಊಹಿಸಬಹುದಾಗಿದೆ. ಇದರಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

### ರವಿಗ.

ರವಿಗಂ ಪುಟ್ಟಿದನೊಡನು | ದ್ಭವವಾಯ್ತು ಜೀವಜೀವಿನೊಡನೆ ಪುಟ್ಟಿದುದಾಯಂ |
ಸವಸಂದಾಯುದೊಡಂ ಸಂ | ಭವಮಾದುದು ಚಾಗವಿಂತುಟುಂ ಬಿರುದುಂಟೇ
|| 135 ||

ಕಡಲ ಕಡೆವರಮುಜಾಂಡದ | ಕುಡಿವರವಾರಾಗಜೇಂದ್ರದಂತುವರಂ ತ |
ಳ್ತೊದನೊಡನೆ ಪರ್ವಿ ಬಳೆದುದು | ಕುಡಿಯುರ ವಲ್ಲಭನ ಕೀರ್ತಿಲತೆ ಕೋಮಳದಿಂ
|| 136 ||

ಕುಡಿಯುರ ವಲ್ಲಭಂ ಕುಡಿಯುರಾಭರಣಂ ನುಗುನಾಡ ರಾಮನೆಂ |
ದೊಡೆ ಕಲಿಕಾಲಕರ್ಣನ ವಿನೋದದ ಚಾಗದ ಬೀರದಾರ್ಪನೀ ||
ಗಡಿನ ನಿಕೃಷ್ಟನಿರ್ಗುಣನಿಕೃತ್ಯನಿರಾಚರಣೇಟವೀಟರೊಳ್ |
ಕಡುಜಡರಂತು ಪೋಲಿಪರೊ ಧನ್ಯನೆನಿಪ್ಪ ವಚೋಗ್ರಗಣ್ಯನಾ || 137 ||

### ದೇಕಬ್ಬೆ.

ತಂದೆಯುಮಬ್ಬೆಯು ವೊಡನೆಯಿ | ಬಂಧುಗಳುಂ ಬಂದುವುಗಳೆ ಸಾಯುವೆ ವಾಗ್ ನೀ |
ನೆಂದೆಲ್ಲಂ ಕಾಲ್ವಿಡಿದೊಡ | ನಿಂದಿತೆ ದೇಕಬ್ಬೆ ಮುನಿದು ಬಗ್ಗಿಸಿ ನುಡಿದಳ್ ||138||

ನುಗುನಾಡಧಿಪತಿ ರವಿಗನ | ಮಗಳಾಗಿಯುಮಂತೆ ನವಿಲೆನಾಡಧಿಪತಿಗಾಂ |
ನೆಗಳ್ದ ಸತಿಯಾಗಿ ಬಾಳ್ದುದು | ಬಗೆದರ್ಪನೆ ಕೊಟ್ಟು ಕೊಂಡ ಮನೆಯುಸಮಾ
[ಲ್ದಿಯುಲ್ ||139||

ನೆರೆದೆಲ್ಲಂ ಬೇಡ ವಾಣೆಂದೊಡೆ ನುಡಿಯುದಿರಿಂ ಪೋಗಿವಾಂ ವಾಣೆನೆಂದಾ |
ದರದಿಂದಂ ಭೂಮಿ ಪೊರ್ ಪುಟ್ಟಿಗೆ ವಸು ಧನಮಂ ನೀಡುತುಂ. . .ದೇ ||
ವರ ದೇವಂಗಳ್ಬಿತ್ತಿಯಿಂ ಕೆಯ್ಮುಗಿದುರಿವುರಿಯಂ ನೋಕ್ಕು ದೇಕಬ್ಬೆ ತನ್ನಂ |
ಧರೆಯೆಲ್ಲಂ ಮೆಚ್ಚೆ ನಿಚ್ಚಂ ಪೊಗಳ್ದೆ ನೆಗಳ್ದುತುಂ ದೇವಲೋಕಕ್ಕೆ ಪೋದಳ್
|| 140 ||

---

## ದಿವಾಕರಣಂದಿ. 1062.

ಈತನು ತತ್ವಾರ್ಥಸೂತ್ರಕ್ಕೆ ಕನ್ನಡವೃತ್ತಿಯನ್ನು ಬರೆದಿದ್ದಾನೆ. ಈ ವಿಷಯವು ನಗರದ 57 ನೆಯ ಶಾಸನದ ಈ ಪದ್ಯದಿಂದಲೂ ತಿಳಿಯುತ್ತದೆ :—

ಜಡರುಂ ಬಾಳಕರುಂ ಬುಧಪ್ರಕರಮುಂ ತತ್ತ್ವಾರ್ಥಮಂ ಕಲ್ತುಘಂ |
ಕಿಡೆ ಸಮ್ಯಕ್ತ್ವಮನೆಯ್ದಿ ಸಪ್ತಪರಮಸ್ಥಾನಾಪ್ತಿಯುಂ ನಿಶ್ಚಯಂ ||
ಪಡೆಯಲ್ ಮಾಡಿದರೊಪ್ಪೆ. . . . . .ರ್ ತತ್ತ್ವಾರ್ಥಸೂತ್ರಕ್ಕೆ ಕ |
ನ್ನಡದಿಂ ವೃತ್ತಿಯನೆಲ್ಲಿಗಂ ನೆಗಳ್ದನಂ ಸಿದ್ಧಾಂತರತ್ನಾಕರರ್ ||

ಈತನಿಗೆ ಉಭಯಸಿದ್ಧಾಂತರತ್ನಾಕರ ಎಂಬ ಬಿರುದಿದ್ದಂತೆ ತಿಳಿಯಬರುತ್ತದೆ. ಈತನ ಗುರು ಚಂದ್ರಕೀರ್ತಿ ಭಟ್ಟಾರಕ. ಈ ಶಾಸನದಲ್ಲಿಯೂ ಶಕ 984 ರಲ್ಲಿ ಬರೆದ ಸೊರಬದ 58 ನೆಯ ಶಾಸನದಲ್ಲಿಯೂ ಈತನನ್ನು ವಿಶೇಷವಾಗಿ ಸ್ತುತಿಸಿದೆ. ಈತನು ಪಟ್ಟಣಸ್ವಾಮಿ ನೊಕ್ಕನಿಗೆ ಗುರುವೆಂದೂ ಸಕಲಚಂದ್ರನು ಈತನ ಶಿಷ್ಯನೆಂದೂ ತಿಳಿಯುತ್ತದೆ. ಈ ಶಾಸನಗಳಿಂದ ಈತನ ಸ್ತುತಿರೂಪವಾದ ಒಂದು ಪದ್ಯವನ್ನು ತೆಗೆದು ಬರೆಯುತ್ತೇವೆ:—

ಚಾರುಚರಿತ್ರರೀದೊರೆಯರಾರೆನಿಪೊಳ್ಪಿನ ಚಂದ್ರಕೀರ್ತಿಭ।
ಟ್ಟಾರಕರಗ್ರಶಿಷ್ಯರಘಹಾರಿಗಳಾರ್ಹತತತ್ವವಸ್ತುವಿ॥
ಸ್ತಾರಕರಂಗಜಾರಿಗಳಶೇಷವಿಶೇಷಗುಣಾವಳೀಮನೋ।
ಹಾರಿಗಳೆಂಬಿನಂ ನೆಗಳ್ದರಲ್ತೆ ದಿವಾಕರಣಂದಿಸೂರಿಗಳ್॥

ಈತನ ತತ್ವಾರ್ಥಸೂತ್ರವೃತ್ತಿಗೆ ತತ್ವಾರ್ಥಸೂತ್ರಾನುಗತಕರ್ಣಾಟಕಲಘುವೃತ್ತಿ ಎಂದು ಹೆಸರು. ಮೂಲವು ಗೃಧ್ರಪಿಂಛಾಚಾರ್ಯಕೃತ. ವೃತ್ತಿಯ ಆದಿಯಲ್ಲಿ

ನತ್ವಾ ಜಿನೇಶ್ವರಂ ವೀರಂ ವಕ್ಷ್ಯೇ ಕರ್ಣಾಟಭಾಷಯಾ।
ತತ್ವಾರ್ಥಸೂತ್ರಸೂತ್ರಾರ್ಥಂ ಮಂದಬುದ್ಧ್ಯನುರೋಧತಃ॥

ಎಂಬ ಶ್ಲೋಕವೂ ಅಂತ್ಯದಲ್ಲಿ

ಇದು ಸಕಲಾಗಮಸಂಪನ್ನ ಶ್ರೀಮಚ್ಚಂದ್ರಕೀರ್ತಿಭಟ್ಟಾರಕ ಪದ್ಮನಂದಿ ಸಿದ್ಧಾಂತದೇವ ಶ್ರೀಪಾದಪ್ರಸಾದಾಸಾದಿತಸಮಸ್ತಸಿದ್ಧಾಂತಾಮೃತಪಾರಾವಾರ ಶ್ರೀಮದ್ದಿವಾಕರಣಂದಿಭಟ್ಟಾರಕಮುನೀಂದ್ರವಿರಚಿತ ತತ್ವಾರ್ಥಸೂತ್ರಾನುಗತ ಕರ್ಣಾಟಕಲಘುವೃತ್ತಿಯೊಳ್

ಎಂಬ ಗದ್ಯವೂ ಇವೆ. ಪ್ರಕರಣ 10.

---

## ಮಲ್ಲಿನಾಥ. 1062.

ಇವನು ನಗರದ 57 ನೆಯ 58 ನೆಯ ಶಾಸನಗಳನ್ನು ಬರೆದುದಾಗಿ ಆ ಶಾಸನಗಳಿಂದ ತಿಳಿಯುತ್ತದೆ. 58 ನೆಯ ಶಾಸನವು ಶಕ 984 (1062) ರಲ್ಲಿ ಬರೆದುದು.

ಈತನು ಪಟ್ಟಣಸ್ವಾಮಿಯಾದ ನೊಕ್ಕನ ಮಗ; ದಿವಾಕರಣಂದಿ ಶಿಷ್ಯನಾದ ಸಕಲಚಂದ್ರನ ಗುಡ್ಡ. ತನ್ನನ್ನು ಈ ಪದ್ಯದಲ್ಲಿ ಸ್ತುತಿಸಿಕೊಂಡಿದ್ದಾನೆ:—

ಸುಜನಜನಕುಮುದಚಂದ್ರನ। ಸುಜನಜನಾನನವಿಲೋಕನಮಣಿಮುಕುರನನಾ।
ಸುಜನಜನವನಜಹಂಸನ। ಸುಜನಜನಂ ಪೊಗೞೆ ಮಲ್ಲಿನಾಥಂ ನೆಗೞ್ದಂ॥

ಈ ಶಾಸನಗಳಲ್ಲಿ ಚಾಳುಕ್ಯರಾಜನಾದ ತ್ರೈಲೋಕ್ಯಮಲ್ಲನ ಆಳಿಕೆಯಲ್ಲಿ ಬೀರಸಾಂತರದೇವನ ಪಟ್ಟಣಸ್ವಾಮಿ ನೊಕ್ಕನು ದಾನಗಳನ್ನು ಮಾಡಿದಂತೆ ಹೇಳಿದೆ.

ಈ ಶಾಸನಗಳಿಂದ ದಿವಾಕರಣಂದಿಸ್ತುತಿರೂಪವಾದ ಒಂದು ಪದ್ಯವನ್ನು ಹಿಂದೆಯೇ ಬರೆದಿದ್ದೇವೆ.[1] ಇನ್ನು ಕೆಲವನ್ನು ಕೆಳಗೆ ಬರೆಯುತ್ತೇವೆ:—

### ನೊಕ್ಕ.

ಹರಿಸಂಘಾತದೆ ಕಟ್ಟುವೆತ್ತ ಬಡವಜ್ವಾಳಾಳಿಯಿಂ ಬೆಂದ ಭೀ।
ಕರಪಾಠೀನತಿಮಿಂಗಿಳಾಳಿಯಿನತಿಕ್ಷೋಭಕ್ಕೆ ಸಂದಿರ್ದಗ॥
ಸ್ತ್ಯರಿನಪ್ರಾಶನಕೆಯ್ದೆ ವಾರದತಿತೀಕ್ಷ್ಣಕ್ಷಾರವಾರಿಪ್ರಭಂ।
ಗುರವಾರಾಶಿಯೊಳಿಂತು ಪೋಲಿಪುದೊ ಪೇೞ್ ಸಮ್ಯಕ್ತ್ವವಾರಾಶಿಯಂ॥ 141 ॥

ಸಿರಿಗಾವಾಸಮನೇಕರತ್ನನಿಚಯೋತ್ಪತ್ತ್ಯಾಶ್ರಯಂ ಭೀರುರ।
ಕ್ಷರತಂ ಚಂದ್ರಕಳಾಪ್ರವರ್ಧನಮುದಂ ಪೀಯೂಷಪಿಂಡಾಸ್ಪದಂ॥
ವರವೇಳಾವಳಯಾವೃತಂ ಸಮತೆಯಿಂ ವಾರಾಶಿ ಪೋಲ್ತುಂ ಮನೋ।
ಹರದಾನತ್ವದಿಸೆಯ್ದೆ ಪೋಲದೆ ವಲಂ ಸಮ್ಯಕ್ತ್ವವಾರಾಶಿಯಂ ॥ 142 ॥

ಪುದಿದ ತಮಸ್ತಮಃಪಟಲವೊಂದಿದ ಚಿಂತೆ ತಗುಳ್ದ ತಳ್ತ ಪ।
ತ್ತಿದ ರುಜೆ ಪೆರ್ಚಿ ಸಾರ್ಚಿದ ದರಿದ್ರತೆ ಬಟ್ಟೆಯೊಳಾದ ಸೇದೆ ಪಿ॥
ಗಿದಪುದು ಕಂಡ ಕಾಣ್ಕೆಯೊಳೆ ತಪ್ಪದು ಪಟ್ಟಣಸಾಮಿ ನೊಕ್ಕನಿ।
ಲ್ಲದೊಡೆ ಬೞಲ್ದು ಬಂದ ಬುಧಮಂಡಳಿಗೀಮಲೆ ಶೂನ್ಯಮಾಗದೇ ॥ 143 ॥

ಬಲ್ವಲನಪ್ಪ ಪೆರ್ಬುಸಿಯ ಬಯ್ಕೆಗೆ ಭಾಜನಮಾದ ದೊಳ್ಗಿ ಬೀ।
ಟಿಲ್ವರಿವಂತೆ ನೇಲ್ದ ನರೆಗಡ್ಡದ ದೊಡ್ಡರ ಬೆಲ್ಲಮಾತುಗಳ್॥
ಕೊಲ್ವವರ್ಕೆ ಕೆಮ್ಮನೆಡೆಯಾಡದಿರೋವೆಲೆ ಶಿಷ್ಟ ಬೇಡಿಕೊ।
ಳ್ಳೊಳ್ಪೊಡೆ ನಮ್ಮ ಧರ್ಮದ ತವರ್ಮನೆ ಪಟ್ಟಣಸಾಮಿನೊಕ್ಕನಂ ॥ 144 ॥

### ಬೀರಸಾಂತರ.

ಧುರದೊಳಸಿಲತೆಯನುರ್ಚಿದೊ। ದರಿನೃಪಯುವತಿಯರ ಮುಗುಳಕಂಕಣದಾ ಕೀಲ್।
ತರತರದಿನುರ್ಚಿದುವು ನಿಜ। ಕರಖಡ್ಗಮುವರ್ಕೆ ಕೀಲೆ ಶಾಂತರನೃಪತೀ ॥ 145 ॥

### ಸ್ವಗುರು ಸಕಲಚಂದ್ರ.

ಸಕಳಚಂದ್ರಮುನಿನಾಥರುರ್ವರಾ। ಸಕಳದೊಳ್ ಪರಮಯೋಗ್ಯರೆಂಬುದಂ।
ಕಕುಭದಂತಿಗಳ ದಂತದೊಳ್ ಕರಂ। ಪ್ರಕಟಮಾಗೆ ಬರೆದಂ ಪಿತಾಮಹಂ॥ 146 ॥

---

1. ಪುಟ 80.

## ಚಂದ್ರಭಟ್ಟ. 1067.

ಈತನು ಧಾರ್ವಾಡ ಜಿಲ್ಲೆಯಲ್ಲಿಯ ಹೊಟ್ಟೂರು ಗ್ರಾಮದ ಒಂದು ಶಾಸನವನ್ನು[1] ಬರೆದ **ರಾಜವಲ್ಲಭನ** ಕವಿತೆಯನ್ನು "ವಿಸ್ತರಿಸಿ ತಿರ್ದಿದಂತೆ" ಆ ಶಾಸನದ ಕೊನೆಯ ಪದ್ಯದಿಂದ ತಿಳಿಯುತ್ತದೆ. ಈ ಶಾಸನವು 1067 ರಲ್ಲಿ ಬರೆದುದು. ಇದರಲ್ಲಿ ಚಂದ್ರಭಟ್ಟನಿಗೆ 'ವಾಕ್ಪತಿ' ಎಂಬ ವಿಶೇಷಣವು ಹೇಳಿದೆ. ಇವನು ಕವಿಯಾಗಿದ್ದಿರಬೇಕು. **ಶ್ರೀಧರಾಚಾರ್ಯನು** (1049) ತನಗೆ ಹಿಂದೆ ಇದ್ದ ಒಬ್ಬ **ಚಂದ್ರ**ಕವಿಯ ಹೆಸರನ್ನು ಹೇಳುತ್ತಾನೆ. ಈತನು ತದ್ಭಿನ್ನನಾಗಿರಬೇಕು.

---

## ಬಳಭದ್ರದೇವ. 1067.

ಇವನು ಧಾರ್ವಾಡ ಜಿಲ್ಲೆಯಲ್ಲಿಯ ಹೊಟ್ಟೂರು ಗ್ರಾಮದ ಒಂದು ಶಾಸನವನ್ನು[1] ಬರೆದ **ರಾಜವಲ್ಲಭನ** ಕವಿತೆಯನ್ನು "ವಿಸ್ತರಿಸಿ ತಿರ್ದಿದಂತೆ" ಆ ಶಾಸನದ ಅಂತ್ಯದಲ್ಲಿರುವ ಪದ್ಯದಿಂದ ತಿಳಿಯಬರುತ್ತದೆ. ಈ ಶಾಸನವು 1067 ರಲ್ಲಿ ಹುಟ್ಟಿದುದು. ಬಳಭದ್ರದೇವನು ಕವಿಯಾಗಿದ್ದಿರಬೇಕು ಎಂಬುದರಲ್ಲಿ ಸಂಶಯವಿಲ್ಲ.

---

## ರಾಜವಲ್ಲಭ. 1067.

ಈತನು ಧಾರ್ವಾಡ ಜಿಲ್ಲೆಯಲ್ಲಿಯ ಹೊಟ್ಟೂರೆಂಬ ಗ್ರಾಮದಲ್ಲಿರುವ ಒಂದು ಶಾಸನವನ್ನು[1] ಬರೆದುದಾಗಿ ಆ ಶಾಸನದ ಕೊನೆಯಲ್ಲಿರುವ "ಸ್ಫುರಿತವಚೋವಿಭಾಸಿ ಚಟುವಾಣಿಯ ಸತ್ಕವಿರಾಜವಲ್ಲಭಂ। ವಿರಚಿಸಿದಂ ವಿವೇಕನಿಧಿ" ಎಂಬ ಪದ್ಯಭಾಗದಿಂದ ತಿಳಿಯುತ್ತದೆ. ಅದೇಪದ್ಯದ "ವಿಸ್ತರಿಸಿ ತಿರ್ದಿದರ್ ವಾಕ್ಪತಿ ಚಂದ್ರಭಟ್ಟರುಂ ಗುರುಬಳಭದ್ರದೇವರುಂ" ಎಂಬ ಭಾಗದಿಂದ ಚಂದ್ರಭಟ್ಟ, ಬಳಭದ್ರದೇವ ಎಂಬವರು ಇವನ ಕವಿತೆಯನ್ನು ತಿದ್ದಿದಂತೆಯೂ ತಿಳಿಯುತ್ತದೆ.

ಈ ಶಾಸನದಲ್ಲಿ ಚಾಳುಕ್ಯರಾಜನಾದ ತ್ರೈಲೋಕ್ಯಮಲ್ಲನ ಮಹಾಸಾಮಂತ ಜೋಯಿಯರಸ ಮೊದಲಾದವರು ಕೇಶಿಗಾವುಂಡನು ಕಟ್ಟಿಸಿದ ಕೇಶವೇಶ್ವರ ದೇವಸ್ಥಾನಕ್ಕೆ 1067 ರಲ್ಲಿ ದತ್ತಿಯನ್ನು ಬಿಟ್ಟಂತೆ ಹೇಳಿದೆ. ಇದರಿಂದ ಒಂದೆರಡು ಪದ್ಯಗಳನ್ನು ತೆಗೆದು ಬರೆಯುತ್ತೇವೆ :—

---

1. *Epigraphia Indica*, XVI, 83.

### ಮಾರಗಾವುಂಡ.

ಕುಡುವರ್ ಬೇಡಿದೊಡರ್ಥಿಗರ್ಥಚಯಮುಮಂ ಶ್ರೀಮಂತರುಂತೇನುಮುಂ।
ಕುಡರೀಲೋಕದೊಳೊಂದಪೂರ್ವಮೆನಿಸಲ್ ಕಾಲಿಲ್ಲದರ್ ಬೇಡಿ ಬಂ॥
ದೊಡೆ ಕಾಲಂ ನಿಜಶಕ್ತಿಯಿಂ ಪಲರ್ಗೆ ಕೊಟ್ಟಂ ಮಾರಗಾವುಂಡನೆಂ।
ದೊಡೆ ತತ್ಸತ್ವದ ತತ್ವದುನ್ನತಿಯನಂತಿಂತುಂತೆನಲ್ಬರ್ಕುಮೇ ॥ 147 ॥

### ಕೇಶಿಗಾವುಂಡ.

ಜಳನಿಧಿಯೊಳುಡುಪನುದಯಾ। ಚಳದೊಳಿನಂ ಪುಟ್ಟುವಂತೆಪೋಲ್ ಗೋಮುವಸ।
ತ್ಕುಳದೊಳುದಯಿಸಿ ಸುಪುತ್ರಃ। ಕುಳದೀಪಕ ಎನಿಸಿ ಕೇಶಿ ಜಸಮಂ ಪಡೆದಂ
॥ 148 ॥

---

## ಶಾಂತಿನಾಥ. 1068.

ಈತನು ಸುಕುಮಾರಚರಿತವನ್ನು ಬರೆದಿದ್ದಾನೆ. ಈ ವಿಷಯವು ಷಿಕಾರಿಪುರದ 136 ನೆಯ ಶಾಸನದಿಂದಲೂ (ಶಕ 990 ಕೀಲಕ) ತಿಳಿಯುತ್ತದೆ. ಈ ಕವಿ ಭುವನೈಕಮಲ್ಲನ (1068—1076) 'ಪಸಯಿತ' ನಾದ ಲಕ್ಷ್ಮನೃಪನ ಕೈಯಕೆಳಗೆ ಮಂತ್ರಿಯಾಗಿ "ಬನವಸೆ ಪನ್ನಿರ್ಛಾಸಿರಕ್ಕಮರ್ಥಾಧಿಕಾರಿಯುಂ ಕಾರ್ಯಧುರಂಧರನುಂ ತದ್ರಾಜ್ಯಸಮುದ್ಧರಣನುಂ" ಎನಿಸಿದ್ದನು. ಈತನು ಜೈನಕವಿ. ಇವನ ಗುರು ವರ್ಧಮಾನವ್ರತಿ; ತಂದೆ ಗೋವಿಂದರಾಜ; ಅಣ್ಣ ಕನ್ನಪಾರ್ಯ; ತಮ್ಮ ವಾಗ್ಭೂಷಣನಾದ ರೇವಣ; ಸ್ವಾಮಿ ಲಕ್ಷ್ಮನೃಪ. ಈತನನ್ನು 'ದಂಡನಾಥಪ್ರವರಂ' 'ಪರಮಜಿನಮತಾಂಭೋಜಿನೀರಾಜಹಂಸಂ' 'ಸರಸ್ವತೀಮುಖಮುಕುರಂ' 'ಸಹಜಕವಿ' 'ಚತುರಕವಿ' 'ನಿಸ್ಸಹಾಯಕವಿ' ಎಂದು ಮೊದಲಾಗಿ ವಿಶೇಷಿಸಿ ಹೇಳಿದೆ. ಇವನ ಸ್ತುತಿಯನ್ನು ನೋಡಿದರೆ ಈತನು ಪ್ರೌಢಕವಿಯಾಗಿದ್ದಂತೆ ತಿಳಿಯುತ್ತದೆ. ಈತನ ಉಪದೇಶದಿಂದ ಲಕ್ಷ್ಮನೃಪನು ಬಳಿಗ್ರಾಮದಲ್ಲಿ ಶಾಂತಿತೀರ್ಥೇಶ್ವರನ ದೇವಸ್ಥಾನಕ್ಕೆ ಶಿಲಾಕರ್ಮವನ್ನು ಮಾಡಿಸಿದನು. ಕವಿಯ ಸ್ತುತಿರೂಪವಾದ ಕೆಲವು ಪದ್ಯಗಳನ್ನು ಈ ಶಾಸನದಿಂದ ತೆಗೆದು ಬರೆಯುತ್ತೇವೆ:—

ಕವಿತಾಚೂತಾಂಕುರಶ್ರೀಮುದಕಲಕಲಕಂಠೋಪಮಂ ಕಾವ್ಯಸೌಧಾ।
ರ್ಣವವೇಳಾಪೂರ್ಣಚಂದ್ರಂ ಸಮವಿಷಮಮಹಾಕಾವ್ಯವಲ್ಲೀಲತಾಂತೋ॥
ತ್ಸವಚಂಚಚ್ಚಂಚರೀಕಂ ವಸುಧೆಗೆಸೆದನುರ್ವೀನುತಂ ದಂಡನಾಥ।
ಪ್ರವರಂ ಶ್ರೀಶಾಂತಿನಾಥಂ ಪರಮಜಿನಮತಾಂಭೋಜಿನೀರಾಜಹಂಸಂ॥
ಕುನಯಂಗಳ್ ಜೈನಮಾರ್ಗಾಮೃತದೊಳಿರೆ ಜಲಕ್ಷೀರದಂತಲ್ಲಿ ಸದ್ಭಾ।
ಕ್ಯನಿಶಾತೋಚ್ಚಂಚುವಿಂದಂ ಕುಮತಕಲುಷಪಾನೀಯಮುಮಂ ತೂಳ್ದಿ ಜೈನಾ॥

ನನನಿರ್ಭೃತ್ತತ್ವದುಗ್ಧಾಮೃತಮನಖಿಳಭವ್ಯೋತ್ಕರಂ ಮೆಚ್ಚಲಾಸ್ವಾ।
ದನೆಗೆಯ್ವೊಳ್ಪಿಂದವಾದಂ ಪರಮಜಿನಮತಾಂಭೋಜಿನೀರಾಜಹಂಸಂ ॥
ಸಹಜಕವಿ ಚತುರಕವಿ ನಿ। ಸ್ಸಹಾಯಕವಿ ಸುಕವಿ ಸುಕರಕವಿ ವಿಖ್ಯಾತಾ।
ಪಹಕವಿ ಸುಭಗಕವಿ ವಿನುತ। ಮಹಾಕವೀಂದ್ರಂ ಸರಸ್ವತೀಮುಖಮುಕುರಂ ॥
ಸುಕರರಸಭಾವದಿಂ ವ। ರ್ಣಕದಿಂ ತತ್ವಾರ್ಥನಿಚಯದಿಂ ಸೂಕ್ತಮೆನಲ್।
ಸುಕುಮಾರಚರಿತಮಂ ಪೇ। ಳ್ದಿ ಕವೀಂದ್ರಾಗ್ರಣಿ ಸರಸ್ವತೀಮುಖಮುಕುರಂ ॥
ಅಸಹಾಯನಾಗಿಯುಂ ಸುಜ। ನಸಹಾಯಂ ಮದವಿಹೀನನಾಗಿಯುಮರ್ಥಿ।
ಪ್ರಸರೋತ್ಕಟದಾನಾಧಿಕ। ನಸದೃಶವಿಭವಂ ಸರಸ್ವತೀಮುಖಮುಕುರಂ ॥
ಹರಹಾಸಾಕಾಶಗಂಗಾಜಳ ಜಳರುಹನೀಹಾರ ನೀಹಾರಧಾತ್ರೀ।
ಧರ ನೀಹಾರಾಂಶುತಾರಾವನಿಧರ ಶರದಂಭೋಧರ ಕ್ಷೀರನೀರಾ ॥
ಕರ ತಾರಾಭಾರತೀದಿಗ್ರದನಿರದನ ಪೀಯೂಷಡಿಂಡೀರಮುಕ್ತಾ।
ಕರಕುಂದೇಂದ್ರೇಭಹಂಸೋಜ್ಜ್ವಳವಿಶದಯಶೋವಲ್ಲಭಂ ಶಾಂತಿನಾಥಂ ॥
ಒಡವೆಯನೊಳ್ಪಿನಿಂ ಪಡೆದು ಪುಂಜಿಸಿ ಪೂಜಿಸಿ ಕೋಣತಾಣದೊಳ್।
ಮಡಗದೆ ಶಿಷ್ಟರಿಟ್ಟೆಡೆಗೆ ಬಂಧುಗಳಿಲ್ಲಮೆಗಪ್ಪುದೆಂದುಮೆ ॥
ನ್ನೊಡಮೆ ಶರೀರಮೆನ್ನದು ನಿಯೋಗದ ಪರ್ವಮಿದೆನ್ನದೆಂದು ಮೆ।
ಳ್ಪಡದಿರಿಮೆಂದು ಗೋಸಣೆ ತೊಟಲ್ವುದು...ಶಾಂತಿನಾಥನಾ ॥

ಈತನ ಗ್ರಂಥ

## ಸುಕುಮಾರಚರಿತ

ಇದು ಚಂಪೂರೂಪವಾಗಿದೆ; 12 ಆಶ್ವಾಸಗಳಾಗಿ ಭಾಗಿಸಲ್ಪಟ್ಟಿರುವಂತೆ ತೋರುತ್ತದೆ. ನಮಗೆ ದೊರೆತ ಪ್ರತಿಯಲ್ಲಿ ಆದ್ಯಂತಗಳಲ್ಲಿ ಓಲೆಗಳು ಹೋಗಿರುವುದಲ್ಲದೆ ಮಧ್ಯದಲ್ಲಿಯೂ ಹಲವು ಕಡೆ ಓಲೆಗಳು ಶಿಥಿಲವಾಗಿಯೂ ಲುಪ್ತವಾಗಿಯೂ ಇರುವುದರಿಂದ ಗ್ರಂಥದ ಆನುಪೂರ್ವಿಯನ್ನು ತಿಳಿಸಲು ಸಾಧ್ಯವಿಲ್ಲದೆ ಇದೆ. ಇದರಲ್ಲಿ ಸೂರದತ್ತರಾಜನಿಗೂ ಯಶೋಭದ್ರೆಗೂ ಹುಟ್ಟಿದ ಸುಕುಮಾರನೆಂಬ ರಾಜಕುಮಾರನ ಚರಿತ್ರವು ಹೇಳಿದೆ. ಈತನು ಯಶೋಭದ್ರಾಚಾರ್ಯರ ಉಪದೇಶದಿಂದ ಪೂರ್ವಸ್ಮರಣೆಯನ್ನು ಪಡೆದು ವೈರಾಗ್ಯದಿಂದ ಅವರಲ್ಲಿಯೇ ದೀಕ್ಷೆಯನ್ನು ಹೊಂದಿ ಕೊನೆಗೆ ಮುಕ್ತಿಯನ್ನು ಪಡೆಯುತ್ತಾನೆ.

ಆಶ್ವಾಸಗಳ ಅಂತ್ಯದಲ್ಲಿ ಈ ಗದ್ಯವಿದೆ—

ಇದು ಸಮಸ್ತವಿನೇಯಜನವಿನಮಿತ ಶ್ರೀವರ್ಧಮಾನಮುನೀಂದ್ರವಂದ್ಯಪರಮಜಿನೇಂದ್ರಶ್ರೀಪಾದಪದ್ಮವರಪ್ರಸಾದೋತ್ಪನ್ನ ಸಹಜಕವೀಶ್ವರ ಶ್ರೀಶಾಂತಿನಾಥಪ್ರಣೀತಮಪ್ಪ ಸುಕುಮಾರಚರಿತ್ರದೊಳ್

ಈ ಗ್ರಂಥದಿಂದ ಕೆಲವು ಭಾಗಗಳನ್ನು ತೆಗೆದು ಬರೆಯುತ್ತೇವೆ :—

### ಮುನಿ

ಮುನಿವವರುಂ ಕೂರ್ಪವರುಂ । ಮುನಿಸುಂ ಕೂರ್ಮೆಯುಮನುಂಟುಮಾಡುವ ಪದದೊಳ್ ।
ಮುನಿಯದ ಕೂರದ ಮುನಿಸದ । ಮುನಿಪತಿ ಭಾವಿಪೊಡೆ ತಾನೆ ಜನಪತಿಯಲ್ತೇ ॥ 149 ॥

### ಉದ್ಯಾನ (ಆದ್ಯಂತಪ್ರಾಸದ ರಗಳೆ)

ಆನಿರುಪಮಗೃಹಬಹಿರುದ್ಯಾನಂ । ತಾನೆಸೆದೊಪ್ಪುಗುಮುಪ್ರತಿಮಾನಂ ।
ನಾಗಲತಾವಿಸ್ತೀರ್ಣಮದಪ್ಪುದು । ಪೂಗದ್ರುಮಸಂಕೀರ್ಣಮೆನಿಪ್ಪುದು ।
ಬನದೊಳೆತ್ತಲುಂ ಸುೞಿವರಗಿಳಿಗಳೆ । ಜನುಗಿ ರಾಗದಿಂದಂ ಮೊರೆವಳಿಗಳೆ ।
ಪೋ ಪುಗಿಲ್ ಪುಗಿಲ್ ನಿಲ್ಲೆನುತೆ ಕರಂ । ಕಾಪುಗೊಂಡು ಜಡಿವುದು ಪಿಕನಿಕರಂ ॥ 150 ॥

### ವಿವಾಹಗೇಹ (ಲಲಿತರಗಳೆ)

ಮರಕತಭಿತ್ತಿಗಳಿಂ ಭಿತ್ತಿವೆತ್ತು । ಪೊಸದೇಸೆಯೊಳೆತ್ತಂ ಭಂಗಿವೆತ್ತು ।
ವಜ್ರದ ಕಂಭಂಗಳ ಕಾಂತಿ ಮಿಂಚೆ । ಪರಭಾಗಂಬಡೆದವಱೊಳ್ ಪಳಂಚೆ ।
ಪೊಂಗಳಸಂಗಳ್ ತಳತಳನೆ ತೊಳಗೆ । ಕಪ್ಪುರದ ಸೊಡರ್ಗಳೋರಂತೆ ಬೆಳಗೆ ।
ಪೊಂದಳಿರ್ಗಳ ತೋರಣದೊಳಗೆ ಪೊಱಗೆ । ಕೆಂದಳಿರ್ಗಳ ಮಾಲೆಗಳೆಱಗಿ ತುಱುಗೆ ।
ಭಾವಿಸುವಂದದು ಪುಣ್ಯಾವತಾರ । ಮಾರಯ್ವಂದದು ಸಂಸಾರಸಾರ ।
ಈ ಲೋಕದೊಳದಱಂತಪ್ಪುವಿಲ್ಲ । ಬಣ್ಣಿಸಲದನಾವನುಮಱಿದನಿಲ್ಲ ॥ 151 ॥

### ಊಟ

ಎಳಮಾವಿನ ಮಿಡಿ ಮಾಗುಳಿ । ಮೆಳಸಿನ ಕರೆ ಬೆತ್ತಲಟ್ಟೆಯಿಾಳೆಯ ಗೊಲೆಯುಂ ।
ದಳವಟ್ಟರೆ ಲಾವಣಕಂ । ಗಳನಿಕ್ಕಿದರಾಗಳಱ್ತಿಯಿಂದಂಗನೆಯರ್ ॥ 152 ॥
ಇದು ಬಾಳ್ಕ್ರೊಸರಿದು ಕಳಲಿಂ । ತಿದು ರುಚಿವೆತ್ತಿರ್ದ ಪಾನಮಿದು ಮಜ್ಜಿಗೆ ತಾ ।
ನಿದು ಶಿಖರಿಣಿಯೆನುತುಂ ತಿಂ । ಬಿ ತಿಂಬಿ ತಂದೆಱೆದರಬಲೆಯರ್ ಸಿರ್ಪುಗಳಿಂ ॥ 153 ॥

### ಜಿನಸ್ತುತಿ

ಕಿವಿಗಳ್ ನಿನ್ನ ಮೃದೂಕ್ತಿಯಂ ಬಯಸಿ ಕೇಳುತ್ತಿರ್ಕೆ ಕಣ್ಗಳ್ ಮಹೋ ।
ತ್ಸವದಿಂ ನಿನ್ನನೆ ನೋಡುತಿರ್ಕೆ ಸಲೆ ಕೈಯ್ಗಳ್ ನಿನ್ನ ಪಾದಾರವಿಂ ॥
ದವನೋತರ್ಚ್ಚಿಸುತಿರ್ಕೆ ಸಂದ ಮನಮೊಂದುಂ ನಿನ್ನ ದಿವ್ಯಸ್ವರೂ ।
ಪವನಾರಾಧಿಸುತಿರ್ಕೆ ವಿಶ್ರುತವಿನೇಯಸ್ವಾರ್ಥಚಿಂತಾಮಣೀ ॥ 154 ॥

## ಜಿನಸ್ತುತಿ (ಪದ್ದಳಿ)

ಜಯಜಯ ಭುವನತ್ರಯಪರಮದೇವ। ದೇವೇಂದ್ರಾಭ್ಯರ್ಚಿತಚರಣಕಮಲ।
ಕಮಲವಿರಹಿತನಿರುಪಮದೇಹ। ದೇಹಾಶ್ರಿತಶುಭಲಕ್ಷಣವಿನೂತ।
ನೂತನಸಂಗತಕೈವಲ್ಯಬೋಧ। ಬೋಧಪ್ರಕಾಶವಸ್ತುಸ್ವರೂಪ।
ರೂಪಾತಿಶಯಾನ್ವಿತ ವಿತತವಿಭವ। ಭವನಿವಹಪಟಲನಿರ್ಮುಕ್ತಜೀವ ॥ 155 ॥

## ಸುಕುಮಾರನ ಭೋಗ

ಮಾಸರಮೊಕ್ಕ ಕಸ್ತುರಿಯ ಪಂಕಮನಲ್ಲದೆ ಪಂಕಮಂ ಕರಂ।
ಬೀಸುವ ಚಾರುಚಾಮರದ ಗಾಳಿಯನಲ್ಲದೆ ಗಾಳಿಯಂ ಮನೋ॥
ಭಾಸುರಮಪ್ಪ ಕಪ್ಪುರದ ದೂಳಿಯನಲ್ಲದೆ ದೂಳಿಯಂ ನಿಜಾ।
ವಾಸದೊಳಿಂತುಟೆಂದರಿಯನಿಂತುಟು ಪುಣ್ಯಮಗಣ್ಯಮಾತನಾ ॥ 156 ॥

## ನಾಗಶ್ರೀಯ ವರ್ಣನೆ (ರಗಳೆ)

ಸುದತಿಯ ತೊಳಗುವ ತೋಳ ಮೊದಲ್ಗಳ್। ಮದನವಿಲಾಸದ ಮೊತ್ತಮೊದಲ್ಗಳ್।
ಲಲನಾರತ್ನದ ಬಾಹುಯುಗಂಗಳ್। ಲಲಿತಲತಾವಿಲಾಸದ್ಯಶಂಗಳ್।
ಸುರುಚಿರಮೃದುತರಪಲ್ಲವದಂತಿರೆ। ಕರತಳಮೊಪ್ಪುಗುಮುಸೆದೋರಂತಿರೆ।
ಕರಶಾಖೆಗಳತನುಕ್ಕುರದಂದಂ। ಕರನಖಮುವು ಕೇದಗೆಯುಸಲ್ಲಿಂದಂ।
ನೋಡೆ ಕುಮಾರಿಯ ಬಳ್ಕುವ ಮಧ್ಯಂ। ನಾಡೆ ಮನೋಜ್ಞಂ ಪೊಗೞಲಸಾಧ್ಯಂ।
ಲಾವಣ್ಯಾಂಬುರಸದ್ರವರೂಪಂ। ಭಾವಿಪೊಡಾಕೆಯ ನಾಭೀಕೂಪಂ।
ಜಲಜದಳಾಕ್ಷಿಯ ಕಣ್ಗಳಚಂದಂ। ಪೊಳೆವೆಳಮಿಾಂಗಳ ಪೊಣರ್ಗಳ ಚಂದಂ।
ಅಗಣಿತಗುಣೆಯಂ ವಿಬುಧನಿಕಾಯಂ। ಪೊಗೞಲ್ ನೆಱೆವರೆ ನಾಗಶ್ರೀಯಂ ॥ 157 ॥

## ನಾಗಶ್ರೀಯ ಪಾಂಡಿತ್ಯ

ಪ್ರತಿಭಾಸಂಸ್ಕೃತಿಯಿಂ ಸಲಕ್ಷಣತರಂಗೋಪಾಂಗದಿಂ ವಿಶ್ವವಿ।
ಶ್ರುತವರ್ಣಾರ್ಥವಿನರ್ಥವೃಷ್ಟಿಯನಳಂಕಾರೋಕ್ತಿಯಿಂ ನಿರ್ಣಯೋ॥
ಚಿತವಿನ್ಯಾಸವಿನತ್ಯುದಾತ್ತರಸವಿಂದಾಕನ್ಯೆ ಸಾಕ್ಷಾತ್ಸರ।
ಸ್ವತಿ ತಾನೆಂಬಿನಮೇಂ ಪ್ರಭಾವಿಸಿದಳೋ ನಾನಾಕಳಾಳಾಪಮಂ ॥ 158 ॥

ನೆರೆದಾರಾಜಸಭಾಂತರಾಳದೊಳುದಾತ್ತಾರ್ಥೋಕ್ತಿಯಿಂ ತನ್ನೊಳಾರ್।
ದೊರೆಯೆಂಬನ್ನೆಗಮುದ್ಗತಪ್ರಥಿತಶಬ್ದಾರ್ಥೋಕ್ತಿಯಿಂ ವ್ಯಕ್ತಮಾ॥
ಗಿರೆ ವಕ್ಕಾಣಿಸಿ ತದ್ವಿದರ್ ಪೊಗೞ್ದುಬಾಪ್ಪೆಂಬನ್ನೆಗಂ ತತ್ಪತಿಂ।
ವರೆ ವೇದಾದಿಕಳಾಕಳಾಪಮನಶೇಷಾಳಾಪದಿಂದೋದಿದಳ್ ॥ 159 ॥

ಸಕಲವ್ಯಾಕರಣಾರ್ಥಶಾಸ್ತ್ರನಿಪುಣರ್ ಮಾರ್ಕೊಂಡರಿಲ್ಲು ಕ್ಕೀರ್ತಿಕಾ ।
ರ್ತಿಕರೊಟ್ಟೈಸಿದರಿಲ್ಲ ಸತ್ಕವಿಗಳಡ್ಡಂಬಂದರಿಲ್ಲುಂತೆ ಭುಂ ॥
ಭುಕವಿಾಲೋಕದೊಳಾರೊಳಂ ಜನಿಯಿಸಿತ್ತಿಲ್ಲೆಂಬಿನಂ ವಿಪ್ರಕ ।
ನ್ಯಕೆ ವಿದ್ವಜ್ಜನದಿಂದಮುಂದು ಪಡೆದಳ್ ಪಾಂಡಿತ್ಯಸೌಂದರ್ಯಮುಂ ॥ 160 ॥

---

## ನಾಗವರ್ಮಾಚಾರ್ಯ. ಸು. 1070.

ಈತನು **ಚಂದ್ರಚೂಡಾಮಣಿಶತಕ**ವನ್ನು ಬರೆದಿದ್ದಾನೆ. ಈ ಗ್ರಂಥದಲ್ಲಿಯು

ಉದಯಾದಿತ್ಯನ ಸಂಧಿವಿಗ್ರಹಿಲಲಾಮಂ ನಾಗವರ್ಮಂ ಸಮಂ ।
ತುದಯಾದಿತ್ಯನ ರಾಯಭಾರಿಯೆನಿಸಿರ್ದಾತಮ್ಮಾಗ್ರಜಂ ಭಾಸ್ಕರಂ ॥
ಮೊದಲಾದೀಶ್ವರಭಕ್ತರಪ್ಪಿವರ್ಗೆ ಪೇಳ್ದೀಜ್ಞಾನಸಾರಂ ಸುಖಾ ।
ಸ್ಪದಮೊಲ್ದೀದುಗೆ ಭುಕ್ತಿಮುಕ್ತಿಫಲಮಂ ಶ್ರೀಚಂದ್ರಚೂಡಾಮಣೀ ॥

ಎಂಬ ಪದ್ಯದಿಂದ ಈತನು ಉದಯಾದಿತ್ಯನಲ್ಲಿ ಸಂಧಿವಿಗ್ರಹಿಯಾಗಿದ್ದಂತೆಯೂ ಉದಯಾದಿತ್ಯನಲ್ಲಿ ರಾಯಭಾರಿಯಾಗಿದ್ದ ತನ್ನ ಅಣ್ಣ ಭಾಸ್ಕರ ಮೊದಲಾದ ವರಿಗೋಸ್ಕರ ಈ ಗ್ರಂಥವನ್ನು ಹೇಳಿದಂತೆಯೂ ತಿಳಿಯಬರುತ್ತದೆ.

ಶಿಕಾರಿಪುರದ 129 ನೆಯ ಶಾಸನದಿಂದ (1071) ಚಾಳುಕ್ಯರಾಜನಾದ ಭುವನೈಕಮಲ್ಲನಲ್ಲಿ (1069—1076) "ಶ್ರೀಮನ್ಮಹಾಪ್ರಧಾನಂ ಪಿರಿಯ ಸಂಧಿವಿಗ್ರಹಿ ಮನೆವೆರ್ಗಡೆ ದಂಡನಾಯಕಂ ಬ್ರಹ್ಮಕ್ಷತ್ರಶಿಖಾಮಣಿ ರಾಜಾಧಿರಾಜಂ ಕೋಳಾಳಪುರವರೇಶ್ವರಂ ನಂದಿಗಿರಿನಾಥಂ" ಆದ ಉದಯಾದಿತ್ಯನು "ಬನವಸೆ 12000, ಸಾಂತಳಿಗೆ 1000, ಮಂಡಳಿ 1000, ಪದಿನೆಂಟಗ್ರಹಾರಂ" ಇವುಗಳನ್ನು ಆಳುತ್ತಿದ್ದಂತೆಯೂ ಅವನ ಕಾಲದಲ್ಲಿ ಬಹಳ ಪ್ರಸಿದ್ಧನಾದ ಅದ್ವೈತಿ ಗುಣಗಳ್ಳ ನಾಗವರ್ಮಾಚಾರ್ಯನೆಂಬವನೊಬ್ಬನು ಇದ್ದಂತೆಯೂ ತಿಳಿಯುತ್ತದೆ. ಈ ನಾಗವರ್ಮನೇ ಕವಿಯಾಗಿರಬಹುದೆಂದು ಊಹಿಸುತ್ತೇವೆ. ಹಾಗಿದ್ದ ಪಕ್ಷದಲ್ಲಿ ಇವನು ಸುಮಾರು 1070 ರಲ್ಲಿ ಇದ್ದಿರಬೇಕು. ಈ ಕವಿಗೆ ಗುಣಗಳ್ಳನೆಂಬ ಬಿರುದಿದ್ದಂತೆಯೂ ಈತನು ಅದ್ವೈತಿಯಾಗಿಯೂ ದೊಡ್ಡ ಪಂಡಿತನಾಗಿಯೂ ಇದ್ದಂತೆಯೂ ಮೇಲಣ ಶಾಸನದ ಈ ಪದ್ಯಗಳಿಂದ ತಿಳಿಯುತ್ತದೆ:—

ಆನಂದಾದ್ವಯಸತ್ಯ । ಜ್ಞಾನಮಯರ್ ನೆಗಟ್ದರಖಿಳದೊಳ್ ನಿಷ್ಕಳನಾ ।
ದಾನಂದರ್ ತನ್ನಾಮಾ । ಧೀನರ್ ಗುಣಗಳ್ಳನಾಗವರ್ಮಾಚಾರ್ಯರ್ ॥
ಶ್ರೀಮನ್ಮುಕ್ತಿವಧೂಲೀ । ಲಾಮಂಗಳತಿಳಕನೆಸೆದನದ್ವಯಮಹಿಮೋ ।
ದ್ದಾಮಂ ಸಂಪೂರ್ಣಂ ವಿ । ದ್ಯಾಮೂರ್ತಿ ಜಿತಾತ್ಮನಕ್ಷರಂ ಗುಣಗಳ್ಳಂ ॥

ತ್ರಿ॥ ನುಡಿವ ತತ್ವದ ಮಾತಂ ಬಿಡಲಾರನೇನುಮಂ ।
ನುಡಿವಳಿಯಂತೆ ನಡೆವಳಿಯೆನಿಸಿದಂ । ನುಡಿದಂತೆ ಗಂಡಂ ಗುಣಗಳ್ಳಂ ॥

ಈತನು ಬಲಿಪುರದಲ್ಲಿ ದೇವಾಲಯಗಳನ್ನೂ ಮುತ್ತೂರೆಡೆಯಲ್ಲಿ ಸಿದ್ಧತೀರ್ಥವನ್ನೂ ಮಾಡಿಸಿದಂತೆ ತಿಳಿಯಬರುತ್ತದೆ.

ಇವನ ಗ್ರಂಥ

## ಚಂದ್ರಚೂಡಾಮಣಿಶತಕ.

ಇದು ಮತ್ತೇಭವೃತ್ತದಲ್ಲಿ ಬರೆದಿದೆ. ಇದರಲ್ಲಿ ಪ್ರತಿಪಾದಿತವಾದ ವಿಷಯವು ವೈರಾಗ್ಯವು. ಈ ಗ್ರಂಥಕ್ಕೆ ಜ್ಞಾನಸಾರವೆಂದು ಹೆಸರಿಟ್ಟಿರುವಂತೆ ತೋರುತ್ತದೆ; ಬಂಧವು ಲಲಿತವಾಗಿಯೂ ಗಂಭೀರವಾಗಿಯೂ ಇದೆ. ಇದರಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

ದೆಸೆಯಂ ನುಂಗಿಯುಮರ್ಬಿಯಂ ನೊಣೆದುಮಂಭೋರಾಶಿಯಂ ಪೀರ್ದುಮಾ ।
ಗಸಮಂ ತಳ್ತಡರ್ದೇಱಿಯುಂ ದಣಿಗುಮೇ ಮತ್ತ್ಯದ್ದಿರ್ಪಲ್ಲಿಗೆ ॥
ಯ್ದುಸುತರ್ಕಂ ಚಲದಿಂದೆ ತೃಷ್ಣೆ ನೆಗಟ್ಬ್ದಾತೃಷ್ಣಾಗ್ನಿಯಂ ಕೂಡೆ ಮ ।
ೞ್ಗಿಸಲಕ್ಕುಂ ನಿಜತತ್ವಮೆಂಬಮೃತದಿಂ ಶ್ರೀಚಂದ್ರಚೂಡಾಮಣೀ ॥ 161 ॥

ನರೆಯಿಂದಂ ತೆರೆಯಿಂದವಾದ ಸೆರೆಯಿಂದಂ ಮುಪ್ಪಿನೊಳ್ ಚೆಲ್ವುಗೆ ।
ಟ್ಟಿರುತುಂ ವ್ಯಾಧಿಯೊಳಾಗಳುಂ ನವೆಯುತುಂ ತಳ್ತಿರ್ದ ದಾರಿದ್ರ್ಯದೊಳ್ ॥
ಪೊರಳುತ್ತಿರ್ದುಮದೆಂತುಮಿಂತುಮಳಿಪೆಂತುಂ ಪೋಗದಾಕುತ್ತಮಂ ।
ಹರಿಪೊಂದೌಷಧಿಯಂ ಸಮಂತು ದಯೆಗೆಯ್ ಶ್ರೀಚಂದ್ರಚೂಡಾಮಣೀ ॥ 162 ॥

ಪೆಱನಿಂದಂ ಪೆಱಸುಟ್ಟಿಪಂ ಪೆಱನತಕ್ಕೈಶ್ವರ್ಯಮಂ ತಾಳ್ದಿದಂ ।
ಪೆಱನುದ್ದಾಮಪರಾಕ್ರಮಕ್ಕೆ ನೆಲೆಯಾಗಿರ್ದಪ್ಪನೆಂದಾಗಳುಂ ॥
ಕಱುಪಿಂದಂದಶನಕ್ಕೆ ಮೇಲೆ ಸಲವೆಂದೋರಂತೆ ತನ್ನಂತೆ ತಾಂ ।
ಪೆಱರಂ ಭಾವಿಸೆ ತತ್ತ್ವಮಿಂತುಟೆ ವಲಂ ಶ್ರೀಚಂದ್ರಚೂಡಾಮಣೀ ॥ 163 ॥

---

## ಹರಿಯಣ್ಣ. 1075.

ಈತನು ಸೊರಬದ 262 ನೆಯ ಶಾಸನವನ್ನು ಬರೆದುದಾಗಿ ಆ ಶಾಸನದ ಕೊನೆಯಲ್ಲಿರುವ "ಬಮ್ಮರ ಹರಿಯಣ್ಣ ಹೇಟ್ಟಿ ಶಾಸನ" ಎಂಬ ವಾಕ್ಯದಿಂದ ತಿಳಿಯುತ್ತದೆ. ಈತನು ಜೈನಕವಿ.

ಈ ಶಾಸನವು ಕದಂಬರಾಜನಾದ ಕೀರ್ತಿದೇವನ ಆಳಿಕೆಯಲ್ಲಿ ಶಕ 997 ರಲ್ಲಿ ಬರೆದುದು. ಇದರಲ್ಲಿ ಕೀರ್ತಿದೇವನ ಮಹಿಷಿಯಾದ ಮಾಳಲದೇವಿ ಕುಪ್ಪ

ಟೂರ ಬ್ರಹ್ಮಜಿನಾಲಯಕ್ಕೆ ಗ್ರಾಮವನ್ನು ಬಿಟ್ಟಂತೆ ಹೇಳಿದೆ. ಈ ಶಾಸನದಿಂದ ಒಂದೆರಡು ಪದ್ಯಗಳನ್ನು ತೆಗೆದು ಬರೆಯುತ್ತೇವೆ:—

ಕುಪ್ಪಟೂರು

ಬೆಳೆದ ಸುಗಂಧಿಶಾಲಿವನದಿಂದೊಳಗೊಪ್ಪುವ ನಾಳಿಕೇರಕಾ ।
ದಳನವಪೂಗನಾಗಲತಿಕಾವನದಿಂ ಪರಿ...ಳದಿಂ ॥
ವಳಯಿತವಾಗಿ ವಿಪ್ರಸುರಚಿತ್ರನಿಕೇತನಮಾಲೆಯಿಂದೆ ಕ ।
ಣ್ಗೊಳಿಪುದು ಕುಪ್ಪಟೂರ್ ಸಕಳವಿದ್ಯೆಗೆ ತಾನೆನೆ ಜನ್ಮಭೂತಳಂ ॥ 164 ॥

ಪದ್ಮನಂದಿ

ಶಾಂತರಸಂ ಪೊನಲ್ವರಿದು ಸಂಯಮವಲ್ಲಿ ಮಡಲ್ತು ಪರ್ಬಿ ತೋ ।
ರ್ಪಂತೆ ಚರಾಚರವ್ರಜಮನಾತ್ಮವಚೋಮೃತದಿಂ ವಿನೇಯರಾ ॥
ಸ್ವಾಂತರಜೋಮಳಂ ತೊಳೆದು ಪೋಯ್ತೆನೆ ಪೇಟ್ಟ್ ಬುಧಪದ್ಮನಂದಿಸೈ ।
ದ್ಧಾಂತಿಕಚಕ್ರವರ್ತಿಯನದಾರ್ ಪೊಗೞರ್ ಗುಣಶೀಲಮೂರ್ತಿಯಂ ॥ 165 ॥

---

## ಬ್ರಹ್ಮ. ಸು. 1079.

ಮದನತಿಲಕವನ್ನು ಬರೆದಿರುವ ಚಂದ್ರರಾಜನು (ಸು. 1079) ತನ್ನ ಗ್ರಂಥವನ್ನು "ತಿರ್ದಿ ಬರೆದವಂ ಬ್ರಹ್ಮಂ" ಎಂದು ಹೇಳಿಕೊಂಡಿದ್ದಾನೆ. ಈ ಬ್ರಹ್ಮನು ಕವಿಯಾಗಿದ್ದಿರಬೇಕು. ಇವನ ವಿಷಯವಾಗಿ ನಮಗಿನ್ನೇನೂ ತಿಳಿಯದು.

---

## ಚಂದ್ರರಾಜ. ಸು. 1079.

ಈ ಕವಿ ಮದನತಿಲಕವೆಂಬ ಗ್ರಂಥವನ್ನು ಬರೆದಿದ್ದಾನೆ. ಅಲ್ಲದೆ

ಸಕಲವ್ಯಾಕರಣಾರ್ಥಶಾಸ್ತ್ರಗಣಿತಾಲಂಕಾರಸತ್ಕಾವ್ಯನಾ ।
ಟಕನಾತ್ಸ್ಯಾಯನನೃತ್ತಗೀತಹಯಶಾಸ್ತ್ರಾದ್ವೈತಗಾಂಧರ್ವತಾ ॥
ರ್ಕಕವೀಂದ್ರಾಗಮವೈದ್ಯವಾದ್ಯಶಕುನೋದ್ಯದ್ಧಾತುವಿದ್ಯಾಕದಂ ।
ಬಕಮುಂ ಚಂದ್ರಕವೀಂದ್ರನೊರ್ವನೆ ವಲಂ ಬಲ್ಲಂ ಪೆಱರ್ ಬಲ್ಲರೇ ॥

ಎಂದು ಹೇಳಿಕೊಂಡಿರುವುದರಿಂದ ಇತರ ಗ್ರಂಥಗಳನ್ನೂ ಬರೆದಿರಬಹುದು. ಒಬ್ಬ ಬ್ರಾಹ್ಮಣಕವಿ (ಸು. 1400) ಅಭಿನವಚಂದ್ರನೆಂದು ಹೆಸರಿಟ್ಟುಕೊಂಡು ಒಂದು ಹಯಶಾಸ್ತ್ರವನ್ನು ಬರೆದಿದ್ದಾನೆ. ಮೇಲಣ ಪದ್ಯದಿಂದ ಚಂದ್ರರಾಜನು ಹಯಶಾಸ್ತ್ರಜ್ಞನೆಂದು ತಿಳಿಯುತ್ತದೆ. ಅಭಿನವಚಂದ್ರ ಎಂಬ ಹೆಸರನ್ನು ನೋಡಿದರೆ

ಹಿಂದೆ ಒಬ್ಬ ಚಂದ್ರನು ಹಯಶಾಸ್ತ್ರವನ್ನು ಬರೆದಂತೆ ಊಹಿಸುವುದಕ್ಕೆ ಅವಕಾಶ ವಿದೆ. ಆದುದರಿಂದ ಈ ಕವಿ ಒಂದು ಹಯಶಾಸ್ತ್ರವನ್ನೂ ಬರೆದಿರಬಹುದು. ಇವನ ಇತರ ಗ್ರಂಥಗಳು ಆವುವೂ ದೊರೆತಿಲ್ಲ.

ಇವನು 'ವಿಪ್ರಕುಲಲಲಾಮಂ' 'ದ್ವಿಜಾಂಭೋಧಿರಾಜಂ' 'ಮನು ಮುನೀಂದ್ರಾಚಾರಂ' ಎಂದು ಹೇಳಿಕೊಂಡಿರುವುದರಿಂದ ಬ್ರಾಹ್ಮಣನೆಂಬುದು ವ್ಯಕ್ತವಾಗುತ್ತದೆ. ಇವನು ವಾಜಿಗೋತ್ರದವನು 'ಸುರಂಜಿತಧರಾಧೀಶಂ' ಎಂಬುದರಿಂದ ರಾಜರ ಅನುಗ್ರಹಕ್ಕೆ ಪಾತ್ರನಾಗಿದ್ದಂತೆ ತಿಳಿಯುತ್ತದೆ. ಈತನಿಗೆ ಶ್ರೀಕವಿತಾಮಹಿಮಾರ್ಣವ, ಪ್ರತ್ಯಕ್ಷಕಂದರ್ಪ, ಅಬ್ಜಾನನಚಂದ್ರ ಎಂಬ ಬಿರುದುಗಳು ಇದ್ದಂತೆ ತೋರುತ್ತದೆ. ಚಾಳುಕ್ಯರಾಜ ಜಯಸಿಂಹದೇವನ ಮಹಾಸಾಮಂತನಾದ ಮಾಚನು ತನಗೆ ಪೋಷಕನೆಂದು ಹೇಳಿಕೊಂಡಿದ್ದಾನೆ. ಇವನನ್ನು ಅನೇಕ ಪದ್ಯಗಳಲ್ಲಿ ಸ್ತುತಿಸಿದ್ದಾನೆ.

ಸಾಗರ 109 ನೆಯ ಶಾಸನದಲ್ಲಿ (1079) ಚಾಳುಕ್ಯರಾಜನಾದ ವಿಕ್ರಮಾದಿತ್ಯನ ತಮ್ಮ ಜಯಸಿಂಹನ ಕೈಯ ಕೆಳಗೆ ಒಬ್ಬ ಮಾಚಿರಾಜನು ಸಾಂತಳಿಗೆ ನಾಡ ರಾಜಾಧ್ಯಕ್ಷದ ಪದವಿಯನ್ನು ವಹಿಸಿದ್ದನೆಂದು ಹೇಳಿದೆ

**ಮಲ್ಲಿಕಾರ್ಜುನನು** (ಸು. 1245) ಈ ಕವಿಯ ಗ್ರಂಥದಿಂದ ಪದ್ಯಗಳನ್ನು ಉದ್ಧರಿಸಿ ಬರೆದಿರುವುದರಿಂದ ಇವನು 1245 ಕ್ಕೆ ಹಿಂದೆ ಇದ್ದನೆಂಬುದು ನಿಸ್ಸಂದೇಹವಾಗಿದೆ. 1245 ಕ್ಕೆ ಹಿಂದೆ ಜಯಸಿಂಹನೆಂಬ ರಾಜನ ಕೈಯ ಕೆಳಗೆ ಮಾಚಿರಾಜನೆಂಬವನಿದ್ದುದು 1079 ರಲ್ಲಿ ಮಾತ್ರವೆಂದು ತಿಳಿಯಬರುವುದರಿಂದ ಶಾಸನೋಕ್ತನಾದ ಈ ಮಾಚಿರಾಜನೇ ಕವಿಯ ಪೋಷಕನಾಗಿರಬೇಕು. ಆದುದರಿಂದ ಕವಿಯ ಕಾಲವು ಸುಮಾರು 1079 ಆಗಬಹುದು. **ದುರ್ಗಸಿಂಹನು** (ಸು. 1145) **ಅಸಗ ಮನಸಿಜರ** ಜತೆಯಲ್ಲಿ ಒಬ್ಬ **ಚಂದ್ರ** [ಭಟ್ಟ] ನನ್ನು ಹೇಳಿದ್ದಾನೆ. ಇವನೇ ಆಗಿರಬಹುದೋ ಏನೋ ತಿಳಿಯದು. ಅಭಿನವದಶಕುಮಾರ ಚರಿತವನ್ನು ಬರೆದ **ಚೌಂಡರಸನು** (ಸು. 1300) 'ಸುಗಮಾರ್ಥಸ್ಫುಟಶಬ್ದ ಸುಂದರಕಿರದ್ರಾಕ್ಷಾಂದ್ರನಂ ಚಂದ್ರನಂ' ಎಂದು ಇವನನ್ನು ಸ್ತುತಿಸಿದ್ದಾನೆ.

ಈತನು ತನಗೆ ಹಿಂದೆ ಇದ್ದ ಆವ ಕನ್ನಡಕವಿಗಳ ಹೆಸರನ್ನೂ ಹೇಳಿಲ್ಲ.

ತನ್ನ ಕವಿತಾಚಾತುರಿಯನ್ನೂ ಗುಣಗಳನ್ನೂ ಈ ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ:—

ಸಕಲಕಲಾಗಮಕೋವಿದ। ನಕಲಂಕಚರಿತ್ರನುದ್ಧಗುಣಗಣಮಣಿ ವಿ।
ಪ್ರಕುಲಲಲಾಮಂ ಲೋಕ। ಪ್ರಕಟೀಕೃತಕೀರ್ತಿ ನೆಗಬ್ದ ಚಂದ್ರಕವೀಂದ್ರಂ ॥

ಅಸತೀಸಂಕುಲದೂರನಂ ಮನುಮುನೀಂದ್ರಾಚಾರನಂ ಶ್ರೀವಧೂ।
ಲಸಿತೋರಸ್ಸ್ಥಲನಂ ವಿಶುದ್ಧಕುಲನಂ ದಿಕ್ಕಾಮಿನೀಗೇಯಮಾ॥
ನಸಮುದ್ಭಾಸಿತವರ್ಣನಂ ಬಹುಕಲಾಸಂಪೂರ್ಣನಂ ಧಾತ್ರಿ ಬ।
ಣ್ಣಿಸುಗುಂ ಚಂದ್ರನನರ್ಥಿಕೀರಪರಪುಷ್ಪಾನಂದವಾಕಂದನಂ॥

ಪರಹಿತನೆಂಬ ಸತ್ವನಿಧಿಯೆಂಬ ಮಹಾಕವಿಯೆಂಬ ದೀನಭಾ।
ಸುರಸುರಭೂಜನೆಂಬ ಗುಣಿಯೆಂಬ ಗುಣಾಸ್ಪದನೆಂಬ ಲೋಕದೊಳ್॥
ಪರಹಿತನೆಂಬ ಸತ್ವನಿಧಿಯೆಂಬ ಮಹಾಕವಿಯೆಂಬ ದೀನಭಾ।
ಸುರಸುರಭೂಜನೆಂಬ ಗುಣಿಯೆಂಬ ಪೆಜರ್ ಪರರಾರ್ ಧರಿತ್ರಿಯೊಳ್॥

ಶಿವಶೀಲಂ ಪುಣ್ಯಶೀಲಂ ವಿಬುಧವಿಬುಧಪಾಲಂ ಗುಣಾನೀಕಲಾಲಂ।
ಸುವಿನೀತಂ ಬಂಧುನೀತಂ ಸುಕೃತಸುಕೃತಜಾತಂ ಸುವಿಸ್ತಾರಿಜಾತಂ॥
ಕವಿಭಾವಂ ಸುಪ್ರಭಾವಂ ವಿಶದವಿಶದಭಾವಂ ಮಹಾಭಾವಭಾವಂ।
ಭವತೇಜಂ ಚಂದ್ರರಾಜಂ ಕರಣಕರಣರಾಜಂ ದ್ವಿಜಾಂಭೋಧಿರಾಜಂ॥

ಇವನ ಗ್ರಂಥ

## ಮದನತಿಲಕ.

ಇದು ಚಂಪೂಗ್ರಂಥವು. ತನ್ನ ಪೋಷಕನಾದ ಮಾಚಿರಾಜನು ಅವನ ಹೆಂಡತಿಗೆ ಹೇಳಿದ ಕಾಮತತ್ತ್ವವನ್ನು ಈ ಗ್ರಂಥರೂಪವಾಗಿ ಬರೆದಂತೆ—

ಅಗಣಿತಗುಣಮಾಚಿನೃಪಂ। ಮೃಗನಯನೆಗೆ ಪೇೞ್ದ ಕಾಮತತ್ತ್ವಮನಿಂಪಾ।
ವಗಪೊದಪ ಪಲವುಛಂದದೊ। ಳೊಗೆದಂಭೋಜಾಸ್ಯಚಂದ್ರನಭಿವರ್ಣಿಸಿದಂ॥

ಎಂಬ ಪದ್ಯದಲ್ಲಿ ಹೇಳುತ್ತಾನೆ. ಗ್ರಂಥದ ಆದಿಭಾಗದಲ್ಲಿ ಈ ಗದ್ಯವಿದೆ:—

ಚಂದ್ರರಾಜಂ ಆಗಮುಲೌಕಿಕವಿರೋಧಮುಂ ಕಳೆದು ಸಾರಾಂಶಮುಂ ಕೊಂಡು ಪಲವುಮತಂಗಳನೊಂದುಮಾಡಿ ಪದಿನೆಂಟಧಿಕರಣಂಗಳಿಂದಲಂಕಾರಾಲಂಕೃತಮಾಗೆ ನಾನಾ ಚ್ಛಂದವಿನಯ್ಯೊ ಜುಗದ್ಯಪದ್ಯಂಗಳಿಂ ವಿಸ್ತರಂಮಾಡಿ ಪೇೞ್ದಂ.

ಗ್ರಂಥಾವತಾರದಲ್ಲಿ ಕವಿ ಮನ್ಮಥನನ್ನು ಸ್ತುತಿಸಿದ್ದಾನೆ. ಬಳಿಕ ಚಾಳುಕ್ಯ ಜಯಸಿಂಹರಾಜನನ್ನೂ ತನ್ನ ಪೋಷಕನಾದ ಮಾಚನೃಪನನ್ನೂ ವಿಶೇಷವಾಗಿ ಕೊಂಡಾಡಿದ್ದಾನೆ. ತರುವಾಯ ಕಾಮಶಾಸ್ತ್ರವನ್ನು ಬರೆದಿರುವ ಪೂರ್ವಕವಿಗಳ ಹೆಸರನ್ನು ಹೇಳಿ ಅವರಿಗಿಂತ ತಾನು ಅಧಿಕನೆಂದು ಈ ಪದ್ಯಗಳಲ್ಲಿ ಹೇಳುತ್ತಾನೆ:—

ಅನಕಂ ಕುಂಡಲಿ ಬಾಭ್ರವೀರ್ಯನತಿಲೌಲ್ಯಂ ಕೂಬರಂ ಕಾತರಂ।
ಕಿನಿಪಂ ಭದ್ರನರೂಪಿ ಕೇತು ಕುವಿಟಂ ವಾತ್ಸ್ಯಾಯನಂ ಗೋಣಿಕಾ।
ತನಯಂ ನಿರ್ದಯನಲ್ಪವೀರ್ಯನೆನಿಪಂ ಚಾರಾಯಣಂ ಜತ್ತಕಂ।
ತನುಹೀನಂ ದೊರೆಯಲ್ಲರಿಂತಿನಿಬರುಂ ಪ್ರತ್ಯಕ್ಷಕಂದರ್ಪನೊಳ್॥

ಎನೆ ನೆಗೞ್ದ ಚಂದ್ರನಬ್ಜಾ | ನನಚಂದ್ರಂ ಶ್ವೇತಕೇತುಜತ್ತಕವಾತ್ಸ್ಯ |
ಯನಪಾಂಚಾಳಾದಿಮುಹಾ | ಮುನಿಮುತಮನೆ ಪೇೞ್ದನೆಸೆಯೆ ಪೊಸಗನ್ನಡದಿಂ ||

**ತನ್ನ ಕಾವ್ಯದ ಉತ್ಕೃಷ್ಟತೆಯನ್ನು ಹೀಗೆ ಹೇಳುತ್ತಾನೆ:—**

ಅಧರೀಕೃತವಾತ್ಸ್ಯಾಯನ | ಮಧಿಗತಕವಿಮಾರ್ಗಮಖಿಳನಾನಾಚ್ಛಂದ |
ಕ್ಕಧಿಕೃತಮಿದೆಂದು ಪೇೞ್ವುದು | ಬುಧಮಂಡಲಿ ನಚ್ಚಿ ಮೆಚ್ಚಿ ಚಂದ್ರನಕೃತಿಯಂ ||
ಕೃತಿಪತಿ ಮಾಚನೃಪಂ ಕವಿ | ಪತಿ ಚಂದ್ರಂ ತಿರ್ದಿ ಬರೆದವಂ ಬ್ರಹ್ಮಂ ಸ |
ತ್ಕೃತಿ ಮದನತಿಲಕಮಿದು ಕಾ | ಮತತ್ತ್ವಮೆನೆ ನಚ್ಚಿ ಮೆಚ್ಚಿ ಪೊಗೞದರೊಳರೇ ||

**ಅಧಿಕರಣಗಳ ಕೊನೆಯಲ್ಲಿ—**

**ಇದು ಚಂದ್ರರಾಜವಿರಚಿತಮಪ್ಪ ಮದನತಿಲಕದೊಳ್**

ಎಂದಿದೆ.

**ಇವನ ಗ್ರಂಥವು ಚಿಕ್ಕದಾದರೂ ಪ್ರತಿಪದ್ಯವೂ ಶಬ್ದಾಲಂಕಾರಚಿತ್ರಿತವಾಗಿಯೂ ರಚನಾಕೌಶಲವ್ಯಂಜಕವಾಗಿಯೂ ಇದೆ. ಅನೇಕ ಪದ್ಯಗಳು ಚಕ್ರಾದಿಬಂಧರೂಪವಾಗಿವೆ. ಕೆಲವು ಪದ್ಯಗಳಿಂದ ನಾನಾಬಂಧಗಳೂ ವೃತ್ತಗಳೂ ಉದ್ಧಾರವಾಗುತ್ತವೆ. ಕನ್ನಡದಲ್ಲಿ ಇಂಥ ಚಿತ್ರಕವಿತೆ ವಿಶೇಷವಾಗಿಲ್ಲ. ಚಿತ್ರಕವಿತೆಯಾದರೂ ಈ ಗ್ರಂಥದಲ್ಲಿ ಲಾಲಿತ್ಯದಲ್ಲಿಯೂ ರಸಪುಷ್ಟಿಯಲ್ಲಿಯೂ ಆವ ವಿಧವಾದ ಕೊರತೆಯೂ ಕಾಣಬರುವುದಿಲ್ಲ. ಈತನ ಕವಿತಾಶಕ್ತಿ ಆಶ್ಚರ್ಯಾವಹವಾಗಿದೆ. ಈ ಗ್ರಂಥವನ್ನು "ಪೇೞ್ದನೆಸೆಯೆ ಪೊಸಗನ್ನಡದಿಂ" ಎಂಬುದರಿಂದ ಈತನು ಆ ಕಾಲದ ಹಳಗನ್ನಡವನ್ನು ಬಿಟ್ಟು ಹೊಸಗನ್ನಡದಲ್ಲಿ ಬರೆದಿರಬಹುದು.**

ತನ್ನ ಪೋಷಕನನ್ನೂ ತನ್ನನ್ನೂ ಸ್ತುತಿಸುವ ಕೆಲವು ಪದ್ಯಗಳು ಚಿತ್ರಬಂಧರೂಪವಾಗಿವೆ. ಅವುಗಳನ್ನು ಇತರಪದ್ಯಗಳೊಡನೆ ಉದ್ಧರಿಸಿ ಬರೆಯುತ್ತೇವೆ:

ಜಯಸಿಂಹ

ಬಳವದ್ವಿಟ್ಟಮವರ್ತಿ ಕಂ(ಟ) ಕಪಿರೋವ್ಯತ್ಕೀರ್ತಿ ಸಂಯುಗಿತಾ |
ಖಿಳಪೃಥ್ವೀವರಲಾಭಪೂರ್ತಿ ಮಗಧೋರ್ವೀಪಾಳಲೀಲಾರ್ತಿ ಕುಂ ||
ತಳವೇಶೋದ್ಭವಚಕ್ರವರ್ತಿ ಭುವನಪ್ರೋತ್ತೀರ್ತಿ ಲುಪ್ತಪ್ರಜಾ |
ಕುಳವಿಸ್ಫಾರ್ತಿ ಮುಕುಂದಮೂರ್ತಿ ನೆಗೞ್ದಂ ಶ್ರೀಕೀರ್ತಿವಿದ್ಯಾಧರಂ || 166 ||

ಚೋಳಕುಲವಿಳಯಕಾಳಂ | ಕಾಳಮುಖಪ್ರಾಪಿತೊಂದ್ಧತಾಹಿತಮಾಳಂ |
ಮಾಳವರಾಜಕಶೂಳಂ | ಶೂಳಾಯುಧಚರಣಕಮಳಭೃಂಗಂ ಸಿಂಗಂ || 167 ||

## ಮಾಚ

ಮಳಯಾಂಧ್ರಾಬರ್ಬರಮಾಗಧದ್ರವಿಡವೆಂಗೀವಂಗನೇಪಾಳಕೇ ।
ರಳಪಾಂಚಾಳಕಳಿಂಗಕೊಂಕಣಸುರಾಷ್ಟ್ರಾಭೀಳಕಾಶ್ಮೀರಕೋ ॥
ಸಳಲಂಪಾಕತುರುಷ್ಕಗೌಳಕಸಕಾಮಾಕ್ಷೀಂದ್ರಕಾಂಭೋಜಸಿಂ ।
ಹಳದೇಶಾಧಿಪರಂ ಭಯಂಗೊಳಿಸಿದಂ ವಿಕ್ರಾಂತದಿಂ ಮಾಚಿಗಂ ॥ 168 ॥

ಅಭಿನವಭಗದತ್ತಂ ಭೋಗಪೊಳ್ ಚಾರುದತ್ತಂ । -
ಸ್ವಭುಜವಿಜಯಸಾರ್ಥಂ ಖಂಡಿತಾರಾತಿಪಾರ್ಥಂ ॥
ಸುಭಟನಿಕಟಸಾಮಂತಾವತಂಸಂ ಘನಾಂಸಂ ।
ವಿಭವಜಿತಬಿಡೌಜಂ ಮಾಚಕಾಂತಾಮನೋಜಂ ॥ 169 ॥

ಗತಿ ಮಾರ್ಗಂ ಶ್ರುತಿ ದೇಸೆನುಣ್ಪು ಗಮಕಂ ಬಂಧಂ ಕ್ರಮಂ ಕೂಕುಳಂ ।
ಕೃತಿಯರ್ಥಂ ಲಯತಾಳಸೌಸವಗುಣಂ ಬಣ್ಣಂ ಕ್ರಿಯಾಕಾರಕಂ ॥
ಯತಿ ತಾಳಂ ರಸಭಾವಮಿಂಪಭಿನಯಂ ಪ್ರಾಣಂ ಪದಂ ಛಂದಮಾ ।
ನತಿ ಶಾರೀರಮನಿಪ್ಪ ಗೀತದೆಡೆಯೊಳ್ ಮಾಚಂ ಸರೋಜಾಸನಂ ॥ 170 ॥

ಸುರಹಿತನಲ್ಲದೆಯುಂ ತಾಂ । ಸುರಹಿತಕರನರಸನಲ್ಲದರಸಂ ಕಮಳಾ ।
ಕರನಲ್ಲದೆಯುಂ ಕಮಳಾ । ಕರನೆನಿಕುಂ ಮಾಚನೃಪತಿ ವಿಶ್ವಂಭರೆಯೊಳ್ ॥ 171 ॥

## ಚಕ್ರವೃತ್ತಂ

ಗಂಗಾಚಂದ್ರಹಿಮಾಚಲಾಭಯಶನುತ್ತಸ್ತೋಗ್ರರಾಜಪ್ರಭಂ ।
ಗಂಗೋದ್ಧೃತ್ಸ್ಥಿರಶಕ್ರನಪ್ರಿಯತನೋಮಿತ್ರಂ ದಿವಾಕೃತ್ಸಮು ॥
ತ್ತುಂಗಾರಾಜಿತಸದ್ವಿಪನ್ನಯವಿದಂ ದುಗರ್ಾಭ್ರವಾತದ್ರವಂ ।
ವಂಗಾಂಗಾಂಧ್ರಕಳಿಂಗಪಾರ್ಜತುಹಿನಾಭಂ ಮಾಚಿಮಂತ್ರೋದ್ಭವಂ ॥ 172 ॥

[ಈ ಶ್ಲೋಕವು ತಪ್ಪಾಗಿದೆ. ಇದರಿಂದ ಚಂದ್ರರಾಜಕೃತ–ಚಕ್ರವೃತ್ತಮಿದು–ಮಾಚಸ್ತೋತ್ರ–ಎಂದು ಉದ್ಧಾರವಾಗುತ್ತದೆ.]

### ಅನೇಕವೃತ್ತಗಳೂ ಬಂಧಗಳೂ ಉದ್ಧಾರವಾಗುವ ಪದ್ಯ:—

ಅಂಗನೃಪಾಯತಿತುಂಗಭುಜಂ ಕಲಿಯಂಗಿತಶಿಕ್ಷಿತನಿಂದುಯಶಂ ।
ಪಿಂಗಜದೊಂಗತಭೃಂಗಕಚಂ ಕಲಿ ಮಂಗಳಲಕ್ಷಣಯುಕ್ತನಿವಂ ॥
ಸಂಗರಕೇಸರಿ ಸಂಗಗುಣಂ ಬಲಿ ಭೃಂಗರದಕ್ಷನುವಾಯುತನುಂ ।
ಸಂಗದಸನ್ಮತಿ ರಂಗವಹಂ ಸಲಿಭಂಗಿಯನೀಕ್ಷಿಸಿ ಮಾಚನೃಪಂ ॥ 173 ॥

“ಇದುವೆ ಎಡೆಯಕ್ಕರಮುಂ, ಕಿಱಿಯಕ್ಕರಮುಂ, ಚೌಪದಿಕೆಯುಂ, ಎರಡು ಷಟ್ಪದಿಯುಂ, ತ್ರಿಪದೋನ್ನತಿಯುಂ, ವಲ್ಲಮುಖಿಯುಂ, ತ್ರೋಟಕಮುಂ, ಚಿತ್ರ

ಪದಕವುಂ, ಕಮಳವುಂ, ಚಂದ್ರಿಕೆಯುಂ, ಇಂದುಮುಖಿಯುಂ, ಮೊದಲಾಗೆ 84 ವೃತ್ತಮುಂ, ಪಾದಮುರಜಬಂಧನುಂ, ಗೋಮೂತ್ರಿಕೆಯುಮುಕ್ಕುಂ"

ಈ ಶ್ಲೋಕದಲ್ಲಿ ಅಲ್ಲಲ್ಲಿ ತಪ್ಪುಗಳಿವೆ. ಕೆಲವು ವೃತ್ತಗಳನ್ನು ಉದ್ಧಾರ ಮಾಡಿ ಬರೆಯುತ್ತೇವೆ:—

(1) ಕಮಳವೃತ್ತಂ

ಶಿಕ್ಷಿತನಿಂದುಯಶಂ । ಲಕ್ಷಣಯುಕ್ತನಿವಂ ।
ದಕ್ಷನುವಾಯುತನುಂ । ಸೀಕ್ಷಿಸಿವಾಚನೃಪಂ ॥

(2) ತೋಟಕಂ

ಕಲಿಯಂಗಿತಶಿಕ್ಷಿತನಿಂದುಯಶಂ । ಕಲಿಮಂಗಳಲಕ್ಷಣಯುಕ್ತನಿವಂ ॥
ಬಲಿಭೃಂಗರದಕ್ಷನುವಾಯುತನುಂ । ಸಲೆಭಂಗಿಯುನೀಕ್ಷಿಸಿವಾಚನೃಪಂ ॥

(3) ಸೌಂದರಂ

ತುಂಗಭುಜಂ । ಭೃಂಗಕಚಂ । ಸಂಗಗುಣಂ । ರಂಗವಹಂ ॥

(4) ಚಿತ್ರಪದಂ

ಅಂಗನೃಪಾಯತಿತುಂಗಭುಜಂ । ಪಿಂಗಜದೊಂಗತಭೃಂಗಕಚಂ ।
ಸಂಗರಕೇಸರಿಸಂಗಗುಣಂ । ಸಂಗದಸನ್ಮತಿರಂಗವಹಂ ॥

(5) 'ಅಂಗಿತಶಿಕ್ಷಿತ' ಎಂದು ಆರಂಭಿಸಿದರೂ ಇದೇ ವೃತ್ತವಾಗುತ್ತದೆ

(6) ತ್ರಿಪದೋನ್ನತಿ

ಪೂರ್ವಾರ್ಧವೂ ನಾಲ್ಕನೆಯ ಪಾದವೂ ಮೇಲಣ ಚಿತ್ರಪದದಂತೆಯೇ. ಮೂರನೆಯ ಪಾದವು ಮಾತ್ರ

"ಸಂಗರಕೇಸರಿಸಂಗಗುಣಂ ಬಲಿ" ಎಂದಾಗುತ್ತದೆ.

(7) ಮತ್ತು (8) ಶರಷಟ್ಪದಿ

ಪೂರ್ವಾರ್ಧವೂ ಉತ್ತರಾರ್ಧವೂ ಒಂದೊಂದು ಶರಷಟ್ಪದಿಯ ಪದ್ಯವಾಗುತ್ತದೆ.

(9) ಜಗದ್ವಂದಿತಂ

ತುಂಗಭುಜಂ ಕಲಿಯುಂಗಿತಶಿಕ್ಷಿತನಿಂದುಯಶಂ ।
ಭೃಂಗಕಚಂ—ಇತ್ಯಾದಿ.

(10) ಈಗಿರುವ ಪದ್ಯವೇ ಪನಮುಂಜರಿಯಾಗುತ್ತದೆ.

## ಕವಿವಿಷಯ.

### ಶ್ಲೇಷೆಯ ಕಂದಂಗಳ್.

ವೃತಗೋಮಂ ಸಕಲಕಲಾ । ನ್ವಿತನನ್ಮೃತಮಯಂ ವಿಶುದ್ಧವಿದ್ಧಂ ಪರಿವೇ ।
ಷ್ಟಿತಸನ್ನಿವಹಂ ಕುವಲಯ । ಹಿತನೆನೆ ಸಂಪೂರ್ಣಚಂದ್ರನೊಳ್ ದೊರೆಚಂದ್ರಂ ॥174॥

ಒಸೆದಿನಿಸಂ ವಿಬುಧರ್ ಸೇ । ವಿಸೆ ಷೋಡಶಕಳೆಗೆ ಕುಂದುವಾಚಂದ್ರನಿನೇ ।
ನೆಸೆದನೊ ನಾಲ್ವಡಿ ಮಿಗಿಲೆನೆ । ಮಿಸುಪ ಚತುಷ್ಷಷ್ಟಿಕಲೆಗಳಿಂ ಕವಿಚಂದ್ರಂ ॥ 175 ॥

ಇದು ಪಣವಬಂಧಮುಂ ಗೋಮೂತ್ರಿಕೆಯುಮಕ್ಕುಂ :—

ಅಜಿಜೈತ್ರಕರಂ ಧೀರಂ । ರಾಜಿತಂ ಚಂದ್ರನೂರ್ಜಿತಂ ।
ವಾಜಿಗೋತ್ರಂ ಸ್ಥಿರಂ ಧೀರಂ । ಪೂಜಿತಂ ಚಂದ್ರನೂರ್ಜಿತಂ ॥ 176 ॥

### ಅರ್ಧಪಾದಗತಪ್ರತ್ಯಾಗತವಿಷಮಚಕ್ರಪದ್ಯಂ.

ಸಾಹಸಾಮದಯಾಹಾಸ । ಸಹಾಯದರಿತೋಪರಿ ।
ವಿಹತೋರಯಸೋಹೇಮ । ಮಹಿಸೋಯಮಸಾಹಸಂ ॥ 177 ॥

ಇದುವೆ ಮುರಜಪಣವಬಂಧಮುಂ ಗೋಮೂತ್ರಿಕೆ ಮೊದಲಾದ ಪಲವುಂತೆಱದ ಬಂಧಮುಂ ಜತ್ತರಟ್ಟಮೆಂಬೆರಡು ವೃತ್ತಮುಮಕ್ಕುಂ :—

ಕವಿರಾಜಸಮಾನಮ್ರ । ಕವಿರಾಜಸಮಾನಸಂ ।
ಕವಿರಾಜಸಮಾನಂ ತಾಂ । ಕವಿರಾಜಸಮಾನಕಂ ॥ 178 ॥

ಇದು ಆದ್ಯಂತಪ್ರಾಸಯಮಕಮುಂ ಜತ್ತರಟ್ಟಮುಮಕ್ಕುಂ :—

ಪೂಜಿತವಿಬುಧಸಮಾಜಂ । ಯೋಜಿತಸಮವಿದ್ಯನಮಲಗುಣಕವಿರಾಜಂ ।
ರಾಜಿತರೂಪಮನೋಜಂ । ವಾಜಿತಮೋರಹಿತನಂಬುಜ . . . ತೇಜಂ ॥ 179 ॥

## ಇತರ ಪದ್ಯಗಳು.

### ಏಕಾಕ್ಷರಿ

ನಿನ್ನನ್ನಂ ನಿನ್ನನ್ನೆಂ । ನಿನ್ನಾಂನುನನನ್ನನಿನ್ನನನ್ನೆಂ ನಿನ್ನಂ ।
ನಿನ್ನನ್ನಾಂ ನಾಂ ನೀನೆನೆ । ನಿನ್ನೆನ್ನಂ ನನ್ನಿ ನಿನ್ನನಾನಿನನೆನ್ನೆಂ ॥ 180 ॥

### ದ್ವ್ಯಕ್ಷರಿ

ದನು-ಂದನನಿನನಂದನ । ನಿನನಂದನನಿನನನಂದನನ ನಂದನನಂ ।
ದಿನನಂದನನೆಂದನುದಿನ । ದನನಿನನಾನನ್ನನಾದೆನಾಂದಂ ನಿನ್ನಂ ॥ 181 ॥

### ತ್ರ್ಯಕ್ಷರಿ

ದಾನನಂದನಂ ಮಾನಾ । ಮಾನಂಮಾನಿನೀಮನೋಮದನಂ ।
ಮಾನಿನಂ ನಾನಾನಾಮನಂದನನುದ್ದಾಮನಿನಿದಂದಾಮಂ (?) ॥ 182 ॥

### ಅಕಾರಾಂತಕಂದಂ

ಹರಹಾಸಧವಳಕಮಳಾ । ಕರಶರಧವಳಾಭ್ರಹಾರತಾರಾಚಳಪಾಂ ।
ಡರಪತ್ರಖಂಡತಾರಾಂ । ಬರರಂಗಾಚಳಶಶಾಂಕಶಂಕರವಲಯಂ ॥ 183 ॥

### ನಿರೋಷ್ಠ್ಯಕಂದಂ

### ಇದುವೆ ಜತ್ತರಟ್ಟಮುಮಕ್ಕುಂ.

ಖರಕಿರಣನ ತನಯನ ಖರ । ಕಿರಣನ ದಶರಥನ ನಳನ ಜಲಜಜನ ಧರಾ ।
ವರನ ಶಶಧರನ ಶಕ್ರನ । ಚರಿತೆಯಿಂ ನಿಜಚರಿತವೆನಿಸಿದಾತನನೊಲ್ಗಂ ॥ 184 ॥

### ಓಕಾರಾಂತಪದ್ಯ

ಓವೋ ವೋಲ್ವೋ ತೋವೋ ವೋಪೋ ।
ಪೋವೋ ನೋಪೋ ಪೋಯ್ವೋಳ್ಗೋಲೋ ॥
ಕೋವೋಲ್ವೋಯ್ವೋ ಸೋವೊಂಕೊಳ್ಗೋಳ್ ।
ಗೋವೊಂ ನೊಂದೋ ನೋಪೋರ್ ಪೋವೋರ್ ॥ 185 ॥

### ಓಕಾರಾಂತಮುಮೇಕಾರಾಂತಮುಮೊಡಗೂಡಿದುದಕ್ಕೆ

ಒಲಿದೊರೆವೊಳೆವೊರೆಲೆತೊತೂ ಪೋಗೆಂಬೊಡೆವೋಡೆಂದೊಡೆವೋ ಬೆಳ್ವಲೆಗೊಲೆವೋ
ಪೆಳ್ವೊಡೆಪೊರೆವೊರೆವೋಕೆಂದೊಳ್ಗೆ ಕೊಳೆನೋಡೊವೊಂಬೆಳ್ವೊಂ ॥ 186 ॥

### ವೇಶ್ಯಾಚರ್ಯ

ಕಿಚ್ಚಂ ನೀರಂ ಪೊಕ್ಕಂ । ನಿಚ್ಚಂ ಕಾಲ್ವಿಡಿದು ಮತ್ತೆ ಲಲ್ಲೈಸಿ ಕರಂ ।
ಬೆಚ್ಚನೆ ಸುಯ್ದುಂ ನಂಬಿಸ । ರಚ್ಚರಿಯೇ ವೇಶ್ಯೆಯರ್ಕಳೆಂತಪ್ಪರುಮಂ ॥ 187 ॥

---

## ಕರ್ಪರಸ. 1084.

ಈತನು ಧಾರ್ವಾಡಜಿಲ್ಲೆಯಲ್ಲಿಯ ನರುಗುಂದದ ಸಮೀಪದಲ್ಲಿರುವ ಹದಳಿಯ ಶಾಸನವನ್ನು[1] ಬರೆದಂತೆ ಆ ಶಾಸನದ ಕೊನೆಯ—

ಶ್ರೀಮನ್ಮಹಾಸಂಧಿವಿಗ್ರಹಿ ದಂಡನಾಯಕಂ ಕಾಳಿದಾಸಭಟ್ಟರಳಿಯಂ ಕವಿತಾಮನೋಹರಂ ಕವಿತಳರ ಕರ್ಪರಸಂ ಬರೆದಂ

---

1. *Ind. Ant.*, XIII. 91.

ಎಂಬ ವಾಕ್ಯದಿಂದ ತಿಳಿಯುತ್ತದೆ. ಈ ಶಾಸನವು 1084 ರಲ್ಲಿ ಬರೆದುದು. ಇದರಲ್ಲಿ ಚಾಳುಕ್ಯರಾಜನಾದ ವಿಕ್ರಮಾದಿತ್ಯನ (1076—1126) ಕಾಲದಲ್ಲಿ ದೇವಶಕ್ತಿಪಂಡಿತನ ಶಿಷ್ಯನಾದ ಜ್ಞಾನಶಕ್ತಿಪಂಡಿತನು ಹದಳಿಯ 400 ಬ್ರಾಹ್ಮಣರ ಮುಂದೆ ಗೌರೀಶ್ವರದೇವರಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ಈ ಶಾಸನದಲ್ಲಿರುವ ಪದ್ಯಗಳನ್ನು ನೋಡಿದರೆ ಈತನು ಒಳ್ಳೆಯ ಕವಿಯಾಗಿದ್ದಂತೆ ತೋರುತ್ತದೆ. ಇವನು ಬ್ರಾಹ್ಮಣಕವಿ. ಇವನ ತಂದೆ ಚಂದ್ರ, ತಾಯಿ ಚಾಮಾಂಬಿಕೆ, ಮಾವ ಕಾಳಿದಾಸಭಟ್ಟ—ಎಂಬ ಅಂಶಗಳು—

ಜನಕಂ ವಿಪ್ರಕುಲಾಂಬರದ್ಯುಮಣಿ ಚಂದ್ರಂ ತಾಯ್ ಸದಾಚಾರವ ।
ರ್ತಿನಿ ಚಾಮಾಂಬಿಕೆ ನಿರ್ಮಲೋರ್ಜಿತಯಶಂ ಶ್ರೀಕಾಳಿದಾಸಂ ಧರಾ ॥
ವಿನುತಂ ಮಾವನುಮಾವರಂ ಸಕಲಲೋಕಾರಾಧ್ಯನಾರಾಧ್ಯನೆಂ ।
ದು ನಿತಾಂತಂ ಧರೆ ಬಣ್ಣಿಕುಂ ಬುಧಸಮೂಹಕ್ಕರ್ಪನಂ ಕರ್ಪನಂ ॥

ಎಂಬ ಪದ್ಯದಿಂದ ತಿಳಿಯುತ್ತವೆ. ಮದನತಿಲಕವನ್ನು ಬರೆದ ಚಂದ್ರರಾಜನು (ಸು. 1079) ಈ ಕವಿಯ ತಂದೆಯಾಗಿದ್ದರೂ ಇರಬಹುದು.

ಈ ಶಾಸನದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ :—

### ಹದಳಿಯ ನಾನೂರು ಬ್ರಾಹ್ಮಣರು.

ಶರಣೆನೆ ಕಾವರೀವರೆರೆದರ್ಥಿಗೆ ವಿಪ್ರಕುಲಪ್ರದೀಪರೀ ।
ಶ್ವರಚರಣಾಬ್ಜಭೃಂಗರಧಿಕರ್ ಸಲೆ ಧರ್ಮದ ಮೇರುಗಳ್ ದಿಶಾಂ ॥
ತರಯಶರುತ ಮರ್ ಗುಣಿಗಣಾಗ್ರಣಿಗಳ್ ಸರಸೀಜಜಾತನೊಳ್ ।
ದೊರೆಯೆನೆ ಲೋಕದೊಳ್ ನೆಗಬ್ದ ಪಬ್ಬಲ ಸದ್ವಿಜರೇಂ ಕೃತಾರ್ಥರೋ ॥ 188 ॥

### ಜ್ಞಾನಶಕ್ತಿಪಂಡಿತ.

ವರವೇದಾಗಮಶಾಸ್ತ್ರದ । ಪರಿಣತಿಯೊಳಜಂಗೆ ತಾಮೆ ದೊರೆ ಪದ್ಮಭವಂ ।
ದೊರೆ ತಮಗೆ ಪೆಱರೊಳಾವನೊ।ದೊರೆ ವಿಪ್ರಕುಲಪ್ರದೀಪರೊಳ್ ವಸುಮತಿಯೊಳ್ ॥ 189 ॥

ಸ್ಮರಪರಿತಾಪಮಂ ತೊಱೆದನಶ್ರಮದಿಂ ವಿಷಯಂಗಳೆಲ್ಲಮಂ ।
ಹರಿಸಿದನೆಂದು ಲೋಕಮನಿತುಂ ನೆಱೆ ಕೀರ್ತಿಪುದಿಂತಿದೇಕೆ ವಾ ॥
ಕ್ತರುಣಿಗೆ ಸೋಲ್ತು ಮುಕ್ತಿವಧುಗಾಟಿಪನೆಂದೊಡೆ ಜ್ಞಾನಶಕ್ತಿದೇ ।
ವರ ಚರಿತಂ ಚರಾಚರದೊಳಂ ಬಗೆವಂಗೆ ವಿಚಿತ್ರಮಲ್ಲಿಯುಂ ॥ 190 ॥

ಸೆರಗಿಲ್ಲದೀವ ದಾನದೊ । ಳರವಿಂದಪ್ರಿಯತನೂಜನುಂ ಶುಚಿತನದೊಳ್ ।
ಮರುತಾತ್ಮಜನೆಂಬಿವರೊಳ್ । ದೊರೆ ಪಂಡಿತಪುಂಡರೀಕವನಮಾರ್ತಂಡಂ ॥ 191 ॥

## ದಾಮರಾಜ. 1085.

ಈತನು ಶಿವಮೊಗ್ಗ 10 ನೆಯ ಶಾಸನವನ್ನು ಬರೆದಂತೆ ಆ ಶಾಸನದ ಕೊನೆಯ "ಸಂಧಿವಿಗ್ರಹಿ ದಾಮರಾಜಂ ಸಾಸನಗಬ್ಬಮಂ ಪೇೞ್ದು ಬರೆದಂ" ಎಂಬ ವಾಕ್ಯದಿಂದ ತಿಳಿಯುತ್ತದೆ. ಇವನು ಜೈನಕವಿ; ಆರಲ್ಲಿ ಸಂಧಿವಿಗ್ರಹಿಯಾಗಿದ್ದನೋ ತಿಳಿಯದು. ಈ ಶಾಸನದಲ್ಲಿ ಚಾಳುಕ್ಯರಾಜನಾದ ವಿಕ್ರಮಾದಿತ್ಯನ (1076--1126) ಸಾಮಂತ ಗಂಗಪೆರ್ಮಾನಡಿಯ ಮಹಾಪ್ರಧಾನ ಹೆಗ್ಗಡೆ ನೊಕ್ಕಯ್ಯನು ಬಸದಿಗಳನ್ನು ಕಟ್ಟಿಸಿದಂತೆಯೂ ಈ ಬಸದಿಗಳಿಗಾಗಿ ಗಂಗಪೆರ್ಮಾನಡಿ 1084 ರಲ್ಲಿ ವೃತ್ತಿಗಳನ್ನು ಬಿಟ್ಟುಕೊಟ್ಟಂತೆಯೂ ಹೇಳಿದೆ. ದಾಮರಾಜನು ಈ ನೊಕ್ಕಯ್ಯನ ಆಶ್ರಿತನಾಗಿದ್ದಂತೆ ತೋರುತ್ತದೆ: ಅವನನ್ನು ಬಹಳವಾಗಿ ಸ್ತುತಿಸಿದ್ದಾನೆ. ಶಾಸನದ ಪದ್ಯಗಳನ್ನು ನೋಡಿದರೆ ಇವನು ಒಳ್ಳೆಯ ಕವಿಯೆಂಬುದಕ್ಕೆ ಅಡ್ಡಿಯಿಲ್ಲ.

ಈ ಶಾಸನದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ:—

### ಗಂಗಪೆರ್ಮಾನಡಿ.

ನುಡಿದುದೆ ನನ್ನಿ ಮಾಡಿದುದೆ ಶಾಸನಮಿತ್ತುದೆ ರಾಮರೇಸು ಮಾ |
ರ್ಕಿಡಿದುದೆ ವಜ್ರಲೇಪಮುಱಿದೀೞ್ದುದೆ ಮೃತ್ಯು ಪರೋಪಕಾರದೊಳ್ ||
ನಡೆದುದೆ ಬಟ್ಟೆ ಷಡ್ಗುಣಮೆ ಮೆಯ್ಯನೆ ಧರ್ಮದೊಳೊಂದಿ ನಿನ್ನವೋಲ್ |
ನಡೆವ ನೃಪೇಂದ್ರನಾವನಖಿಳಾವನಿಯೊಳ್ ಕಲಿಗಂಗಭೂಪತೀ || 192 ||

ಸ್ಥಿರನೇ ಮೇರುಗಿರೀಂದ್ರದೊಳ್ ಸೆಣಸುವಂ ಗಂಭೀರನೇ ವಾರ್ಧಿಯೊಳ್ |
ಪುರುಡಿಪ್ಪಂ ಕಲಿಯೇ ಸುರೇಂದ್ರಸುತನಂ ಮೆಚ್ಚಂ ಮಹಾದಾನಿಯೇ ||
ಸುರಭೂಜಕ್ಕೊಱಗಟ್ಟುವಂ ಚದುರನೇ ಪಾಂಚಾಳನಿಂ ಮಿಕ್ಕನೆಂ |
ದಿರದೀಗಳ್ ಧರೆ ಬಣ್ಣಿಕುಂ ರಣಜಯಪ್ರೋತ್ತುಂಗನಂ ಗಂಗನಂ || 193 ||

### ನೊಕ್ಕ.

ಪಾರ್ಥಿವರಂ ನಿರಾಕರಿಪ ದಾನಗುಣೋಕ್ತಿಯಿನರ್ಥಿಗರ್ಥಮಂ |
ಪ್ರಾರ್ಥಿಸದೀವ ಕಾರಣದೆ ಪೆರ್ಗಡೆ ನೊಕ್ಕಣನೀಪರೋಪಕಾ ||
ರಾರ್ಥಮಿದಂ ಶರೀರಮೆನಿಪೊಂದು ಪುರಾಣವಚೋಕ್ತಿಯಿಂದಮು |
ಪ್ರಾರ್ಥಿತದಾನದಿಂದೆ ನೆಗೞ್ವನ್ನತಿ ಸಂದುದಿಳಾತಳಾಗ್ರದೊಳ್ || 194 ||

ಮಾರ್ಗದೊಳೊಳ್ಪಿನೊಳ್ ಗುಣದೊಳಣ್ಮಿನೊಳಾರ್ಪಿನೊಳಾದದೊಂದು ಪೆಂ |
ಪಾರ್ಗಮಸಾಧ್ಯಮಿಂತಿಱವ ಕಾವ ಗುಣಂಗಳೆ ಸಾಜಮೆಂದು ಕೇ ||
ಳ್ದಾರ್ಗಡೆಗೊಂಡು ಜೇಂಕರಿಸೆ ರಾಜಗುಣಕ್ಕೆಳವಟ್ಟ ನೊಕ್ಕನಂ |
ಪೆರ್ಗಡೆಯೆಂಬುದೇ ಧುರಕೆ ಮಾರ್ಗಡೆಯುಂ ಪತಿಗೇಕಸಾಧನಂ || 195 ||

ಪೆರ್ಗಡೆತನಮಂ ಬಲ್ಲರ್ | ಖಟ್ಗಿಮುನಣಮುಱಿಯರುಟ್ರಿದವಾತ್ಕರ್ ನೊಕ್ಕಂ |
ಪೆರ್ಗಡೆ ಗಂಗರ ಮನೆಯೊಳ್ | ಮಾರ್ಗಡೆ ಸಂಗರದ ಮೊನೆಯೊಳೆನೆ ಮೆಚ್ಚದರಾರ್ ||196||

## ಸೇನಬೋವ ಮಾದಿಮಯ್ಯ. 1098.

ಮದ್ರಾಸ್ ಪ್ರಾಚ್ಯಕೋಶಾಲಯದಲ್ಲಿ ನಮಗೆ ದೊರೆತ 1098 ರಲ್ಲಿ ಬರೆದ ಒಂದು ಶಾಸನದಲ್ಲಿ ಈತನನ್ನು “ಕಾವ್ಯನಾಟಕಕಾರ” ಎಂದು ವಿಶೇಷಿಸಿ ಹೇಳಿದೆ. ಇವನು ಆವ ಗ್ರಂಥಗಳನ್ನು ಬರೆದಿದ್ದಾನೆಯೋ ತಿಳಿಯದು.

## ಶಂಖವರ್ಮ. ಸು. 1100.

ಈ ಕವಿಯ ಹೆಸರು **ಎರಡನೆಯ ನಾಗವರ್ಮನ** (ಸು. 1145) ಕಾವ್ಯಾವಲೋಕನದಲ್ಲಿ ‘ಅಧ್ವನ್’ ಶಬ್ದದ ಪ್ರಯೋಗವನ್ನು ತೋರಿಸುವಾಗ—

ಪ್ರಣುತಗುಣರೆನಿಪ ವಿಬುಧಾ | ಗ್ರಣಿಗಳ್ ಕೆಯ್ಕೊಂಡು ಪೊಗಟ್ಚೆ ಸಲೆ ನೆಗಟ್ದುವು ಧಾ |
ರಿಣಿಯೊಳಗೆ ನಾಗವರ್ಮನ | ಗುಣವರ್ಮನ ಶಂಖವರ್ಮನಧ್ವಾನಂಗಳ್ ||

ಎಂಬ ಪದ್ಯದಲ್ಲಿ ಹೇಳಿದೆ. ಇದರಿಂದ ಈತನು ಈ ನಾಗವರ್ಮನಿಗೆ ಹಿಂದೆ ಇದ್ದನೆಂಬುದು ವ್ಯಕ್ತವಾಗುತ್ತದೆ; ಅಲ್ಲದೆ ಲಕ್ಷಣಗ್ರಂಥಕಾರನಾಗಿದ್ದಂತೆಯೂ ತಿಳಿಯುತ್ತದೆ. ಈ ಕವಿಯನ್ನು **ರುದ್ರಭಟ್ಟನು** (ಸು. 1180) ‘ಸಂದ ಶಂಖವರ್ಮನ ಬಗೆ’ ಎಂದು ಹೊಗಳಿರುವುದರಿಂದ ಈತನು ಪ್ರಸಿದ್ಧಕವಿಯಾಗಿಯೂ ಇದ್ದಿರಬೇಕು. ಈತನ ಕಾಲವು ಸುಮಾರು 1100 ಆಗಿರಬಹುದೆಂದು ಊಹಿಸುತ್ತೇವೆ; ಇನ್ನೂ ಹಿಂದೆ ಇದ್ದಿದ್ದರೂ ಇರಬಹುದು. ಇವನ ಗ್ರಂಥಗಳು ಆವುವೂ ನಮಗೆ ದೊರೆತಿಲ್ಲ.

## ನಾಗಚಂದ್ರ. ಸು. 1100.

ಈತನು ರಾಮಚಂದ್ರಚರಿತಪುರಾಣ (ಪಂಪರಾಮಾಯಣ), ಮಲ್ಲಿನಾಥಪುರಾಣ ಎಂಬ ಎರಡು ಗ್ರಂಥಗಳನ್ನು ಬರೆದಿದ್ದಾನೆ. ಜಿನಮುನಿತನಯ, ಜಿನಾಕ್ಷರಮಾಲೆ ಮೊದಲಾದ ಇತರ ಗ್ರಂಥಗಳನ್ನೂ ಕೂಡ ಈತನು ರಚಿಸಿದ್ದಾನೆ ಎಂದು **ದೇವಚಂದ್ರನು** ರಾಜಾವಳೀಕಥೆಯಲ್ಲಿ (1838) ಹೇಳುತ್ತಾನೆ. ಈಗ ಅಚ್ಚಾಗಿರುವ ಜಿನಮುನಿತನಯ ಎಂಬ ಗ್ರಂಥವು ಈ ಕವಿಯಿಂದ ರಚಿತವಾದುದೆಂಬ ಪ್ರತೀತಿಯಿದೆ. ಆದರೆ ಈ ಗ್ರಂಥದ ರಚನೆಯನ್ನು ನೋಡಿದರೆ ಇದಕ್ಕೂ ನಾಗಚಂದ್ರನ ಗ್ರಂಥಗಳಿಗೂ ಆವ ವಿಧವಾದ ಹೋಲಿಕೆಯೂ ಇರುವಂತೆ ತೋರ

ವುದಿಲ್ಲ. ಆಧುನಿಕನಾದ ಆವನೋ ಒಬ್ಬ ಸಾಧಾರಣಕವಿಯಿಂದ ಈ ಗ್ರಂಥವು ರಚಿತವಾಗಿದೆ ಎಂಬುದರಲ್ಲಿ ಸಂಶಯವಿಲ್ಲ. ನಮಗೆ ಸಿಕ್ಕಿದ ಈ ಗ್ರಂಥದ ಓಲೆಯ ಪ್ರತಿಯಲ್ಲಿ—

ಕೇಳುವ ಭವ್ಯರ ಪುಣ್ಯಂ। ಪೇೞುವ ಕವಿನೂತನಾಗಚಂದ್ರನ ಭಾಗ್ಯಂ।
ಪಾಲಿಪ ಜಿನೇಂದ್ರಧರ್ಮವ। ನೇಳಿಸದಿರು ಮೋಕ್ಷಗಾಮಿ ಜಿನಮುನಿತನಯಾ ॥

ಎಂಬ ಪದ್ಯವು ಇದೆ. 'ಕವಿನೂತನಾಗಚಂದ್ರ' ಎಂಬುದರಿಂದ ಜಿನಮುನಿ ತನಯವನ್ನು ಬರೆದವನು 'ಅಭಿನವನಾಗಚಂದ್ರ' ಎಂದು ಹೆಸರಿಟ್ಟುಕೊಂಡಿದ್ದ ಹಾಗೆ ತೋರುತ್ತದೆ. 'ಕವಿನೂತನಾಗಚಂದ್ರ' ಎಂಬುದನ್ನು 'ಕವಿವಿನುತ ನಾಗಚಂದ್ರ' ಎಂದು ಅಚ್ಚುಹಾಕಿರುವುದರಿಂದ ಈ ಗ್ರಂಥವು ನಾಗಚಂದ್ರಕೃತವೆಂಬ ಭ್ರಮೆಗೆ ಅವಕಾಶವುಂಟಾದಂತೆ ಕಾಣುತ್ತದೆ. ಜಿನಾಕ್ಷರಮಾಲೆ ಎಂಬ ಒಂದು ಗ್ರಂಥವು ಪೊನ್ನನಿಂದ ರಚಿತವಾಗಿದೆ ಎಂದು ಹಿಂದೆಯೇ ತಿಳಿಸಿದ್ದೇವೆ.[1] ನಾಗಚಂದ್ರನೂ ಒಂದು ಜಿನಾಕ್ಷರಮಾಲೆಯನ್ನು ರಚಿಸಿದ್ದಾನೆಯೋ ಅಥವಾ ದೇವಚಂದ್ರನೇ ಭ್ರಮಿಸಿದ್ದಾನೆಯೋ ತಿಳಿಯದು.

ಈ ಕವಿಯ ದೇಶ, ಕಾಲ, ವಂಶ ಮುಂತಾದುದಾವುದೂ ಈತನ ಗ್ರಂಥಗಳಿಂದ ತಿಳಿವುದಿಲ್ಲ. ಆದರೆ ಮಲ್ಲಿನಾಥಪುರಾಣದಲ್ಲಿಯ

ನಿಜವಿಭವೋದಯಂ ಸಫಲಮಾಯ್ತೆನೆ ಮಲ್ಲಿಜಿನೇಂದ್ರಗೇಹಮಂ।
ವಿಜಯಪುರಕ್ಕಲಂಕರಣಮಾಗಿರೆ ಮಾಡಿಸಿ ತಚ್ಚರಿತ್ರಮಂ॥
ಸುಜನಸಭಾವತಂಸಮೆನೆ ಪೇೞ್ದುದಿತೋದಿತಮಾಗೆ ಮಾಡಿದಂ।
ನಿಜಕವಿತಾಗುಣೋದಯಮದೆಂಬಿನಮಾಕೃತಿ ನಾಗಚಂದ್ರನಾ ॥

ಎಂಬ ಪದ್ಯದಲ್ಲಿ ಈತನು ವಿಜಯಪುರದಲ್ಲಿ ಮಲ್ಲಿನಾಥಜಿನಾಲಯವನ್ನು ಕಟ್ಟಿಸಿ ಮಲ್ಲಿನಾಥಪುರಾಣವನ್ನು ಬರೆದಂತೆ ಹೇಳುತ್ತಾನೆ. ಈ ವಿಜಯಪುರವು ಈಗಿನ ಬಿಜಾಪುರವಾಗಿರಬಹುದು; ಇದೇ ಇವನ ಊರಾಗಿದ್ದರೂ ಇರಬಹುದು. "ನಿಜವಿಭವೋದಯಂ ಸಫಲಮಾಯ್ತು" ಎಂಬುದರಿಂದ ಇವನು ಐಶ್ವರ್ಯವಂತನಾಗಿ ಉನ್ನತಸ್ಥಿತಿಯಲ್ಲಿದ್ದಂತೆ ತಿಳಿಯುತ್ತದೆ. ಈತನಿಗೆ **ಅಭಿನವಪಂಪ** ಎಂಬ ಹೆಸರೂ ಉಂಟು; ಮತ್ತು ಇವನ ಗ್ರಂಥಗಳಿಂದ—ಭಾರತೀಕರ್ಣಪೂರ; ಕವಿತಾಮನೋಹರ; ಸಾಹಿತ್ಯವಿದ್ಯಾಧರ; ಚತುರಕವಿಜನಾಸ್ಥಾನರತ್ನಪ್ರದೀಪ; ಸಾಹಿತ್ಯಸರ್ವಜ್ಞ; ಸೂಕ್ತಿಮುಕ್ತಾವತಂಸ ಎಂಬ ಬಿರುದುಗಳೂ ಇದ್ದಂತೆ ತಿಳಿಯಬರುತ್ತದೆ. ಈತನ ಗುರು ಬಾಲಚಂದ್ರಮುನಿ.

1. ಪುಟ 39.

**ಈ ಕವಿಯ ಕಾಲವನ್ನು ನಿರ್ಣಯಿಸುವುದಕ್ಕಾಗಿ ಇಲ್ಲಿ ಸ್ವಲ್ಪ ವಿಚಾರ ಮಾಡುತ್ತೇವೆ:—**

(1) ಎರಡನೆಯ ನಾಗವರ್ಮನು (ಸು. 1145) ಭಾಷಾಭೂಷಣದಲ್ಲಿ 'ದ್ವಿತೀಯಾರ್ಥೇ ಚತುರ್ಥೀ'[1] ಎಂಬ ಸೂತ್ರದ ಕೆಳಗೆ "ಬಹುತಾಪಕ್ಕೆ ಬಿಗುರ್ತು ವಿಷ್ಣು ಪಡೆದಂ ಮತ್ಸ್ಯಾವತಾರಕ್ಕೆ" ಎಂಬ ಪದ್ಯಭಾಗವನ್ನು ಪಂಪರಾಮಾಯಣದಿಂದ[2] ತೆಗೆದು ಉದಾಹರಿಸಿದ್ದಾನೆ. ಇದರಿಂದ ನಾಗಚಂದ್ರನು ನಾಗವರ್ಮನ ಕಾಲಕ್ಕೆ ಹಿಂದೆಯೇ ಪ್ರಸಿದ್ಧನಾಗಿದ್ದಿರಬೇಕೆಂಬುದು ವ್ಯಕ್ತವಾಗುತ್ತದೆ; ಒಂದು ತಲೆಯಾದರೂ ಹಿಂದೆ ಇದ್ದಿರಬೇಕೆಂಬುದರಲ್ಲಿ ಸಂಶಯವಿಲ್ಲ. (2) ದುರ್ಗಸಿಂಹನು (ಸು. 1145) ಪೂರ್ವಕವಿಗಳ ಗೋಷ್ಠಿಯಲ್ಲಿ ಸೇರಿಸಿ ಸ್ತುತಿಸಿರುವ ಕರ್ಣಪಾರ್ಯನು ತನ್ನ ನೇಮಿನಾಥಪುರಾಣದಲ್ಲಿಯು—

ಅದ್ಯತನನಾಗಿಯುಂ ನೆಗ| ಳ್ದಾದ್ಯರ ದೊರೆಯೆನಿಸಿ ಮೆಱೆದು ಸಾಹಿತ್ಯಕಳಾ|
ಹೃದ್ಯತೆಯಿನೇದನಾನಿರ| ವದ್ಯಗುಣಂ ಸಂದ ನಾಗಚಂದ್ರಕವೀಂದ್ರಂ ||

ಎಂಬ ಪದ್ಯದಲ್ಲಿ ನಾಗಚಂದ್ರನನ್ನು ಹೊಗಳಿದ್ದಾನೆ. "ಅದ್ಯತನನಾಗಿಯುಂ" ಎಂಬುದರಿಂದ ಕರ್ಣಪಾರ್ಯನಿಗೆ (ಸು. 1140) ಸುಮಾರು ಒಂದು ತಲೆ ಹಿಂದೆ ಇದ್ದಿರಬಹುದು. (3) ಮೇಘಚಂದ್ರನನ್ನು ಸ್ತುತಿಸುವ "ಮುನಿನಾಥಂ ದಶಧರ್ಮಧಾರಿ"[3] ಎಂಬ ಪಂಪರಾಮಾಯಣಪದ್ಯವು, ಆ ಮೇಘಚಂದ್ರನು 1115 ರಲ್ಲಿ ಗತಿಸಿದುದಾಗಿ ತಿಳಿಸುವ ಸುಮಾರು ಅದೇ ವರ್ಷದಲ್ಲಿ ಬರೆದ ಶ್ರವಣಬೆಳ್ಗೊಳದ 127 ನೆಯ ಶಾಸನದಲ್ಲಿ ದೊರೆಯುತ್ತದೆ. ಇದರಿಂದ ಪಂಪರಾಮಾಯಣವು ಈ ಶಾಸನ ಹುಟ್ಟಿದ 1115 ಕ್ಕೆ ಹಿಂದೆ ಇದ್ದುದು ವ್ಯಕ್ತವಾಗುತ್ತದೆ. (4) ಮದ್ರಾಸ್ ಪ್ರಾಚ್ಯಕೋಶಾಲಯದಲ್ಲಿ ನಮಗೆ ದೊರೆತ, 1105 ರಲ್ಲಿ ಬರೆದ, ಒಂದು ಶಾಸನದಲ್ಲಿ ಒಬ್ಬ ಪಂಪಕವಿಯ ಹೆಸರು ದೊರೆಯುತ್ತದೆ. ಈ ಕವಿ ನಾಗಚಂದ್ರನೇ ಆಗಿರಬಹುದು.

**ಈ ಕಾರಣಗಳಿಂದ ನಾಗಚಂದ್ರನು ಸುಮಾರು 1100 ರಲ್ಲಿ ಇದ್ದಿರಬೇಕೆಂದು ಊಹಿಸುತ್ತೇವೆ.**

ಕಂತಿ[4] ಯೆಂಬ ಪ್ರಖ್ಯಾತಳಾದ ಒಬ್ಬ ಕಬ್ಬಿಗಿತಿ ದ್ವಾರಸಮುದ್ರದ ಬಲ್ಲಾಳರಾಯನ ಸಭೆಯಲ್ಲಿ ಪಂಡಿತೆಯಾಗಿದ್ದಂತೆ ತಿಳಿಯುತ್ತದೆ. ಕಂತಿಹಂಪನ ಸಮಸ್ಯೆಗಳೆಂದು ವಾಡಿಕೆಯಾಗಿ ಕರೆಯಲ್ಪಡುವ ಕೆಲವು ಪದ್ಯಗಳಿಂದ ಈ ಕಂತಿಗೂ ನಾಗಚಂದ್ರನಿಗೂ ಸಂವಾದಗಳು ನಡೆದಂತೆ ತಿಳಿಯಬರುತ್ತದೆ.[5] ಇದೇ ವಿಷಯವಾಗಿ ದೇವಚಂದ್ರನೂ ಹೀಗೆ ಬರೆದಿದ್ದಾನೆ:—'ದೋರರಾಯಂ ಆಸ್ಥಾನದ ಕನ್ನಡ ಸಂಸ್ಕೃತಮಹಾಕವಿಗಧಿಪಂ ಪಂಪಕವಿಯಂ ಕಳುಹಲ್ ಆತಂ ಬಂದು ವಿದ್ಯೆಯಿಂ ಸಾವಿರಪ್ರಶ್ನೆಯಂ ಕೇಳಲ್ ಆಕೆ (ಕಂತಿ)

1. ಸೂತ್ರ 93 2. ಆಶ್ವಾಸ 7, ಪದ್ಯ 98 3 ಆಶ್ವಾಸ 1, ಪದ್ಯ 20. 4. ಕಂತಿಯ ಚರಿತೆಯನ್ನು ನೋಡಿ. 5. "ಉಸಿರೆಂದಾಗುಣಕಂತಿಕೆ| ಗಸಮಸಮಸ್ಯೆಯನೆ ಕೊಟ್ಟನಭಿನವಪಂಪಂ"

ಉತ್ತರಮಂ ಕುಡಲ್ ಆಕೆಯಂ ರಾಜಸಭೆಗೆಯ್ದುಸೆ ವಿದ್ವತ್ಸಮೂಹದೊಳಧಿಕಕವೀಶ್ವರಿಯಾಗಿರ್ದಳ್.' ಈ ಹೇಳಿಕೆ ನಿಜವಾಗಿದ್ದಪಕ್ಷದಲ್ಲಿ ನಾಗಚಂದ್ರನು 1100 ರಿಂದ 1106 ರವರೆಗೆ ಆಳಿದ ಹೊಯ್ಸಳರಾಜನಾದ 1 ನೆಯ ಬಲ್ಲಾಳನ ಆಸ್ಥಾನಪಂಡಿತನಾಗಿದ್ದಿರಬೇಕು.

ಮೆ॥ ರೈಸ್—ನಾಗಚಂದ್ರನ ಗುರುವಾದ ಬಾಲಚಂದ್ರನು ಸುಜನೋತ್ತಂಸನ ಸಮಕಾಲದವನೆಂದೂ ಪಾಭೃತತ್ರಯವ್ಯಾಖ್ಯಾಕಾರನೆಂದೂ ಸುಮಾರು 1140ರಲ್ಲಿ ಇದ್ದನೆಂದೂ ಹೇಳುತ್ತಾರೆ [1] ; ಅಲ್ಲದೆ ಮೆ॥ ಪಾಠಕರು " ಮೇಘಚಂದ್ರನು ಪೂಜ್ಯಪಾದಕೃತವಾದ ಸಮಾಧಿಶತಕಕ್ಕೆ ' ವಿತತಯಶೋನಿಧಿ ಪಂಪನ ಸುತಂಗೆ ತಿಳಿವಂತು ಪೊಚ್ಚ ಪೊಸಗನ್ನಡದಿಂ ' ಒಂದು ವ್ಯಾಖ್ಯಾನವನ್ನು 1148 ರಲ್ಲಿ ಬರೆದಿದ್ದಾನೆ " ಎಂದು ಹೇಳುವ[2] ಆಧಾರದಿಂದ ನಾಗಚಂದ್ರನು ಸುಮಾರು 1145 ರಲ್ಲಿ ಇದ್ದಿರಬಹುದೆಂದೂ ಹೇಳುತ್ತಾರೆ. ಆದರೆ ಬಾಲಚಂದ್ರ ಎಂಬ ಹೆಸರುಳ್ಳ ಇಬ್ಬರು ಜೈನಗುರುಗಳು ಇದ್ದಂತೆ ಶಾಸನಗಳಿಂದ ತಿಳಿಯಬರುತ್ತದೆ. ಸುಜನೋತ್ತಂಸನ ಸಮಕಾಲದವನೂ ಪ್ರಾಭೃತತ್ರಯವ್ಯಾಖ್ಯಾಕಾರನೂ ಆದ ಬಾಲಚಂದ್ರನಿಗೆ ಅಧ್ಯಾತ್ಮಿಬಾಲಚಂದ್ರ [3] ಎಂದು ಹೆಸರು. ಈತನು 1176 ರಲ್ಲಿ ಗತಿಸಿದ ನಯಕೀರ್ತಿಯ ಶಿಷ್ಯನೆಂದೂ [4] 1181 ರಲ್ಲಿ ಬದುಕಿದ್ದನೆಂದೂ [5] ಪುಸ್ತಕಗಚ್ಛದವನೆಂದೂ [6] ತಿಳಿಯುತ್ತದೆ. ಇವನು ಬೇರೆ ನಾಗಚಂದ್ರನ ಗುರುವಾಗಿರಲಾರನು. ಮತ್ತೊಬ್ಬ ಬಾಲಚಂದ್ರಮುನಿ 1115 ರಲ್ಲಿ ಗತಿಸಿದ ಮೇಘಚಂದ್ರನ ಸಧರ್ಮನೆಂದೂ [7] ವಕ್ರಗಚ್ಛಕ್ಕೆ ಸೇರಿದವನೆಂದೂ ತಿಳಿಯುತ್ತದೆ. ಹಿಂದೆ ಹೇಳಿದ ನಯಕೀರ್ತಿಯ ತಂದೆಯಾದ ಗುಣಚಂದ್ರನೂ ಈ ಮೇಘಚಂದ್ರನ ಸಧರ್ಮನೆಂದು ಶ್ರ. ಬೆ. 66 ನೆಯ ಶಾಸನದಿಂದ ತಿಳಿಯುತ್ತದೆ. ಇದರಿಂದ ವಕ್ರಗಚ್ಛದ ಬಾಲಚಂದ್ರನೂ ಮೇಘಚಂದ್ರನೂ ನಯಕೀರ್ತಿಯ ತಂದೆಯಾದ ಗುಣಚಂದ್ರನೂ ಸಮಕಾಲದವರೆಂದು ವ್ಯಕ್ತವಾಗುತ್ತದೆ. ಆದುದರಿಂದ ನಯಕೀರ್ತಿಯ ಶಿಷ್ಯನಾದ ಪುಸ್ತಕಗಚ್ಛದ ಅಧ್ಯಾತ್ಮಿಬಾಲಚಂದ್ರನಿಗೂ ನಯಕೀರ್ತಿಯ ತಂದೆಯ ಸಧರ್ಮನಾದ ವಕ್ರಗಚ್ಛದ ಬಾಲಚಂದ್ರನಿಗೂ ಆವ ಸಂಬಂಧವೂ ಇಲ್ಲ. ಈ ವಕ್ರಗಚ್ಛದ ಬಾಲಚಂದ್ರನೇ ನಾಗಚಂದ್ರನ ಗುರು. ಈತನ ವಿಷಯವಾಗಿ ಸುಮಾರು 1100 ರಲ್ಲಿ ಬರೆದ ಶ್ರ. ಬೆ. 69 ನೆಯ ಶಾಸನದಲ್ಲಿ—

ಸಿದ್ಧಾಂತಾದ್ಯಖಿಳಾಗಮಾರ್ಥನಿಪುಣವ್ಯಾಖ್ಯಾನಸಂಶುದ್ಧಿಯಿಂ |
ಶುದ್ಧಾಧ್ಯಾತ್ಮಕತತ್ತ್ವನಿರ್ಣಯವಚೋವಿನ್ಯಾಸದಿಂ ಪ್ರೌಢಿಸಂ ||
ಬದ್ಧವ್ಯಾಕರಣಾರ್ಥಶಾಸ್ತ್ರಭರತಾಲಂಕಾರಸಾಹಿತ್ಯದಿಂ |
ರಾದ್ಧಾಂತೋತ್ತಮಬಾಳಚಂದ್ರಮುನಿಯಂತಾರ್ ಖ್ಯಾತರೀಲೋಕದೊಳ್ ||

---

1. ಶಬ್ದಾನುಶಾಸನ, ಉಪೋದ್ಘಾತ, ಪುಟ 33 2. *Ind. Ant.*, XII, 20. 3. ಇವನ ಚರಿತವನ್ನು ನೋಡಿ 4. ಶ್ರ. ಬೆ. ಶಾ. 66. 5. ಶ್ರ. ಬೆ. ಶಾ. 327. 6. ಶ್ರ. ಬೆ. ಶಾ. 254. 7. ಶ್ರ. ಬೆ. ಶಾ. 69.

ಎಂಬ ಪದ್ಯವಿದೆ. ಈತನೂ ಕನ್ನಡಕವಿಯಾಗಿದ್ದಿರಬಹುದು. ನಾಗಚಂದ್ರನು ಸ್ತುತಿಸುವ ಮೇಘಚಂದ್ರನೇ ಬೇರೆ; ಸಮಾಧಿಶತಕವ್ಯಾಖ್ಯಾಕಾರನಾದ ಮೇಘಚಂದ್ರನೇ ಬೇರೆ. ಮೊದಲನೆಯವನು 1115 ರಲ್ಲಿ ಗತಿಸಿದುದಾಗಿ ಹೇಳುವ ಶ್ರ. ಬೆ. 127 ನೆಯ ಶಾಸನದಲ್ಲಿಯೇ ಅವನ ಸ್ತುತಿರೂಪವಾದ "ಮುನಿನಾಥಂ ದಶಧರ್ಮಧಾರಿ" ಎಂಬ ಪದ್ಯವು ಇದೆ. ಎರಡನೆಯವನು ಸಮಾಧಿಶತಕವ್ಯಾಖ್ಯೆಯನ್ನು 1148 ರಲ್ಲಿ ಬರೆದುದಾಗಿ ತಿಳಿಯಬರುವುದರಿಂದ ಈತನಿಗೂ 1115 ರಲ್ಲಿ ಗತಿಸಿದವನಿಗೂ ಏನೇನೂ ಸಂಬಂಧವಿಲ್ಲ. ಈತನು ಶ್ರ. ಬೆ. 66ನೆಯ ಶಾಸನದಲ್ಲಿ ನಯಕೀರ್ತಿಯ ಶಿಷ್ಯನೆಂದು ಹೇಳಿರುವ ಮೇಘಚಂದ್ರನಾಗಿರಬಹುದು. "ವಿತತಯಶೋನಿಧಿ ಪಂಪನ" ಎಂಬುದು ನಾಗಚಂದ್ರನಿಗೆಯೇ ಅನ್ವಯಿಸುವ ಪಕ್ಷದಲ್ಲಿ ಅವನ ಕಾಲವಾದಮೇಲೆ ಅವನ ಮಗನಿಗಾಗಿ ಎರಡನೆಯ ಮೇಘಚಂದ್ರನು ಸಮಾಧಿಶತಕವ್ಯಾಖ್ಯಾನವನ್ನು ಬರೆದಿರಬಹುದು.

ನಾಗಚಂದ್ರನು ಸ್ತುತಿಸುವ ವೀರಣಂದಿಸಿದ್ಧಾಂತಿಕನು ಸಮಾಧಿಶತಕವ್ಯಾಖ್ಯಾಕಾರನಾದ ಮೇಘಚಂದ್ರನ ಮಗನೆಂದು ಮ|| ಪಾಠಕರು ಅಭಿಪ್ರಾಯಪಡುತ್ತಾರೆ.[1] ಆದರೆ ಈತನು ಮೊದಲನೆಯ ಮೇಘಚಂದ್ರನ ಮಗನೆಂಬುದು ಶ್ರ. ಬೆ. 140 ನೆಯ ಶಾಸನದಿಂದ ವ್ಯಕ್ತವಾಗುತ್ತದೆ. ನಾಗಚಂದ್ರನು ಸ್ತುತಿಸುವ ಶುಭಕೀರ್ತಿ, ನಾಗಚಂದ್ರನ ಗುರುವಾದ ಬಾಲಚಂದ್ರನ ಮಗನೆಂದು ಅದೇ ಶಾಸನದಿಂದಲೇ ತಿಳಿಯುತ್ತದೆ. ಈ ಕಾರಣಗಳಿಂದ ಕವಿ ತನ್ನ ಗ್ರಂಥಗಳಲ್ಲಿ ಸ್ತುತಿಸುವ ಮೊದಲನೆಯ ಮೇಘಚಂದ್ರನೂ ಅವನ ಮಗ ವೀರಣಂದಿಸಿದ್ಧಾಂತಿಯೂ ತನ್ನ ಗುರು ಬಾಲಚಂದ್ರನೂ ಇವನ ಮಗ ಶುಭಕೀರ್ತಿಯೂ ಕವಿಯ ಸಮಕಾಲದವರೆಂದು ಹೇಳಬಹುದು; ಶ್ರುತಕೀರ್ತಿಯೂ ಸಮಕಾಲದವನಾಗಿರಬಹುದು.

ಈ ಕವಿಯನ್ನು **ಕರ್ಣಪಾರ್ಯ** (ಸು. 1140), **ದುರ್ಗಸಿಂಹ** (ಸು. 1145), **ಪಾರ್ಶ್ವ** (1205), **ಜನ್ನ** (1209), **ಮಧುರ** (ಸು. 1385), **ಮಂಗರಸ** (1508) ಮೊದಲಾದವರು ಸ್ತುತಿಸಿದ್ದಾರೆ:—

ಮಾರ್ಗದ್ವಯಪರಿಣತಕವಿ | ಮಾರ್ಗಮನೋಹಾರಿಯಾದುದೆಂದಖಿಳಬುಧರ್ |
ನಿರ್ಗರ್ವರಾಗಿ ಪಂಪನ | ಗೀರ್ಗುಂಫದ ಪೆಂಪನಾಗಳುಂ ಬಣ್ಣಿಸುವರ್ ||

**ದುರ್ಗಸಿಂಹ.**

ಇಂಪೆಸೆಯೆ ವಿಪಂಚಿಯ ದನಿ | ಯಂ ಪೋಲ್ತಿರೆ ಸುಕರಸರಸಸೂಕ್ತಿವಿಲಾಸಂ |
ಪಂಪನೆ ನುಡಿವಂ....|......ಬಲ್ಲಿಕ್ಕೆ ಕಳಕಂಠನವೋಲ್ ||

**ಪಾರ್ಶ್ವ.**

ಘಳಿಲನೆ ವಿಬುಧರ್ ತುಷ್ಟಿಯ | ನೊಳಕೆಯ್ಯು ಮನಃಪ್ರಸಾದಮಂಪಡೆವುದಱಿಂ |
ಕಳೆಯಂ ಚಂದ್ರಂ ಕವಿತಾ | ಕಳೆಯಂ ಕವಿನಾಗಚಂದ್ರನಾಂತುದೆ ಸಫಲಂ ||

**ಮಧುರ.**

1. *Ind. Ant.*, XIV, 14.

* * * * * ರಘು । ಕಾಂತನ ಮಲ್ಲಿತೀರ್ಥಕರ ।
ಸಂತಸದಿಂ ವರ್ಣಿಸಿದ ನಾಗಚಂದ್ರನ । ಸಂತತಮಭಿನುತಿಸುವೆನು ॥

**ಮಂಗರಸ.**

ಈತನ ಗ್ರಂಥಗಳಿಂದ ನಾಗವರ್ಮ ಕೇಶಿರಾಜಾದಿ ಲಕ್ಷಣಗ್ರಂಥಕಾರರು ಪದ್ಯಗಳನ್ನು ಉದಾಹರಿಸಿದ್ದಾರೆ.

ಈತನು ತನಗೆ ಹಿಂದೆ ಇದ್ದ ಕವಿಗಳಲ್ಲಿ ಪಂಪ, ಪೊನ್ನ. ರನ್ನ ಇವರುಗಳನ್ನು–

ಮನ್ನಿಸುಗೆ ಕೃತಿಗೆ ಸೌಭಾ । ಗ್ಯೋನ್ನತಿಯಂ ಸುಕವಿಪಂಪನಾದಿಪುರಾಣಂ ।
ಪೊನ್ನನ ಶಾಂತಿಪುರಾಣಂ । ರನ್ನನ ಕೃತಿರತ್ನಮೆನಿಸಿದಜಿತಪುರಾಣಂ ॥

ಎಂಬ ಪದ್ಯದಲ್ಲಿ ಹೇಳಿದ್ದಾನೆ.

ತನ್ನ ಕವಿತಾಚಾತುರಿಯನ್ನೂ ಗುಣಗಳನ್ನೂ ಈ ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ—

ಪದರಂಚನೆ ಸಜ್ಜನಶ್ರವ । ಣದೊಳಂಚೆಯ ತುಪ್ಪುೞಿಂಚೆಯಿಂ ತಿರಿಪಿದವೋಲ್ ।
ಮೃದುವೆನೆ ಪೊಸಬಗೆ ರಸಭಾ । ವದೊಳೋಕುಳಿಯಾಡೆ ಪೇೞ್ದನಭಿನವಪಂಪಂ ॥
ಬಗೆ ಚೇತೋಬಂಧು ಬಂಧಂ ಶ್ರವಣಸಹಚರಂ ಕಾಂತಿ ಕಾಂತಾಕಟಾಕ್ಷಾ ।
ನುಗಮರ್ಥವ್ಯಕ್ತಿ ವಾಣೀಮಣಿಮಯಮುಕುರಂ ಶ್ಲಿಷ್ಟಮಕ್ಲಿಷ್ಟಮಧ್ವಂ ॥
ಸುಗಮಂ ಭಾವಂ ಪ್ರಸನ್ನಂ ರಸಮನವಧಿ ಮಾಧುರ್ಯಮಾಶ್ಚರ್ಯಮೆಂದೀ ।
ಜಗಮೆಲ್ಲಂ ಮೆಚ್ಚೆ ಪೇೞ್ಗುಂ ಚತುರಕವಿಜನಾಸ್ಥಾನರತ್ನಪ್ರದೀಪಂ ॥
ಫುಲ್ಲಶರಂ ಬಸಂತದ ಪುಗಿಲ್ ನೆಱೆದಿಂಗಳ ತಣ್ಬೆಸಿಲ್ ಮುಗು ।
ಳ್ಮಲ್ಲಿಗೆ ಬಂದ ಮಾವಱವ ತೆಂಕಣ ಗಾಳಿ ವಿಪಂಚಿಯಿಂಚರಂ ॥
ನಲ್ಲಳ ಲಲ್ಲೆ ಕೋಗಿಲೆಯ ಬಗ್ಗಣೆ ತುಂಬಿಯ ಗೇಯಮೆಂಬಿನಂ ।
ಬಲ್ಲವರಂ ಮನಂಗೊಳಿಸುಗುಂ ಕೃತಿ ಸತ್ಕೃತಿ ನಾಗಚಂದ್ರನಾ ॥
ಜನಪತಿಸಭೆಯೊಳ್ ಪೂಜ್ಯಂ । ಮುನಿಪತಿಸಭೆಯೊಳ್ ಪದಾರ್ಥನಿಪುಣಂ ವಿದ್ವ ।
ಜ್ಜನಸಭೆಯೊಳ್ ಮಾನ್ಯಂ ಸ । ಜ್ಜನಸಭೆಯೊಳ್ ಚಾರುಚರಿತನಭಿನವಪಂಪಂ ॥

ಕುಕವಿಗಳನ್ನು ಈ ಪದ್ಯಗಳಲ್ಲಿ ನಿಂದಿಸುತ್ತಾನೆ :—

ಆರಯ್ಯದೆ ಸದ್ಭಾವಮ । ನಾರಯ್ಯದೆ ಪದಪದಾರ್ಥಮಂ ದೆಸೆಬಿದ್ದಂ ।
ನೀರುಡುವಿನಡವಿಯಂತಿರೆ । ನೀರಸಮನೆ ಕೇಳ್ದರಲಸೆ ಪೇೞ್ವಂ ಕವಿಯೇ ॥
ಪೆಱರ ನುಡಿ ಪೆಱರ ಮಾರ್ಗಂ । ಪೆಱರರ್ಥಂ ಪೆಱರ ದೇಸೆ ಪೆಱರೋಜೆಯೆನಲ್ ।
ಪೆಱರ ಬೞಸಂದು ತನ್ನಂ । ಮೆಱೆವಂ ಕವಿಯಲ್ಲಮಾಟಕಾಱರ ಜೋಹಂ ॥

ಇವನ ಗ್ರಂಥಗಳಲ್ಲಿ—

**1. ರಾಮಚಂದ್ರಚರಿತಪುರಾಣ ಅಥವಾ ಪಂಪರಾಮಾಯಣ.**

ಈ ಗ್ರಂಥವು ಚಂಪೂರೂಪವಾಗಿದೆ. ಇದರಲ್ಲಿ ಜೈನಸಂಪ್ರದಾಯಕ್ಕನು ಸಾರವಾಗಿ ರಾಮಾಯಣದ ಕಥೆ ಹೇಳಲ್ಪಟ್ಟಿದೆ. ಕವಿ—ವಿಪುಳಾಚಳದಲ್ಲಿ ವೀರ ಜಿನಪಾರ್ಶ್ವದಲ್ಲಿ ಗಣಾಗ್ರಣಿ ಗೌತಮನು ಮಗಧಾಧಿಪನಿಗೆ ಹೇಳಿದ ರಾಮಕಥೆ ಯನ್ನು ವರ್ಣಿಸುತ್ತೇನೆ—ಎಂದು ಹೇಳುತ್ತಾನೆ. ಈ ರಾಮಕಥೆಯ ವಿಷಯವಾಗಿ **ದೇವಚಂದ್ರನು** ತನ್ನ **ರಾಮಕಥಾವತಾರದಲ್ಲಿ** (1797) ಹೀಗೆ ಬರೆದಿದ್ದಾನೆ.—

ಈ ರಾಮಕಥೆಯುಂ ಮುನ್ನಂ ಆದಿದೇವನ ಸಮವಸರಣದೊಳ್ ಆದಿಚಕ್ರಿಯಪ್ಪ ಭರತೇಶ್ವರಂಗಂ ಪುರುಪರಮೇಶ್ವರಂ ಮೃದುಮಧುರಶ್ರಾವ್ಯನವ್ಯದಿವ್ಯಭಾಷೆಯಿಂ ನಿರೂಪಿಸಿದುದು, ಪರಂಪರಾತೀರ್ಥಸಂತಾನದಿಂ ಬರೆ, ಪಶ್ಚಿಮತೀರ್ಥಂಕರರಪ್ಪ ಶ್ರೀವೀರವರ್ಧಮಾನಸ್ವಾಮಿ ಸರ್ವಭಾಷಾಸ್ವಭಾವದಿಂ ಶ್ರೇಣಿಕಮಹಾಮಂಡಲೇಶ್ವರಂಗಱಯೆಪೇೞ್ವುದುಂ, ಅದು ಅನುಕ್ರಮದಿಂ ಗುರುಪರಂಪರೆಯಿಂ ವ್ಯಕ್ತಮಾಗುತ್ತುಂಬರೆ ಕೂಚಿಭಟ್ಟಾರಕರುಂ ನಂದಿಮುನಿವರರುಂ ಕವಿಪರಮೇಷ್ಠಿಗಳುಂ ರವಿಷೇಣಾರ್ಯರುಂ ವೀರಸೇನಸಿದ್ಧಸೇನರುಂ ಪದ್ಮನಂದೀಶರುಂ ಗುಣಭದ್ರರುಂ ಸಕಲಕೀರ್ತಿಗಳೆಂದಿವರಾದಿಯಾಗಿ ಪೇೞ್ದುದಂ ಚಾವುಂಡರಾಯ ನಾಗಚಂದ್ರ ಮಾಘಣಂದಿಸಿದ್ಧಾಂತಿ ಕುಮುದೇಂದು ನಯಸೇನಾದಿಗಳ್ ಪುರಾಣದೊಳಂ ರಾಮಚರಿತ್ರದೊಳಂ ಕುಮುದೇಂದುರಾಮಾಯಣದೊಳಂ ಪುಣ್ಯಾಸ್ರವ ಕಥಾಸಾರದೊಳಂ ಪೇೞ್ದರ್.

ಇವರಿಂದ ಗುರುಪರಂಪರಾಗತವಾಗಿ ಉಪದಿಷ್ಟವಾದ ರಾಮಚರಿತೆ ಈ ಗ್ರಂಥದಲ್ಲಿ ಹೇಳಲ್ಪಟ್ಟಿದೆ ಎಂಬುದು ವ್ಯಕ್ತವಾಗುತ್ತದೆ. ಗ್ರಂಥವು 16 ಆಶ್ವಾಸಗಳಾಗಿ ಭಾಗಿಸಲ್ಪಟ್ಟಿದೆ. ಈ ಗ್ರಂಥದ ವಿಷಯವಾಗಿ **ದೇವಚಂದ್ರನು**—

ಶ್ರೀಮೂಲಸಂಘ ಬಲಾತ್ಕಾರಗಣ ಶ್ರೀಮಾಘಣಂದಿಸಿದ್ಧಾಂತಿ ಚಕ್ರವರ್ತಿಸುತ ಚತುರ್ವಿಧಪಾಂಡಿತ್ಯ ಶ್ರೀವಾದಿಕುಮುದಚಂದ್ರಪಂಡಿತದೇವ [1] ರಚಿತರಾಮಾಯಣ ಸಮಾನವಾದ ಶ್ರೀಮದಭಿನವಪಂಪರಚಿತ ರಾಮಾಯಣ.

ಎಂದು ಹೇಳುತ್ತಾನೆ.

ಗ್ರಂಥದ ಉತ್ಕೃಷ್ಟತೆಯನ್ನೂ ತನ್ನ ಕವಿತಾಪ್ರೌಢಿಯನ್ನೂ ಕವಿ ಈ ಪದ್ಯಗಳಲ್ಲಿ ವರ್ಣಿಸಿದ್ದಾನೆ.—

ಪಿರಿದೆನಿಸಿರ್ದ ರಾಮಕಥೆಯುಂ ಕಿಱಿದಾಗಿರೆ ದೇಸೆ ಮಾರ್ಗಮುಂ |
ಬೆರಡಱೊಳಂ ರಸಂಬಡೆದು ಪಂಡಿತಮಂಡಲಿ ಮೆಚ್ಚೆ ನೇರ್ಪುವೆ ||
ತ್ತಿರಲವಿರೋಧಮಾಗೆ ಕೃತಿವೇೞ್ದ ಸತ್ಕವಿ ನಾಗಚಂದ್ರನಂ |
ತಿರೆ ಪೆಱರಾರ್ ಸರಸ್ವತಿ ಕುಡಲ್ ಪಡೆದರ್ ವರಮಂ ಕವೀಶ್ವರರ್

---

1. ಈತನ ಚರಿತೆಯನ್ನು ನೋಡಿ

ಕೃತವಿದ್ಯರ್ ಸಮುಚಿತ್ತರಾಗಿ ಪದಪಿಂದಾರಯ್ಯೆ ಕರ್ಣಾಟಸಂ।
ಸ್ಕೃತಕಾವ್ಯಂಗಳೊಳರ್ಥದಿಂ ರಚನೆಯಿಂ ನೇರ್ಪಟ್ಟ ವಿಸ್ವಚ್ಛಮು॥
ತ್ಕೃತಿಯಪ್ಪಂತಿರೆ ನಾಗಚಂದ್ರವಿಬುಧಂ ಪೇಳ್ದಿಂದದಿಂದಾದ್ಯರ।
ದ್ಯತನರ್ ಪೇಳ್ದಭಿರಾಮರಾಮಕಥೆಯೇಂ ಸಯ್ಪಿಂಗಡರ್ಪಕ್ಕುಮೇ॥

ಗ್ರಂಥಾವತಾರದಲ್ಲಿ ಕವಿ 20 ನೆಯ ತೀರ್ಥಕರನಾದ ಮುನಿಸುವ್ರತನನ್ನು ಸ್ತುತಿಸಿದ್ದಾನೆ. ಬಳಿಕ ಸಿದ್ಧಾದಿಗಳನ್ನೂ ಸರಸ್ವತಿಯನ್ನೂ ಸ್ತುತಿಸಿ ತರುವಾಯ ಅನುಬದ್ಧಕೇವಲಿಗಳು ಮೊದಲುಗೊಂಡು ವೀರಣಂದಿಸೈದ್ಧಾಂತಿಕನವರೆಗೆ ಗುರುಗಳನ್ನು ಸ್ತುತಿಸಿದ್ದಾನೆ.[1] [ಈ ಗುರುಗಳಲ್ಲಿ ಕೆಲವರನ್ನು ಸ್ತುತಿಸುವ ಈ ಗ್ರಂಥದ ಪದ್ಯಗಳು ಶ್ರ. ಬೆ. ಶಾಸನಗಳಲ್ಲಿ ಅನುವಾದಮಾಡಲ್ಪಟ್ಟಿವೆ.[2]] ಬಳಿಕ ನಾಮನಿರ್ದೇಶಮಾಡದೆ ಪೂರ್ವಕವಿಗಳನ್ನು ಸ್ತುತಿಸಿ ಆಮೇಲೆ ಜೈನಸಂಪ್ರದಾಯಕ್ಕನುಸಾರವಾಗಿ—

ಜಗಮುಂ ಯುಗಮುಂ ಮನ್ವಾ। ದಿಗಳಂ ಕಾಲಸ್ವರೂಪಮುಂ ಜಿನರಂ ಚ।
ಕ್ರಿಗಳಂ ಹಲಧರಕೃಷ್ಣಾ। ದಿಗಳಂ ಶ್ರೀರಾಮಚರಿತದೊಳ್ ವರ್ಣಿಸುವೆಂ॥

ಎಂದು ಪ್ರತಿಜ್ಞೆಮಾಡಿ ಅದೇ ಮೇರೆಗೆ ಹಲಧರಕೃಷ್ಣರವರೆಗೆ ಸೂಚಿತವಾಗಿರುವ ವಿಷಯವನ್ನೆಲ್ಲಾ ಹೇಳಿ ಮೂರನೆಯ ಆಶ್ವಾಸದಲ್ಲಿ ದಶರಥನ ಕಥೆಯನ್ನು ಉಪಕ್ರಮಿಸುತ್ತಾನೆ. ಕೊನೆಯ ಆಶ್ವಾಸದಲ್ಲಿ ಶ್ರೀರಾಮನು ಜಿನದೀಕ್ಷೆಯನ್ನು ಸ್ವೀಕರಿಸಿ ನಿರ್ವಾಣವನ್ನು ಐದಿದಂತೆ ಹೇಳುತ್ತಾನೆ. ಆಶ್ವಾಸಗಳ ಕೊನೆಯಲ್ಲಿ—

ಇದು ಪರಮಜಿನಸಮಯಕುಮುದಿನೀಶರಚ್ಚಂದ್ರಬಾಲಚಂದ್ರಮುನೀಂದ್ರ ಚರಣನಖಕಿರಣಚಂದ್ರಿಕಾಚಕೋರಂ ಭಾರತೀಕರ್ಣಪೂರಂ ಶ್ರೀಮದಭಿನವ ಪಂಪವಿರಚಿತಮಪ್ಪ ರಾಮಚಂದ್ರಚರಿತಪುರಾಣದೊಳ್

ಎಂಬ ಗದ್ಯವಿದೆ.

---

1. ಅನುಬದ್ಧಕೇವಲಿಗಳು, ಶ್ರುತಕೇವಲಿಗಳು, ದಶಪೂರ್ವಧರರು, ಏಕಾದಶಾಂಗಧಾರಿಗಳು, ಭೂತಬಲಿ, ಪುಷ್ಪದಂತ, ಜಿನಸೇನ, ವೀರಸೇನ, ಸಮಂತಭದ್ರ, ಕವಿಪರಮೇಷ್ಠಿ, ಪೂಜ್ಯಪಾದ, ಕೊಂಡಕುಂದ, ಅಕಲಂಕ, ವರ್ಧಮಾನಭಟ್ಟಾರಕ, (ಸ್ವಗುರು) ಬಾಲಚಂದ್ರ, (ತತ್ಸಧರ್ಮ) ಮೇಘಚಂದ್ರತ್ರೈವಿದ್ಯ, (ಬಾಲಚಂದ್ರಪುತ್ರ) ಶುಭಕೀರ್ತಿ, ವಾಸುಪೂಜ್ಯ, ಶ್ರುತಕೀರ್ತಿ, (ಮೇಘಚಂದ್ರಪುತ್ರ) ವೀರಣಂದಿ.

2. ಮೇಘಚಂದ್ರನನ್ನು ಸ್ತುತಿಸುವ "ಮುನಿನಾಥಂ ದಶಧರ್ಮಧಾರಿ" (1. 20) ಶ್ರ. ಬೆ. ಶಾ. 127 ರಲ್ಲಿ (1115); ಇವನನ್ನೇ ಸ್ತುತಿಸುವ ಈ ಪದ್ಯವೂ "ಮುವತ್ತಾರುಂಗುಣದಿಂ" (1.19) ಎಂಬ ಪದ್ಯವೂ, ಇವನ ಮಗ ವೀರಣಂದಿಯನ್ನು ಸ್ತುತಿಸುವ "ಗಣಧರರಂ ಶ್ರುತದೊಳ್" (1.26) "ಹರಿಹರಹಿರಣ್ಯಗರ್ಭ" (1. 27) ಎಂಬ ಪದ್ಯಗಳೂ, ಶ್ರ. ಬೆ. ಶಾ. 140 ರಲ್ಲಿ (1145); ಶ್ರುತಕೀರ್ತಿಯನ್ನು ಸ್ತುತಿಸುವ "ಅಮೋಘವಾದಿಕಥಾತ್ರಯ" (1.24) "ಶ್ರುತಕೀರ್ತಿತ್ರೈವಿದ್ಯ" (1. 25) ಎಂಬ ಪದ್ಯಗಳು ಶ್ರ. ಬೆ. ಶಾ 64 ರಲ್ಲಿ (1163); ಬಾಲಚಂದ್ರನನ್ನು ಸ್ತುತಿಸುವ "ಪ್ರಚುರಕಲಾನ್ವಿತ" (1.18) ಎಂಬ ಪದ್ಯವು ಶ್ರ ಬೆ. ಶಾ. 158 ರಲ್ಲಿ (ಸು. 1110) ದೊರೆಯುತ್ತವೆ.

ಈ ಗ್ರಂಥಕ್ಕೂ ವಾಲ್ಮೀಕಿರಾಮಾಯಣಕ್ಕೂ ಇರುವ ಕೆಲವು ವ್ಯತ್ಯಾಸಗಳನ್ನು ಸೂಚಿಸುತ್ತೇವೆ. ಇಲ್ಲಿ ರಾಮನ ತಾಯಿ ಅಪರಾಜಿತೆ; ಶತ್ರುಘ್ನನ ತಾಯಿ ಸುಪ್ರಭೆ. ಸುಮಿತ್ರೆಗೆ ಲಕ್ಷ್ಮಣನೊಬ್ಬನೇ ಮಗ. ವಿಶ್ವಾಮಿತ್ರನ ಪ್ರಸ್ತಾವವೇ ಇಲ್ಲ. ಸುಗ್ರೀವಾದಿಗಳು ಕಪಿಗಳಲ್ಲ, ಕಪಿಧ್ವಜರು. ರಾಮಲಕ್ಷ್ಮಣರಿಗೆ ಬಲಾಚ್ಯುತರು ಎಂದೂ ಹೆಸರು. ಇವರು ಕಾರಣಪುರುಷರೆಂದು ಹೇಳಿದೆ. ಲಕ್ಷ್ಮಣನಿಗೆ ಕೃಷ್ಣ, ಕೇಶವ, ವಾಸುದೇವ ಎಂಬ ಹೆಸರುಗಳೂ ಉಂಟು; ಇವನಿಗೆಯೇ ಹೆಚ್ಚು ಪ್ರಾಶಸ್ತ್ಯವು ಹೇಳಿದೆ. ರಾಮನ ವರ್ಣ ಬಿಳುಪು; ಲಕ್ಷ್ಮಣನದು ಕಪ್ಪು. ಲಕ್ಷ್ಮಣನಿಗೆ ಅನೇಕಾವೃತ್ತಿ ಮದುವೆಯಾಗುತ್ತದೆ; ಈತನೇ ರಾವಣನನ್ನು ಸಂಹರಿಸುತ್ತಾನೆ. ಸೀತೆಗೆ ಪ್ರಭಾಮಂಡಲನೆಂಬ ಒಬ್ಬ ಸಹೋದರನುಂಟು; ಅವಳು ಲವಾಂಕುಶರ ಜನನಾನಂತರ ಅಗ್ನಿಪ್ರವೇಶಮಾಡಿ ಜಿನದೀಕ್ಷೆಯನ್ನು ಸ್ವೀಕರಿಸುತ್ತಾಳೆ—ಇತ್ಯಾದಿ.

ಇವನ ಬಂಧವು ಬಹಳ ಲಲಿತವಾಗಿಯೂ ಮನೋಹರವಾಗಿಯೂ ಇದೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ.—

### ಕಪಿಲಚಿತ್ರೋತ್ಪಲೆಯರ ಸ್ನೇಹ.

ಒಡನಾಡಿಯುಮೊಡನೋದಿಯು। ಮೊಡವಳೆದುಂ ಪಲವು ಕಾಲದಿಂದನುಬಂಧಂ।
ಗಿಡಮೊಡಲೆರಡಸುವೊಂದೆನೆ। ಗೆಡೆವಕ್ಕಿಗಳಂತೆ ಕೂಡಿ ನಲಿಯುತ್ತಿರ್ದರ್ ॥ 197 ॥

### ಹುಲಿ.

ಜಡಿಯುತ್ತುಂ ಬಾಲಮುಂ ಕಣ್ಣುರಿಯನುಗುೞ್ಚೆ ಜಿಹ್ವಾನಲಂಪೆರ್ಚೆ ಬಾಯ್ವಿ।
ಟ್ಟೊದೆವನ್ನಂ ಗರ್ಜಿಸುತ್ತುಂ ಪವನಜವದೆ ಮೇಲ್ವಾಯ್ದು ಪೊಯ್ವುತ್ತು ಕೆಯ್ಯೀ॥
ೞಿಡೆಯಿಂ ಬಾಯೇೞೆ ಬಾಯಿಂದೊಡನೆ ರುಧಿರಮುಂ ಖಂಡಮುಂ ಸೂಸುವನ್ನಂ।
ಸಿಡಿಲೆಂಬಾಶಂಕೆಯುಂ ಪೆಣ್ಬುಲಿ ಪಡೆದು ಮೃಗೀರಕ್ತಸೇವಾನುರಕ್ತಂ ॥ 198 ॥

### ದಶರಥನ ಸೌಂದರ್ಯ.

ತೊದವುಗಳೆಡ್ಡಮಾವನಿತಱಿಂ ತನಗಕ್ಕುಮೆ ಗಾಡಿ ಗಾಡಿ ಮೆ।
ಯ್ದೊಡವೆನೆ ಮಾಸಿ ರೂಪುಗರೆದಿರ್ದೊಡಮಾತನ ರೂಪಿನೊಂದು ಕ॥
ಣ್ದೊಡವೆನೆ ಬೇೞ್ದೊಂದು ಬಗೆಗಿಕ್ಕಿದ ಠಕ್ಕೆನೆ ವಶ್ಯದೊಂದು ಕ।
ಣ್ದೊಡವೆನೆ ನೋೞ್ಪ ನೋಟಕರ ಕಣ್ಗೊಳಗಾದುದು ಕಣ್ಣ ಪಾಪೆವೋಲ್ ॥ 199 ॥

### ರಾಮನ ಮೂರ್ಛೆ.

ನಸುಬಿಸುಪೇೞೆ ಮೆಯ್ಯ್ ಮಗುೞ್ಚೆ ಕೆತ್ತುವ ತಾಣಮೆ ಕೆತ್ತೆ ಮಂದಮಾ।
ದುಸಿರ್ಗಳೆ ನಾಸಿಕಾಮುಕುಳದಿಂದಿನಿಸುಂ ಪೊಱಪೊಣ್ಮೆ ತಳ್ತು ಸಂ॥

ಧಿಸಿದೆಮೆ ಬಿರ್ಚಿ ಕಣ್ಮಲರ್ಗಳುಳ್ಳಲರುತ್ತಿರೆ ಜಾನಕೀ ಎನು ।
ತ್ತುಸಿರ್ದುಸಿರ್ದೆಬ್ಬಿನಾರಘುಕುಲಾಂಬರಚಂಡಮರೀಚಿ ಮೂರ್ಛೆಯಿಂ ॥ 200 ॥

ರಾಮನ ಪ್ರಲಾಪ.

ಕಳಹಂಸಾಲಸಯಾನೆಯುಂ ಮೃಗಮದಾಮೋದಾಸ್ಯನಿಶ್ವಾಸೆಯುಂ ।
ತಳಿರೇ ತಾವರೆಯೇ ಮದಾಳಿಕುಳಮೇ ಕರ್ನೆಯ್ದಿಲೇ ಮತ್ತಕೋ ॥
ಕಿಳಮೇ ಕಂಡಿರೆ ಪಲ್ಲವಾಧರೆಯನಂಭೋಜಾಸ್ಯೆಯುಂ ಭೃಂಗಕುಂ ।
ತಳೆಯುಂ ಕೈರವನೇತ್ರೆಯುಂ ಪಿಕರವಪ್ರಖ್ಯಾತೆಯುಂ ಸೀತೆಯುಂ ॥ 201 ॥

ವರ್ಷಾಕಾಲ.

ತೀಡುವ ಪಶ್ಚಿಮಾನಿಲನ ತೀಟದೊಳುತ್ಕಟವಾಗೆ ರಾಗವಿ ।
ರ್ಪೋಡಿದ ಚಂಚುವಂ ತೆಱೆದೆಱಂಕೆಯಿಬ್ಬಿದ್ದಿರೆ ಕಂಠನಾಳಮುಂ ॥
ನೀಡಿ ವಿಯತ್ತಳಕ್ಕೊಗೆದು ಕಾರಮುಗಿಲ್ವನಿಯುಂ ಮನಂ ಕುಳಿ ।
ರ್ಕೊಡುವಿನಂ ಕರ್ದುಂಕಿ ನಲಿದಾಱದುದಾಡಿದುದಂದು ಚಾತಕಂ ॥ 202 ॥

ಗ್ರೀಷ್ಮ.

ಮೃಗಕುಲಮಾಸೆಗೆಯ್ದು ಮೃಗತೃಷ್ಣಿಕೆಯುಂ ಜಲಮೆಂದು ತೃಷ್ಣೆಯಿಂ ।
ಪಗಲಿಱವನ್ನೆಗಂ ಪರಿದು ಗಂಟಲುರಂಬರಮಾಱ ಬೆಂದೊವಲ್ ॥
ತೆಗಳಿಗೆವೀೞ ಬಾಯ್ಗೆ ಕರುಸಂ ಬರೆ ನಾಲಗೆಗಿೞ್ತು ನಟ್ಟದಿ ।
ಟ್ಟಿಗಳೊಡನಳ್ಳೆ ಪೊಯ್ಕೆ ನಡೆಗೆಟ್ಟುವು ತೃಷ್ಣೆಯಿನಾರೊ ಬೇಯದರ್ ॥ 203 ॥

## 2. ಮಲ್ಲಿನಾಥ ಪುರಾಣ.

ಇದು 19 ನೆಯ ತೀರ್ಥಂಕರನಾದ ಮಲ್ಲಿನಾಥನ ಚರಿತೆ; ಚಂಪೂರೂಪವಾಗಿದೆ; 14 ಆಶ್ವಾಸಗಳಾಗಿ ಭಾಗಿಸಲ್ಪಟ್ಟಿವೆ. ಗ್ರಂಥದ ಉತ್ಕೃಷ್ಟತೆಯನ್ನೂ ತನ್ನ ಕವಿತಾ ಪ್ರೌಢಿಯನ್ನೂ ಕವಿ ಈ ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ:—

ಸಮುಚಿತ್ತರಪ್ಪ ವಿದ್ವ । ತ್ತಮರಿದರ್ಶ್ವಾರಯ್ಕೆ ಸರಸಕವಿತಾರಸದೊಳ್ ।
ಸಮನಕ್ಕುಮಧಿಕಮಕ್ಕುಂ । ಸಮಸ್ತಕಾವ್ಯಕ್ಕೆ ಮಲ್ಲಿನಾಥಪುರಾಣಂ ॥

ಧರೆ ಪೊಗೞ ವೀತರಾಗನ । ಚರಿತದೊಳಳವಡಿಸಿ ಸಕಲರಸಮುಂ ಕವಿತಾ ।
ಪರಿಣತಿಯುಂ ಮೆಱೆದಂ ಕಾ । ವ್ಯರಸಾರ್ಣವಪೂರ್ಣಚಂದ್ರನಭಿನವಪಂಪಂ ॥

ಚರಿತಪುರಾಣಮುಂ ನೆಱೆಯೆ ಪೇೞ್ದೊಡೆ ಪೇೞ್ಗೆಮ ದಿವ್ಯಭಾಷೆಯಿಂ ।
ಪರಮಜಿನೇಶ್ವರರ್ ಗಣಧರರ್ ಜನತತ್ತ್ವಮಹತ್ತ್ವಮನ್ಯಗೋ ॥
ಚರಮೆ ರಸಾವಲಂಬಮೆನೆ ಮಲ್ಲಿಜಿನೇಂದ್ರಮಹಾಪುರಾಣಮುಂ ।
ವಿರಚಿಸಿದಂ ಪ್ರಸಿದ್ಧಕವಿಪದ್ಧತಿಯಿಂ ಕವಿತಾಮನೋಹರಂ ॥

ಗ್ರಂಥಾವತಾರದಲ್ಲಿ ಕವಿ ಮಲ್ಲಿನಾಥನನ್ನು ಸ್ತುತಿಸಿದ್ದಾನೆ. ಬಳಿಕ ಸಿದ್ಧಾದಿಗಳನ್ನೂ ರತ್ನತ್ರಯವನ್ನೂ ಸರಸ್ವತಿಯನ್ನೂ ಯಕ್ಷಯಕ್ಷಿಯರನ್ನೂ ಸ್ತುತಿಸಿ ಅನಂತರ ಅನುಬದ್ಧಕೇವಲಿಗಳಿಂದ ಮೇಘಚಂದ್ರತ್ರೈವಿದ್ಯನವರೆಗೆ ಗುರುಗಳನ್ನು ರಾಮಚಂದ್ರಚರಿತಪುರಾಣದಲ್ಲಿರುವ ಪದ್ಯಗಳಿಂದಲೇ ಇಲ್ಲಿಯೂ ಸ್ತುತಿಸಿದ್ದಾನೆ. ಆಮೇಲೆ ಪೂರ್ವಕವಿಗಳನ್ನು ಹೊಗಳಿ [1]

ಭರತಮಹೀಶ್ವರಂಗೆ ಮಗಧೇಶ್ವರಮಂಡಲಿಕಂಗೆ ತಾರಭೂ।
ಧರವಿಪುಳಾದ್ರಿಯೊಳ್ ವೃಷಭಸೇನಗಣಾಗ್ರಣಿ ಗೌತಮೋತ್ತಮಂ ॥
ಪುರುಜಿನವರ್ಧಮಾನಗುರುಸನ್ನಿಧಿಯೊಳ್ ತಿಳಿವಂತು ಪೇೞ್ದುದಂ।
ವಿರಚಿಸುವೆಂ ಮನಂ ಬಯಸೆ ಮಲ್ಲಿಜಿನೇಂದ್ರ ಮಹಾಪ್ರಬಂಧಮಂ॥

ಎಂದು ಕಥೆಯನ್ನು ಆರಂಭಿಸಿದ್ದಾನೆ. ಆಶ್ವಾಸಗಳ ಕೊನೆಯಲ್ಲಿ ರಾಮಚಂದ್ರ ಚರಿತ ಪುರಾಣದಲ್ಲಿರುವ ಗದ್ಯವೇ ಇದೆ: ಅಂತ್ಯದಲ್ಲಿ ಮಾತ್ರ ಮಲ್ಲಿನಾಥಪುರಾಣದೊಳ್ ಎಂದಿದೆ.

ಈ ಕಾವ್ಯದಲ್ಲಿ ಕವಿ ತನ್ನ ವರ್ಣನಾಶಕ್ತಿಯನ್ನು ಬಹಳ ಚೆನ್ನಾಗಿ ತೋರಿಸಿದ್ದಾನೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

ಅಭಿನಯ.

ಮನದ ತೊಡರ್ಪು ಲೋಚನದಡರ್ಪರಲಂಬಿನ ಕೂರ್ಪು ಸರ್ಪಮೋ।
ಹನರಸದಿರ್ಪು ಚೇಟದ ಪೊಡರ್ಪಭಿಮಾನದ ನಟ್ಟ ತುರ್ಪು ಕಾ॥
ಮನ ಕರವಾಳ ಕರ್ಪು ವಿರಹಾಹಿಯ ತೋಳ ಪಸುರ್ಪು ಜೀಯ ಭಾ।
ಪೆನಿಸುವುದಂಗಹಾರಕರಣಾಭಿನಯಂಗಳ ನೇರ್ಪು ನೀಱೆಯಾ ॥ 204 ॥

ಚಂದ್ರೋದಯ.

ದಾಂಗುಡಿವಿಟ್ಟು ದಳ್ಳಿಸುವ ಕೆಂದಳದಿಂದೊಸೆದೆತ್ತಿ ಲಕ್ಷ್ಮಿ ಕಾ।
ಮಂಗೆ ಮಗಂಗೆ ಶೈಶವನಿರೀಕ್ಷಣಕೇಳಿಗೆ ನೇತ್ರಸೂತ್ರದಿಂ॥
ದಿಂಗಡಲೆಂಬ ಸಜ್ಜೆವನೆಯೊಳ್ ತೆರೆದೊಟ್ಟಿಲ ಮೇಲೆ ಕೆಂಬರ।
ಲ್ದಿಂಗಣಿಗಟ್ಟಿದಂತುದಯಶೈಲಶಿಖಂಡದೊಳಿಂದುಮಂಡಳಂ ॥ 205 ॥

ಚಂದ್ರಿಕೆ.

ಪುಗಿಸಿದುವಟ್ಟಿ ಪರ್ವತಗುಹೋದರಮಂ ಕೆಲವಂ ಗವಾಕ್ಷದಿಂ।
ದುಗಿದುವು ದೇವಸದ್ಮದೊಳಡಂಗಿದುವಂ ಬಯಲಿಂಗೆ ಬಿಟ್ಟುವಂ॥

1. ಪುಟ 104.

ತಗುಳ್ದರೆಯಟ್ಟಿ ನುಂಗಿದುವು ಬೆಮರ್ಗರನಂ ಸೆಱಗೆಯ್ದು ಪರ್ಣಸಂ।
ಧಿಗಳೆಡೆಯಿಂದಮಿಟ್ಟೊರಸಿ ಕೊಂದುವು ಕಟ್ಟಲೆಯಂ ಹಿಮಾಂಶುಗಳ್ ॥ 206 ॥

### ಭೃಂಗ.

ಬಿರಿಮುಗುಳೊಳ್ ಮುಸುಂಬನಲೆದೊಯ್ಯನೆ ಕರ್ಣಿಕೆಯಂ ಕದರ್ಗಂಕಿ ಕೇ।
ಸರಮನೆಱಂಕೆಯಿಂ ಕೆದಱಿ ಬಂಡನುರಂಬರಮುಂಡು ತಳ್ತಿಸ॥
ಱಿಪ್ಪರೆಯೊಳಡಂಗಿ ಸುಣ್ಣರದಿಸಾಣತಿಮಾಡಿದುದುನ್ಮದಾಳಿ ತಾ।
ವರೆಯೊಳಗಿರ್ದ ಲಕ್ಷ್ಮಿಯ ಮನಂಬಡೆದೆಕ್ಕಲಗಾಣನೆಂಬಿನಂ ॥ 207 ॥
ಪೊಸತಲರ್ದ ವಕುಳರಸದೊಳ್। ಮುಸುಂಬು ಮುಱುಗುವಿನಮೆಱಗಿ ಕೋ
ಡೆಱಕೆಗಳಂ।
ಪಸರಿಸಿ ಕಂಪನಲಂಪಿಂ। ದುಸಿರ್ದುಸಿರ್ದೆಂಟಿದುದು ಮಧುಪನಿರ್ದೆಮುಱು
ಗುವಿನಂ ॥ 208 ॥

### ಹಂಸದ ಪಟ.

ಬಟ್ಟಿದುವಾದ ಕಣ್ಣಾ ಕರಿಯಾಲಿಯು ಸುತ್ತಣ ಸಣ್ಣ ಬೆಳ್ಪು ನೇ।
ರ್ಪಟ್ಟುದು ಕರ್ಬುರಚ್ಛವಿಯ ಚಂಚು ಮನಂಗೊಳಿಸಿತ್ತು ಮೆಯ್ಯ ಬೆ॥
ಳ್ಪಿಟ್ಟಳಮಾಯ್ತು ಕಾಲ್ಗಳರಿದಾಳದ ಮೇಗಣ ಕೆಂಪಿನಣ್ಕೆಯಿಂ।
ದಿಟ್ಟಿಗೆ ಬಂದುದಾರ್ ಬರೆವರಿಂತಳವಟ್ಟಿರೆ ರಾಜಹಂಸನಂ ॥ 209 ॥

### ಪಕ್ಷಿಯ ಕೂಗು.

ಅಲರ್ವಕ್ಕಿಯ ಗೆಡೆವಕ್ಕಿಯ। ಜಲವಕ್ಕಿಯ ಪವಳನಾಯ ಪಕ್ಕಿಯ ಕಿಸುಗ।
ಣ್ಮಲರ್ವಕ್ಕಿಯ ಮೆಲ್ಲುಲಿ ನ। ಲ್ಲುಲಿ ಮದನನ ಗೀತವಾದ್ಯದುಲಿಯುವೊಲೆಸೆಗುಂ
॥ 210 ॥

---

## ಕಂತಿ. ಸು. 1100.

ಈಕೆ ಆವ ಗ್ರಂಥಗಳನ್ನು ಬರೆದಿದ್ದಾಳೆಯೋ ತಿಳಿಯದು. ಆದರೆ ಈಕೆ ದ್ವಾರಸಮುದ್ರದ ಬಲ್ಲಾಳರಾಯನ ಸಭೆಯಲ್ಲಿ **ಅಭಿನವಪಂಪನು** ಕೊಟ್ಟ ಸಮಸ್ಯೆಗಳನ್ನು ಪೂರ್ತಿಮಾಡಿದಂತೆ “ಕಂತಿಹಂಪನ ಸಮಸ್ಯೆಗಳು” ಎಂಬ ಪದ್ಯಗಳಿಂದ ಗೊತ್ತಾಗುತ್ತದೆ. **ಬಾಹುಬಲಿ** (ಸು. 1560) **ನಾಗಕುಮಾರಚರಿತೆ**ಯಲ್ಲಿ—

ವಿಬುಧಜನಸ್ತುತಶ್ರೀವೀರದೋರನ। ಸಭೆಗೆ ಮಂಗಳಲಕ್ಷ್ಮಿಯೆನಿಪ।
ಶುಭಗುಣಚರಿತೆ ಕಂತಿಕೆಯರ ಪೊಗೞ್ವ ನಾ। ನಭಿನವವಾಗ್ದೇವಿಯರ॥

**ಎಂಬ ಪದ್ಯದಲ್ಲಿ ಈಕೆಯನ್ನು ಸ್ತುತಿಸಿದ್ದಾನೆ. ಇದರಿಂದ ಈಕೆ ದ್ವಾರಸಮುದ್ರದ ಬಲ್ಲಾಳರಾಯನ ಸಭೆಯಲ್ಲಿ ಪಂಡಿತೆಯಾಗಿದ್ದಂತೆ ತಿಳಿಯುತ್ತದೆ. “ಅಭಿನವ ವಾಗ್ದೇವಿ” ಎಂಬುದು ಈಕೆಗೆ ಬಿರುದಾಗಿದ್ದಿರಬಹುದು. ದೇವಚಂದ್ರನು ಈಕೆಯ ವಿಷಯವಾಗಿ ಹೀಗೆ ಬರೆದಿದ್ದಾನೆ:—**

ದೋರರಾಯಂ ದೋರಸಮುದ್ರಮೆಂಬ ತಟಾಕಮಂ ಕಟ್ಟಿಸಿ ಧರ್ಮಚಂದ್ರನೆಂಬ ದ್ವಿಜನುಂ ಮಂತ್ರಿಯಾಗಲ್ ಆಳುತ್ತಿರೆ ಮಂತ್ರಿಯ ಮಗಂ ಉಪಾಧ್ಯಾಯನಾಗಿ ಛಂದೋಲಂಕಾರವ್ಯಾಕರಣಕಾವ್ಯಾದಿಗಳಂ ಪೇೞುತ್ತೆ ಮಕ್ಕಳ್ಗೆ ಮತಿಪ್ರಕಾಶಕ್ಕಂ ಜ್ಯೋತಿಷ್ಮತೀತೈಲಮಂ ಮಾಡಿ ಕುಡುಕೆಯೊಳಿಟ್ಟು ಮಂದಮತಿಯಾಗಿರ್ದರ್ಗರೆಬಿಂದುಮಾತ್ರಮಂ ಕುಡುತ್ತುಮಿರ್ಪುದಂ ಕಂತಿಯೆಂಬ ಕೆಳದಿ ಅಱಿಯದೆ ಆ ತೈಲವೆಲ್ಲಮಂ ಸೇವಿಸಲ್ ಉರಿ ಹತ್ತಿ ಬಾವಿಯೊಳ್ ಬಿೞ್ದೊಡಂ ಕಂಠಪ್ರಮಾಣದ ನೀರೊಳ್ ನಿಂದು ಜೀವಮುೞಿಯೆ ವಿದ್ಯಾವಿಶಾರದೆಯಾಗಿ ಕವಿತ್ವಮಂ ಪೇೞುತ್ತುಂ ಬಾವಿಯೊಳಿ ಇರ್ಪುದುಂ, ದೋರರಾಯನಾಸ್ಥಾನದ ಕನ್ನಡ ಸಂಸ್ಕೃತಮಹಾಕವಿಗಧಿಪಂ ಪಂಪಕವಿಯುಂ ಕಳುಹಲ್ ಆತಂ ಬಂದು ವಿದ್ಯೆಯಿಂ ಸಾವಿರಪ್ರಶ್ನೆಯುಂ ಕೇಳಲ್ ಉತ್ತರಮಂ ಕುಡಲ್ ಆಕೆಯುಂ ರಾಜಸಭೆಗೆಯ್ದಿಸೆ ವಿದ್ವತ್ಸಮೂಹದೊಳ್ ಅಧಿಕಕವೀಶ್ವರಿಯಾಗಿರ್ದಳ್.

ಅಭಿನವಪಂಪನು ಇವಳಿಗೆ ಸಮಸ್ಯೆಗಳನ್ನು ಕೊಟ್ಟಂತೆ ತಿಳಿವುದರಿಂದ ಈಕೆ ಆತನ ಸಮಕಾಲದವಳಾಗಿರಬೇಕು. ಆ ಕಾಲದಲ್ಲಿ ದ್ವಾರಸಮುದ್ರದಲ್ಲಿ 1100 ರಿಂದ 1106 ರ ವರೆಗೆ ಆಳಿದ ಬಲ್ಲಾಳನೇ ರಾಜನಾಗಿದ್ದಿರಬೇಕು. ಈತನ ಸಭೆಯನ್ನು ಪಂಪ, ಕಂತಿ, ಮೊದಲಾದ ಕವಿಗಳು ಅಲಂಕರಿಸಿದಂತೆ ತೋರುತ್ತದೆ. ಕನ್ನಡದಲ್ಲಿ ಕವಿತ್ವಮಾಡಿರುವ ಹೆಂಗಸರಲ್ಲಿ ನಮಗೆ ತಿಳಿದಮಟ್ಟಿಗೆ ಈಕೆಯೇ ಮೊದಲನೆಯವಳು. ಇವಳ ಪದ್ಯಗಳಿಂದ ಈಕೆ ಜೈನಸ್ತ್ರೀಯೆಂದು ವ್ಯಕ್ತವಾಗುತ್ತದೆ. ಅಲ್ಲದೆ ಇವಳಿಗೂ ಪಂಪನಿಗೂ ಬಹಳವಾಗಿ ಸಂವಾದವು ನಡೆಯುತ್ತಿದ್ದಂತೆಯೂ, ಒಂದಾನೊಂದು ದಿವಸ ಪಂಪನು ಇವಳಿಂದ ಹೊಗಳಿಸಿಕೊಳ್ಳುವೆನೆಂದು ಪಂಥ ಮಾಡಿಕೊಂಡು ಅದಕ್ಕೋಸ್ಕರ ಸತ್ತವನಂತೆ ನಟಿಸಿ ಶವದಂತೆ ಬಿದ್ದಿರಲು ಆಗ ಕಂತಿ ಈತನನ್ನೂ ಈತನ ಕವಿತಾಚಾತುರಿಯನ್ನೂ

ಕವಿರಾಯ ಕವಿಪಿತಾಮಹ । ಕವಿಕಂಠಾಭರಣ ಕವಿಶಿಖಾಮಣಿ ಭಾಪುರೆ ।
***ಮ ಪಂಪುಗ । ಕವಿಚಕ್ರೇಶಂಗೆ ಸಾವು ಸಮನಿಸಿತಕಟಾ ॥
ಕಲ್ಲೊಸರ್ಗುಂ ಕೊಯ್ದೊಣಗಿದ । ಪುಲ್ಲಲ್ಲಂ ಚಿಗುರ್ಗುಮಡವಿಗಡಿದ ಮರಂಗಳ್ ।
ಪಲ್ಲವಿಕುಮುಮಮ ಕವಿಗಜ । ಮಲ್ಲನ ಪಂಪುಗನ ಕಾವ್ಯರಸತಾಮೃತದಿಂ ॥
ಇನ್ನೇಕೆ ದೋರನೋಲಗ । ಮಿನ್ನೇಕೆ ಕವಿತ್ವವಾದತರ್ಕಸಮಸ್ಯಂ ।
ಇನ್ನೇಕೆ ಬಲ್ವಿಚಾರಂ । ಚೆನ್ನಿಗಕವಿ ಪಂಪರಾಜನೞಿದಬೞಿಕ್ಕಂ ॥

ಎಂಬ ಪದ್ಯಗಳಲ್ಲಿ ಹೊಗಳಿ ಶೋಕಿಸಲು, ಪಂಪನು ಎದ್ದು "ನಿನ್ನಿಂದ ಹೊಗಳಿಸಿಕೊಂಡು ಪಂಥವನ್ನು ಗೆದ್ದೆನು" ಎಂದು ಹೇಳಿದಂತೆಯೂ, ತಿಳಿಯುಬರುತ್ತದೆ.

ಕೆಲವು ಸಮಸ್ಯಾಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

**ಪಂಪ.**—ದನವಂ ಕಡಿಕಡಿದು ಬಸದಿಗೆೞ್ಚಿಯುತ್ತಿರ್ದರ್ [ಪಾರ್ |

**ಕಂತಿ.**—ವನದೊಳಗೆ ಪುಟ್ಟಿ ಬೆಳೆಯುತೆ | ತನಿಗಂಪಂ ಪತ್ತು ದೆಸೆಗೆ ಬೀಱುತ್ತಿ
ಘನತರಸುರುಚಿರಸಚ್ಚಂ | ದನವಂ ಕಡಿಕಡಿದು ಬಸದಿಗೆೞ್ಚಿಯುತ್ತಿ
ರ್ದರ್ ‖ 211 ‖

**ಕಂತಿ.**—ಕಡೆದೊಡೆಯುಲ್ ಹರನಾಮಂ | ನಡುದೊಡೆಯುಲ್ ಹವಿಯ ನಾಮ
ಮಾದ್ಯಕ್ಷರಮಂ |
ತೊಡೆಯಲ್ಕೆ ರವಿಯ ನಾಮಂ | ಕಡೆಯಿಂದೋದಲ್ಕೆ ವಿರಹ ಕೇಳಲಿ
ಪಂಪಾ ‖ 212 ‖

[ಹರವಿ]

**ಪಂಪ.**—ಮಸೆಕಲ್ಲ ಕುದು ಬಾಚಿಯ | ಪೊಸತೆನಿಸುವ ಕೊಡಲಿಯುಳಿಯನೊ
ರ್ಕಂದದೊಳಂ |
ಉಸಿರೆಂದಾಗುಣಕಂತಿಕೆ | ಗಸಮುಸಮಸ್ಯಮನೆ ಕೊಟ್ಟನಭಿನವಪಂಪಂ ‖

**ಕಂತಿ.**—ಮಸಕಲ್ಗಳಿ ಮಾಂಬಳಮಂ | ವಸುಧಾತಳಕುದಿರೆ ಬಾಚಿಯೆತ್ತಿದಳೊ
ರ್ವಳ್ |
ಶಶಿಮುಖಿಗೆ ಕೊಡಲಿಕಾವಧು | ಪೊಸವಣ್ಣಂ ಸವಿದು ನೋಡಿ ನಸುವುಳಿ
ಯೆಂದಳ್ ‖ 213 ‖

**ಕಂತಿ.**—ನಿನ್ನ ಕವಿತ್ವಮೆಲ್ಲಂ ಮಡಕೆ, ತುಡುಕೆ, ಅಡಕೆ, ಹೊಡಕೆ ಎಂದೊಡೆ—

**ಪಂಪ.**—ಮಡಕೆ ನಿಮಿರ್ದಾಡೆ ಜಡೆಗಳ್ | ತುಡುಕೆ ಶರೌಘಮುಮನಭವನತಿ
ಕೋಪದೊಳಂ |
ಅಡಕೆ ಮರುಳ್ಗಳ್ ಪೆಣನಂ | ಹೊಡೆಕೆಡೆದರ್ ದೈತ್ಯರಂದು ತ್ರಿಪುರ
ಸ್ಥಳದೊಳ್ ‖ 214 ‖

**ಪಂಪ.**—ನಿರೋಷ್ಠ್ಯಕಂದಮಂ ಪೇೞಿಂದೊಡೆ—

**ಕಂತಿ.**—ಸು[1] ರನರನಾಗಾಧೀಶ್ವರ | ಹೀರಕಿರೀಟಾಗ್ರಲಗ್ನಚರಣಸರೋಜಾ |
ಧೀರೋದಾರಚರಿತ್ರೋ | ತ್ಸಾರಿತಕಲುಷೌಘ ರಕ್ಷಿಸೞ್ಕಿಜನಹಾರ್
‖ 215 ‖

---

1. ಇಲ್ಲಿ ಆದ್ಯಕ್ಷರವು ದೀರ್ಘವಾಗಿರಬೇಕು. ಆದರೆ ನಮಗೆ ದೊರೆತ ಪ್ರತಿಯಲ್ಲಿ ಹೀಗೆಯೇ ಇದೆ.

## ಹಂಪೆಯ ಮಾದಿರಾಜ. ಸು. 1100.

**ರಾಘವಾಂಕನು** (ಸು. 1165) ತನ್ನ **ಹರಿಶ್ಚಂದ್ರಕಾವ್ಯದಲ್ಲಿ ಈತನನ್ನು** "ಸುಕವಿ" ಎಂದು ಹೇಳುವುದರಿಂದ ಇವನು ಕವಿಯಾಗಿದ್ದಿರಬೇಕು. ಆ ಗ್ರಂಥ ದಲ್ಲಿ ಕೊಟ್ಟಿರುವ ಗುರುಪರಂಪರೆಯಂತೆ ಈತನು ಹರೀಶ್ವರನ (ಸು. 1165) ತಂದೆಯ ಗುರುವಿನ ಗುರುವಾದುದರಿಂದ ಸುಮಾರು 1100 ರಲ್ಲಿ ಇದ್ದಿರಬಹುದು. ಆವ ಗ್ರಂಥಗಳನ್ನು ಬರೆದಿದ್ದಾನೆಯೋ ತಿಳಿಯದು.

---

## ಕವಿತಾವಿಲಾಸ. ಸು. 1100.

**ದುರ್ಗಸಿಂಹನು** (ಸು. 1145) ಪೂರ್ವಕವಿಗಳನ್ನು ಸ್ತುತಿಸುವಾಗ

ಅನತಿಶಯನೀತಿಮಾರ್ಗನ । ನನೂನಕವಿತಾವಿಲಾಸನಂ ಭೂತಲದೊಳ್ ।
ಮನುಗಂ ವ್ಯಾಸಂಗಂ ಮಿಗಿ । ಲೆನಿಸಿದ ಕವಿತಾವಿಲಾಸನಂ ಪೊಗೞದರಾರ್ ॥

ಎಂಬ ಪದ್ಯದಲ್ಲಿ ಒಬ್ಬ ಕವಿತಾವಿಲಾಸನನ್ನು ಸ್ತುತಿಸುತ್ತಾನೆ. ಈ ಪದ್ಯದಿಂದ ಈ ಕವಿ ಆವುದೋ ಒಂದು ನೀತಿಗ್ರಂಥವನ್ನು ಬರೆದಿರುವಂತೆ ಊಹಿಸಬಹು ದಾಗಿದೆ. **ನಯಸೇನನು** (1112) "ನೂತ್ನಕವಿತಾವಿಲಾಸ" ಎಂಬ ಬಿರು ದನ್ನು ಇಟ್ಟುಕೊಂಡಿರುವುದರಿಂದ ಈತನೇ ಆದಿಕವಿತಾವಿಲಾಸನಾಗಿರಬೇಕು. ಆದುದರಿಂದ ಈತನು ನಯಸೇನನಿಗೆ ಹಿಂದೆ--ಎಂದರೆ ಸುಮಾರು 1100 ರಲ್ಲಿ ಇದ್ದಿರಬಹುದು.

---

## ವಾದಿ ಕುಮುದಚಂದ್ರ. ಸು. 1100.

ಈತನು ಜಿನಸಂಹಿತೆಯೆಂಬ ನಾಮಾಂತರವುಳ್ಳ ಪ್ರತಿಷ್ಠಾಕಲ್ಪಕ್ಕೆ ಕನ್ನಡ ವ್ಯಾಖ್ಯಾನವನ್ನು ಬರೆದಿದ್ದಾನೆ. ಇವನು ಜೈನಕವಿ; ಮಾಘಣಂದಿ ಸಿದ್ಧಾಂತ ಚಕ್ರವರ್ತಿಯ ಮಗನು; ಚತುರ್ವಿಧಪಾಂಡಿತ್ಯಚಕ್ರವರ್ತಿ ಎಂದು ತನ್ನನ್ನು ವಿಶೇಷಿಸಿ ಹೇಳಿಕೊಂಡಿದ್ದಾನೆ. ವ್ಯಾಖ್ಯಾನದ ಆರಂಭದಲ್ಲಿ—

ಶ್ರೀಮಾಘಣಂದಿಸಿದ್ಧಾಂತ ಚಕ್ರವರ್ತಿತನೂಭವಃ ।
ಕುಮುದೇಂದುರಹಂ ವಚ್ಮಿ ಪ್ರತಿಷ್ಠಾಕಲ್ಪಟಿಪ್ಪಣಂ ॥

ಎಂಬ ಶ್ಲೋಕವೂ, ಅಂತ್ಯದಲ್ಲಿ—

ಇತಿ ಶ್ರೀಮಾಘಣಂದಿಸಿದ್ಧಾಂತಚಕ್ರವರ್ತಿಸುತ ಚತುರ್ವಿಧಪಾಂಡಿತ್ಯಚಕ್ರವರ್ತಿ ಶ್ರೀ ವಾದಿಕುಮುದಚಂದ್ರಪಂಡಿತದೇವವಿರಚಿತೇ ಪ್ರತಿಷ್ಠಾಕಲ್ಪಟಿಪ್ಪಣೇ

ಎಂಬ ಗದ್ಯವೂ ಇವೆ.

**ದೇವಚಂದ್ರನು** ತನ್ನ ರಾಮಕಥಾವತಾರದಲ್ಲಿ (1797) ಪಂಪರಾಮಾಯಣದ ವಿಷಯವಾಗಿ—

ಶ್ರೀಮೂಲಸಂಘ ಬಲಾತ್ಕಾರಗಣ ಶ್ರೀಮಾಘಣಂದಿಸಿದ್ಧಾಂತಚಕ್ರವರ್ತಿಸುತ ಚತುರ್ವಿಧಪಾಂಡಿತ್ಯ ಶ್ರೀವಾದಿಕುಮುದಚಂದ್ರಪಂಡಿತದೇವರಚಿತ ರಾಮಾಯಣಸಮಾನವಾದ ಶ್ರೀಮದಭಿನವಪಂಪರಚಿತರಾಮಾಯಣಂ

ಎಂಬುದರಿಂದ ಈ ಕವಿ ಒಂದು ರಾಮಾಯಣವನ್ನೂ ಬರೆದಿರುವಂತೆ ತಿಳಿಯುತ್ತದೆ. ಇವನ ಕಾಲವು ಸುಮಾರು 1100 ಆಗಿರಬಹುದೆಂದು ಊಹಿಸುತ್ತೇವೆ.

**ಬಾಲಚಂದ್ರನು** (ಸು. 1170) ತನ್ನ ತತ್ತ್ವಾರ್ಥತಾತ್ಪರ್ಯವೃತ್ತಿಯನ್ನು ಒಬ್ಬ ಕುಮುದಚಂದ್ರ ಭಟ್ಟಾರಕನ ಪ್ರತಿಬೋಧನಾರ್ಥವಾಗಿ ರಚಿಸಿದಂತೆ ಹೇಳುತ್ತಾನೆ. ಈ ಕುಮುದಚಂದ್ರನು ಬೇರೆ.

---

## ಮಲ್ಲಿಕಾರ್ಜುನಭಟ್ಟ. 1102.

ಶಿಕಾರಿಪುರದ 98 ನೆಯ 99 ನೆಯ ಶಾಸನಗಳನ್ನು ಈತನು ಬರೆದುದಾಗಿ ಆ ಶಾಸನಗಳ ಕೊನೆಯಲ್ಲಿರುವ—

ವಿನುತಮಧುರೋಕ್ತಿಯಿಂ ತ । ನ್ನನತಿಶಯವಚೋವಿಭೂತಿಗಿದುವೆ ಯಶಶ್ಶ್ರೀ ।
ಸನವಾದುದೆಂಬಿನಂ ಶಾ । ಸನಮನಿದಂ ಬರೆದನಾಶುಕವಿನಿಟಿಲಾಕ್ಷಂ ॥
ಕವಿನುತಮೆನಲೊರೆದತಿಪಟು । ಕವಿಸಾರಸ್ವತಮಹೋದಯನ ಕಿಂಕರನೀ ।
ಶಿವಧರ್ಮಶಾಸನಮನಭಿ । ನವಮಾಗಿರೆ ಮಲ್ಲಿಕಾರ್ಜುನಾರ್ಯಂ ಬರೆದಂ ॥

ಎಂಬ ಪದ್ಯಗಳಿಂದ ತಿಳಿಯುತ್ತದೆ. ಈತನಿಗೆ "ಆಶುಕವಿನಿಟಿಲಾಕ್ಷ" ಎಂಬ ಬಿರುದುಂಟು. ಈತನು ಬ್ರಾಹ್ಮಣಕವಿ; "ಸಾರಸ್ವತಮಹೋದಯ" ಎಂಬ ಬಿರುದುಳ್ಳ ಸೋಮೇಶ್ವರಪಂಡಿತದೇವನ ಶಿಷ್ಯನು. ಮೇಲೆ ಹೇಳಿದ ಎರಡು ಶಾಸನಗಳೂ ಚಾಳುಕ್ಯ ವಿಕ್ರಮಾದಿತ್ಯನ ಆಳಿಕೆಯಲ್ಲಿ ಮೊದಲನೆಯದು 1102 ರಲ್ಲಿಯೂ ಎರಡನೆಯದು 1112 ರಲ್ಲಿಯೂ ಬರೆದುವು. ಮೊದಲನೆಯದರಲ್ಲಿ–ಗೋವಿಂದದಂಡನಾಯಕನು ಕೇದಾರೇಶ್ವರದೇವರ ಧೂಪದೀಪನೈವೇದ್ಯಕ್ಕೆಂದು ದತ್ತಿಯಂ ಬಿಟ್ಟಂತೆಯೂ, ಎರಡನೆಯದರಲ್ಲಿ–ಕೊಂಕಣಾಧಿಪಚಂದ್ರನೃಪಕುಮಾರನಾದ ಕಾಮದೇವರಸನು ಕೇದಾರೇಶ್ವರದೇವರ ದೇವಕುಲದ ಖಂಡಸ್ಫುಟಿತ ಜೀರ್ಣೋದ್ಧಾರಾದಿಕಾರ್ಯಗಳಿಗೆಂದು ದತ್ತಿಯಂ ಬಿಟ್ಟಂತೆಯೂ ಹೇಳಿದೆ. ಈ ಶಾಸನಗಳ ಕೊನೆಯಲ್ಲಿರುವ—

ಪರಿಕಿಸೆ ಮಲ್ಲಿದೇವವಿಭುಗಾರ್ ಸಮನಿರ್ಬರುಮಿರ್ಕೆಲಂಗಳೊಳ್ ।
ಬರೆದುವನಂತ್ಯದಿಂ ಬರೆವ ಬಾಜಿಪ ಬಾಜಿಪ ಕಬ್ಬಮೆಂತುಟಂ ॥
ತಿರೆ ಪೊಸಗಬ್ಬಮುಂ ನುಡಿವ ಭಾವಿಸಿ ಕೇಳ್ವ ಕಥಾಚತುಷ್ಕಮುಂ ।
ಧರೆ ಪರಿಕರ್ಮಮೆಂದಿನಿತುಮಂ ಗುಣಿಯಿಪ್ಪ ಮತಿಪ್ರಭಾವದೊಳ್ ॥

ಎಂಬ ಪದ್ಯದಿಂದಲೂ, "ಶ್ರೀಮತ್ಸಹಜಸಾರಸ್ವತವಾಚಕವಾರಿಜಾಸನಂ," "ನಾನಾವಿಧಾವಧಾರಣಾಚಕ್ರವರ್ತಿಮಲ್ಲಿಕಾರ್ಜುನಭಟ್ಟಂ ಕವಿಕಂಜಸಂಭವಂ," "ಗೊಬ್ಬೂರ ಧಾರಣಾಸಾರ್ವಭೌಮ ಮಲ್ಲಿಕಾರ್ಜುನಭಟ್ಟಂ ಸುಕವೀಂದ್ರ ಷಣ್ಮುಖಂ" ಎಂಬ ವಾಕ್ಯಗಳಿಂದಲೂ ಈತನು ಅವಧಾರಣೆಗಳನ್ನು ಮಾಡುವುದರಲ್ಲಿ ಬಹಳ ಸಮರ್ಥನಾಗಿದ್ದನೆಂದೂ ಕವಿಶ್ರೇಷ್ಠನೆಂದೂ ತಿಳಿಯುತ್ತದೆ. ಗೊಬ್ಬೂರು ಇವನ ಸ್ಥಳವಾಗಿರಬಹುದು. "ಮಲ್ಲಿದೇವವಿಭು" ಎಂದು ಹೇಳಿಕೊಂಡಿರುವುದರಿಂದ ಈತನು ದೊರೆಯ ಕೈಯ ಕೆಳಗೆ ಒಬ್ಬ ಅಧಿಕಾರಿಯಾಗಿದ್ದಂತೆ ಊಹಿಸಬಹುದಾಗಿದೆ. ಡಾಕ್ಟರ್ ಭೌದಾಜಿಯವರ ಪುಸ್ತಕದಲ್ಲಿ ಕೊಟ್ಟಿರುವ ವಿಕ್ರಮಾದಿತ್ಯನಕಾಲದ 48 ನೆಯ ಶಾಸನವನ್ನೂ ಇವನೇ ಬರೆದಿದ್ದಾನೆ. ಇವನು ಪ್ರೌಢಕವಿಯೆಂಬಂಶವನ್ನು ಶಾಸನಪದ್ಯಗಳು ವ್ಯಕ್ತಪಡಿಸುತ್ತವೆ. ಇವುಗಳಲ್ಲಿ ಕೆಲವನ್ನು ಉದ್ಧರಿಸಿ ಬರೆಯುತ್ತೇವೆ:—

### ವಿಕ್ರಮಾದಿತ್ಯ.

ಸ್ವಸ್ತಿ ಶ್ರೀವನಿತಾರ್ಪಿತ। ವಿಸ್ತೀರ್ಣೋರೀರಸ್ಥಲಂ ರಿಪುವ್ರಜಮಸ್ತ ।
ನ್ಯಸ್ತಚರಣಂ ಸಮಸ್ತಜ। ನಸ್ತುತಸಿತಕೀರ್ತಿ ವಿಕ್ರಮಾದಿತ್ಯನೃಪಂ ॥ 216 ॥

ಬಿರುದಂ ಬಿಟ್ಟಳ್ಕಿ ಕೊಂಡಿರ್ಪತಿಭಯರಸದಿಂ ತಮ್ಮ ತಮ್ಮಾಳ್ವ ವಿಶ್ವಂ ।
ಭರೆಯುಂ ಬಿಟ್ಟದ್ರಿಕುಂಜಂಗಳೊಳು ಅುದುಅುದಿರ್ಪುರ್ಕಿ ಮಾಜಾಂತು ಯುದ್ಧಾ ॥
ಜಿರದೊಳ್ ಬಿಟ್ಟಾತ್ತಕಾಂತೌಘಮನಮರವಧೂವರ್ಗದೊಳ್ ಲೀಲೆಯಿಂದಂ ।
ನೆರೆದಿರ್ಪರ್ಬ್ಯೋಗಮುಂ ಶಾತ್ರವರ್ಗೆ ಸಲಿಸುವಂ ವಿಕ್ರಮಾದಿತ್ಯದೇವಂ ॥ 217 ॥

### ಪರಶುರಾಮ.

ಧರಣೀಮಂಡಲಮೊಳ್ ಧರಾಭುಜರನಿರ್ಪತ್ತೊಂದು ಸೂೞ್ ಕೊಂದು ತ ।
ದ್ಧರಣೀಮಂಡಲಮುಂ ಸಮಸ್ತಧರಣೀದೇವರ್ಗೆ ವಾರ್ಧ್ಯಂತಿಕಂ ॥
ಬರಮಿತ್ತಲ್ಲಿ ಧರಾಮರಸ್ವದೊಳಿರಲ್ಕಾಗೆಂದು ಪೋಗೊತ್ತಿ ಸಾ ।
ಗರಮಂ ಚಾಪದ ಕೋರ್ಪಿನೊಳ್ ಬುಧನುತಂ ಶ್ರೀರೇಣುಕೀನಂದನಂ ॥ 218 ॥

ಕಣಮಾತ್ರೋದಕಮನಿರ। ಲ್ಕಣಮಿಾಯದೆ ಪಶ್ಚಿಮಾಬ್ಧಿ ತೆಗೆದೆಡೆಯೊಳ್ ಕೊಂ ।
ಕಣಸಪ್ತಕಮುಂ ಫಣಿಕಂ। ಕಣವರದೆ ನಿಜಾಶ್ರಯಾರ್ಥಮಾವಿಭು ಪಡೆದಂ ॥ 219 ॥

## ಗೋವಿಂದದಂಡನಾಯಕ.

ಅರಿಭಟರಳ್ಗರುಳ್ವಿಣಿಲ ಬಾಸಿಗದಿಂ ನೊರೆನೆತ್ತರೆಂಬ ಬಂ ।
ಧುರತರಕುಂಕುಮದ್ರವದಿನುದ್ಧಶಿರಸ್ಸರಸೀರುಹಂಗಳಿಂ ॥
ಕರವೊಸೆದರ್ಚಿಪಂ ನಿಜಭುಜಾಸಿಲತಾಸ್ಥಿತಚಂಡಿಕಾಪದಾಂ ।
ಬುರುಹಯುಗಂ (ಗಳಂ) ಸಮರರಂಗದೊಳೀರಣರಂಗಭೈರವಂ ॥ 220 ॥

. . ಸನನಂ . . . . ಮುಂತಣ . . ಸ . . . . ಯಿ . . ಪೋಗದಾಂ ।
ಪೆಸಕಮನಾಂತವಂಗೆ ಪೆಸರಾವುದದೇತಜ ಮೇಲೆ ಬಿಟ್ಟು ತಾ ॥
ನ್ಗೊಸೆಯಿಸುವಂ ಪ್ರಿಯಂ ಮುಳಿದಳಂ ಕಿವಿಗೇಂ ಪೆಸರಾರ್ಪಿನೇಟ್ಟಿಗೆಯಿಂ ।
—ಸುಮತಿಯೊಳ್ ವಿಚಾರಿಸುವೊಡೇದೊಗೆಯುಂ ರಣರಂಗಭೈರವಂ ॥ 221 ॥

[ಕಲಿಕಾಲಕರ್ಣಂ.]

ಬಿರುದರ ಜವನದಟರ ಗೋ । ಣ್ಮುರಿ ಮಲೆವರ ಮಾರಿ ಗಂಡಮುಚ್ಚರದೊಳ್ ಮು ।
ಚ್ಚರಿಸುವರ ಮಿಟ್ಟು ಶೌರ್ಯಾ । ಭರಣಂ ರಣರಂಗಭೈರವಂ ಗೋವಿಂದಂ ॥ 222 ॥

## ಕೊಂಕಣಾಧಿಪ ಚಂದ್ರನೃಪ.

ಕಲಿತನಮಾರ್ಗಮಾಕಲಿ ಕಟಾಕ್ಷಿಸುವನ್ನೆಗಮೆಲ್ಲಿಯುಂ ಭುಜಾ ।
ಬಲದಳವೀಭುಜಾಬಲಿ ವಿರೋಧಿಸುವನ್ನೆಗಮೇಕಮಾರ್ಗದಿಂ ॥
ಸಲುತಿರಲಕ್ಕುಮುರ್ಬಿದದಟೀಯದಟಂ ಭ್ರುಕುಟಿಪ್ರಭಾವಮುಂ ।
ನೆಲೆಗೊಳಿಪನ್ನೆಗಂ ಮುಖದೊಳೆಂಬುದು ಚಂದ್ರನರೇಂದ್ರನಂ ಜಗಂ ॥ 223 ॥

## ಕಾಮದೇವರಸ.

ರತಿಗೆಣೆಯಾಗೆ ಬೀರಸಿರಿ ಮಾಧವಮಾಗೆ ಮಹಾಹವಂ ಸಮೂ ।
ರ್ಜಿತವಿಷಮಾಸ್ತ್ರಪಾತದಿನರಾತಿಗಳಂ ದಿವಿಜೇಂದ್ರಕಾಮಿನೀ ॥
ತತಿಗೆಳಗಿಪ್ಪ ಬಳ್ಕೆ ನಿಜಮಾಗಿರೆ ಸಂದ ಸಮಗ್ರನಬ್ಬ ಬಾ ।
ಪ್ಪತಿಶಯಕಾಮದೇವನಿವನೆಂದಪುದುರ್ವರೆ ಕಾಮದೇವನಂ ॥ 224 ॥

---

## ಅಚರಾಜ, ಮಲ್ಲಿದೇವ. 1104.

ಇವರಿಬ್ಬರೂ ಅಬ್ಬಲೂರಲ್ಲಿರುವ ಒಂದು ಶಾಸನವನ್ನು [1] ಬರೆದುದಾಗಿ ಆ ಶಾಸನದ ಕೊನೆಯಲ್ಲಿರುವ "ಸುಕರಕವಿಯಪ್ಪಚರಾಜನುಂ ಸಹಜಕವಿ ಮಲ್ಲಿದೇವನುಂ ಬರೆದರ್" ಎಂಬ ವಾಕ್ಯದಿಂದ ತಿಳಿಯುತ್ತದೆ. ಈ ಶಾಸನವು ಚಾಳುಕ್ಯ ವಿಕ್ರಮಾದಿತ್ಯನ ಆಳಿಕೆಯಲ್ಲಿ 1104 ರಲ್ಲಿ ಹುಟ್ಟಿದುದು. ಇದರಲ್ಲಿ

1. *Epigraphia Indica*, V, 231.

ಮಹಾಸಾಮಂತಾಧಿಪತಿ ಗೋವಿಂದರಸನು ಏಚಗಾವುಂಡನ ಪ್ರಾರ್ಥನಾನುಸಾರವಾಗಿ ಅಬ್ಬಲೂರ ಬ್ರಹ್ಮೇಶ್ವರದೇವಸ್ಥಾನಕ್ಕೆ ನಾಗರಖಂಡಕ್ಕೆ ಸೇರಿದ ಮುರಿಗನಹಳ್ಳಿಯನ್ನು ಶೈವಾಚಾರ್ಯನಾದ ಸೋಮೇಶ್ವರಪಂಡಿತನ ಕಾಲಂ ಕರ್ಚಿ ಬಿಟ್ಟಂತೆ ಹೇಳಿದೆ. ಈ ಶಾಸನದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ:—

ಶ್ರೀಕಂಠದೇವ.

ಹರಪಾದಾಂಭೋಜದೊಳ್ ಚಿತ್ತಮನೆಸೆವ ಮುಖಾಂಭೋಜದೊಳ್ ಭಾರತೀಸೌಂ ।
ದರಿಯಂ ಚಾರಿತ್ರದೊಳ್ ನಿರ್ಮಲತೆಯನಖಿಲಾಶಾಂತದೊಳ್ ಶಕ್ರದಿಕ್ಕುಂ ॥
ಜರಭಾಸ್ವತ್ಕೀರ್ತಿಯಂ ಬಾಪ್ಪುಜಿ ನಿಲಿಸಿದನುದ್ಯದ್ಗುಣೌಘಂ ಮುನೀಂದ್ರಾ ।
ಭರಣಂ ಶ್ರೀಕಂಠದೇವಂ ಬುಧಜನತಿಲಕಂ ತರ್ಕವಿದ್ಯಾಸಮುದ್ರಂ ॥ 225 ॥

ಸೋಮೇಶ್ವರಸೂರಿ.

ಕೆಲಬರ್ ತರ್ಕವಿಶಾರದರ್ ಕೆಲಬರಾಪ್ತಾಳಾಪಸಂಬೋಧಕರ್ ।
ಕೆಲಬರ್ ನಾಟಕಕೋವಿದರ್ ಕೆಲಬರೊಳ್ಗಬ್ಬಂಗಳಂ ಬಲ್ಲವರ್ ॥
ಕೆಲಬರ್ ವ್ಯಾಕರಣಜ್ಞರಿಂತಿನಿತುಮಂ ಬಲ್ಲನ್ನರಿಲ್ಲೆಲ್ಲಮುಂ ।
ಸಲೆ ಸೋಮೇಶ್ವರಸೂರಿ ಬಲ್ಲನನಘಂ ನೈಯಾಯಿಕಾಗ್ರೇಸರಂ ॥ 226 ॥

ಅಕಳಂಕಾಮ್ರಕುಜಾತಚೈತ್ರಸಮಯಂ ಲೋಕಾಯತಾಂಭೋಧಿಶೀ ।
ತಕರಂ ಸಾಂಖ್ಯದಿಶಾದಿಶಾರದನಿ ಮೀಮಾಂಸಾಂಗನಾಕಂಬುಕಂ ॥
ಠಕನನ್ಮೌಕ್ತಿಕಭೂಷಣಂ ಸುಗತನೀರೇಜಾತಚಂಡಾಂಶು ತಾ ।
ರ್ಕಿಕಸೋಮೇಶ್ವರಸೂರಿ ಪೆಂಪುವಡೆದಂ ನೈಯಾಯಿಕಾಗ್ರೇಸರಂ ॥ 227 ॥

---

## ನಯಸೇನ. 1112.

ಈತನು ಧರ್ಮಾಮೃತವನ್ನು ಬರೆದಿದ್ದಾನೆ. **ಎರಡನೆಯ ನಾಗವರ್ಮನು** (ಸು. 1145) **ಭಾಷಾಭೂಷಣದ** 72 ನೆಯ ಸೂತ್ರವಾದ "ದೀರ್ಘೋಕ್ತಿರ್ನಯಸೇನಸ್ಯ" ಎಂಬುದರಲ್ಲಿ ನಯಸೇನಮುನಿಮತಾನುಸಾರವಾಗಿ ಸಂಬೋಧನಕ್ಕೆ ದೀರ್ಘವುಂಟೆಂದು ಹೇಳುವುದರಿಂದ ಈತನು ಕನ್ನಡ ವ್ಯಾಕರಣವನ್ನು ಸಹ ಬರೆದಿರುವಂತೆ ತೋರುತ್ತದೆ. ಧರ್ಮಾಮೃತವು ಹೊರತು ಈ ಕವಿಯ ಇನ್ನಾವ ಗ್ರಂಥವೂ ನಮಗೆ ದೊರೆತಿಲ್ಲ. ಈತನು ಜೈನಕವಿ.

ಮುಳುಗುಂದದೊಳಿರ್ದು ಮಹೋ । ಜ್ಜ್ವಳಧರ್ಮಾಮೃತಮನಲ್ತಿಯಿಂದಂ ಭವ್ಯಾ ।
ವಳಿಗಱಿಪಿದಂ ಧರಿತ್ರೀ । ತಳಪೂಜ್ಯಂ ಸುಕವಿನಿಕರಪಿಕಮಾಕಂದಂ ॥

ಎಂಬುದರಿಂದ ಈ ಕವಿ ಈ ಗ್ರಂಥವನ್ನು ಮುಳುಗುಂದದಲ್ಲಿ ಬರೆದಂತೆ ತಿಳಿಯುತ್ತದೆ. ಅದೇ ಇವನ ಸ್ಥಳವಾಗಿರಬಹುದು.

ಗಿರಿಶಿಖಿವಾಯುಮಾರ್ಗಶಶಿಸಂಖ್ಯೆಯೊಳಾವಗಮೊಂದಿ ವರ್ತಿಸು ।
ತ್ತಿರೆ ಶಕಕಾಲಮುನ್ನತಿಯ ನಂದನವತ್ಸರದೊಳ್ . . . . . . ॥
. . . . ಕಾವ್ಯರತ್ನಮೆನಿಸಿರ್ದೀಗ್ರಂಥಂ ನಿರ್ವಾಹಮಾಯ್ತು ನಿರ್ವಿಘ್ನತೆಯಿಂ ॥

ಎಂಬ ಅಸಮಗ್ರಪದ್ಯದಿಂದ ಈ ಗ್ರಂಥವನ್ನು ಶಕ 1037 ರಲ್ಲಿ ಬರೆದಂತೆ ತಿಳಿಯುತ್ತದೆ. ಆದರೆ ನಂದನವರ್ಷವು 1037 ಆಗುವುದಿಲ್ಲ; 1034 ಆಗುತ್ತದೆ. 'ಗಿರಿ' ಎಂಬುದರಿಂದ ಜೈನರು ನಾಲ್ಕು ಎಂಬ ಸಂಖ್ಯೆಯನ್ನು ಸೂಚಿಸುವಂತೆ ತೋರುತ್ತದೆ. ಹಾಗಿದ್ದರೆ 1112 ರಲ್ಲಿ ಈ ಗ್ರಂಥವು ಹುಟ್ಟಿರಬೇಕು.

ಈ ಕವಿಗೆ 'ಸುಕವಿನಿಕರಪಿಕಮಾಕಂದ,' 'ಸುಕವಿಜನಮನಃಪದ್ಮಿನೀರಾಜಹಂಸ' ಎಂಬ ಬಿರುದುಗಳು ಇದ್ದಂತೆ ಆಶ್ವಾಸಗಳ ಆದ್ಯಂತಪದ್ಯಗಳಿಂದ ತಿಳಿಯುತ್ತದೆ. ಅಲ್ಲದೆ ಆಶ್ವಾಸಗಳ ಕೊನೆಯ ಗದ್ಯಗಳಲ್ಲಿ 'ದಿಗಂಬರದಾಸ,' 'ನೂತ್ನಕವಿತಾವಿಲಾಸ' ಎಂದೂ ಹೇಳಿಕೊಂಡಿದ್ದಾನೆ. ಈತನು ತನ್ನ ಗುರುವಿನ ಹೆಸರನ್ನು ಹೇಳದೆ, 'ತ್ರೈವಿದ್ಯಚೂಡಾಮಣಿ,' 'ತ್ರೈವಿದ್ಯಚಕ್ರೇಶ್ವರ,' 'ತ್ರೈವಿದ್ಯಲಕ್ಷ್ಮೀಪತಿ,' 'ತ್ರೈವಿದ್ಯಚಕ್ರಾಧಿಪ' ಎಂದು ಸೂಚಿಸಿದ್ದಾನೆ. ಆದರೂ ನರೇಂದ್ರಸೇನಮುನಿಯನ್ನು ಮೂರುಪದ್ಯಗಳಲ್ಲಿ ಸ್ತುತಿಸಿ, ತ್ರೈವಿದ್ಯಚಕ್ರೇಶ್ವರ ಎಂದು ಹೇಳಿ, ಚಾಳುಕ್ಯಭುವನೈಕಮಲ್ಲನಿಂದ(1068-1076) ಪೂಜಿತನಾದ ಗುಣಚಂದ್ರಪಂಡಿತನಿಗೆ ಈ ನರೇಂದ್ರಸೇನಮುನಿ "ತ್ರೈವಿದ್ಯಮಹಾಭಿಧಾನಮಂ ಕೊಟ್ಟರ್" ಎಂಬುದರಿಂದ ಈತನೇ ಕವಿಯ ಗುರುವಾಗಿರಬಹುದು.

ಕವಿ ತನಗೆ ಹಿಂದೆ ಇದ್ದ ಕನ್ನಡಕವಿಗಳನ್ನು ಈ ಪದ್ಯದಲ್ಲಿ ಸ್ತುತಿಸಿದ್ದಾನೆ-

ಅಸಗನ ದೇಸೆ ಪೊನ್ನನ ಮಹೋನ್ನತಿವೆತ್ತ ಬೆಡಂಗು ಪಂಪನೊಂ।
ದಸದೃಶಮಪ್ಪ ಪೂರ್ವರಸಭಾವ ಗಜಾಂಕುಶನೊಳ್ಪುವೆತ್ತುರಂ॥
ಜಿಸುವ ಸದರ್ಥದೃಷ್ಟಿ ಗುಣವರ್ಮನ ಜಾಣ್ ಕವಿರತ್ನನೊಂಜೆ ಶೋ।
ಭಿಸೆ ನೆಲಸಿರ್ಕೆ ಧಾರಿಣಿ ಮನಂಗೊಳೆ ಮತ್ಕೃತಿಯೊಳ್ ನಿರಂತರಂ॥

ತನ್ನ ಗುಣಗಳನ್ನು ಈ ಪದ್ಯದಲ್ಲಿ ಹೇಳಿಕೊಂಡಿದ್ದಾನೆ-

ಮಾನಿತಶೀಲನಿಧಾನನ। ನೂನಗುಣಂ ಸಕಳಭವ್ಯಜನಬುಧಜನಚ।
ತ್ತಾನಂದಕರಂ ಕೇಳ್ ನಯ। ಸೇನಬುಧಂ ಸುಕವಿನಿಕರಪಿಕಮಾಕಂದಂ॥

ಈತನು-ಕನ್ನಡದಲ್ಲಿ ಗ್ರಂಥವನ್ನು ಬರೆಯುತ್ತೇನೆಂದು ಆರಂಭಿಸಿ ಸಂಸ್ಕೃತ ಪದಗಳನ್ನು ಸ್ವೇಚ್ಛೆಯಾಗಿ ಉಪಯೋಗಿಸಬಾರದು-ಎಂಬಂಶವನ್ನು ಈ ಪದ್ಯಗಳಲ್ಲಿ ಹೇಳುತ್ತಾನೆ:—

ಪೊಸಗನ್ನಡದಿಂ ವ್ಯಾವ। ರ್ಣಿಸುವೆಂ ಸತ್ಕೃತಿಯನೆಂದು ಕನ್ನಡಮಂ ಚಿಂ।
ತಿಸಿ ಕೂಡಲಾಱದಕ್ಕಟ। ಮಿಸುಕದ ಸಕ್ಕದಮನಿಕ್ಕುವವನುಂ ಕವಿಯೇ॥

ಸಕ್ಕದಮಂ ಪೇೞ್ವೊಡೆ ನೆಱೆ । ಸಕ್ಕದಮಂ ಪೇೞ್ಗೆ ಶುದ್ಧಕನ್ನಡದೊಳ್ ತಂ ।
ದಿಕ್ಕುವುದೆ ಸಕ್ಕದಂಗಳ । ತಕ್ಕುದೆ ಬೆರಸಲ್ಕೆ ಘೃತಮುಮಂ ತೈಲಮುಮಂ ॥

ಇದರಿಂದ ಈ ಕವಿಯ ಕಾಲದಲ್ಲಿಯೇ ಕವಿಗಳು ಕನ್ನಡಕಾವ್ಯಗಳಲ್ಲಿ ಅನಾವಶ್ಯಕವಾಗಿ ಅನೇಕ ಸಂಸ್ಕೃತಪದಗಳನ್ನು ಪ್ರಯೋಗಿಸುತ್ತಿದ್ದರೆಂದು ತಿಳಿಯುತ್ತದೆ.

ಇವನ ಗ್ರಂಥ

## ಧರ್ಮಾಮೃತ.

ಈ ಗ್ರಂಥದಲ್ಲಿ—'ಜಿನಮತದೊಳೆನಿತು ಸಾರಮ। ದನಿತುಂ ಲೇಸಾಗಿ ತೋರ್ಪುದು' ಎಂದು ಹೇಳುತ್ತಾನೆ. ಇದಕ್ಕೆ 'ಕಾವ್ಯರತ್ನ' ವೆಂದು ಹೆಸರಿಟ್ಟಿದ್ದಾನೆ. ಇದು 14 ಆಶ್ವಾಸಗಳಾಗಿ ಭಾಗಿಸಲ್ಪಟ್ಟಿದೆ. ಇದರಲ್ಲಿ–ವಿಪುಳಾದ್ರಿಯಲ್ಲಿ ವೀರನಾಥಂ ನೆಲಸಿರಲು, ಆ ಸಭೆಯಲ್ಲಿರ್ದ ಧರ್ಮೋಪದೇಶಜ್ಞನಾದ ಗೌತಮನಂ ಶ್ರೇಣಿಕಮಹಾರಾಜನು ಧರ್ಮೋಪದೇಶಮಂ ಮಾಳ್ಪಂತೆ ಕೇಳಿಕೊಳ್ಳಲು, ಅವನು ಜಿನದರ್ಶನಮಾಹಾತ್ಮ್ಯವನ್ನೂ, ಆ ದರ್ಶನಕ್ಕೆ ಅಂಗಗಳಾದ ನಿಶ್ಶಂಕೆ, ನಿಷ್ಕಾಂಕ್ಷೆ, ನಿರ್ವಿಚಿಕಿತ್ಸೆ, ಅಮೂಢದೃಷ್ಟಿತ್ವ, ಉಪಗೂಹನ, ಸ್ಥಿತಿಕರಣ, ವಾತ್ಸಲ್ಯ, ಧರ್ಮಪ್ರಭಾವನೆ ಎಂಬಿವುಗಳನ್ನೂ, ಮತ್ತು

ಕೊಲ್ಲದ ಪುಸಿಯದ ಕಳವಿಸಿ । ಸಿಲ್ಲದ ಪರವನಿತೆಯಗ್ಗೆ ಪದೆಪಿಂ ಚಿತ್ತಂ ।
ಸಲ್ಲದ ಪರಿಗ್ರಹಕ್ಕಳಿ । ಪಿಲ್ಲದ ಸುವ್ರತಮಿವಯ್ದುಮಲ್ಲಮೆ ರತ್ನಂ ॥

ಎಂದು ಹೇಳಲ್ಪಡುವ ಅಹಿಂಸಾವ್ರತ, ಸತ್ಯವ್ರತ, ಅಸ್ತೇಯವ್ರತ, ಸಬ್ರಹ್ಮವ್ರತ, ನಿಷ್ಪರಿಗ್ರಹವ್ರತ ಎಂಬ ಪಂಚಾಣುವ್ರತಗಳನ್ನೂ ಹೇಳಿ,

ಇಂತೀಪದಿನಾಲ್ಕುಮನ । ತ್ಯಂತಂ ದೃಢಹೃದಯನಾಗಿ ತಾಳ್ದಿರ್ದಂಗೋ ।
ರಂತೆ ನಿರಂತರಸೌಖ್ಯಂ । ಭ್ರಾಂತಿಲ್ಲದೆ ಕೂಡುವಲ್ಲಿ ಸಂದೆಯಮುಂಟೇ ॥

ಎನ್ನಲು, 'ಗಣಧರದೇವರ್ಗೆ ಮಗಧಾವನೀವಲ್ಲಭಂ ಭಕ್ತಿಪೂರ್ವಕಂ ವಂದಿಸಿ ಎನಗೆ ತಿಳಿವಂತೆ ಆ ದರ್ಶನಮುಂ ನಿಶ್ಶಂಕಾದ್ಯಷ್ಟಗುಣಂಗಳುಂ ಪಂಚಾಣುವ್ರತಮುಮೆಂಬ ಪದಿನಾಲ್ಕು ಮಹಾರತ್ನಂಗಳೊಳೊಂದೊಂದಱೊಳ್ ಚರಿಯಿಸಿ ನಿರ್ವೃತಿಯನೆಯ್ದಿದ ಮಹಾಪುರುಷರ ಕಥೆಗಳಂ ಬೆಸಸಲ್ವೇೞ್ಕುಮೆನೆ ಗಣಧರರ್ ಪೇೞಲ್ ತಗುಳ್ದರ್'—ಎಂದಾರಂಭಿಸಿ, ಈ 14 ವಿಷಯಗಳನ್ನು ಆಶ್ವಾಸಕ್ಕೆ ಒಂದೊಂದರಂತೆ 14 ಆಶ್ವಾಸಗಳಲ್ಲಿ ಹೇಳಿದ್ದಾನೆ.

ಗ್ರಂಥಾವತಾರದಲ್ಲಿ ವೀರಜಿನನನ್ನು ಸ್ತುತಿಸಿದ್ದಾನೆ. ಬಳಿಕ ಸಿದ್ಧಾದಿಗಳನ್ನೂ ಯಕ್ಷಿಯಕ್ಷರನ್ನೂ ಸರಸ್ವತಿಯನ್ನೂ ಸ್ತುತಿಸಿ, ಅನಂತರ ಅರ್ಹದ್ಬಲ್ಯಾ

ಚಾರ್ಯನಿಂದ ಅಕಲಂಕದೇವನವರೆಗೆ ಕ್ರಮವಾಗಿ ಗುರುಗಳನ್ನು[1] ಹೊಗಳಿದ್ದಾನೆ. ಆಶ್ವಾಸಗಳ ಕೊನೆಯಲ್ಲಿ—

"ಇದು ನಿಖಿಲದಿವಿಜಪರಿಬೃಢಮುಕುಟಘಟಿತಮಣಿಕಿರಣವಿಲುಳಿತಚುಂಬನೀಯಪರಮಜಿನಚರಣಯುಗಳಸರಸೀರುಹಮತ್ತಮಧುಕರ ನಿರುಪಮಸಹಜಕವಿಜನಪಯಃಪಯೋಧಿಹಿಮಕರನುತಭಾವಯುತ ದಿಗಂಬರದಾಸ ನೂತ್ನಕವಿತಾವಿಳಾಸ ಶ್ರೀಮನ್ನಯಸೇನದೇವವಿರಚಿತಮಪ್ಪ ಧರ್ಮಾಮೃತದೊಳ್"

ಎಂಬ ಗದ್ಯವಿದೆ.

ಇವನ ಗ್ರಂಥವು ಲಲಿತವಾಗಿಯೂ ಮೃದುಮಧುರಪದಗುಂಫಿತವಾಗಿಯೂ ನೀತಿಶ್ಲೋಕಪುಂಜರಂಜಿತವಾಗಿಯೂ ಇದೆ. ಇದರಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

### ವಸಂತ.

ವನಜಂಗಳ್ ದಳವೇಱೆ ಚೂತಲತೆಗಳ್ ನೀರೇಱೆ ಶೀತಾಂಶು ತೊ।
ಟ್ಟನೆ ಪೂರ್ವಾದ್ರಿಯನೇಱೆ ಮನ್ಮಥಗಜಂ ಸೊರ್ಕೇಱೆ ಪೊನ್ನುಯ್ಯಲಂ॥
ವನಜಾತಾಕ್ಷಿಯರೇಱೆ ಕಾಮನ ಸರಲ್ ಕೂರ್ಪೇಱೆ ಪುಂಡ್ರೇಕ್ಷುಚಾ।
ಪನ ಚಾಪಂ ಕೊಲೆಗೇಱೆ ಬಂದುದು ವಸಂತಂ ಸಂತತೋತ್ಸಾಹದಿಂ ॥ 228 ॥

ಅಳಿಗಳ ಗಾನಮುಂ ನಿಮಿರೆ ಕೋಕಿಳನಿಸ್ವನಮುಣ್ಮೆ ಕೇಕಿಸಂ।
ಕುಳರವಮೊಪ್ಪೆ ಕೆಂದಳಿರ ಗೊಂದಳದಿಂ ಸಹಕಾರಭೂರುಹಾ॥
ವಳಿ ಕಡುರಯ್ಯಮಾಗೆ ವನಜಂಗಳರಲ್ದಿರೆ ಕೂಡೆ ಚಂದ್ರನು।
ಜ್ಜ್ವಳಿಸೆ ವಿನೋದಮುಂ ಪಡೆಯೆ ಬಂದನೊಱಲ್ದು ವಸಂತವಲ್ಲಭಂ ॥ 229 ॥

### ಕಳವು.

ನರಕದ ದಾರಿ ಮಹಾನಿ। ಷ್ಠುರದುಃಖದ ಬಿತ್ತು ಪುಣ್ಯದ ಕ್ಷಯಮುಳಿಪಿಂ।
ಗಿರಲೆಡೆ ಕೊಲೆಯ ತವರ್ಮನೆ। ದುರಿತದ ಪೆರ್ಬೆಳಸು ಕಳವು ಬಗೆವೊಡೆ ಜಗದೊಳ್
॥ 230 ॥

---

1. ಅರ್ಹದ್ಬಲ್ಯಾಚಾರ್ಯ, ಗುಣಧರಭಟ್ಟಾರಕ, ಮಂಕ್ಷ್ವಾಚಾರ್ಯ, ನಾಗಹಸ್ತ್ಯಾಚಾರ್ಯ, ವೃಷಭಾಚಾರ್ಯ, ಧರಸೇನಾಚಾರ್ಯ, ಭೂತಬಲಿ, ಪುಷ್ಪದಂತ, ಕೊಂಡಕುಂದ, ಸಿಂಹನಂದಿ, ಕೂಚಿಭಟ್ಟಾರಕ, ಸಮಂತಭದ್ರ, ಕವಿಪರಮೇಷ್ಠಿ, ಪೂಜ್ಯಪಾದ, ವಿದ್ಯಾನಂದ, ಅನಂತವೀರ್ಯ, ಸಿದ್ಧಸೇನ, ಶ್ರುತಕೀರ್ತಿ, ಪ್ರಭಾಚಂದ್ರ, ಬೊಪ್ಪದೇವ, ಏಳಾಚಾರ್ಯ, ವೀರಸೇನ, ಜಿನಸೇನ, ಗುಣಭದ್ರ, (ಶು) ಭಚಂದ್ರ, ಅಜಿತಸೇನ, ಸೋಮದೇವ, ನರೇಂದ್ರಸೇನ, ನಯಸೇನಮುನಿ, ದಿವಾಕರನಂದಿ, ಶುಭಚಂದ್ರ, ರಾಮಣಂದಿ, ನರೇಂದ್ರಸೇನಮುನಿ, ಭೇರುಂಡಪಂಡಿತ, ವಾಸುಪೂಜ್ಯ, ಪದ್ಮಣಂದಿ, ಮೇಘಚಂದ್ರ, ಮಾಘಣಂದಿ, ಪ್ರಭಾಸೇನ, ಅರ್ಹಣಂದಿ, ಶ್ರುತಕೀರ್ತಿ, ರಾಮಸಿಂಹ, ವಾಸುಪೂಜ್ಯ, ಚಾರುಸೇನ, ಕುಕ್ಕುಟಾಸನಮಲಧಾರಿಮುನಿ, ಮೇಘಚಂದ್ರ, ರಾಮಸೇನ, ಕನಕನಂದಿ, ಅಕಲಂಕದೇವ.

## ವಿಚಾರಪರತೆ.

ತೆಂಗಿನ ಕಾಯದೊಂದು ಕಠಿನತ್ವಮನೊರ್ಮೆಯೆ ಕಂಡು ಪೊಲ್ಲದೆಂ।
ದೇಂ ಗೆಳ ಬೆರ್ಚಿ ಭೀರುತನದಿಂ ಬಿಡದೊಯ್ಯನೆ ಮೂಸಿ ನೋಡಿ ಕಾಯ್॥
ಪಿಂಗಿದುದೆಂಬ ಬೆಳ್ತನಮನೊಯ್ಯನೆ ಮಾಡದೆ ಬುದ್ಧಿವಂತರಂ।
ಪಿಂಗದೆ ಪೊರ್ದಿ ಮೆಲ್ಲನೆ ವಿಚಾರಿಸಿ ಪೊರ್ದುವುದಾಪ್ತನಪ್ಪನಂ ॥ 231 ॥

## ವಿವಿಧನೀತಿ.

ಕಲ್ಲಂ ಕರ್ಬುನಮುಂ ನೋ। ಡೆಲ್ಲಿಯುಮೋರಂತೆ ಪಡೆಯಲಪ್ಪುದು ಪೊನ್ನಂ।
ಸಲ್ಲಲಿತಮಪ್ಪ ರತ್ನಮ। ನೆಲ್ಲಿಯುಮೋರಂತೆ ಪಡೆಯಲಪ್ಪದೆ ಧರೆಯೊಳ್ ॥ 232 ॥

ಪೆಣ್ಣಿಂಗಂ ಪೊನ್ನಿಂಗಂ। ಮಣ್ಣಿಂಗಂ ಕಾಂಕ್ಷೆಯಿಂದಮೆಱಗದೆ ಲೋಕಂ।
ಬಣ್ಣಿಸೆ ಸಂಚಲನಾಗದೆ। ತಿಣ್ಣಂ ನಡೆವವನೆ ತಾಂ ತಪೋಧನನಕ್ಕುಂ ॥ 233 ॥

ಜಲಧಿಯೊಳೆ ಕಪ್ಪೆ ಸತ್ತೊಡೆ। ಜಲಧಿಯ ನೀರೆಲ್ಲಮಟ್ಟ ಕೊಳೆನಾರ್ಪುವೆ ನಿ॥
ರ್ಮಲನಲ್ಲದೊರ್ವನಿಂದಂ। ಮಲಿನತೆ ಪೊರ್ದುವುದೆ ವಿಮಳಸದ್ಧರ್ಮಮುಮಂ ॥ 234 ॥

ಅರಳೆಯ ಕಿಚ್ಚಿನಂತೆ ಧನಮಾಯುಂ ವಸಂತದ ಶೋಭೆಯಂತೆ ಪೆ।
ರ್ದೆರೆಗಳ ಬಂಬಲಂತೆ ಸೊಬಗೊಡ್ಡಿದ ಮೇಘಸಮೂಹದಂತೆ ನಂ॥
ಟರ ಕಡುಗೂರ್ಮೆ ಪಣ್ತ ಮರನಂತೆ ವಿಳಾಸದಗುರ್ಬು ಮೈಮೆಯುಂ।
ಬ್ಬರಮದು ನೀರ ಬೊಬ್ಬುಳಿಕೆಯಂತೆ ನಿರಂತರಮಲ್ಲಿವೆಲ್ಲಿಯುಂ ॥ 235 ॥

ಉರಗವಿಷಮೇಱದವರುಂ। ಸಿರಿಯುಳ್ಳರ್ ಮದ್ದುಗುಣಿಕೆಯಂ ತಿಂದವರುಂ।
ಪಿರಿದುಂ ಪೈತ್ಯಾಧಿಕರುಂ। ಧರೆಯೊಳ್ ಮೆಯ್ಯಱಿಯರೆಂಬ ನುಡಿ ತಪ್ಪುಗುಮೇ ॥ 236 ॥

ಏಗೆಟ್ಟತ್ತೆನ್ನದೆ ಮನ। ಮೋಗಡಿಸದೆ ತೀರದಾರಿನೆಂದುಡುಗದೆ ನಿ।
ರ್ವೇಗಂ ಚಿತ್ತದೊಳಣಮಿನಿ। ಸಾಗದೆ ತಾಂ ಮಾಳ್ಪುದನ್ನದಾನಮನಱವಂ ॥ 237 ॥

ತನ್ನವರೆನ್ನವರೆನ್ನದೆ। ಸನ್ನುತಮತಿಯಾಗಿ ಸಕಲಜೀವಂಗಳುಮಂ।
ತನ್ನಂ ರಕ್ಷಿಸುವಂತಿರೆ। ಬಿನ್ನಣಮೇನಱದು ರಕ್ಷಿಪುದು ಸತ್ಪುರುಷಂ ॥ 238 ॥

ಕನ್ನಡಿಯಂ ತೋಱುವೊಡ। ತ್ಯುನ್ನತಸಲ್ಲಕ್ಷಣಂಗೆ ಮುನಿಸಾಗದು ಮ।
ತ್ತೆನ್ನದೆ ಮೂಕೊಱೆಯಂಗಂ। ಕನ್ನಡಿಯಂ ತೋಱೆ ಬಡಿಗುಮಿಱಗುಂ ಕೊಲ್ಗುಂ ॥ 239 ॥

ಕಲಿತನದಿಂದಂ ಲೋಗರ್। ಪುಲಿಯಂ ಪಿಡಿದೊಡಮದೇಂ ಬಿಡೆಂಬರ್ ತಾಮೊಂ।
ದಿಲಿಯಂ ಪಿಡಿದೊಡಮದು ಪೆ। ರ್ಬುಲಿಯೆಂಬರ್ ದುರ್ಜನರ್ಗೆ ತಾನಿದು ಸಹಜಂ ॥ 240 ॥

ಆರಯ್ವೊಡೆ ನೋಡೆ ತೊಱೆಗಳ| ನೀರುಂ ವಾರಿಧಿಯ ನೀರ ಪೊರ್ದುಗೆಯಿಂದಂ|
ಸಾರಂಗೆಟ್ಟುಪ್ಪಪ್ಪವೊ| ಲಾರುಂ ದುರ್ಜನರ ಸಂಗದಿಂದಂ ಕಿಡರೇ ‖ 241 ‖

ಕಡುದಣ್ಪುಗೆಟ್ಟು ಕಿಚ್ಚಿನೊ| ಳೊಡಗೂಡಿದ ನೀರ್ ಬೞಿಕ್ಕೆ ತೀವ್ರತೆಯಿಂ ಕೆ‖
ಯ್ಸುಡುವಂತೆ ನೋಡೆ ದುರ್ಜನ| ರೊಡನಾಡಿದ ಮಾನಸಗ್ಗೆ ಸದ್ಗುಣಮುಂಟೇ ‖ 242 ‖

ಮರಣಕ್ಕಂಜದೆ ಗುಣಮುಂ| ಪರಿಹರಿಸದೆ ಶೀಲರತ್ನಮುಂ ರಕ್ಷಿಸಿ ಸ|
ತ್ತರ ಸಾವು ಸಾವೆ ಶೀಲಮು| ನುರವಣೆಯಿಂ ಬಿಟ್ಟ ಖಳರ ಬಾೞುಂ ಬಾೞೆ ‖ 243 ‖

ಮೊದಲೊಳ್ ಮುಳ್ಳಿನ ಮೊನೆಗಳ್| ಮೃದುವಪ್ಪುವು ಬೞಿಕೆ ಬೆಟ್ಟಿತಪ್ಪುವು ಖಳರುಂ|
ಮೊದಲೊಳ್ ಗುಣಿಯೆನಿಸಿರ್ಪರ್| ತುದಿಯೊಳ್ ಕೇಳ್ ತಮ್ಮ ಮಾಯಮುಮಂ ಪ್ರಕಟಿಸುವರ್ ‖ 244 ‖

ಪೊಲೆಯರ್ ಭಾವಿಸುವೊಡೆ ದು| ಷ್ಕುಲರನುಪಮಶುದ್ಧವೃತ್ತಿಯೊಳ್ ನಡೆವೊಡೆ ಭೂ|
ತಲಮೆಲ್ಲಂ ಬಣ್ಣಿಸುವುದು| ಕುಲದಿಂದಂ ಧರ್ಮಮಧಿಕಮೆಂದಱಿಪುವವೋಲ್ ‖ 245 ‖

## ಸತ್ಕೃತಿ.

ರಸಭಾವಂ ಗಮಕಂ ಕಾ| ಳಸೆ ನಾಣ್ನುಡಿ ದೇಸೆವೆತ್ತ ಪೊಸನುಡಿ ಮಾರ್ಗಂ|
ಕುಸುರಿಯ ಬಗೆಯೆಂದಿನಿತಱೊ| ಳೆಸೆಯದ ಕೃತಿ ಕೃತಿಯೆ ಬಗೆದು ನೋೞ್ಪೊಡೆ ಜಗದೊಳ್ ‖ 246 ‖

## ಸ್ವೈರಿಣಿಯರು.

ಧರಣೀಚಕ್ರಮುಮಂ ವಿಯತ್ತಳಮುಮಂ ಗಂಟಿಕ್ಕುವರ್ ಮಿಂಚನ|
ಚ್ಚರಿಯಪ್ಪಂತುಱದೊಂದುಮಾಡಿ ಪೆಣೆವರ್ ಕಲ್ಲಲ್ಲಿ ನಾರೆತ್ತುವರ್‖
ತ್ವರಿತಂ ಬಿನ್ನಣದಿಂ ಬಿಸಿಲ್ಗುದುರೆಯಂ ತಂದೇಱುವರ್ ಮೇರುವಂ|
ಭರದಿಂದಂ ಪಿಡಿದೆತ್ತುವರ್ ಮಳಲೊಳಂ ನೀರ್ಮಾಡುವರ್ ಜೋಡೆಯರ್ ‖ 247 ‖

---

## ರಾಜಾದಿತ್ಯ. ಸು. 1120.

ಈತನು ವ್ಯವಹಾರಗಣಿತ, ಕ್ಷೇತ್ರಗಣಿತ, ವ್ಯವಹಾರರತ್ನ, ಲೀಲಾವತಿ, ಚಿತ್ರಹಸುಗೆ, ಜೈನಗಣಿತಸೂತ್ರಟೀಕೋದಾಹರಣ, ಮೊದಲಾದ ಗಣಿತಗ್ರಂಥಗಳನ್ನು ರಚಿಸಿದ್ದಾನೆ.

ಈತನು ಜೈನಕವಿ. ಇವನಿಗೆ ರಾಜವರ್ಮ, ಭಾಸ್ಕರ, ಬಾಚ, ಬಾಚಯ, ಬಾಚಿರಾಜ ಎಂಬ ಹೆಸರುಗಳೂ ಗಣಿತವಿಳಾಸ, ಓಜೆವೆಡಂಗ, ಪದ್ಯವಿದ್ಯಾಧರ ಎಂಬ ಬಿರುದುಗಳೂ ಇದ್ದಂತೆ ಇವನ ಗ್ರಂಥಗಳಿಂದ ತಿಳಿಯುತ್ತದೆ. "ಕೊಂಡಿ

ಮಂಡಲಕ್ಕನುಪಮರತ್ನಮಂಡನಮೆನಿಪ್ಪ ಪೂವಿನಬಾಗೆ" ಇವನ ಸ್ಥಳವು. ಇವನ ಹೆಂಡತಿ ಕನಕಮಾಲೆ. "ಉರ್ವೀಶ್ವರನಿಕರಸಭಾಯೋಗ್ಯಂ" ಎಂದು ಹೇಳಿಕೊಂಡಿರುವುದರಿಂದ ಇವನು ರಾಜರಲ್ಲಿ ಆಸ್ಥಾನಪಂಡಿತನಾಗಿದ್ದಂತೆ ತೋರುತ್ತದೆ. ತನ್ನ ಗುರು ಮುಂತಾದವರನ್ನು ಈ ಪದ್ಯದಲ್ಲಿ ಹೇಳಿಕೊಂಡಿದ್ದಾನೆ:—

ಜಿನನಾಥಂ ನೇಮಿನಾಥಂ ನಿಜಗುರು ಶುಭಚಂದ್ರೋತ್ತಮಂ ತಂದೆ ಸರ್ವಾ।
ವನಿಪಸ್ತುತ್ಯಾಸ್ಪದಂ ಶ್ರೀಪತಿ ಜನನಿ ವಸಂತಾಖ್ಯೆ ತನ್ನಗ್ರಜಂ ಶಾಂ॥
ತನುಮತ್ತಾಭೋಗಮಂ(?)ಬಾಹುಬಲಿಭರತರಾತ್ಮೇಶ್ವರರ್ ತಾಮೆನಲ್ ಬಾ।
ಪೆನೆ ರಾಜಾದಿತ್ಯನೇಂ ಧನ್ಯನೊ ವಿಶದಯಶಂ ಸದ್ಗುಣಾಂಭೋಧಿಚಂದ್ರಂ॥

ಈತನ ವ್ಯವಹಾರರತ್ನದಲ್ಲಿ ವಿಷ್ಣುನೃಪಾಲನ ಹೆಸರನ್ನು ಹೇಳುವ—

ನಗಮಷ್ಟಂ ನವಮರ್ಕದಿಙ್ಮನುದಿನಾಂಭೋರಾಶಿಷಟ್ಪಂಚಸಂ।
ಖ್ಯೆಗಳಂ ವರ್ತನೆಗೊಳ್ವ ವಂದಿಜನಮಾರಯ್ದರ್ಕಮೌದಾರ್ಯವೀ॥
ರ್ಯಗುಣಂ ವಿಷ್ಣುನೃಪಾಲನಿತ್ತನೊಸೆದಿನ್ನೀಟಿಪ್ಪನ್ನ(?)ಮತ್ತೆಲ್ಲವಂ।
ದಿಗಳೋರೊರ್ವರ ಭಾಗಕೇನಹುದು ಮತ್ತೇನಕ್ಕುಮೋ ಭಾಸ್ಕರಾ॥

ಎಂಬ ಈ ಉದಾಹರಣಪದ್ಯವು ದೊರೆಯುತ್ತದೆ. ಅಲ್ಲದೆ ವ್ಯವಹಾರಗಣಿತದಲ್ಲಿಯೂ ಕೆಲವುಕಡೆ ವಿಷ್ಣುನೃಪಾಲನ ಹೆಸರು ದೊರೆಯುತ್ತದೆ. ಹೊಯ್ಸಳ ರಾಜನಾದ ವಿಷ್ಣುವರ್ಧನನು ಸುಮಾರು 1111 ರಿಂದ 1141 ರವರೆಗೆ ಆಳಿದಂತೆ ತಿಳಿಯುತ್ತದೆ. ಈ ಉದಾಹರಣಪದ್ಯದಿಂದ ವಿಷ್ಣುವರ್ಧನನು ಕವಿಯ ಕಾಲದಲ್ಲಿ ದೊರೆಯಾಗಿದ್ದಂತೆ ಊಹಿಸಬಹುದಾಗಿದೆ. ಅಲ್ಲದೆ ಶ್ರ. ಬೆ. 117 ನೆಯ ಶಾಸನದಿಂದ ಒಬ್ಬ ಶುಭಚಂದ್ರನು 1123 ರಲ್ಲಿ ಗತಿಸಿದಂತೆ ತಿಳಿಯಬರುತ್ತದೆ. ಈತನೇ ಕವಿಯ ಗುರುವಾಗಿರಬಹುದು. ಹೀಗಿದ್ದಪಕ್ಷದಲ್ಲಿ ಕವಿ ವಿಷ್ಣುವರ್ಧನನಲ್ಲಿ ಆಸ್ಥಾನಪಂಡಿತನಾಗಿ ಸುಮಾರು 1120 ರಲ್ಲಿ ಇದ್ದಿರಬಹುದು.

ಇವನು ತನಗೆ ಹಿಂದೆ ಇದ್ದ ಕವಿಗಳಲ್ಲಿ ಆರನ್ನೂ ಹೇಳಿಲ್ಲ. ಆದರೆ—

ಮಾಗಧವಿಷಯದ ಪರಿಭಾ। ಷಾಗಮಮಂ ಪೇಳ್ದಿನಲ್ತೆ ಪೂರ್ವಾಚಾರ್ಯಂ।
ಲೋಗರಱಿವಂತು ಕುಂತಣ। ಬಾಗೆಯ ಪರಿಭಾಷೆಯಲ್ಲಿವಂ ವಿರಚಿಸಿದಂ॥

ಎಂಬ ಪದ್ಯದಲ್ಲಿ ಹಿಂದೆ ಆವನೋ ಒಬ್ಬ ಪೂರ್ವಾಚಾರ್ಯನು ಬರೆದುದನ್ನು ತಾನು ಕುಂತಣಬಾಗೆಯ ಪರಿಭಾಷೆಯಲ್ಲಿ ಬರೆದಂತೆ ಹೇಳುತ್ತಾನೆ.

ತನ್ನ ಪಾಂಡಿತ್ಯವನ್ನೂ ಗುಣಗಳನ್ನೂ ಈ ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ:

ಈಚತುರಬ್ಧಿವೇಷ್ಟಿತಮಹೀತಳದೊಳ್ ದೊರೆಯಾರ್ ಸಮಸ್ತವಿ।
ದ್ಯಾಚತುರಾನನಂಗೆ ವಿಬುಧಾಶ್ರಿತಕಲ್ಪಮಹೀರುಹಂಗೆನಲ್॥

ಖೇಚರಕರ್ಣಗತರಿಣಿಯ ನಥಂಬಣ್ಣಿಪರಂತೆಸೆದು ನಾ(?) ।
ಲೋಚಿತನಂ ದಯಾಬ್ಧಿಹಿಮರೋಚಿಯು ನಪ್ರತಿಗಂಧಬಾಚಿಯಂ ॥
ಆಶ್ರಿತಕಲ್ಪಮಹೀಜಂ । ವಿಶ್ರುತಭೂಭುವನಕೀರ್ತಿ ಶಿಷ್ಟೇಷ್ಟಜನೈ ।
ಕಾಶ್ರಯನಮಳಚರಿತ್ರಂ । ಮಿಶ್ರವ್ಯವಹಾರಗಣಿತವನುಂ ವಿರಚಿಸಿದಂ ॥
ಅನುರೂಪಂ ಸತ್ಯವಾಕ್ಯಂ ಪರಹಿತಚರಿತಂ ಸುಸ್ಥಿರಂ ಭೋಗಿ ಗಂಭೀ ।
ರನುದಾರಂ ಸಚ್ಚರಿತ್ರಂ ಸೊಬಗನಖಿಲವಿದ್ಯಾವಿದಂ ಭವ್ಯಸೇವ್ಯಂ ॥
ಜನ—ಸಂಸ್ತುತ್ಯನುರ್ವೀಶ್ವರನಿಕರಸಭಾಯೋಗ್ಯನೆಂದಾಗಳುಂ ಮೇ ।
ದಿನಿ ರಾಜಾದಿತ್ಯನಂ ಬಣ್ಣಿಪುದಱಿದೊಲವಿಂ ಸಂತತೋತ್ಸಾಹದಿಂದಂ ॥

ಇವನ ಗ್ರಂಥಗಳಲ್ಲಿ

## 1. ವ್ಯವಹಾರಗಣಿತ.

ಈ ಗ್ರಂಥವು ಗದ್ಯಪದ್ಯಾತ್ಮಕವಾಗಿದೆ; ಸೂತ್ರಗಳನ್ನು ಪದ್ಯರೂಪವಾಗಿ ಬರೆದು ಟೀಕೆಯನ್ನೂ ಉದಾಹರಣೆಗಳನ್ನೂ ಕೊಟ್ಟಿದ್ದಾನೆ. ಗ್ರಂಥವು 8 ಅಧಿಕಾರಗಳಾಗಿ ಭಾಗಿಸಲ್ಪಟ್ಟಿದೆ; ಒಂದೊಂದಧಿಕಾರಕ್ಕೂ ಹಾರವೆಂಬ ಸಂಜ್ಞೆ ಇದೆ. ಈ ಗ್ರಂಥವನ್ನು 5 ದಿವಸಗಳಲ್ಲಿ ಬರೆದಂತೆ—

ಲೆಕ್ಕದ ಕವಿತೆಯ ಬಲ್ಮೆ ಜ । ಗಕ್ಕೆಸೆದಿರೆ ಸಕಲಗಣಿತವಿಾಗ್ರಂಥದೊಳಂ ।
ತೆಕ್ಕನೆ ತೀವಿರಲಯ್ದುದಿ । ನಕ್ಕಂ ನೆಱೆ ಪೇಲ್ದನಲ್ತೆ ರಾಜಾದಿತ್ಯಂ ॥

ಎಂಬ ಪದ್ಯದಲ್ಲಿ ಹೇಳುತ್ತಾನೆ. ಗ್ರಂಥದ ಉತ್ಕೃಷ್ಟತೆಯನ್ನು ಈ ಪದ್ಯಗಳಲ್ಲಿ ವರ್ಣಿಸಿದ್ದಾನೆ:—

ಅದಱಿಂ ಲೋಕಹಿತಾರ್ಥಂ । ಮೃದುಪದಲಲಿತಪ್ರಸನ್ನಗಂಭೀರಾರ್ಥಾ ।
ಸ್ಪದಮೆನೆ ಭಾಸ್ಕರದೇವಂ । ವಿದಿತವ್ಯವಹಾರಗಣಿತಮುಂ ವಿರಚಿಸಿದಂ ॥
ಎನಿಸಿದ ಗುಣಿ ರಾ (ಜಾದಿ । ತ್ಯನೆ ಸು) ರುಚಿರಮಪ್ಪ ಗಣಿತತತ್ತ್ವಜ್ಞತೆಯಂ ।
ಜನತೋಪಕಾರದೊಳ್ ಮೆಱೆ । ದನೆನಲ್ ವ್ಯವಹಾರಗಣಿತಮಂ ಮೆಚ್ಚದರಾರ್ ॥
ಧಾರಿಣಿಯೊಳ್ ಸಕಲಬುಧಾ । ಧಾರಮೆನಲ್ ಸ್ವಲ್ಪಮಾಗಿಯುಂ ವ್ಯವಹಾರಾ ।
ಧಾರಮೆನಲ್ ಸಾರಮೆನಲ್ । ಶ್ರೀರಾಜಾದಿತ್ಯನಱ್ತಿಯಿಂ ವಿರಚಿಸಿದಂ ॥

ಗ್ರಂಥಾವತಾರದಲ್ಲಿ "ಜಿನಪತಿ ರಾಜಾದಿತ್ಯಂಗೆ ಮಾಟ್ಕೆ ಮತಿವಿಕಸನಮಂ" ಎಂದು ನೇಮಿಜಿನನನ್ನು ಸ್ತುತಿಸಿದ್ದಾನೆ. ಅಧಿಕಾರಗಳ ಕೊನೆಯಲ್ಲಿ

ಇದು ಶುಭಚಂದ್ರದೇವಯೋಗೀಂದ್ರಪಾದಾರವಿಂದಮತ್ತಮಧುಕರಾಯಮಾನ ಮಾನಸಾನಂದಿತಸಕಲಗಣಿತತತ್ತ್ವವಿಳಾಸಂ ವಿನೇಯಜನವಿನುತಂ ಶ್ರೀರಾಜಾದಿತ್ಯವಿರಚಿತಮಪ್ಪ ವ್ಯವಹಾರಗಣಿತದೊಳ್

ಎಂಬ ಗದ್ಯವಿದೆ. ಈ ಗ್ರಂಥದಲ್ಲಿ ಪ್ರತಿಪಾದಿತವಾದ ವಿಷಯಗಳು: ಸಹಜ ತ್ರಯರಾಶಿ, ವ್ಯಸ್ತತ್ರಯರಾಶಿ, ಸಹಜಪಂಚರಾಶಿ, ವ್ಯಸ್ತಪಂಚರಾಶಿ, ಸಹಜ ಸಪ್ತರಾಶಿ, ವ್ಯಸ್ತಸಪ್ತರಾಶಿ, ಸಹಜನವರಾಶಿ, ವ್ಯಸ್ತನವರಾಶಿ, ಪದಪಿನ ಸೂತ್ರ, ಬಣ್ಣಾಂತರದ ಸೂತ್ರ, ಹೊದೆಯುಂಬಿನ ಸೂತ್ರ, ವಿಧುರೆ, ತೂಬಿನ ಸೂತ್ರ. ಹರವರಿಯ ಸೂತ್ರ, ಚಕ್ರಬಡ್ಡಿ, ಇತ್ಯಾದಿ.[1]

ನಮಗೆ ತಿಳಿದಮಟ್ಟಿಗೆ ಕನ್ನಡದಲ್ಲಿ ಗಣಿತಶಾಸ್ತ್ರವನ್ನು ಬರೆದಿರುವ ಕವಿಗಳಲ್ಲಿ ಇವನೇ ಮೊದಲನೆಯವನು. ಈತನು ಗಣಿತಶಾಸ್ತ್ರಕ್ಕೆ ಸಂಬಂಧಪಟ್ಟ ಪ್ರಾಯಶಃ ಎಲ್ಲಾ ವಿಷಯಗಳನ್ನೂ ತನ್ನ ಗ್ರಂಥಗಳಲ್ಲಿ ತಕ್ಕಮಟ್ಟಿಗೆ ಪ್ರತಿಪಾದಿಸಿದ್ದಾನೆ. ಈ ಶಾಸ್ತ್ರವನ್ನು ಜನಗಳಿಗೆ ಸುಖಬೋಧವಾಗುವಂತೆ ಪದ್ಯರೂಪವಾಗಿ ಬರೆವುದು ಕಷ್ಟ. ಆದರೂ ಈ ಕವಿ ಸೂತ್ರಗಳನ್ನೂ ಉದಾಹರಣೆಗಳನ್ನೂ ಬಹಳ ಲಲಿತ ವಾದ ಪದ್ಯಗಳಲ್ಲಿ ಚೆನ್ನಾಗಿ ಅವಗಾಹನವಾಗುವಂತೆ ಬರೆದಿದ್ದಾನೆ. ಈ ಪದ್ಯಗಳ ಬಂಧದಿಂದ ಈತನಿಗೆ ಗಣಿತಶಾಸ್ತ್ರಪ್ರವೀಣತೆಯೇ ಅಲ್ಲದೆ ಕವಿತಾಪ್ರೌಢಿಯೂ ಉಂಟೆಂಬುದು ವ್ಯಕ್ತವಾಗುತ್ತದೆ.

ಈ ಗ್ರಂಥದಿಂದ ಕೆಲವು ಸೂತ್ರಗಳನ್ನೂ ಪ್ರಶ್ನೆಗಳನ್ನೂ ಉದ್ಧರಿಸಿ ಬರೆಯುತ್ತೇವೆ:—

ಸೂತ್ರ.—ಶತಫಳಯುಗಳಾಂತರದಿಂ | ಗತಮಾಸಮನಿಱಿದು ಪಡೆದ ಲಾಭದ ಪೊನ್ನಂ |
ಹೃತಿಗೆಯ್ದು ಲಬ್ಧದಿಂದಂ | ಶತಮಂ ಮೋದಿದೊಡೆ ಬರ್ಕುಮಾಮೂಲಧನಂ ||
|| 248 ||

ಪ್ರಶ್ನೆ.—ತ್ರಿಕಶತದೆ ಕೊಂಡು ತಾಂ ಪಂ | ಚಕಶತದಿಂ ಕೊಟ್ಟು ಲಾಭಮಱುವತ್ತಚ್ಚಂ |
ಪ್ರಕಟಮೆನೆ ಪಡೆಯೆ ಬರಿಸ | ಕ್ಕಕಳಂಕಚರಿತ್ರ ಮೊದಲ ಪೊನ್ನೆನಿತಕ್ಕುಂ ? ||249||

ಗದ್ಯಾಣ ೧೦೦. ತಿಂಗಳು ೧. ಬಡ್ಡಿಗದ್ಯಾಣ ೩.

ಗ|| ೧೦೦. ತಿಂಗಳು ೧. ಬಡ್ಡಿ ಗ|| ೫.

ಮೊದಲು ಗ||—೦೦. ತಿಂಗಳು ೧೨. ಲಾಭ ಗ|| ೬೦. [ಲಬ್ಧ. ಮೊದಲು ಗ|| ೨೫೦

ಟೀಕು.—ಲಾಭದ ೬೦ನು ೧೦೦ ಱಿಂ ಗುಣಿಸಿರಿಸಿ, ಮತ್ತೆ ಬಡ್ಡಿ ಗ|| ೫ ಲ್ಲಿ ಗ|| ೩ ಬಡ್ಡಿಯಂ ಕಳೆದು ಉೞಿದ ೨ ಱಿಂ ತಿಂಗಳು ೧೨ ನಿಱಿದು ಗುಣಿಸಲ್ ೨೪ ಹಾರವಂ ಮಾಡಿ ಭಾಗಿಸಲ್ ತಪ್ಪದು.

## ಪ್ರಶ್ನೆಗಳು.

ಮೂಱುದಿವಸಕ್ಕೆ ಖಂಡುಗ | ದಾಱುಂ ಕೊಳಗಂಗಳೆರಡು ಬಳ್ಳಂ ಮಾನಂ |
ಮೂಱಾಗಲ್ ಬರಿಸದ ಮೇ | ಲಾೞುಂ ದಿವಸಕ್ಕೆ ಭತ್ತ ತಾನೆನಿತಕ್ಕುಂ || 250 ||

1. ನಮಗೆ ದೊರೆತ ಪ್ರತಿ ಶಿಥಿಲವಾಗಿದ್ದುದರಿಂದ ಗ್ರಂಥದಲ್ಲಿ ಪ್ರತಿಪಾದಿತವಾದ ವಿಷಯಗಳನ್ನೆಲ್ಲಾ ಕಂಡುಹಿಡಿಯಲಾಗಲಿಲ್ಲ.

ನೂಱುಪ್ಪತ್ತಯ್ದು ಪೊನ್ನುಂ। ಮೂಱೊಪ್ಪುವುದರ್ಕೆ ವಟ್ಟಮಿರ್ಪತ್ತಮಡ್ಡಂ।
ಮೂಱುಂ ವೀಸಮೆನಲ್ಕೀ। ಬ್ಬೂಱುಂ ಪೊನ್ವಟ್ಟಮುಱದು ತಾನೆನಿತಕ್ಕುಂ ॥ 251 ॥
ಕರಿ ನೂಱಿಂಟುಮನೆಯ್ದು ಕಾವ ದಿವಸಕ್ಕೀರೊಂದು ಗದ್ಯಾಣವುಂ।
ಸ್ಥಿರವಿಾವೆಂ ನಿನಗೆಂದೊಡೊಂದು ದಿವಸಕ್ಕೊಂದಾನೆಯುಂ ಮಾಱಲಾ ॥
ಕರಿಯಾರೋಹಕರಿರ್ಪತ್ತಯ್ದುದಿವಸಂ ಕಾದೊಲ್ಲೆನೆಂದಾಗಳಿ।
ರ್ಬರ ಸಂವಾದದ ಲೆಕ್ಕಮಂ ತಿಳಿಯೆ ಪೇೞ್ ನಿರ್ವ್ಯಾಜದಿಂ ಭಾಸ್ಕರಾ ॥ 252 ॥

ಕರಿ ೧೦೮. ದಿನ ೧ಕ್ಕೆ ಕೂಲಿ ಗದ್ಯಾಣ ೧. ದಿನ ೧. ಮಾಱಿದಾನೆ ೧.
ಈ ಲೆಕ್ಕದಲ್ಲಿ ದಿನ ೨೫ ಕ್ಕೆ ಲಬ್ಧ ಗ॥ ೨೨ ೨ ವಿ ೪.

ಟೀಕು.—ಮೊದಲ ಪ್ರಮಾಣಿನ ೧೦೮ ನೂ ಗ॥ ೧ ನೂ ಕೂಡಲು ೧೦೯ ನು ದಿನ ೨೫ ಱಿಂ ಗುಣಿಸಲು ೨೭೨೫. ಇದಂ ಪ್ರತಿಯನಿಟ್ಟು ಆ ಕಡೆಯ ದಿನ ೨೫ ನು ವರ್ಗಂಗೊಂಡು ಅದಱೊಳಗೆ ಆ ದಿನ ೨೫ ನು ಕೂಡಿ ಅರ್ಧಿಸಲು ೩೨೫. ಇದಂ ಮುನ್ನ ಪ್ರತಿಯಿಟ್ಟ ೨೭೨೫ ಱಲ್ಲಿ ಕಳೆಯಲು ೨೪೦೦. ಇದಂ ಆದಂತಿ ೧೦೮ ಱಿಂ ಭಾಗಿಸಲು ತಪ್ಪದು.

## ದಾಳಿಂಬದ ಬೀಜವನರಿವುದಕ್ಕೆ ಸೂತ್ರ.

ಎಸಟಿನಿಱದೆತ್ತು ನಯದಿಂ। ರಸಕೃತಿಯಿಂ ಬೀಜಮಕ್ಕುಮವು ದಾಳಿಂಬ।
ಕ್ಕೆಸೆಗುಂ ಗುಣಿತಕ್ರಮದಿಂ। ವಸ ಮತಿಗಱವಂತೆ ಪೇೞ ಗಣಿತವಿಳಾಸಾ ॥253॥

ದಾಳಿಂಬದ ಕಾಯ್ ೧ಕ್ಕೆ ಎಸಟ್ ೫ಕ್ಕೆ ಲಬ್ಧ ಬೀಜ ೩೬೦.

ಟೀಕು.—ಎಸಟ್ ೫ನು ೨ಱಿಂ ಗುಣಿಸಿದೊಡೆ—೧೦. ರಸಕೃತಿಯಿಂದೆ ವರ್ಗಂಗೊಳಲು ೩೬. ಇದಂ ೧೦ಱಿಂ ಗುಣಿಸಲು ೩೬೦.

## ಪರಿಭಾಷೆ.

ಕಾಗಿಣಿ ನಾಲ್ಕುಂ ವೀಸಮು। ದಾಗಿರ್ಕುಂ ವೀಸಮಯ್ದು ಪಾಗಮೆನಿಕ್ಕುಂ।
ಪಾಗಂ ನಾಲ್ಕಱೊಳಿ ಪಣಂ। ಪ್ರಾಗುಕ್ತಂ ದಶಪಣಂಗಳಿಂ ಗದ್ಯಾಣಂ ॥ 254 ॥

## ಪೂವಿನಬಾಗೆ.

ವನತತಿಯಿಂ ನದೀನದಕುಭೃತ್ಕುಲದಿಂ ಧನಧಾನ್ಯವರ್ಗದಿಂ।
ಜನಪದರಾಜಿಯಿಂ ಬೆಳೆವ ಕೆಯ್ದೊಲದಿಂದೆಸೆವೂರ್ಗಳಿಂ ಜಗ॥
ಜ್ಜನನುತಜೈನಧರ್ಮದ ನೆಗೞ್ತೆಯಿನೊಪ್ಪಿರೆ ಕೂಂಡಿಮಂಡಲ।
ಕ್ಕನುಪಮರತ್ನಮಂಡನಮೆನಿಪ್ಪುದು ಪೂವಿನಬಾಗೆ ಸಂತತಂ ॥ 255 ॥
ಆವೆಡೆಯೊಳ್ ಮನಂಬಯಸಿ ಪಾಂಥಜನಂ ನಿಲಲಲ್ಲಿ ಗಲ್ಲಿಗ।
ಬ್ಬಾವಳಿಯಲ್ಲಿಗಲ್ಲಿಗೆ ಸುಸೌರಭದಿಂದೆಸೆದಿರ್ಪ ಪುಷ್ಪವಾ ॥

ಟಾವಳಿಯಲ್ಲಿಗಲ್ಲಿಗೆ ನವಭ್ರಮರಾವಳಿ ಹಂಸಭೃಂಗಕೀ ।
ರಾವಳಿಯಿಂದಮೊಪ್ಪುವುದು ಬಾಗೆಯದೊಂದು ಮಹೀಪ್ರದೇಶದೊಳ್ ॥ 256 ॥

ಪೊಸ ಪೊಂಗೇದಗೆ ಜಾಜಿ ಪಾಟಲಿ ಲಸತ್ಸೇವಂತಿ ನೀಲಾಬ್ಜಮು ।
ದ್ಘಸರೋಜಂ ಸುರಹೊನ್ನೆ ಸಂಪಗೆ ನವೋದ್ಯನ್ಮಲ್ಲಿಕಾದಿಪ್ರಸೂ ॥
ನ........ಸಿನಿಂ ದೆಸೆಗೆ..ನಿಚ........ನನ್ವರ್ಥಮಾ ।
ಗೆಸೆಗುಂ ಪೂವಿನಬಾಗೆಯೆಂಬ ಪೆಸರಿಂದಿಂಬಾಗಿ ಚೆಲ್ವಾಗಿರಲ್ ॥ 257 ॥

## 2. ಕ್ಷೇತ್ರಗಣಿತ.

ಈ ಗ್ರಂಥದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ—

ವೃತ್ತಾಕಾರದ ಭೂಮಿಯ । ಸುತ್ತಳೆದರ್ಧಮನೆ ಬಿಡುವುದು ಬಿಾದರ್ಧದೊಳಂ ।
ಮತ್ತೆರಡು ಭಾಗಮಾಡಿಯೆ । ಮತ್ತೊಂದಱೊಳೊಂದನೊತ್ತೆ ಕಂಭಂ ಬರ್ಕುಂ ॥ 258 ॥

ಅತಿವೃತ್ತಮರ್ಧಚಂದ್ರಾ । ಕೃತಿಯಾಗಿರೆ ಕ್ಷೇತ್ರಮದಱೊಳೊಂದಂ ಕೊಂಡಾ ।
ಗತಿಭಾಗೆಯೊಳೊಂದಂ ಕೊಂ।ಡತಿಶಯದಿಂ ರವಿಯ ಗುಣಿಸೆ ಸಮಪದಮಕ್ಕುಂ ॥259॥

ವೃತ್ತದ ವಳಯಮನಳೆದಾ।ಮೊತ್ತವ ಗುಣದಿಂದಮೆತ್ತಿ ಬಂದಾಲಬ್ಧಮ ।
ನೊತ್ತುತೆ ತನ್ನಿಂ ತನ್ನಂ।ಬಿತ್ತರದಿಂ ಗತಿಯೊಳೆತ್ತೆ ಬಂದುದು ಕಂಭಂ ॥ 260 ॥

## 3. ವ್ಯವಹಾರರತ್ನ.

ಇದರಲ್ಲಿ 5 ಅಧಿಕಾರಗಳಿವೆ. ಇದರಿಂದ ಒಂದು ಪ್ರಶ್ನೆಯನ್ನು ಹಿಂದೆಯೇ ಉದಾಹರಿಸಿದ್ದೇವೆ.

## 4. ಜೈನಗಣಿತಸೂತ್ರೋದಾಹರಣ

ಇದರಲ್ಲಿ ಪ್ರಶ್ನೆಗಳನ್ನು ಕೊಟ್ಟು ಉತ್ತರವನ್ನು ಪಡೆವ ವಿಧಾನವನ್ನು ತೋರಿಸಿದ್ದಾನೆ. ಗ್ರಂಥಾರಂಭದಲ್ಲಿ ನೇಮಿಜಿನೇಶನನ್ನು ಸ್ತುತಿಸುವ ಈ ಪದ್ಯವಿದೆ:—

ಶ್ರೀಮದವಿಚಳಿತಲಕ್ಷ್ಮೀ । ಪ್ರೇಮಂ ತ್ರೈಲೋಕ್ಯಧಾಮನಾನತಶಕ್ರಂ ।
ಸೋಮಂ ಸ್ವಾಧೀನಮುಖಂ । ನೇಮಿಜಿನಂ ಮಾೞ್ಕೆ ನಮಗೆ ಬೋಧೋದಯಮಂ ॥ 261 ॥

## 5. ಚಿತ್ರಹಸುಗೆ.

ಇದು ಸೂತ್ರಟೀಕಾರೂಪವಾಗಿದೆ.

## 6. ಲೀಲಾವತಿ.

ಇದು ಪದ್ಯರೂಪವಾಗಿದೆ. ಲೆಕ್ಕಗಳನ್ನು ಮಾಡಿ ತೋರಿಸಿದೆ.

## ಮೌಕ್ತಿಕಕವಿ. ಸು. 1120.

**ಚಂದ್ರನಾಥಾಷ್ಟಕವೆಂಬ ಗ್ರಂಥದ ಅಂತ್ಯದಲ್ಲಿರುವ**

ಕೃತಕೃತ್ಯಂ ಮೌಕ್ತಿಕಂ ಸತ್ಕವಿ ವಿರಚಿಸಿದೀಸಾರಮಪ್ಪಷ್ಟಕಶ್ರೀ ।
ಸ್ತುತಿಯಂ ಪೇೞ್ದುದುವಾಲಿಪ್ಪವರ್ಗೆ ನಿರುಪಮಾನಂದಮಂ ಮಾೞ್ಕೆ ಸೀತಾ ॥
ಪತಿರಾಮಸ್ಥಾಪಿತೋದ್ಯತ್ತ್ರಿಭುವನತಿಲಕಾಲಂಕೃತಖ್ಯಾತಿನಾಮಾಂ ।
ಕಿತಮಾಗೊಪ್ಪಿರ್ಪ ಪೆಣ್ಣೆಂಗಡಲಪುರವರಾಧೀಶ್ವರಂ ಚಂದ್ರನಾಥಾ ॥

ಎಂಬ ಪದ್ಯದಿಂದ ಈ ಅಷ್ಟಕವನ್ನು ಬರೆದವನು ಮೌಕ್ತಿಕಕವಿಯೆಂದು ತೋರುತ್ತದೆ. ಇಲ್ಲಿ ಹೇಳಿರುವ ಪೆಣ್ಣೆಂಗಡಲು ಅಥವಾ ಹೆಣ್ಣೆಗಡಲು ಎಂಬ ಸ್ಥಳವು ಜೈನರಾದ ಕೊಂಗಾಳ್ವರ ರಾಜ್ಯಕ್ಕೆ ಸೇರಿದ್ದಿತು. ಇದನ್ನು ವೀರಕೊಂಗಾಳ್ವದೇವನು ಸುಮಾರು 1120 ರಲ್ಲಿ ಮೇಘಚಂದ್ರನ ಶಿಷ್ಯನಾದ ಪ್ರಭಾಚಂದ್ರಸಿದ್ಧಾಂತದೇವನಿಗೆ ದಾನವಾಗಿ ಕೊಟ್ಟಂತೆ ಒಂದು ಶಾಸನದಿಂದ [1] ತಿಳಿಯುತ್ತದೆ. ಸುಮಾರು 1189 ರಲ್ಲಿ ಈ ಸ್ಥಳದೊಳಗೆ ಶೈವರು ಪ್ರಬಲರಾಗಿದ್ದಂತೆ ಇತರ ಶಾಸನಗಳಿಂದ [2] ತಿಳಿವುದರಿಂದ ಅಲ್ಲಿ ಜೈನರ ಪ್ರಾಬಲ್ಯದ ಕಾಲವು ಸುಮಾರು 1120 ಆಗಿರಬಹುದು. ಆ ಕಾಲವನ್ನೇ ಕವಿಗೆ ಕೊಟ್ಟಿದ್ದೇವೆ.

ಈ ಗ್ರಂಥದಲ್ಲಿ 9 ವೃತ್ತಗಳಿವೆ; ಪ್ರತಿವೃತ್ತವೂ ಚಂದ್ರನಾಥ ಎಂದು ಮುಗಿಯುತ್ತದೆ. ಇದರಿಂದ ಒಂದು ಪದ್ಯವನ್ನು ಉದ್ಧರಿಸಿ ಬರೆಯುತ್ತೇವೆ:—

ಕುಮತೋಗ್ರಗ್ರೀಷ್ಮತಪ್ತಂಗಿದು ಹಿಮಕರಬಿಂಬಂ ಪರಸ್ತೋತ್ರಪಿತ್ತ ।
ಭ್ರಮಹೃಜ್ಜಿಹ್ವಂಗೆ ಸೌಧಂ ಕಬಳಮನ್ನತದುರ್ವಾಸನಾವಾಸಿತಾತ್ಮಂ ॥
ಗಮಳಾಂಭೋಜಂ ಕುದೃಷ್ಟ್ಯಾಮಯಿಗಿದು ಘನಸಾರಾಂಜನಂ ಕುಶ್ರುತಾನಾ ।
ಗಮದುರ್ಮಂತ್ರಂಗೆ ನಿನ್ನಾಕೃತಿಯಿದಮೃತಬೀಜಾಕ್ಷರಂ ಚಂದ್ರನಾಥಾ ॥

---

## ಮಾದಿರಾಜ. 1123.

ದಾವಣಗೆರೆಯ 2 ನೆಯ ಶಾಸನದ (ಚಾಳುಕ್ಯ ವಿಕ್ರಮವರ್ಷ 48 ಶೋಭಕೃತ್) ಕೊನೆಯಲ್ಲಿ 'ಕವಿಮಾದಿರಾಜಂ ಬರೆದಂ' ಎಂದಿದೆ. ಈ ಮಾದಿರಾಜನು ಆವ ಗ್ರಂಥಗಳನ್ನು ಬರೆದಿದ್ದಾನೆಯೋ ತಿಳಿಯದು.

---

1 *Mysore Archæological Report* for 1913, para 64.

2. Arkalgūḍ 79 and 81.

## ಮಹಾಪ್ರಭು ಕೇಶಿರಾಜ. 1124.

ಚೆನ್ನಗಿರಿಯ 61 ನೆಯ ಶಾಸನದಲ್ಲಿ (ಚಾಳುಕ್ಯ ವಿಕ್ರಮವರ್ಷ 48 ಕ್ರೋಧಿ) ಒಬ್ಬ ಕೇಶಿರಾಜನನ್ನು 'ವಿಬುಧಜನವನಜವನಕಳಹಂಸಂ' 'ಸರಸ್ವತೀ ಕಂಠಾವತಂಸಂ' ಎಂದು ಹೊಗಳಿದೆ. ಈ ಬಿರುದುಗಳನ್ನು ನೋಡಿದರೆ ಈತನು ಕವಿಯಾಗಿದ್ದಿರಬಹುದೆಂದು ತೋರುತ್ತದೆ. ಈತನನ್ನು ಸ್ತುತಿಸುವ ಪದ್ಯಗಳಲ್ಲಿ ಒಂದೆರಡನ್ನು ತೆಗೆದು ಬರೆಯುತ್ತೇವೆ:—

ಪುರುಷಾರ್ಥದ ಕಣಿ ಸತ್ಯದ। ಕರು ಪೆರ್ಮೆಯ ನೆರ್ಮವೆಂದು ವಿಬುಧಾಗ್ರಣಿಗಳ್।
ಕರಮುಱ್ತಯಿಂದೆ ಪೊಗೞ್ವಿಲ್। ಧರೆಗೆಸೆದಂ ಕೇಶಿರಾಜನೂರ್ಜಿತತೇಜಂ॥
ವಿನಯನಿಧಾನನೂರ್ಜಿತಮಹಾಮಹಿಮಾಸ್ಪದನಬ್ಧಿವೇಷ್ಟಿತಾ।
ವನಿತಳಪೂಜ್ಯನಿಷ್ಟಜನಕಲ್ಪಮಹೀರುಹನೇಕವಾಕ್ಯನೆಂ॥
ದನುನಯದಿಂ ಬುಧರ್ ಪೊಗೞ್ವರಾಗಳುಮಾ ನೆಗೞ್ದರ್ದ ಕೇಶಿರಾ।
ಜನನಿನತೇಜನಂ ದ್ವಿಜಸರೋಜನಸಾಶ್ರಿತಕಲ್ಪಭೂಜನಂ॥

---

## ಕೀರ್ತಿವರ್ಮ. ಸು. 1125.

ಈತನು ಗೋವೈದ್ಯವನ್ನು ಬರೆದಿದ್ದಾನೆ. ಈ ಗ್ರಂಥದಲ್ಲಿರುವ—

ಜನನಾಪ್ತಂ ಗುರು ದೇವಚಂದ್ರಮುನಿಪಂ ತ್ರೈಲೋಕ್ಯಮಲ್ಲಾಧಿಪಂ।
ಜನಕಂ ಪಾಲಭವಂದ್ಯ........ ವಾಕ್ಛ್ರೀವರಂ ವಿಕ್ರಮಾಂ॥
ಕನರೇಂದ್ರಂ ತನಗಗ್ರಜಾತನೆನಲಂತಾರ್ ನೋಂತರೀಕೀರ್ತಿವ।
ರ್ಮನರೇಂದ್ರಂಬರಮೆಂದು ಧಾತ್ರಿ ಪೊಗೞ್ಗುಂ ನಿಚ್ಚಂ ಮಹೋತ್ಸಾಹದಿಂ॥

ಎಂಬ ಪದ್ಯದಿಂದ ಈತನ ತಂದೆ ತ್ರೈಲೋಕ್ಯಮಲ್ಲಾಧಿಪ, ಅಣ್ಣ ವಿಕ್ರಮಾಂಕ ನರೇಂದ್ರ, ಗುರು ದೇವಚಂದ್ರಮುನಿ, ಇಷ್ಟದೇವತೆ ಜಿನ ಎಂದು ತಿಳಿಯುತ್ತದೆ. ಸುಮಾರು ಈ ಕವಿಯ ಸಮಕಾಲದವನಾದ ಬ್ರಹ್ಮಶಿವಕವಿ ತನ್ನ ಸಮಯ ಪರೀಕ್ಷೆಯಲ್ಲಿ ಈತನ ವಿಷಯವಾಗಿ ಮೇಲೆ ಹೇಳಿದ ಅಂಶಗಳನ್ನು ಈ ಪದ್ಯಗಳಲ್ಲಿ ಹೇಳಿದ್ದಾನೆ—

ಜನತಾನಂದಂ ಚಳುಕ್ಯಾಭರಣನವನಿಪಾಳೋತ್ತಮಂ ಸಾರ್ವಭೌಮಂ।
ಜನಕಂ ತ್ರೈಲೋಕ್ಯಮಲ್ಲಂ ಸಕಳವಸುಮತೀವಲ್ಲಭಂ ವಿಕ್ರಮಾಂಕಾ॥
ವನಿಪಂ ತಾನಗ್ರಜಾತಂ ತ್ರಿಭುವನಪತಿ ದೇವಾದಿದೇವಂ ಜಿನೇಂದ್ರಂ।
ತನಗಾಪ್ತಂ ಮತ್ತೆನಲ್ಕೇಂ ಪಿರಿಯನೊ ಜಗತೀನಾಥರೊಳ್ ಕೀರ್ತಿವರ್ಮಂ॥
ಅರಸುಮಗಂ ಗಡ ಕವಿ ಗಡ। ಪಿರಿದೀವಂ ಗಡ ಬೞಿಕ್ಕೆ ಜೈನಂ ಗಡೆನಲ್।
ಧರಣಿಪತಿ ಕೀರ್ತಿವರ್ಮಂ। ನಿರತಂ ಪೊನ್ ಕಮ್ಮಿತಾದುದೆನಿಸಿದನಿಳೆಯೊಳ್॥

ಇದರಿಂದ ಕೀರ್ತಿವರ್ಮನು ಚಾಳುಕ್ಯರಾಜರ ವಂಶದಲ್ಲಿ ಹುಟ್ಟಿದವನೆಂದು ವ್ಯಕ್ತವಾಗುತ್ತದೆ. ಆ ರಾಜರಲ್ಲಿ ತ್ರೈಲೋಕ್ಯಮಲ್ಲನು 1042 ರಿಂದ 1068 ರ ವರೆಗೆ ಆಳಿದಂತೆಯೂ ಅವನ ಮಗನಾದ ವಿಕ್ರಮಾದಿತ್ಯನು 1076 ರಿಂದ 1126 ರ ವರೆಗೆ ಆಳಿದಂತೆಯೂ ತಿಳಿಯುತ್ತದೆ. ಈ ವಿಕ್ರಮಾದಿತ್ಯನೇ ಕವಿಯ ಅಣ್ಣನಾಗಿರಬೇಕು. ಆದುದರಿಂದ ಕವಿ ಸುಮಾರು 1125 ರಲ್ಲಿ ಇದ್ದಿರಬಹುದು. ಮೇಲೆ ಹೇಳಿದ ವಿಕ್ರಮಾದಿತ್ಯನಿಗೆ ಜಯಸಿಂಹ III, ವಿಷ್ಣುವರ್ಧನವಿಜಯಾದಿತ್ಯ, ಎಂಬ ಇಬ್ಬರು ತಮ್ಮಂದಿರಿದ್ದರು. ಇವರಲ್ಲಿ ಕವಿ ಒಬ್ಬನಾಗಿರಬಹುದೋ ಏನೋ ತಿಳಿಯದು. ತ್ರೈಲೋಕ್ಯಮಲ್ಲನಿಗೆ ಕೇತಲದೇವಿಯೆಂಬ ಜೈನಧರ್ಮಾನುಸಾರಿಣಿಯಾದ ಪತ್ನಿಯೊಬ್ಬಳು ಇದ್ದಂತೆಯೂ ಆಕೆ ಕೆಲವು ಜಿನಾಲಯಗಳನ್ನು ಕಟ್ಟಿಸಿದಂತೆಯೂ ತಿಳಿಯಬರುತ್ತದೆ.[1] ಕವಿ "ಜಿನನಾಪ್ತಂ" ಎಂದು ಹೇಳಿಕೊಂಡಿರುವುದರಿಂದ ಈಕೆಯ ಮಗನಾಗಿದ್ದಿರಬಹುದು. ಶ್ರ. ಬೆ. 64 ನೆಯ ಶಾಸನದಲ್ಲಿ (1163) ಗುರುಪರಂಪರೆಯನ್ನು ಹೇಳುವಾಗ ರಾಘವಪಾಂಡವೀಯವನ್ನು ಬರೆದ ಶ್ರುತಕೀರ್ತಿತ್ರೈವಿದ್ಯನ ಸಮಕಾಲಿಕನಾದ ಒಬ್ಬ ದೇವಚಂದ್ರಮುನಿಯನ್ನು ಸ್ತುತಿಸಿದೆ. ಈತನೇ ಕವಿಯ ಗುರುವಾಗಿರಬಹುದು. ಈ ಕವಿ—ಕೀರ್ತಿಚಂದ್ರ, ವೈರಿಕರಿಹರಿ, ಕಂದರ್ಪಮೂರ್ತಿ, ಸಮ್ಯಕ್ತ್ವರತ್ನಾಕರ, ಬುಧಭವ್ಯಬಾಂಧವ, ವೈದ್ಯರತ್ನ, ಪಾಲಭವಂದ್ಯ, ಕವಿತಾಬ್ಧಿಚಂದ್ರಮ, ಕೀರ್ತಿವಿಳಾಸ—ಎಂದು ತನ್ನನ್ನು ವಿಶೇಷಿಸಿ ಹೇಳಿಕೊಂಡಿದ್ದಾನೆ.

ಇವನ ಗ್ರಂಥ

## ಗೋವೈದ್ಯ.

ನಮಗೆ ದೊರೆತ ಪ್ರತಿ ಅಸಮಗ್ರ, ಮತ್ತು ಅಶುದ್ಧ. ಈ ಪ್ರತಿಯ ಆದಿಭಾಗದಲ್ಲಿ ಮೂವತ್ತುಮೂರು ಓಲೆಗಳ ವರೆಗೆ ಕೆಲವು ಪದ್ಯಗಳಿವೆ. ಉಳಿದ ಐವತ್ತು ಓಲೆಗಳಲ್ಲಿ ಗದ್ಯರೂಪವಾಗಿ ಗೋಗಳ ವ್ಯಾಧಿಗಳಿಗೆ ಔಷಧಗಳೂ ಯಂತ್ರಗಳೂ ಬರೆಹಾಕುವ ಕ್ರಮಗಳೂ ವಿಸ್ತಾರವಾಗಿ ಹೇಳಿವೆ. ಕೆಲವು ಪದ್ಯಗಳನ್ನೂ ಕೊನೆಯ ಗದ್ಯವನ್ನೂ ಪ್ರತಿಯಲ್ಲಿ ಇದ್ದ ಹಾಗೆ ಬರೆಯುತ್ತೇವೆ.

ಆದಿಯಲ್ಲಿ—

ಬಡವಂ ಕೊಬ್ಬಿದ ಬಂಜೆಯ। ನುಡುಗದೆ ಹಯಮಾಡಿ ಕಟ್ಟಿವ ತೆಜಿನಂ ಕುತ್ತಂ।
ಬಿಡುವಂತು ವೈರಿಕರಿಹರಿ। ನುಡಿದಂ ಕಂದರ್ಪಮೂರ್ತಿ ಕೀರ್ತಿವಿಲಾಸಂ॥

ಎಂಬ ಪದ್ಯವಿದೆ.

ಅಂತ್ಯದಲ್ಲಿ—

1. *Ind. Ant.*, XIX, 268.

ಇದು ದೇವೇಂದ್ರಮುನೀಂದ್ರಚಂದ್ರಪಾದಾರವಿಂದಾಮುಂದಮರಂಧಮಧುಕರಾಯಮಾನ.............ದೆ ಸುಧಾಚಾರಿತ್ರ ಮೇಘಚಂದ್ರಸಿದ್ಧಾಂತದೇವರವಿಂದಾರಕಂ ಕವಿತಾಬ್ಧಿಚಂದ್ರಮಂ

ಎಂಬ ಅಬದ್ಧವಾದ ಗದ್ಯವಿದೆ.

ಪದ್ಯಗಳು.

ಬಡಿಯದೆ ಭಾರಮಂ ಪಿರಿದನಿಕ್ಕದೆ ಮೇಹುಜ(ಲ)ಂಗಳೆಂಬಿವಂ ।
ಕುಡದವಜುಂದಕ್ಕಟಂ ಬರದು ನೀಳದೆ ಕಾಯದೆ ಗೋಕುಲಂಗಳಂ ॥
ಬಡವನಜುಯದಂತು ಕಡುಗರುವಿಸಮಾನರಾಯುಂ ಲಕ್ಷ್ಮಿಯ(ಂ) ।
ಪಡೆದ (ಪ) ರಂದು ಪೇಟ್ಟನುದಿತೋತ್ಸವದಿಂ ಬುಧಭವ್ಯಬಾಂಧವಂ ॥ 263 ॥

ಅಧಿಕಂ ರಕ್ತಪ್ರಭಂ ಕಾಲಚನನಮುರ್ವಿರೆ ಅಂತಸ್ತಸತ್ತ್ವಾ ।
ಜಡಜೀವಧನಂ ನೋಡಲ್ ಬಹಿಃಪ್ರಾಣಮುನಡೆನಿದಾನಂ ಜಗಕ್ಕೆಂದು ಕಾವ್ಯಂ ॥
ಬುದೂಸದವೈದ್ಯರತ್ನಂ ದೆಸೆದೆಸೆಗಸೆಯಲ್ ಪೇಟ್ಟನುತ್ಸಾಹದಿಂಮಿ ।
ತಧರಾವಿಕ್ಕದರಪಾಲಭವಂದ್ಯಂ ಸಹಜಕವಿಜಿತೋತ್ಸಾಹನಂ ಕೀರ್ತಿಚಂದ್ರಂ ॥ 264 ॥

---

## ಬ್ರಹ್ಮಶಿವ. ಸು. 1125.

ಇವನು ಸಮಯಪರೀಕ್ಷೆಯನ್ನೂ ತ್ರೈಲೋಕ್ಯಚೂಡಾಮಣಿಸ್ತೋತ್ರವನ್ನೂ ಬರೆದಿದ್ದಾನೆ. ಈತನು ಜೈನಕವಿ; ವತ್ಸಗೋತ್ರದವನು; ಇವನ ಸ್ಥಳ ಪೊಟ್ಟಣಗೆರೆ; ಇವನ ತಂದೆ ಸಿಂಗರಾಜ. “ಅಗ್ಗಳದೇವನ ಕೆಳೆಯಂ” ಎಂದು ಹೇಳಿಕೊಂಡಿದ್ದಾನೆ. ಈಯಗ್ಗಳದೇವನಾರೋ ತಿಳಿಯದು; ಚಂದ್ರಪ್ರಭಪುರಾಣವನ್ನು ಬರೆದ ಅಗ್ಗಳದೇವನು (1189) ಬೇರೆ ಅಲ್ಲ. ಈತನ ಗುರು ವೀರಣಂದಿಮುನಿ. ಇವನಿಗೆ ‘ಬ್ರಹ್ಮ’ ಎಂಬ ಹೆಸರೂ ಉಂಟು. ಈತನು ಸೌರ, ಕೌಳೋತ್ತರ, ವೇದ, ಸ್ಮೃತಿ, ಮೊದಲಾದುವುಗಳನ್ನು ಓದಿ ಅವುಗಳ ಅಸಾರತೆಯನ್ನು ತಿಳಿದಿರುವಂತೆ—

ಸೌರಂ ಕೌಳೋತ್ತರಮಂ । ಬಾರಾಧನೆಗಳೊಳಮಖಿಳವೇದಸ್ಮೃತಿತ ।
ತ್ಪೌರಾಣಮೆನಿಪ್ಪವಜುಳ । ಸಾರಮನಿಂಬಾಗೆ ಬ್ರಹ್ಮಶಿವಕವಿ ಬಲ್ಲಂ ॥

ಎಂಬ ಪದ್ಯದಲ್ಲಿ ಹೇಳುತ್ತಾನೆ.

ಪಿರಿದಟ್ಟಿಯಿಂದೆ ಮಾಹೇ । ಶ್ವರಧರ್ಮದೊಳವಜುಳೊಳ್ಪುಗಾಣದೆ ಮಗುಳ್ದೀ ।
ಪರಮಜಿನಧರ್ಮದೊಳಪೊ । ಕ್ಕುರಾಗಿಪೊಡೆ ಸುಕವಿ ಬ್ರಹ್ಮ (ಶಿವನೇ ಬಲ್ಲಂ) ॥

ಎಂಬ ಪದ್ಯದಿಂದ ಈತನು ಶೈವಮತವನ್ನು ಅವಲಂಬಿಸಿದ್ದು ಅದರ ಅಸಾರತೆಯನ್ನು ಕಂಡು ತಿರುಗಿ ಜೈನನಾದಂತೆ ಊಹಿಸಬಹುದಾಗಿದೆ.

ತ್ರೈಲೋಕ್ಯಚೂಡಾಮಣಿ ಸ್ತೋತ್ರದ ಅಂತ್ಯದಲ್ಲಿರುವ

ಎಡೆಯಾಡುತ್ತುಮನೂನಜೈನಭವನಕ್ಕಾನಂದದಿಂದಂ ತಳ ।
ರ್ನಡೆಗಲ್ತಿಂ ಪರಮಾಗಮಾಭ್ಯಸನದಿಂದಾಪೊಟ್ಟುಮಾಗಳ್ ತೊದ ॥
ಲ್ನುಡಿಗಲ್ತಿಂ ಕಿಱುಯುಂದು ಪುಣ್ಯವಶದಿಂದಾರಾಜ್ಯಪೂಜ್ಯಾಸ್ಪದಂ ।
ಬಡೆದಾಗಳ್ ಕವಿಚಕ್ರವರ್ತಿವೆಸರಂ ತ್ರೈಲೋಕ್ಯಚೂಡಾಮಣೀ ॥

ಎಂಬ ಪದ್ಯದಿಂದ ಈತನು ರಾಜಮರ್ಯಾದೆಯನ್ನೂ ಕವಿಚಕ್ರವರ್ತಿಯೆಂಬ ಬಿರುದನ್ನೂ ಪಡೆದಂತೆ ತಿಳಿಯುತ್ತದೆ.

ನಮಗೆ ದೊರೆತ ಸಮಯಪರೀಕ್ಷೆಯ ಪ್ರತಿಯಲ್ಲಿ ಮೊದಲನೆಯ ಓಲೆಯಿಲ್ಲ. ಆ ಭಾಗದಲ್ಲಿ ಕವಿಯ ವಿಷಯವಾಗಿ ಆವ ಅಂಶಗಳು ಹೇಳಿವೆಯೋ ತಿಳಿಯದು. ಎರಡನೆಯ ಓಲೆಯಲ್ಲಿ 'ದಾನವಿನೋದೆ' ಯೆಂಬ ಬಿರುದುಳ್ಳ ಒಬ್ಬ ಅತ್ತಿಮಬ್ಬೆಯನ್ನೂ, "ಜಿನಸಮಯವಾರ್ಧಿವರ್ಧನತಾರಾಪತಿ"ಯಾದ ಒಬ್ಬ ರಾಮತರಾಯನನ್ನೂ, ಚಾಳುಕ್ಯರಾಜನಾದ ತ್ರೈಲೋಕ್ಯಮಲ್ಲನ ಮಗ **ಕವಿಕೀರ್ತಿವರ್ಮ**ನನ್ನೂ,[1] ದೇವನಾಗನ ಮಗನಾದ ಆಹವಮಲ್ಲಮಹೀಶನನ್ನೂ ಸ್ತುತಿಸಿ, ಗ್ರಂಥವನ್ನು ಆರಂಭಿಸಿದ್ದಾನೆ. ಇದರಿಂದ ಈ ಕವಿಗೆ ಕೀರ್ತಿವರ್ಮಕವಿ ಸಮಕಾಲದವನಾಗಿದ್ದಿರಬೇಕೆಂದು ತೋರುತ್ತದೆ. ಆದುದರಿಂದ ಈ ಕವಿ ಸುಮಾರು 1125 ರಲ್ಲಿ ಇದ್ದಿರಬಹುದು. ಇವನ ಗುರುವಾದ ವೀರಣಂದಿಮುನಿ 1115 ರಲ್ಲಿ ಗತಿಸಿದ[2] ಮೇಘಚಂದ್ರತ್ರೈವಿದ್ಯನ ಮಗನಾಗಿರಬಹುದು.

ನಮಗೆ ತಿಳಿದ ಮಟ್ಟಿಗೆ ಈತನನ್ನು ಆವ ಕವಿಗಳೂ ಸ್ತುತಿಸಿಲ್ಲ; ಆದರೆ **ಕೇಶಿರಾಜನು** ಶಬ್ದಮಣಿದರ್ಪಣದ 75 ನೆಯ ಸೂತ್ರದ ಕೆಳಗೆ ಈ ಕವಿಯ ಗ್ರಂಥದಲ್ಲಿಯ—

ಪದೆದಾಡಂ ತವೆ ಕೊಂದು ಸಗ್ಗಮನದರ್ಕೊಲ್ವೆವರಂತೀಯುಲಾ ।
ಗದೆ ತತ್ಪುತ್ರಕಳತ್ರಮಿತ್ರನಿವಹಕ್ಕಾಡಿಂದಮಾಬಂಧು ಕೂ ॥
ರದ (ರೇ) ಕೊಂದಡದಿಂಬ ಶಾಸ್ತ್ರದಿನಹಿಂಸಾಲಕ್ಷಣೋ[3] ಧರ್ಮ ಎಂ ।
ಬುದನೀತತ್ವವಿತರ್ವರೇಣ್ಯರಱುದರ್ ತ್ರೈಲೋಕ್ಯಚೂಡಾಮಣೀ[4] ॥

ಎಂಬ ಪದ್ಯದ ಕೊನೆಯ ಭಾಗವನ್ನು ಉದಾಹರಿಸಿದ್ದಾನೆ.

---

1. ಪುಟ 129.
2. ಶ್ರ. ಬೆ ಶಾಸನ 127
3. ಮೊ॥ ಕಿಟ್ಟಲ್ ಮುದ್ರಿಸಿರುವ ಶಬ್ದಮಣಿದರ್ಪಣದಲ್ಲಿ 'ಲಕ್ಷಣೋ' ಎಂಬುದಕ್ಕೆ ಪ್ರತಿಯಾಗಿ 'ಪರಮೋ' ಎಂದು ತಪ್ಪು ಬಿದ್ದಿದೆ.
4. ಈ ಪದ್ಯವು ತ್ರೈಲೋಕ್ಯಚೂಡಾಮಣಿ ಸ್ತೋತ್ರದಲ್ಲಿಯೂ ದೊರೆಯುತ್ತದೆ.

ನಮಗೆ ದೊರೆತ ಭಾಗದಲ್ಲಿ ಪೂರ್ವಕವಿಗಳನ್ನು ಸ್ತುತಿಸುವ ಪದ್ಯಗಳಿಲ್ಲ. ತನ್ನ ಗುಣಾದಿಗಳನ್ನು ಈ ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ—

* * * ಚಳಭೇ । ದನವಜ್ರಂ ಜೈನಮಾರ್ಗನಿಶ್ಚಿತಚಿತ್ತಂ ।
ಜಿನಸಮಯಸುಧಾರ್ಣವವ। ರ್ಧನಚಂದ್ರಂ ಪೇೞ್ದನೆಯೆ ಭವ್ಯರ ಮತದಿಂ ॥
ಜಿನಧರ್ಮಾಮೃತವಾರ್ಧಿವರ್ಧನಶಶಾಂಕಂ ತೀವ್ರಮಿಥ್ಯಾತ್ವಬಂ ।
ಧನಚಂಡಾಂಶು ಕಷಾಯಮೂಢತಿಮಿರಧ್ವಾಂತದ್ವಿಷಂ ಭವ್ಯಮಂ ॥
ಡನನಾನಂದಿತಸನ್ಮುನೀಂದ್ರನಿಕರಂ ರತ್ನತ್ರಯೋದ್ಭಾಸಿ ಸ ।
ಜ್ಜನಸಂಸ್ತುತ್ಯನನಾಪ್ತರಂದಮನೆ ಪೇೞ್ದಂ ಬ್ರಹ್ಮನೀಮಾೞ್ಕೆಯಿಂ ॥

ಈತನ ಗ್ರಂಥಗಳಲ್ಲಿ

## 1. ಸಮಯಪರೀಕ್ಷೆ.

ಇದರಲ್ಲಿ "ಆಪ್ತಾಗಮಧರ್ಮಂ ಅನಾಪ್ತಾಗಮಧರ್ಮಂ" ಎಂಬ ಎರಡನ್ನೂ ಹೇಳಿದ್ದಾನೆ. ಸೌರಶೈವವೈಷ್ಣವಾದಿಮತದವರ ಪುರಾಣಗಳಲ್ಲಿಯೂ ಆಚರಣೆಗಳಲ್ಲಿಯೂ ಇರುವ ದೋಷಗಳನ್ನು ತೋರಿಸಿ, ಜೈನಮತವೇ ಸರ್ವೋತ್ಕೃಷ್ಟವಾದುದೆಂದು ಹೇಳಿದ್ದಾನೆ. ಗ್ರಂಥವು ಮೊದಲಿಂದ ಕಡೆಯವರೆಗೆ ಗದ್ಯಭಾಗವಿಲ್ಲದೆ ಕೇವಲ ಕಂದವೃತ್ತರೂಪವಾಗಿಯೇ ಬರೆದಿದೆ. ಇದು 15 ಅಧಿಕಾರಗಳಾಗಿ ಭಾಗಿಸಲ್ಪಟ್ಟಿದೆ.[1] ಅಧಿಕಾರಗಳ ಕೊನೆಯಲ್ಲಿ—

ಇದು ಭಗವದರ್ಹತ್ಪರಮೇಶ್ವರಚರಣಸ್ಮರಣಪರಿಣತಾಂತಃಕರಣ ವೀರಣಂದಿಮುನೀಂದ್ರಚರಣಸರಸಿರುಹಷಟ್ಚರಣ ಮಿಥ್ಯಾಸಮಯತೀವ್ರತಿಮಿರಚಂಡಕಿರಣ ಸಕಳಾಗಮಾರ್ಥನಿಪುಣ ಮಹಾಕವಿ ಬ್ರಹ್ಮಶಿವವಿರಚಿತಮಪ್ಪ ಸಮಯಪರೀಕ್ಷೆಯೊಳ್

ಎಂಬ ಗದ್ಯವಿದೆ.

ಇವನ ಬಂಧವು ಬಹಳ ಸರಳವಾಗಿಯೂ ಲಲಿತವಾಗಿಯೂ ಇದೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

### ಜೂದು.

ಬವರದ ಬಿಟ್ಟು ವಂಚನೆಯ ಪುತ್ತೞಿವಿಂಗೆ ವಿಕಾರಹೇತು ದ ।
ರ್ಪ್ಪವಸೆಗೆ(?) ಕಾರಣಂ ಪರಿಭವಕ್ಕದು ವಿತ್ತದ ಕೇಡು ರೌದ್ರಸಂ ॥
ಭವಮಸುಖಾಸ್ಪದಂ ಗುಣಗಣಂಗಳ ಕೇಡೆನಿಸಿರ್ದ ಜೂದನಾ ।
ಡುವ (ನರ)ನೆಯ್ದುನೇ ಸಕಳಹಾನಿಯನುತ್ತಮಸೌಖ್ಯಹಾನಿಯುಂ ॥ 265 ॥

1 ಗ್ರಂಥದ ಆದಿಭಾಗವು ದೊರೆಯದುದರಿಂದ ಇವನು ಸ್ತುತಿಸುವ ದೇವರು ಗುರುಗಳು ಮೊದಲಾದವರ ವಿಷಯವಾಗಿ ಏನೂ ಹೇಳುವುದಕ್ಕಿಲ್ಲದೆ ಇದೆ. ದೊರೆತ ಭಾಗದಲ್ಲಿ ಇವನು ಹೇಳಿರುವ ಅಕ್ಕಿಮಬ್ಬೆ ಮೊದಲಾದವರ ಹೆಸರುಗಳು ಹಿಂದೆಯೇ ಕೊಟ್ಟಿವೆ.

ಪಡಶಲೆ ನೋಗುಂ ಕಣ್ಗಳ್ | ಕಿಡುಗುಂ ಮೆಯ್ ಬೇನೆಗೆಯ್ಗುಮೊಡಮೆಯುಮೊಳ್ಪುಂ |
ಕಿಡುಗುಂ ಮೂಲವ್ಯಾಧಿಯುಂ | ಮಡಸುಗುಮಿಂತಿಸಿತ ಜೂದಿನಿಂ ಬರ್ಪ ಫಲಂ ||266||

ಉಡುಗದೆ ಸೂರ್ಕೆದಂದದೊಳೆ ಗೆಲ್ದೆಡೆಯೊಳ್ ಸಲೆ ಬಾಯ್ಗೆವಂದುದಂ ||
ನುಡಿವರಲ್ಲಿಲ್ಲ ಸೋಲ್ತ ಪದದೊಳ್ ದೆಸೆಗಾಣದೆ ಮಾನ್ಯರಪ್ಪರಂ ||
ಜಡಿವರನರ್ಥಮಂ ಬಗೆಯರಂತದಱಿಂದಮೆ ಜೂದನಾಡಲುಂ |
ನುಡಿಯಲುಮಾಗ ಸದ್ಗುಣ ವಿಭಾವಮನೆಯ್ದುವನೆಂಬ ದೂಸಱಿಂ || 267 ||

## ಜಿನಸಮಯ.

ಪುಸಿ ಕೊಲೆ ಕಳವು ಪರಸ್ತ್ರೀ | ವ್ಯಸನಂ ಮಧುಮದ್ಯಮಾಂಸಸೇವನೆ ಪೊಲ್ಲೀ |
ದು ಸದಾ ಬಗ್ಗಿಪ ಕತದಿಂ | ದೆ ಸಕಳಸಮಯಕ್ಕೆ ಸಮ್ಮತಂ ಜಿನಸಮಯಂ ||268||

ಪುಸಿವವನೆ ತೊಲಗು ಹಿಂಸೆಯೊ | ಳೆಸಗುತ್ತಿರ್ಪವನೆ ತೊಲಗು ಪರವಧುವಿಂಗಾ |
ಟಿಸುವವನೆ ತೊಲಗೆನುತ್ತುಂ | ಪಸರಿಸುವುದು ಜೈನಧರ್ಮಭೇರೀನಿನದಂ || 269 ||

ಅಡದಿಂಬ ತೊಲಗು**ಪೆಜ | ರೊಡಮಗಳಂ ಕೊಳ್ವ ತೊಲಗು ಮಧುವಂ ಕಳ್ಳಂ |
ಕುಡಿವವನೆ ತೊಲಗೆನುತ್ತುಂ | ಪೊಡವಿಗೆ ಜನಧರ್ಮದೊಂದು ಗೋಸಣೆಯೆಸೆಗುಂ
|| 270 ||

## ಜೀವದಯೆ.

ಸೀರಂ ತೋಱದೆ ಪಸಿದುದ | ನಾರಯ್ಯದೆ ಸೇದೆಯಱಿದು ಸಿಲಿಸದೆ ಪಿರಿದುಂ |
ಭಾರಮನೆ ಸೇಱ ನಸುವಂ | ದೂರಾಂತರಮುಯ್ಯಲಾಗದೆಂಬಂ ಜೈನಂ || 271 ||

ಕಸವಂ ಕಳೆವೆಡೆಯೊಳ್ ಸಾ | ಱಸುವೆಡೆಯೊಳಮಕ್ಕಿಗುಟ್ಟುವೆಡೆಯೊಳ್ ಸಲೆ ಸೋ |
ದಿಸಿ ಜೀವಸಿಕರಮಂ ರ | ಕ್ಷಿಸುವರೆನಲ್ ಜೈನರಿಂ ದಯಾಪರರೊಳರೇ || 272 ||

## ನೀತಿ.

ಬಡವಂ ಗುಣಿಯಾದೊಡಮವ | ನೊಡನುಡಿಯಂ ಹಸ್ತಿಮೂರ್ಖನಾದೊಡಮಂತುಂ |
ನುಡಿಗುಂ ಸಿರಿವಂತನೊಳೆಂ | ಪೊಡೆ ಮತ್ತವನಱತದಲ್ಲಿ ಪುರುಳೞಿಸುವುದೇ ||273||

ಆವಂಗಂ ತನ್ನಿಂದಂ | ಸಾವುಂ ಕೇಡುಂ ಭಯಂಗಳುಂ ವಿಕಳತೆಯುಂ |
ನೋವುಮಿನಿಸಾಗದಂತಿರ | ಲಾವಂ ಸಲೆ ನುಡಿವನೆಂತುಮಾತನೆ ದೇವಂ || 274 ||

ಪುಸಿಯಂ ನುಡಿದವರ್ಗಳವಾ | ನಸಿಕ್ಕೆಯುಂ ಗುಣಮುಮಱಗುಮಂತವರಂ ವ |
ಸ್ವಸರಾರುಂ ಭಾವಿಸುವೊಡೆ | ಪುಸಿಯೆ ಮೊದಲ್ ಪಾತಕಂಗಳೆನಿತನಿತರ್ಕಂ || 275 ||

ಅಪವರ್ಗೋಚಿತಮಾರ್ಗಮಸ್ತದುರಿತಾತಂಕಂ ಸದಾಚಾರಸೌ |
ಖ್ಯಪದಂ ಸಜ್ಜನಸನ್ನುತಂ ಬಗೆಯೆ ಸತ್ಯಂ ನಾಸ್ತಿ ಸತ್ಯಾತ್ಪರಂ ||

ತಪ ಎಂದಿರ್ದಪುದಾಗಮೋಕ್ತಮದಱಿಂದಾರಾದೊಡಂ ಸತ್ಯವಾ |
ಕ್ಯಪವಿತ್ರೀಕೃತವಕ್ತ್ರರಾಗಿ ಪಡೆಯಿಂ ನಿರ್ವಾಣಕಲ್ಯಾಣಮಂ ॥ 276 ॥

ಇವನೆತ್ತಂಗೋಳಂ ನೀ | ಮಿವನಂ ನಂಬದಿರಿಮೆಂದು ಕಂಡವರ್ಗಳ್ ಸಾ |
ಱುವರತ್ತಲುಮತ್ಯುತ್ತಮ | ಭವಮೞಿಗುಂ ಸ್ತ್ರೀಯುಮದಱಿನೆಂತುಂ ಕಷ್ಟಂ ॥ 277 ॥

ಗಂಡನ ದೆಸೆಯುತ್ತಮರಂ | ಕಂಡೊಡೆ ಕಡೆಗಣಿಸುವರ್ ತವರ್ಮನೆಯವರಂ |
ಕಂಡೊಡೆ ರಾಗಿಸಿ ಕರೆದೊಡ | ನುಂಡುಂ ಬೇಡಿದುದನೀವರಱಿಗುಲಿವೆಂಡಿರ್ ॥ 278 ॥

ಕಲಿಸದೆ ಮುಂ ಪೆಱಪೆಱತಂ | ಕಲಿಪುದು ಮಕ್ಕಳ್ಗೆ ದೇವತಾರಾಧನೆಯಂ |
ಕಲಿಸುವುದು ಜೀವದಯೆಯುಮಂ | ಕಲಿಪುದು ಸತ್ಪಾತ್ರಮಱಿದು ದಾನಮನೀಯಲ್ ॥ 279 ॥

ನರವಿನ ಮೂತ್ರಮೇಧ್ಯದ ತವರ್ಮನೆ ಕೀವಿನ ಕೊಂಡಮಪ್ಪಿನಾ |
ಗರಮಱಿದೋಲ ಪೆರ್ಬದುಕೆ ಜಂತುಗಳಾಗಳುಮಿರ್ಪ ತಾವು ನೆ ॥
ತ್ತರ ನೆಲೆವೆರ್ಚಿ ನಿಂದ ಮಡು ಚಿಃ ಕಡುಕಷ್ಟಮನಿಪ್ಪುದೀ ಕಳೇ |
ಬರಮನಿದೊಳ್ಳಿತೆಂಬರಱಿವಿಲ್ಲದವರ್ ಪೆಣನೆಂಬರಾರ್ಹತರ್ ॥ 280 ॥

## ಇತರಮತವಿಡಂಬನ.

ಒಗೆದುರಿಲಿಂಗದೊಂದುಪವಣಂ ಪರಿಭಾವಿಸಲಬ್ಜನಾಭನುಂ |
ನೆಗೞ್ದ ವಿರಿಂಚಿಯುಂ ಕೆೞಗೆಯುಂ ನೆಱೆ ಮೇಗೆಯುಮೆಯ್ದುವಲ್ಲಿ ಕೇ ॥
ದಗೆ ಗಡ ಬೊಮ್ಮನೊಳ್ ನುಡಿದು ಮುಂ ಪುಸಿದಿರ್ದುದಱಿಂದಮೀಶಪೂ |
ಜೆಗೆ ಪೊಱಗಾದುದೆಂಬರೆಲೆ ಕೇದಗೆ ಮುನ್ನುಡಿಗಲ್ತುದಕ್ಕುಮೇ ॥ 281 ॥

ಮರುಳರಸಂಗೆ ಮಲ್ಲಿಗೆಯ ಮೊಲ್ಲೆಯ ಜಾದಿಯ ಕಂಪನಾಳ್ವ ಸುಂ |
ದರಕುಸುಮಂಗಳಂ ಕುಡದ ಕಾರಣಮಾವುದೊ ಬನ್ನಿಯೆಕ್ಕೆಯು ॥
ತ್ತರಣೆಯ ಬೆಲ್ಲ[illegible]ತ್ತದ ತೊಳಂಚಿಯ ಪ್ರಯನೊಂದನಿತ್ತು ಚಿ |
ತ್ರರಮಮರತ್ವಮಂ ಪಡೆದೆವೆಂಬರದರ್ಕೆ ನಿಮಿತ್ತಮಾವುದೋ ॥ 282 ॥

ಧರೆಗೊಡೆಯಂ ಚಕ್ರೇಶಂ | ತಿರಿವನೆ ಬಲಿಯಲ್ಲಿ ಬೇಡಿ ಮೂಱಡಿನೆಲನಂ |
ಸಿರಿಯೊಡೆಯಂ ಕೇೞಾಳಾ | ಗಿರಲಱಿವನೆ ಪರಿಸುತುಂ ಕಿರೀಟಿಯ ರಥಮಂ ॥ 283 ॥

ಬಸಿಱೊಳಗೆ ಬಯ್ತು ಹರಿ ರ | ಕ್ಷಿಸಿದಂ ಗಡ ಜಗಮನಸುರರಲ್ಲಿಂದೇನೊಂ |
ದೆಸೆಯೊಳ್ ಪೋಗಿರ್ದರೊ (ಪೇೞ್ | ಮ) ಸಗಿ ಕೊಲಲ್ ತಕ್ಕುದೋ ಸರಣ್ಬೊ
ಕ್ಕವರಂ ॥ 284 ॥

ಬಗೆವೊಡದೇನಾನುಂ ಬಾ | ೞ್ತಿಗಲ್ಲವೆನಿಪರಳಿಗೊಲ್ದು ಪೊಡೆಮಡುವವನಾ |
ಚಿಗುರುಂ ಪೂವುಂ ಕಾಯುಂ | ಸೊಗಯಿಪ ಮಾವಿಂಗೆ ಪುಣೆಸೆಗೆಱಗಲ್ಕೇಡಾ ॥ 285 ॥

ಒರ್ಮ್ಮಾನಂಗಱಿವಾವಿಂ । ಗೊರ್ಮ್ಮೆಯುಮೆಱಗುತ್ತುಮಿರದೆ ಕೊಡವಾಲ್ಗಱಿವೊಂ ।
ದೆರ್ಮ್ಮೆಗೆಱಗಿದೊಡೆ ಪಶುವಿಂ । ನೂರ್ಮ್ಮಡಿ ಫಲಮಾವುದದಱನೆಱಗುಗೆ ಭಕ್ತಂ ॥286॥

ವ್ರತಗುಣಸಚ್ಚರಿತ್ರಯುತರಪ್ಪ ಮಹಾತ್ಮರ ಮೇಲೆ ಬಂದು ದೇ ।
ವತೆ ತನಗೊಲ್ದೊಡಂ ಪರಕೆವೇಡಿದೊಡಪ್ಪುದು ಸಂಬಲಂತದಂ ॥
ಸಿತಗೆ ನಿಕೃಷ್ಟ ದುಶ್ಚರಿತೆ ತೊೞ್ತು ನಿಸಿರ್ದ್ದಳ ಮೇಲೆ ಬಂದು ದೇ ।
ವತೆ ನುಡಿದಪ್ಪಳೆಂದೊಡ ವಿವೇಕಿಗಳಂತದನೇಕೆ ಸಂಬುವರ್ ॥ 287 ॥

ಜಗಮಂ ಸುಡುವೊಡೆ ರುದ್ರಂ । ಜಗದೊಳಗಿರ್ದಾತ್ಮಭಕ್ತರೆಲ್ಲರುಮಂ ಮೆ ।
ಲ್ಲಗೆ ತೆಗೆದು ಬೇಱೆ ಪೊಱಗಿ । ಕ್ಕುಗುಮೋ ಮೇಣ್ ಕೂಡೆ ಸುಟ್ಟು ಕಳೆಗುಮೊ ಪೇೞಿಂ ॥ 288 ॥

ಒಡಲೊರ್ವಾಗಮನಿತ್ತಂ । ಗಡ ಕಾಂತೆಗೆ ಶಂಭು ಶಂಭುಗಂ ಕೊಟ್ಟಳ್ ತ ।
ನ್ನೊಡಲೊರ್ವಾಗಮನಗಸುತೆ । ಗಡ ಮಿಕ್ಕರಡರೆಯನಾರ್ಗೆ ಕೊಟ್ಟರೊ ಪೇೞಿಂ ॥289॥

ಸಱಿ ಮೆಯ್ಗ್ಗಚರ್ಮ್ಮವ ಪಲ್ಲಂ । ಸುಲಿವ ವಿಲೇಪನಮನಾಗಳುಂ ಪೂಸುವ ತಂ ।
ಬುಲಮಂ ಮೆಲ್ವ ತಪಸ್ವಿಗ । ಳೊಲಿಸರ್ ಬೆಲೆವೆಣ್ಣನೊಲಿಸರಮೃತಾಂಗನೆಯಂ ॥290॥

## 2. ತ್ರೈಲೋಕ್ಯಚೂಡಾಮಣಿಸ್ತೋತ್ರ.

ಈ ಗ್ರಂಥದಲ್ಲಿ 36 ವೃತ್ತಗಳಿವೆ; ಇವಕ್ಕೆ ಛತ್ತೀಸರತ್ನಮಾಲೆ ಎಂಬ ಹೆಸರೂ ಉಂಟು. ಪ್ರತಿ ಪದ್ಯವೂ ತ್ರೈಲೋಕ್ಯಚೂಡಾಮಣಿ ಎಂದು ಮುಗಿಯುತ್ತದೆ. ಇದರಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ:—

ಅಱಿವಿಲ್ಲೆಂಬುದನಕ್ಷಸೂತ್ರಮಣಿಯಿಂ ಕಾರುಣ್ಯಮಿಲ್ಲೆಂಬುದಂ ।
ಮಿಱುಗುತ್ತಿರ್ಪ ತ್ರಿಸೂಳದಿಂ ತನಗಣಂ ನಾಣ್ ಮುನ್ನಮಿಲ್ಲೆಂಬುದಂ ॥
ನೆಱೆಗೆಟ್ಟರ್ಚಿಪ ಲಿಂಗದಿಂ ತಪದ ಮಾತಿಲ್ಲೆಂಬುದಂ ಗೌರಿಯಿಂ ।
ದಱದೇನೆಂದು ಜಡರ್ ಮೃಡಂಗೆಱಗುವರ್ ತ್ರೈಲೋಕ್ಯಚೂಡಾಮಣೀ ॥ 291 ॥

ಪಡೆಮಾತೇಂ ಗಡ ಮತ್ಸ್ಯಕಚ್ಛಪವರಾಹಾಕಾರಮಂ ತಾಳ್ದಿದಂ ।
ಗಡ ಕುಬ್ಜದ್ವಿಜನಾಗಿ ದೈತ್ಯನಿದಿರೊಳ್ ದಾನಕ್ಕೆ ಕೆಯ್ಯಾಂತವಂ ॥
ಗಡ ಸಂಗ್ರಾಮದೊಳಾಂತು ಕಾದಿಯೆ ಜರಾಸಂಧಂಗೆ ಬೆನ್ನಿತ್ತವಂ ।
ಗಡ ದೇವಂ ಗಡ ಪೇೞ್ವೊಡಿನ್ನವಣಕಂ ತ್ರೈಲೋಕ್ಯಚೂಡಾಮಣೀ ॥ 292 ॥

ಕೆಱೆಯುಂ ಸಂಜೆಯುಮಿಂದ್ರನಂ ಗಣಪನಂ ಗೌರೀಶನಂ ಭಾನುವಂ ।
ಪೆಱೆಯುಂ ಗೋಕುಳಮುಂ ಗಿರಿಪ್ರಕರಮುಂ ಬಾದುಂಬೆಯುಂ ಕಾಂತಿಯುಂ ॥
ತೊಱೆಯುಂ ವಾರ್ಧಿಯುಮಯ್ದು ಪಾಲುಮರನಂ ದೈವಂಗಳೆಂದಿಂತು ಕೂ ।
ರ್ತೆಱಗುತ್ತಿರ್ಪವರೆಂತು ಮುಕ್ತಿವಡೆವರ್ ತ್ರೈಲೋಕ್ಯಚೂಡಾಮಣೀ ॥ 293 ॥

ಜಿನಮಾರ್ಗಂಬಿಡದನ್ಯಮಾರ್ಗಮನದೇಂ ಪೇೞ್ದೂಷಣಂಗೆಯ್ದು ದು ।
ರ್ಜನನಾದಂ ಕರಮೆನ್ಗೆ ಮೆಚ್ಚದವರ್ಗಳ್ ಮಧ್ಯಸ್ಥರಾರಯ್ಯೆ ಪಾ ॥
ವಿನ ಪಲ್ಲೊಳ್ ವಿಷಮುಂಟು ಕಿಚ್ಚು ಸುಡುಗುಂ ನಂಜಳ್ಕುದೆಂಬಂತೆ ಪೇ ।
ೞ್ವನಿದಂ ವಸ್ತುವಿಚಾರವಿಾತೆಜನಿದಂ ತ್ರೈಲೋಕ್ಯಚೂಡಾಮಣೀ ॥ 294 ॥

## ವಿಷ್ಣುದಂಡಾಧಿಪ. 1130.

ಚಿಕ್ಕಮಗಳೂರು 137 ನೆಯ ಶಾಸನದಲ್ಲಿ (ಶಕ 1051) ಈತನನ್ನು 'ಉಪನಿಷದ್ಗಿರಾಂ ಆಹರ್ತಾ' 'ಸತ್ಕಾವ್ಯಗೋಷ್ಠೀಶ್ರಿಯಃ ಜನಯಿತಾ' ಎಂದು ಸ್ತುತಿಸಿದೆ. ಈತನು ಕವಿಯಾಗಿದ್ದಿರಬಹುದೆಂದು ತೋರುತ್ತದೆ. ಇವನು ಹೊಯ್ಸಳ ವಿಷ್ಣುವರ್ಧನನ (1111—1141) ಆಶ್ರಿತನಾದ ರಾಯಣದಂಡನಾಥನ ಮಗನು.

## ಸಾಂತಮಹಂತ. 1137.

ಈತನು ನಾಗಮಂಗಲದ 28 ನೆಯ ಶಾಸನವನ್ನು ಬರೆದುದಾಗಿ ಆ ಶಾಸನದ ಕೊನೆಯಲ್ಲಿರುವ—

ಕ್ಷಿತಿವಿನುತ ಸರ್ಬದೇವನ । ಸುತ ಸನ್ನುತ ಸೋಮಿಯಕ್ಕನಣುಗಿನ ಪುತ್ರಂ ।
ಸತುಕವಿ ಸಾಂತಮಹಂತಂ । ಸ್ಥಿತಿಸಾರಂ ಪೇೞ್ದನೞ್ತಿಯಿಂ ಸಾಸನಮಂ ॥

ಎಂಬ ಪದ್ಯದಿಂದ ತಿಳಿಯುತ್ತದೆ. ಈ ಶಾಸನವು ಹೊಯ್ಸಳ ವಿಷ್ಣುವರ್ಧನನ ಆಳಿಕೆಯಲ್ಲಿ, 1137 ರಲ್ಲಿ, ಬರೆದುದು. ಇದರಲ್ಲಿ—ವಿಷ್ಣುವರ್ಧನನ ದಂಡನಾಥನಾದ ಏಚಿರಾಜನು ದೊರೆಯಿಂದ ಪಡೆದ ನಾನಲಕೆರೆಯನ್ನು ಮೂಲಸ್ಥಾನದ ಮಲ್ಲಿಕಾರ್ಜುನದೇವರಿಗೆ ಕೊಟ್ಟಂತೆ ಹೇಳಿದೆ. ಈ ಶಾಸನದ ಪದ್ಯಗಳನ್ನು ನೋಡಿದರೆ ಸಾಂತಮಹಂತನು ಕವಿಗಳಲ್ಲಿ ಗಣ್ಯನೆಂಬುದರಲ್ಲಿ ಸಂಶಯವಿಲ್ಲ. ಈ ಪದ್ಯಗಳಲ್ಲಿ ಕೆಲವನ್ನು ಉದ್ಧರಿಸಿ ಬರೆಯುತ್ತೇವೆ :—

### ಶಿವಸ್ತುತಿ.

ಪತ್ತಿರೆ ಗಂಗೆಯ ಪನಿಗಳ್ । ಮುತ್ತಿನ ಬಾಸಿಗಮಿವೆನಿಸಿ ವಾಸುಗಿ ಸುಖದಿಂ ।
ಸುತ್ತಿರ್ದ ಜೂಟದಾದೇ । ವೊಂತ್ತಮನೆಮಗೊಸೆದು ಕುಡುಗೆ ಸುಖಸಂಪದಮಂ ॥295॥

### ಎರೆಯಂಗ.

ಪಱಪಱಸಿ ಮುಳಿದು ಕಾಯ್ಪಂ । ದುಱದೆತ್ತಿದ ವೀರವೈರಿವರ್ಗದ ಬಾಯ್ ಹೊ ।
ನ್ಮೊಱೆಯಾಗೆ ಕಟ್ಟಿದಲಗಂ । ಕಿಱಪನೆ ರಣಮುಖದೊಳದಟನಿಂದೆಱೆಯಂಗಂ ॥ 296 ॥

## ವಿಷ್ಣುವರ್ಧನ.

ಚೇರಮ ವೈರಮಂ ಬಿಸುಡು ಪಾಂಡ್ಯ ಕಡಂಗದಿರಂಧ್ರ ರಂಧ್ರಮಂ ।
ಪಾರದಿರೊಡ್ಡ ಗೊಡ್ಡಮನದಂ ಬಿಡು ಮಾಳವ ಕಾಳೆಗಕ್ಕೆ ಮೆ ॥
ಯ್ದೋಱದೆ ಸಾರೆಲೇ ತಿಗುಳ ನೀಂ ಜಗುೞಿಂಬುದಪಾರವೀರದು ।
ರ್ವಾರಗಭೀರಧೀರತೆ (?) ವಿನಿಸ್ಸೃತಘೋಷಣೆ ಬಲ್ಲುಭೂಪನಾ ॥ 297 ॥

ಎತ್ತದ ಮುನ್ನಮೆತ್ತಿ ನಡೆಗೊಳ್ವದ ಮುನ್ನಮಡುರ್ತು ಕೋಪದಿಂ ।
ಮುತ್ತದ ಮುನ್ನಮರ್ಥಮನೆ ತೆತ್ತಿರಿಮುತ್ತಿರಿನೂತ್ನದುರ್ಗಮಂ ॥
ಮತ್ತೆನವೇಡ ನಿರ್ಗಮಮಿದೆಂದು ವಿರೋಧಿಗೆ ವೀರಲಕ್ಷ್ಮಿ ಸಾ ।
ಱುತ್ತಿರೆ ವಿಷ್ಣುವಿಕ್ರಮದುಪಕ್ರಮಮಾಕ್ರಮಿಸಿತ್ತು ಲೋಕಮಂ ॥ 298 ॥

ಧುರದೊಳ್ ಬಂದೊಡ್ಡಿ ವೈರಿಪ್ರಕರಮಿರಲವಷ್ಟಂಭದಿಂ ಬಿಟ್ಟಿದೇವಂ ।
ಕರವಾಳಂ ತೋಡಿ ಕೊಂಡಿಂಬೞಕಮೆಲೆ ಮಹಾದೇವ ಕಾಳಾಗ್ನಿರುದ್ರಂ ॥
ಗುರಿಗಳ್ ಬಂದಂತೆ ಮಾಕಾಳಿಗೆ ಗರವಡರ್ದಂತಿಂದ್ರದಿಗ್ದಂತಿ ಕಾಯ್ದಂ ।
ಪರಿಘಂಗೊಂಡಂತಗುರ್ಬುರ್ಬಿಪುದೆನೆ ಮುಳಿಸಿಂ ಮಾಱ ಮಾಱಾಂಪನಾವಂ ॥299॥

## ಏಚಿರಾಜ.

ಬಾರಿಸೆ ದಂಡೆಯಂ ಕೊರಲ ಕೊಂಕಳವಟ್ಟಿರೆ ಕಾಲವೇಗಮಾ ।
ಧಾರಿಣಿಯೊಳ್ ಬೆಡಂಗನೊಳಕೊಂಡಿರಲೇಱ ತುರಂಗರಾಜನಂ ॥
ವೀರಮುಮಂ ವಿಳಾಸಮುಮನೀತನೆ ತಾಳ್ದಿದನೆಂದು ನೋಡಿ ಕೆ ।
ಯ್ವಾರದಿನೆಲ್ಲರುಂ ಪೊಗೞೆ ತನ್ನನೆ ಏಚಣಮಂತ್ರಿ ರಂಜಿಸಂ ॥ 300 ॥

---

## ಹರಿಪಾಲ. ಸು. 1140.

**ಎರಡನೆಯ ನಾಗವರ್ಮನ** (ಸು. 1145) ಭಾಷಾಭೂಷಣದಲ್ಲಿ "ದ್ವಿತೀಯಾಂತಸ್ಯ ವಾ ಸ್ವರೇ[1]" ಎಂಬ ಸೂತ್ರದ ಕೆಳಗೆ "ಹರಿಪಾಲಸ್ಯ ಪ್ರಯೋಗಃ–ಕಲ್ಲಾನೇಱದಂ; ಬಿಲ್ಲಾನೇಱಿಸಿದಂ" ಎಂದಿದೆ. ಇದರಿಂದ ಹರಿಪಾಲನು ನಾಗವರ್ಮನಿಗೆ ಹಿಂದೆಯೇ ಕನ್ನಡಗ್ರಂಥಗಳನ್ನು ಬರೆದು ಪ್ರಸಿದ್ಧಕವಿಯಾಗಿದ್ದಿರಬೇಕೆಂಬುದು ವ್ಯಕ್ತವಾಗುತ್ತದೆ. ಇವನು ಸುಮಾರು 1140 ರಲ್ಲಿ ಇದ್ದಿರಬಹುದು. ಆವ ಗ್ರಂಥಗಳನ್ನು ಬರೆದಿದ್ದಾನೆಯೋ ತಿಳಿಯದು

---

1. ಸೂತ್ರ 69

## ಹಂಸರಾಜ. ಸು. 1140.

**ಕೇಶಿರಾಜನು** (ಸು. 1260) ಶಬ್ದಮಣಿದರ್ಪಣದ 289 ನೆಯ ಸೂತ್ರದ ಕೆಳಗೆ—"ಎರಡು ಪದಮುಂ ತದ್ಭವ(ವ)ನೆಯ್ದುವಲ್ಲಿ ಒಂದು ಪದಮನುಱಿಸಿ ತಪ್ಪಾದುದರ್ಕೆ ಹಂಸರಾಜನ ಪ್ರಯೋಗಂ—ತರವೇೞ್ ಮಾಣಿಕ್ಯಭಂಡಾರದ ಪುಟಿಕೆಗಳಂ—ಇಲ್ಲಿ ಮಾಣಿಕ್ಯಶಬ್ದಮನುಱಿದು ಮಾಣಿಕಭಂಡಾರಮೆನೆ ಶುದ್ಧಂ" ಎಂದು ಬರೆದಿದ್ದಾನೆ. ಈ "ತರವೇೞ್" ಎಂಬ ಪದ್ಯವನ್ನು ಇದೇ ಸಂದರ್ಭದಲ್ಲಿ **ನಾಗವರ್ಮನು** (ಸು. 1145) ಕಾವ್ಯಾವಲೋಕನದಲ್ಲಿ ಹೀಗೆ ಸಮಗ್ರವಾಗಿ ಕೊಟ್ಟಿದ್ದಾನೆ :—

> ತರವೇೞ್ ಮಾಣಿಕ್ಯಭಂಡಾರದ ಪುಟಿಕೆಗಳಂ ಪುಂಜಿಸಲ್ವೇೞ್ ಸುವರ್ಣೋ ।
> ತ್ಕರಮಂ ತೋಱಲ್ಕೆವೇೞ್ ದಂತಿಗಳನಿರಿಸವೇೞ್ ಮುಂತೆ ವಾಹಂಗಳಂ ಬಿ ॥
> ತ್ತರಿಸಲ್ವೇೞ್ ಚಿತ್ರಚೀನಾಂಬರಪರಿಕರಮಂ ಮಾಣದೆಂದೋಳಿಯಿಂ ಚೆಂ ।
> ಕರನಾಗಳ್ ಪೇೞ್ದನೀಯಲ್ಕರೆದವರ್ಗೆ ಮಹಾದಾನಮಂ ವಿಕ್ರಮಾಂಕಂ ॥

ಇದರಿಂದ ಹಂಸರಾಜನು ನಾಗವರ್ಮನಿಗಿಂತ ಹಿಂದೆ ಇದ್ದವನೆಂಬುದು ವ್ಯಕ್ತವಾಗುತ್ತದೆ; ಸುಮಾರು 1140 ರಲ್ಲಿ ಇದ್ದಿರಬಹುದು. ಮೇಲೆ ಬರೆದಿರುವ ಪದ್ಯದಲ್ಲಿ ಹೇಳಿರುವ ವಿಕ್ರಮಾಂಕನು 1076 ರಿಂದ 1126 ರ ವರೆಗೆ ಆಳಿದ ಚಾಳುಕ್ಯ ವಿಕ್ರಮಾದಿತ್ಯನಾಗಿದ್ದ ಪಕ್ಷದಲ್ಲಿ ಈ ಕವಿ ಆ ರಾಜನ ಕಾಲದವನೆಂದು ಊಹಿಸಬಹುದಾಗಿದೆ. ಈತನು ಆವ ಗ್ರಂಥಗಳನ್ನು ಬರೆದಿದ್ದಾನೆಯೋ ತಿಳಿಯದು.

---

## ಕರ್ಣಪಾರ್ಯ. ಸು. 1140.

ಈತನು **ನೇಮಿನಾಥಪುರಾಣವನ್ನು** ಬರೆದಿದ್ದಾನೆ. "ಮಾಳವೀಮಾಧವ" ಎಂಬ ಒಂದು ಗ್ರಂಥವನ್ನು ಈತನು ಬರೆದಿರುವುದಾಗಿ **ದುರ್ಗಸಿಂಹನ** (ಸು. 1145) **ಪಂಚತಂತ್ರದಲ್ಲಿಯು**—

> ಪರಮಕವೀಶ್ವರಚೇತೋ । ಹರಮೆಂಬಿನಮೆಸೆವ ಮಾಳವೀಮಾಧವಮಂ ।
> ವಿರಚಿಸಿದ ಕರ್ಣಮಯ್ಯಂ । ಬರಮಾಗಂ ಸುಕವಿ ಬಗೆವೊಡಿನ್ನುಂ ಮುನ್ನುಂ ॥

ಎಂಬ ಪದ್ಯದಿಂದ ತಿಳಿಯಬರುತ್ತದೆ. ಅಲ್ಲದೆ ವೀರೇಶಚರಿತವೆಂಬ ಬೇರೊಂದು ಗ್ರಂಥವನ್ನು ಬರೆದಿರುವುದಾಗಿ **ದೊಡ್ಡಯ್ಯನ** (ಸು. 1550) **ಚಂದ್ರಪ್ರಭಸಾಂಗತ್ಯದಲ್ಲಿಯು**—

> ವರಶಾಂತಿನಾಥನ ಪೊಗೞ್ದ ಹೊನ್ನನ ಸ್ಮರ । ಹರನೇಮಿನಾಥಚರಿತವ ।
> ಮುರಿತಾರಿವೀರೇಶನ ಚರಿತವ ಪೇೞ್ದ । ಗರುವ ಕರ್ಣಪನ ನುತಿಪೆನು ॥

ಎಂಬ ಪದ್ಯದಿಂದ ತಿಳಿಯುಬರುತ್ತದೆ. ಮಾಳವೀಮಾಧವವೂ ವೀರೇಶಚರಿತವೂ ನಮಗೆ ದೊರೆತಿಲ್ಲ.

ಈತನು ಜೈನಕವಿ; ಇವನ ಹೆಸರು—ಕರ್ಣಪ, ಕಣ್ಣಪ, ಕಣ್ಣಮಯ್ಯ, ಕನ್ನಮಯ್ಯ, ಕಣ್ಣಮ ಎಂದೂ ಅಲ್ಲಲ್ಲಿ ದೊರೆಯುತ್ತದೆ. ಈತನಿಗೆ—ಪರಮಜಿನಮತಕ್ಷೀರವಾರಾಶಿಚಂದ್ರ, ಭವ್ಯವನಜವನಮಾರ್ತಾಂಡ, ಸಹಜಕವಿತಾರಸೋದಯ—ಎಂಬ ಬಿರುದುಗಳು ಇದ್ದಂತೆ ತೋರುತ್ತದೆ. ಇವನ ವಿಷಯವಾಗಿ ನೇಮಿನಾಥಪುರಾಣದಿಂದ ಈಯಂಶಗಳು ತಿಳಿಯುತ್ತವೆ:—"ಜೀಮೂತವಾಹನವಿದ್ಯಾಧರಚಕ್ರವರ್ತಿವಂಶತಿಳಕ" ನಾದ ಗೋವರ್ಧನ ಅಥವಾ ಗೋಪಣ ಎಂಬ ರಾಜನು ಕಿಳಿಕಿಳದುರ್ಗಕ್ಕೆ ಅಧಿಪತಿಯಾಗಿದ್ದನು. ಇವನಿಗೆ ಗಂಡರಾದಿತ್ಯಭೂಪ, ಶ್ರೀಭೂಷಣ ಎಂಬ ಬಿರುದುಗಳುಂಟು. ಈತನ ಹೆಂಡತಿ ಕಂಚವ್ವೆ; ಇವನಿಗೆ ವಿಜಯಾದಿತ್ಯ, ಲಕ್ಷ್ಮಣ ಅಥವಾ ಲಕ್ಷ್ಮೀಧರ, ವರ್ಧಮಾನ, ಶಾಂತ ಎಂಬ ನಾಲ್ವರು ಕುಮಾರರು ಇದ್ದರು. ವಿಜಯಾದಿತ್ಯನ ಹೆಂಡತಿ ಸೊನ್ನಲದೇವಿ. ಲಕ್ಷ್ಮಣನ ಹೆಂಡತಿ ಗೋಪ...ಮಗಳಾದ ಚಂದಲದೇವಿ. "ಪ್ರಥಿತಯಶಂ ಸಮಸ್ತವಿಬುಧಾಗ್ರಣಿ" ಯಾದ ಈ ಲಕ್ಷ್ಮಣರಾಜನು ಈ ಪುರಾಣವನ್ನು ಹೇಳಿಸಿದನು. ಈ ಲಕ್ಷ್ಮಣರಾಜನ ಗುರು ನೇಮಿಚಂದ್ರಮುನಿ. ಕವಿಯ ಗುರು ಮಲಧಾರಿದೇವನ ಶಿಷ್ಯನಾದ ಕಲ್ಯಾಣಕೀರ್ತಿ.

(1) ದುರ್ಗಸಿಂಹನು (ಸು. 1145) ಈ ಕವಿಯನ್ನು ಸ್ತುತಿಸುವುದರಿಂದ ಈತನು ಅವನಿಗೆ ಹಿಂದೆ ಇದ್ದಿರಬೇಕು. (2) ಈತನು ನಾಗಚಂದ್ರನನ್ನು (ಸು. 1100) ಹೊಗಳುವಾಗ "ಅದ್ಯತನನಾಗಿಯುಂ" ಎಂದು ಹೇಳಿರುವುದರಿಂದ ಅವನಿಗಿಂತ ಸುಮಾರು ಒಂದು ತಲೆ ಈಚೆಯವನಾಗಿದ್ದಿರಬಹುದು. (3) ತನ್ನ ಗುರುವಾದ ಕಲ್ಯಾಣಕೀರ್ತಿಯ ಜತೆಯಲ್ಲಿ ಶುಭಚಂದ್ರಮುನಿಯನ್ನೂ ಸ್ತುತಿಸಿದ್ದಾನೆ. ಒಬ್ಬ ಶುಭಚಂದ್ರಮುನಿ 1123 ರಲ್ಲಿ ಗತಿಸಿದಂತೆ ಶ್ರ. ಬೆ. 117 ನೆಯ ಶಾಸನದಿಂದ ತಿಳಿಯುತ್ತದೆ. ಕಲ್ಯಾಣಕೀರ್ತಿ 1115 ರಲ್ಲಿ ಗತಿಸಿದ ಮೇಘಚಂದ್ರತ್ರೈವಿದ್ಯನ ಸಧರ್ಮನೆಂದು ಶ್ರ. ಬೆ. 69 ನೆಯ ಶಾಸನದಿಂದ ತಿಳಿಯುತ್ತದೆ. ಅಲ್ಲದೆ ಕವಿ ಬೆಟ್ಟದ ಮುನಿಯೆಂಬ ಒಬ್ಬ ಗುರುವನ್ನು ಹೊಗಳಿ— ಬೆಟ್ಟದ ಮುನಿಯಂ ನೆನೆದೊಡೆ | ಮುಟ್ಟವು ರಾಕ್ಷಸಪಿಶಾಚವಿಷಮಾಹಿಗಳುಂ—ಎಂದು ಹೇಳಿದ್ದಾನೆ, ಶ್ರ. ಬೆ. 69 ನೆಯ ಶಾಸನದಲ್ಲಿ ಕಲ್ಯಾಣಕೀರ್ತಿ—ಶಾಕಿನ್ಯಾದಿಗ್ರಹಾಣಾಂಚ | ನಿರ್ಧಾಟನಧುರಂಧರಃ—ಎಂದು ಹೇಳಿರುವುದರಿಂದ ಬೆಟ್ಟದಮುನಿಯೆಂಬುದು ಕವಿಯ ಗುರುವಿನ ಮತ್ತೊಂದು ಹೆಸರಾಗಿರಬಹುದು. (4) ಲೀಲಾವತಿಯನ್ನು ಬರೆದ ನೇಮಿಚಂದ್ರನಿಗೂ (ಸು. 1170) ಈ ಲಕ್ಷ್ಮಣರಾಜನೇ ಪೋಷಕನಾಗಿದ್ದಂತೆ ಆ ಗ್ರಂಥದಿಂದ ತಿಳಿಯುಬರುತ್ತದೆ.[1] ನೇಮಿಚಂದ್ರನ ಕಾಲದಲ್ಲಿ ಲಕ್ಷ್ಮಣರಾಜನು ರಾಜ್ಯಭಾರ ಮಾಡು

1 ನೇಮಿಚಂದ್ರನ ಚರಿತವನ್ನು ನೋಡಿ.

ತ್ತಿದ್ದಂತೆ ವ್ಯಕ್ತವಾಗುತ್ತದೆ. ಕರ್ಣಪಾರ್ಯನ ಕಾಲದಲ್ಲಿ ಲಕ್ಷ್ಮಣರಾಜನು ರಾಜ್ಯಭಾರಮಾಡುತ್ತಿರಲಿಲ್ಲ. ಅವನ ತಂದೆಯೋ ಅಥವಾ ಅಣ್ಣನಾದ ವಿಜಯಾದಿತ್ಯನೋ ಆಳುತ್ತಿದ್ದಂತೆ ತಿಳಿಯಬರುತ್ತದೆ. ಆದುದರಿಂದ ಕರ್ಣಪಾರ್ಯನು ನೇಮಿಚಂದ್ರನಿಗೆ ಸುಮಾರು ಒಂದು ತಲೆ ಹಿಂದೆ ಇದ್ದಿರಬೇಕು.

**ಈ ಕಾರಣಗಳಿಂದ ಈ ಕವಿ ಸುಮಾರು 1140 ರಲ್ಲಿ ಇದ್ದನೆಂದು ಊಹಿಸಬಹುದಾಗಿದೆ.**

ಈತನನ್ನು **ರುದ್ರಭಟ್ಟ** (ಸು. 1180), **ಆಂಡಯ್ಯ** (ಸು. 1235), **ಮಂಗರಸ** (1508), **ದೊಡ್ಡಯ್ಯ** (ಸು. 1550) ಮೊದಲಾದ ಕವಿಗಳು ಸ್ತುತಿಸಿದ್ದಾರೆ.

ಈತನು ಪೂರ್ವಕವಿಗಳನ್ನು ಈ ಪದ್ಯಗಳಲ್ಲಿ ಹೊಗಳಿದ್ದಾನೆ:—

ಹೊನ್ನನ ರನ್ನನ ಪಂಪನ। ಸನ್ನುತಕವಿತಾಗುಣಕ್ಕೆ ಸರಿ ದೊರೆ ಸಮನ।
ಪ್ಪನ್ನರ್ ಕಾವ್ಯಕಳಾಸಂ। ಪನ್ನರ್ ಪೆಱರೊಳರೆ ಧರೆಯೊಳಿನ್ನುಂ ಮುನ್ನುಂ॥
ಅದ್ಯತನನಾಗಿಯುಂ ನೆಗ। ೞ್ದಾದ್ಯರ ದೊರೆಯೆನಿಸಿ ಮೆಱೆದು ಸಾಹಿತ್ಯಕಲಾ।
ಹೃದ್ಯತೆಯಿನೇದನಾನಿರ। ವದ್ಯಗುಣಂ ಸಂದ ನಾಗಚಂದ್ರಕವೀಂದ್ರಂ॥

ಇವನ ಗ್ರಂಥ

## ನೇಮಿನಾಥಪುರಾಣ.

ಇದು 22 ನೆಯ ತೀರ್ಥಕರನಾದ ನೇಮಿನಾಥನ ಚರಿತವು. ಇದರಲ್ಲಿ "ಹರಿವಂಶಕುರುವಂಶವೆರಡುಮಂ", "ಶ್ರೀಭೂಷಣಾರ್ಯಪ್ರಮುಖಬುಧಜನಂ ಪೇೞೆಂ" ಎನಲು—

ಅದಱಿಂದಮಾಪುರಾಣಮ। ನೊದವಿದ ಸದ್ಭಕ್ತಿಯಿಂದಮಾಂ ವಿರಚಿಸುವೆಂ।
ಮೃದುಪದವಿನೂತರಚನಾ। ಸ್ಪದಮಿದು ತಾನೆನೆ ಸಮಸ್ತಬುಧತತಿ ಸತತಂ॥

ಒಂದು ಕಥೆಯನ್ನು ಉಪಕ್ರಮಿಸಿದ್ದಾನೆ. ಈ ಪುರಾಣದಲ್ಲಿ ಕೃಷ್ಣಾವತಾರದ ಕಥೆಯೂ, ಪಾಂಡವರ ಕಥೆಯೂ, ಭಾರತಯುದ್ಧದ ಕಥೆಯೂ ಹೇಳಿವೆ. ಕವಿ ತನ್ನ ಪೋಷಕನಾದ ಲಕ್ಷ್ಮೀಧರರಾಜನನ್ನು ವಿಷ್ಣುವಿಗೆ ಹೋಲಿಸಿ ಬಹಳವಾಗಿ ಸ್ತುತಿಸಿದ್ದಾನೆ. ಲಕ್ಷ್ಮೀಧರರಾಜನು ಈ ಗ್ರಂಥವನ್ನು ಮಾಡಿಸಿದನೆಂಬ ವಿಷಯವನ್ನು—

ಶರದುದ್ಯಚ್ಚಂದ್ರಚಂದ್ರಾಭರಣಸುರಸರಿತ್ತಾರತಾರಾಚಳಪ್ರ।
ಸ್ಫುರಕೀರ್ತಿಶ್ರೀವಿಳಾಸಂ ಸಕಲಗುಣಗಣಾವಾಸನಾಗಿರ್ದ ಲಕ್ಷ್ಮೀ॥
ಧರನಿಂ ಸಂಸಿದ್ಧಮಾದೀಕೃತಿ ವಿಬುಧಜನಾಹ್ಲಾದಸಂಪಾದಿ ವಿಶ್ವಂ।
ಭರೆಯೊಳ್ ಸಿಕ್ಕೆಯ್ದಿ ನಿಲ್ವನ್ನೆಗಮವನಿಕುಲಾದ್ರೀಂದ್ರಚಂದ್ರಾಬ್ಧಿತಾರಂ॥

ಎಂಬ ಕೊನೆಯ ಪದ್ಯದಲ್ಲಿಯೂ ಹೇಳಿದ್ದಾನೆ. ಈ ಗ್ರಂಥವು ಚಂಪೂರೂಪವಾಗಿದೆ. ಇದರಲ್ಲಿ 14 ಆಶ್ವಾಸಗಳಿವೆ. ಗ್ರಂಥಾವತಾರದಲ್ಲಿ ನೇಮಿನಾಥನನ್ನು ಸ್ತುತಿಸಿದ್ದಾನೆ. ಬಳಿಕ ಸಿದ್ಧಾದಿಗಳನ್ನೂ ಯಕ್ಷಿಯಕ್ಷರನ್ನೂ ಸರಸ್ವತಿಯನ್ನೂ ಸ್ತುತಿಸಿ, ಆ ಮೇಲೆ ಸಮಂತಭದ್ರನಿಂದ ಅಕಳಂಕಚಂದ್ರನ ವರೆಗೆ ಗುರುಗಳನ್ನು ಪರಿಪಾಡಿಯಿಂದ ಹೊಗಳಿದ್ದಾನೆ.[1] ಆಶ್ವಾಸಗಳ ಕೊನೆಯಲ್ಲಿ—

ಇದು ನಿಖಿಳವಿಬುಧಜನವಿನುತಸಾಶ್ಚರ್ಯಚಾರಿತ್ರಚಕ್ರವರ್ತಿ ಕಲ್ಯಾಣಕೀರ್ತಿಮುನೀಂದ್ರಚಂದ್ರವಾಕ್ಚಂದ್ರಿಕಾಪ್ರಸಾದ ಪ್ರಬೋಧಿತವಾಕ್ಕುಮುದಸಮುದಯಂ ಸಹಜಕವಿತಾರಸೋದಯಂ ಶ್ರೀಕರ್ಣಪಾರ್ಯವಿರಚಿತಮಪ್ಪ ನೇಮಿನಾಥಪುರಾಣದೊಳ್

ಎಂಬ ಗದ್ಯವಿದೆ.

ಈ ಗ್ರಂಥದಲ್ಲಿ ವರ್ಣನಾಭಾಗವು ವಿಶೇಷವಾಗಿಲ್ಲ; ಕಥೆ ಮಾತ್ರ ಸುಬೋಧವಾಗಿಯೂ ಲಲಿತವಾಗಿಯೂ ಹೇಳಿದೆ. ಇದರಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

ಸತ್ಕೃತಿ.

ಸಂದ ಸುವರ್ಣವೊಪ್ಪ ಮೃದುರೇಖೆಯನಾಂತ ಪದಪ್ರಯೋಗದಿಂ ।
ಸೌಂದರಮಪ್ಪ ಸದ್ವಚನಹೃದ್ಯತೆಯಿಂ ಪುದಿದರ್ಥವೃಷ್ಟಿಯಿಂ ॥
ಪೊಂದಿ ಸುಪುಣ್ಯಕಾಮಿನಿಯ ಮಾೞ್ಕೆಯಿನೆಯ್ದೆ ವಿದಗ್ಧಕೋಟಿಗಾ ।
ನಂದಮನಪ್ಪುಕೆಯ್ವುದೊಡೆ ಪೇೞ್ ಕೃತಿ ಸತ್ಕೃತಿಯೇ ನಿರಂತರಂ ॥ 301 ॥

ಸಮುದ್ರ.

ಜಳಮತ್ತೇಭಪ್ರತಾನಪ್ರಬಳತರಕರಾಸ್ಫಾಲನೋದ್ಧೂತವೀಚೀ ।
ಕುಳದಿಂ ಪ್ರಕ್ಷೋಭಿತೋದ್ಯನ್ಮಕರನಿಕರಹಸ್ತಪ್ರಹಾರಪ್ರಭೂತೋ ॥
ಚ್ಛಳಿತಾಂಭೋಬಿಂದುಸಂದೋಹದಿನಮಿತತಿಮಿಸ್ತೋಮದಿಂ ಭೀಮನಕ್ರಾ ।
ವಳಿಯಿಂದಾಕೀರ್ಣಮಾದಂ ಸೊಗಯಿಪ ಲವಣಾಂಭೋಧಿ ಪೆಂಪಿಂದಗಾಧಂ ॥ 302 ॥

ವನ.

ಸುರಹೊನ್ನೆಯ ಸೌರಭಮು । ಬ್ಬರಿಸುವ ಮಲ್ಲಿಗೆಯ ಕಂಪು ಸಂಪಗೆಯ ಮನೋ ।
ಹರಮೆನಿಪ ಪರಿಮಳಂ ಪ । ರ್ವಿರೆ ನಂದನದಂತೆಗಂ ಕರಂ ರಮಣೀಯಂ ॥ 303 ॥
ಗಱಿಪುವ ಗಿಳಿ ಬಗ್ಗಿಪ ಪಿಕ । ಮಲರೊಳ್ ಮೊರೆವಳಿ ಸಮಂತು ನರ್ತಿಪ ಶಿಖಿ ಸಂ ।
ಚಳಿಪ ಕಪಿ ಸುೞಿವ ಹಂಸೆಯು । ಮುಳುಂಬಮೆನೆ ರಯ್ಯಮೆಂತುಮಾರಯ್ಯೆ ಬನಂ ॥ 304 ॥

1. ಸಮಂತಭದ್ರ, ಪೂಜ್ಯಪಾದ, ಗೃಧ್ರಪಿಂಛ, ವೀರಸೇನ, ಗುಣಭದ್ರ, ಕೊಂಡಕುಂದಾನ್ವಯ ಮಲಧಾರಿ, ತಚ್ಛಿಷ್ಯಮಲಧಾರಿ, ಕೊಲ್ಲಾಪುರದ ಶುಭಚಂದ್ರ, ಚಟ್ಟದಮುನಿ, ನೇಮಿಚಂದ್ರಮುನಿ, ಅಕಳಂಕಚಂದ್ರ.

## ಕಂಸಸಭೆ.

ಇರೆ ರಾಜಮಂಡಳಂ ವಿ। ಸ್ತರದಿಂ ಗುರುಬುಧಸಮೇತಮಾಗಳ್ ಸಭೆಯಂ ।
ಬರೆದಂತಿರೆಸೆಯೆ ಕಂಸಂ। ತರಣಿಯನನುಕರಿಸೆ ರಾಹುವೋಲ್ ಹರಿಯಿರ್ದಂ ॥ 305 ॥

## ದೂತನಾಗಿ ಹೋದ ಕೃಷ್ಣನ ಉಕ್ತಿ.

ಪಿರಿದುಂ ದೋರ್ಬಲಗರ್ವದಿಂದೆಸೆವ ನಿನ್ನೀ ಕರ್ಣನೀ ಶಲ್ಯನೀ ॥
ಸುರಸಿಂಧೂದ್ಭವನೀ ಘಟಪ್ರಭವನೀ ತತ್ಪುತ್ರನೀ ತತ್ಸಹೋ ॥
ದರರುಂ ನೆಟ್ಟನೆ ನೋಡೆ ನೋಡೆ ಸಭೆಯೊಳ್ ನಿಮ್ಮಿರ್ವರಂ ಕಟ್ಟಿ ಖೇ ।
ಚರನುಯ್ಯುತ್ತಿರೆ ತಂದ ಗಂಡಿನದಟಂ ನೀಂ ಕಂಡುಮೇಂ ನಂಬಯೋ ॥ 306 ॥

## ಬಲರಾಮಪಾಂಡವರ ಧಿಕ್ಕಾರ.

ಬಳಮಂ ನಚ್ಚಿ ಪೊಡೇ ಕೃಷೀವಳನುಮಾಜೂದಾಳಿಯಾಗಾಳಿಗಾ ।
ವಟ್ಟಿಯಾಳೀ ಬಳಿದೊಟ್ಟ ನಟ್ಟುವನುಮಾಗೋಪಾಳರಪ್ಪೀಯುಮ ॥
ಳ್ಗಳಿ ದಲ್ ಚಂಡಭುಜರ್ ಬಭಾಸಿವರ್ಗಳಾಚಕ್ರೀಶಸೈನ್ಯಾಗ್ರಮಂ ।
ಡಳನಾಥರ್ಕಳನಾಂಪರಾನದಿರರೀ ಬಲ್ಲಾಳ್ಗಳೀ ಸಂದೆಯಂ ॥ 307 ॥

## ಮಾವು.

ಅನುಪಮಮಾಗಿ ಬಂದ ನನೆ ನುಣ್ಗೊನೆ ಗೊಂಪಳಿಸಿರ್ಪ ಕೆಂದಳಿರ್ ।
ಕೊನರ ಸುಸೌರಭದ್ರವದ ಸೇವೆಯನುರ್ವಿ ಕುಕಿಲ್ವ ಕೋಕಿಲಂ ।
ಘನತರಟಿಂಚರಂ ನೆಗೆಯೆ ಮುಂಚಿದ ಪೂವಿನ ಗೊಂಚಲಂ ಕರಂ ।
ಜನಿತವಿನೋಹಟಿಂ ಮುಸುಱಿ ಮುತ್ತುವ ಮತ್ತಮದಾಳಿ ಮಾವಿನೊಳ್ ॥ 308 ॥

## ಕೃಷ್ಣ.

ದೇವಕಿಯ ನಯನಚಂದ್ರಿಕೆ । ಯಾವರಿಸಿರೆ ಕೃಷ್ಣನಂಗಮೆಸೆದತ್ತಾಗಳ್ ।
ದೇವಾಪಗಾಪ್ರವಾಹದಿ । ನಾವೃತಮಾಗಿರ್ದ ನೀಲಮಣಿಶಿಖರಿಯವೋಲ್ ॥ 309 ॥

## ಸೈನ್ಯರಜಸ್ಸು.

ಪದಸಂಘಟ್ಟನದಿಂದಮುಚ್ಚಿವನಿಯಂ ಪರ್ವಿರ್ದ ಕೆಂದೂಳಿ ದಿ ।
ಗ್ರದಸಿವ್ರಾತದ ಕುಂಭಮಂ ಪುದಿದು ತತ್ಸಿಂದೂರದಂತಿರ್ದುದಂ ॥
ತೊದವುತ್ತುಂ ನೆಗೆದಭ್ರದೊಳ್ ಪರಿದು ಮಂದೈಸಿರ್ಪುದುಂ ಭಾನುವಂ ।
ಮುದಯಾದ್ರೀಂದ್ರದೊಳಿರ್ಪ ಪಾಂಗನೊಳಕೊಂಡಿರ್ದಂ ರಜೋರಂಜಿತಂ ॥ 310 ॥

## ಮಾದಿರಾಜಮುನಿ. ಸು. 1140.

ಈತನು **ದುರ್ಗಸಿಂಹನ** (ಸು. 1145) **ಪಂಚತಂತ್ರವನ್ನು** ತಿದ್ದಿದನೆಂದೂ ಕವಿಯಾಗಿದ್ದನೆಂದೂ ಆ ಗ್ರಂಥದ—

ಕವಿಗಮಕಿವಾದಿವಾಗ್ಮಿ । ಪ್ರವರರ್ ಶ್ರೀಮಾದಿರಾಜಮುನಿಪುಂಗವರು ।
ತ್ಸವದಿಂ ತಿರ್ದಿದರೆನೆ ಭೂ । ಭುವನದೊಳಿದನೆಯ್ದೆ ಕೊಂಡು ಕೊನೆಯುದರೊಳರೇ ॥

ಎಂಬ ಪದ್ಯದಿಂದ ವ್ಯಕ್ತವಾಗುತ್ತದೆ. ಇವನು ಸುಮಾರು 1140 ರಲ್ಲಿ ಇದ್ದಿರಬಹುದು; ಆವ ಗ್ರಂಥಗಳನ್ನು ಬರೆದಿದ್ದಾನೆಯೋ ತಿಳಿಯದು.

---

## ಮಹಾದೇವಭಟ್ಟ. 1144.

ಅಬ್ಬಲೂರಲ್ಲಿರುವ ಒಂದು ಕನ್ನಡಶಾಸನದ ಕೊನೆಯಲ್ಲಿ[1] "ಸಹಜಕವಿ ಉಪಾಧ್ಯಾಯ ಮಹಾದೇವಭಟ್ಟನ ಬರೆಪ" ಎಂದಿದೆ. ಈ ಶಾಸನವು ಚಾಳುಕ್ಯ ಜಗದೇಕಮಲ್ಲನ (1138—1150) ಆಳಿಕೆಯಲ್ಲಿ ಬರೆದುದು. ಈ ಕವಿ ಆವ ಗ್ರಂಥವನ್ನು ಬರೆದಿದ್ದಾನೆಯೋ ತಿಳಿಯದು.

---

## ಎರಡನೆಯ ನಾಗವರ್ಮ[2]. ಸು. 1145.

ಈತನು **ಕಾವ್ಯಾವಲೋಕನ**, **ಕರ್ಣಾಟಕಭಾಷಾಭೂಷಣ**, **ವಸ್ತುಕೋಶ**—ಈ ಗ್ರಂಥಗಳನ್ನು ರಚಿಸಿದ್ದಾನೆ. **ಜನ್ನನು** (1209) ಇತರಕವಿಗಳೊಂದಿಗೆ ಈ ಕವಿಯನ್ನೂ ಸೇರಿಸಿ. "ಈ ಕವಿಗಳ್ ಜಿನೇಂದ್ರಪುರಾಣಕರ್ತೃಗಳ್" ಎಂದು ಹೇಳುವುದರಿಂದ ಈತನು ಆವುದೋ ಒಂದು ಜಿನಪುರಾಣವನ್ನೂ ಬರೆದಿರಬೇಕು.

ಈತನು ಜೈನಕವಿ; ತನ್ನ ಹೆಸರನ್ನು ನಾಕಿಗ ಎಂದೂ ಹೇಳಿಕೊಂಡಿದ್ದಾನೆ. ಇವನ ತಂದೆ ದಾಮೋದರ.

**ಜನ್ನನು** ತನ್ನ **ಅನಂತನಾಥಪುರಾಣದಲ್ಲಿ**—

ಜನನಾಥಂ ಜಗದೇಕನಲ್ಲಿ ಕಟಕೋಪಾಧ್ಯಾಯನಾ ನಾಗವ ।
ರ್ಮನಿದಾನೀಂತನಶರ್ವವರ್ಮನೆ ಗಡಂ ಜನ್ನಂಗುಪಾಧ್ಯಾಯಂ ॥

ಎನ್ನುತ್ತಾನೆ. **ಕಾವ್ಯಾವಲೋಕನದಲ್ಲಿಯು**—

---

1. *Epigraphia Indica*, V, 234.   2 ಪುಟ 53.

ಅಭಿಮತಶಬ್ದಸಂಸ್ಕರಣದಿಂ ಜನಮಂ ತಿಳಿವಂತುಮಾಡಿ ವಾ ।
ಗ್ವಿಭವಮುದಪ್ರತರ್ಕ್ಯಮೆನೆ ಸಂದೆಸಕಂ ದೆಸೆಯುಂತನೆಯ್ದೆ ತ ॥
ತ್ಸಭೆಯೊಳಗಗ್ರಪೂಜೆವಡೆದೊಂದು ಮಹಾಮಹಿಮಾನುಭಾವದಿಂ ।
ದಭಿನವಶರ್ವವರ್ಮನಿವನೆಂದಪುದುರ್ವರೆ ನಾಗವರ್ಮನಂ ॥

ಎಂಬ ಪದ್ಯದಿಂದ ಈ ನಾಗವರ್ಮನಿಗೆ ಅಭಿನವಶರ್ವವರ್ಮ ಎಂಬ ಬಿರುದು ಇದ್ದಂತೆ ತಿಳಿಯಬರುತ್ತದೆ. ಆದುದರಿಂದ ಈ ನಾಗವರ್ಮನೇ ಜಗದೇಕನಲ್ಲಿ ಕಟಕೋಪಾಧ್ಯಾಯನಾಗಿಯೂ ಜನ್ನನಿಗೆ ಉಪಾಧ್ಯಾಯನಾಗಿಯೂ ಇದ್ದಿರಬೇಕು. ಈತನು **ನಯಸೇನನ** (1112) ಹೆಸರನ್ನು ಹೇಳುವುದರಿಂದ ಆತನಿಗಿಂತ ಈಚೆ ಇದ್ದನೆಂಬುದು ವ್ಯಕ್ತವಾಗಿದೆ. ಚಾಳುಕ್ಯರಾಜರಲ್ಲಿ ಜಗದೇಕಮಲ್ಲನು 1138 ರಿಂದ 1150 ರ ವರೆಗೆ ಆಳಿದಹಾಗೆ ತಿಳಿಯಬರುವುದರಿಂದ ನಾಗವರ್ಮನು ಈತನಲ್ಲಿ ಸುಮಾರು 1145 ರಲ್ಲಿ ಕಟಕೋಪಾಧ್ಯಾಯನಾಗಿ ಇದ್ದಿರಬಹುದು. ಇವನು ಈ ಜಗದೇಕಮಲ್ಲನ ಕಾಲವಾದಮೇಲೆ ಬಹುದಿವಸ ಬದುಕಿದ್ದು ವಾರ್ಧಕದಲ್ಲಿ ಜನ್ನನಿಗೆ ಉಪಾಧ್ಯಾಯನಾದಂತೆ ತೋರುತ್ತದೆ.

ಈತನಿಗೆ ಅಭಿನವಶರ್ವವರ್ಮ, ಕವಿಕರ್ಣಪೂರ, ಕವಿತಾಗುಣೋದಯ, ಕವಿಕಂಠಾಭರಣ ಎಂಬ ಬಿರುದುಗಳಿದ್ದಂತೆ ತಿಳಿಯುತ್ತದೆ.

ಈತನನ್ನು **ಆಚಣ್ಣ** (ಸು. 1195), **ಜನ್ನ**, **ಸಾಳ್ವ** (ಸು. 1550), **ದೇವೋತ್ತಮ** (ಸು. 1600) ಮೊದಲಾದ ಕವಿಗಳು ಸ್ತುತಿಸಿದ್ದಾರೆ.

ತನಗೆ ಹಿಂದೆ ಇದ್ದ ಕವಿಗಳಲ್ಲಿ—'ದೀರ್ಘೋಕ್ತಿರ್ನಯಸೇನಸ್ಯ'[1] ಎಂಬ ಸೂತ್ರದಲ್ಲಿ **ನಯಸೇನನನ್ನೂ**, 'ದ್ವಿತೀಯಾಂತಸ್ಯ ಪಾ ಸ್ವರೇ'[2] ಎಂಬ ಸೂತ್ರದ ಕೆಳಗೆ "ಹರಿಪಾಲಸ್ಯ ಪ್ರಯೋಗಃ ತಥಾಗುಣವರ್ಮಕರ್ಣೇಭುರ್ವನ್ಯೈಕವೀರಸ್ಯ ಪ್ರಯೋಗಃ" ಎಂದು **ಹರಿಪಾಲಗುಣವರ್ಮರನ್ನೂ**, 'ಉದಂತಾನ್ನಾಗವರ್ೋ ಬಹುಳಂ'[3] ಎಂಬ ಸೂತ್ರದ ಕೆಳಗೆ "ಗುರುಹಂಪದೇವೋಕ್ತ ಪ್ರಯೋಗಃ" ಎಂದು **ಆದಿಪಂಪನನ್ನೂ** ಹೇಳಿದ್ದಾನೆ. ಕಾವ್ಯಾವಲೋಕನದಲ್ಲಿಯು—

ಪ್ರಣುತಗುಣರೆನಿಪ ವಿಬುಧಾ । ಗ್ರಣಿಗಳ್ ಕೈಯ್ಕೊಂಡು ಪೊಗಳ್ವಿಸಲೆ ನೆಗಳ್ದುವು ಧಾ ।
ರಿಣಿಯೊಳಗೆ ನಾಗವರ್ಮನ । ಗುಣವರ್ಮನ ಶಂಖವರ್ಮನಧ್ಯಾನಂಗಳ್ ॥

ಎಂಬ ಪದ್ಯದಲ್ಲಿ **ಒಂದನೆಯ ನಾಗವರ್ಮ, ಒಂದನೆಯ ಗುಣವರ್ಮ, ಶಂಖವರ್ಮ** ಈ ಕವಿಗಳ ಹೆಸರುಗಳು ಹೇಳಿವೆ. ಅಲ್ಲದೆ ಕಾವ್ಯಾವಲೋಕನ

1. ಭಾಷಾಭೂಷಣ, ಸೂ 74. 2 ಭಾ ಭೂ ಸೂ 69. 3 ಭಾ. ಭೂ. ಸೂ. 192.

ಭಾಷಾಭೂಷಣಗಳಲ್ಲಿ **ಪೊನ್ನ, ರನ್ನ, ಹಂಸರಾಜ, ನಾಗಚಂದ್ರ** ಮೊದಲಾದ ಕವಿಗಳ ಗ್ರಂಥಗಳಿಂದ ಅನೇಕ ಪದ್ಯಗಳು ಉದಾಹೃತವಾಗಿವೆ.

ತನ್ನ ಕವಿತಾಚಾತುರಿಯನ್ನೂ ಗುಣಾದಿಗಳನ್ನೂ ಈ ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ:—

ಸಾರವಿಚಾರಬಂಧುರಮತಿಪ್ರಸರಂ ಪರಿಪಕ್ವಶಾಸ್ತ್ರಸಂ।
ಸ್ಕಾರನುಪೇತಕೌತುಕರಸಂ ವಿದಿತಾಗಮಲೋಕವೃತ್ತನು॥
ತ್ಸಾರಿತಮತ್ಸರಂ ಸುಜನವತ್ಸಳನೆಲ್ಲಿಯುಮಿಾತನೆಂದು ಕ।
ಯ್ಯಾರದೆ ಬಣ್ಣಿಕುಂ ವಿಬುಧಮಂಡಳಿ ಪಂಡಿತನಾಗವರ್ಮನಂ॥
ಶ್ರುತದೇವೀಮಕರಂದಕಲ್ಪಲಪನಂ ವಾಕ್ಶ್ರೀನಿವಾಸಾಂಬುಜಾ।
ಯುತವಕ್ತ್ರಂ ರಸಭಾವಭಾಸುರಸಮುದ್ಯದ್ಭಾರತೀನರ್ತನೋ॥
ಚಿತರಂಗಪ್ರತಿಮಾನನಂ ಪ್ರವಿಲಸದ್ವಾಕ್ಸುಂದರೀಕುಂಕುಮಾಂ।
ಕಿತಕೇಳೀಭವನಾಜಿರೋಪಮಮುಖಂ ಭೂಭಾಗದೊಳ್ ನಾಕಿಗಂ॥
ಸಾಮಾನ್ಯವಾಚಿಗಳನೀತೆಜಿಟಂದನನ್ಯ।
ಸಾಮಾನ್ಯಮಾನ್ಯಸುಚರಿತ್ರಗುಣಾವತಾರಂ॥
ಸಾಮಾನ್ಯಮಪ್ಪ ಜನಮುಂ ತಿಳಿವಂತು ಪೇಳ್ದಂ।
ದಾಮೋದರಪ್ರಿಯಸುತಂ ಕವಿಕರ್ಣಪೂರಂ॥

ಇವನ ಗ್ರಂಥಗಳಲ್ಲಿ

## 1. ಕಾವ್ಯಾವಲೋಕನ.

ಇದು ಅಲಂಕಾರಶಾಸ್ತ್ರ; ಆದಿಭಾಗದಲ್ಲಿ ವ್ಯಾಕರಣವೂ ಸಂಗ್ರಹವಾಗಿ ಹೇಳಿದೆ. ಇದರಲ್ಲಿ ಸೂತ್ರಗಳನ್ನು ಪದ್ಯರೂಪವಾಗಿ ಬರೆದು ಲಕ್ಷ್ಯಕ್ಕೆ ಪೂರ್ವಕವಿಗಳ ಗ್ರಂಥಗಳಿಂದ ಪದ್ಯಗಳನ್ನು ಉದಾಹರಿಸಿದ್ದಾನೆ. ಈ ಗ್ರಂಥವು (1) ಶಬ್ದಸ್ಮೃತಿ, (2) ಕಾವ್ಯಮಲವ್ಯಾವೃತ್ತಿ, (3) ಗುಣವಿವೇಕ, (4) ರೀತಿಕ್ರಮರಸನಿರೂಪಣ, (5) ಕವಿಸಮಯ ಎಂದು 5 ಅಧಿಕರಣಗಳಾಗಿ ಭಾಗಿಸಲ್ಪಟ್ಟಿದೆ. ಇವುಗಳಲ್ಲಿ ಶಬ್ದಸ್ಮೃತಿಯೆಂಬುದೇ ವ್ಯಾಕರಣಭಾಗವು. ಇದರಲ್ಲಿ (1) ಸಂಧಿ, (2) ನಾಮ, (3) ಸಮಾಸ, (4) ತದ್ಧಿತ, (5) ಆಖ್ಯಾತ ಎಂದು 5 ಅಧ್ಯಾಯಗಳಿವೆ. ಕಾವ್ಯಮಲವ್ಯಾವೃತ್ತಿಯಲ್ಲಿ (1) ಪದಪದಾರ್ಥಸಂಧಿದೋಷವಿನಿಶ್ಚಯ, (2) ವಾಕ್ಯವಾಕ್ಯಾರ್ಥದೋಷಾನುಕೀರ್ತನ ಎಂಬ ಎರಡು ಪ್ರಕರಣಗಳಿವೆ. ಗುಣವಿವೇಕದಲ್ಲಿ (1) ಮಾರ್ಗವಿಭಾಗದರ್ಶನ, (2) ಶಬ್ದಾಲಂಕಾರನಿರ್ಣಯ, (3) ಅರ್ಥಾಲಂಕಾರ ಎಂದು ಮೂರು ಪ್ರಕರಣಗಳಿವೆ. ರೀತಿಕ್ರಮರಸನಿರೂಪಣದಲ್ಲಿ (1) ರೀತಿ

ಭಾಗ, (2) ರಸಭಾಗ ಎಂದು ಎರಡು ಭಾಗಗಳಿವೆ. ಕವಿಸಮಯದಲ್ಲಿ (1) ಅಸದಾಖ್ಯಾತಿ, (2) ಸದಕೀರ್ತನ, (3) ನಿಯಮಾರ್ಥ, (4) ಐಕ್ಯ ಎಂದು ನಾಲು ಭಾಗಗಳಿವೆ. ಈ ಗ್ರಂಥದ ಉತ್ಕೃಷ್ಟತೆಯನ್ನು—

ಕವಿಗಳ್ಗಿದು ಕೈಗ್ನನ್ನಡಿ । ಕವಿತೆಗೆ ಬಾಳ್ಗೊಡಲುದಾತ್ತವಾಗ್ದೇವತೆಗು ।
ದ್ಭವಹೇತುಕೋಶಗೃಹಮೆನೆ । ಭುವನದೊಳಿದು ಪರೆದು ನಿಲ್ವುದೊಂದಚ್ಚರಿಯೇ ॥

ಎಂಬ ಪದ್ಯದಲ್ಲಿ ಹೇಳಿದ್ದಾನೆ. ಗ್ರಂಥಾವತಾರದಲ್ಲಿ ವರ್ಧಮಾನನನ್ನೂ ಸರಸ್ವತಿಯನ್ನೂ ಸ್ತುತಿಸಿದ್ದಾನೆ. ಅಧಿಕರಣಗಳ ಅಂತ್ಯದಲ್ಲಿ—

ಇದು ಸಕಳಸುಕವಿಜನಮನಸ್ಸರೋಜಿನೀರಾಜಹಂಸಾಯಮಾನಾನೂನಕವಿತಾಗುಣೋದಯಂ ಶ್ರೀನಾಗವರ್ಮವಿರಚಿತಮಪ್ಪ ಕಾವ್ಯಾವಲೋಕನದೊಳ್

ಎಂಬ ಗದ್ಯವಿದೆ.

ಕವಿತಾಮಾರ್ಗವನ್ನು ಬೋಧಿಸುವ ಈ ಪದ್ಯವನ್ನು ಈ ಗ್ರಂಥದಿಂದ ಉದ್ಧರಿಸಿ ಬರೆಯುತ್ತೇವೆ :—

ಇದು ಸೌಂದರ್ಯಗುಣಪ್ರಕಾಶಮಿದು ತಾನಗ್ರಾಮ್ಯತಾಧಾನಮಿಂ ।
ತಿದು ಭಾಸ್ವತ್ತರಭಾಗರಮ್ಯಮಿದು ಬಂಧಾಶೇಷವಿಚ್ಛಿತ್ತಿಗಾ ॥
ಸ್ಪದಮೆಂದಿಂತುಚಿತಪ್ರಯೋಗವಿಧಿಯಿಂ ಸಯ್ತರ್ಪಿನಂ ತಿರ್ದಿ ಪೇ ।
ಳ್ವುದು ಪೂಮಾಲೆಯನಿಂಬಿನಿಂ ಸಮೆವವೋಲ್ ಸತ್ಕಾವ್ಯಮಂ ಕಬ್ಬಿಗಂ ॥ 311 ॥

## 2. ಕರ್ಣಾಟಕಭಾಷಾಭೂಷಣ.

ಇದು ಕನ್ನಡಭಾಷೆಯ ವ್ಯಾಕರಣಗ್ರಂಥವು. ಇದರಲ್ಲಿ ಸೂತ್ರಗಳನ್ನೂ ವೃತ್ತಿಯನ್ನೂ ಸಂಸ್ಕೃತಭಾಷೆಯಲ್ಲಿ ಬರೆದು, ಪೂರ್ವಕವಿಗಳ ಕನ್ನಡಗ್ರಂಥಗಳಿಂದ ಉದಾಹರಣೆಗಳನ್ನು ಕೊಟ್ಟಿದ್ದಾನೆ. ಇದರಲ್ಲಿ ಒಟ್ಟು 280 ಸೂತ್ರಗಳಿವೆ.[1] ಗ್ರಂಥವು (1) ಸಂಜ್ಞಾ, (2) ಸಂಧಿ, (3) ವಿಭಕ್ತಿ, (4) ಕಾರಕ, (5) ಶಬ್ದರೀತಿ, (6) ಸಮಾಸ, (7) ತದ್ಧಿತ, (8) ಆಖ್ಯಾತನಿಯಮ, (9) ಅವ್ಯಯನಿರೂಪಣ, (10) ನಿಪಾತನಿರೂಪಣ ಎಂದು ಹತ್ತು ಪರಿಚ್ಛೇದಗಳಾಗಿ ವಿಭಾಗಿಸಲ್ಪಟ್ಟಿದೆ. ಕನ್ನಡ ವ್ಯಾಕರಣದಲ್ಲಿ ಜ್ಞಾತವ್ಯಾಂಶಗಳು ಸುಲಭವಾಗಿಯೂ ಸಂಗ್ರಹವಾಗಿಯೂ ಈ ಗ್ರಂಥದಲ್ಲಿ ಹೇಳಿವೆ. ಗ್ರಂಥಾವತಾರದಲ್ಲಿ—

1. ಭಾಷಾಭೂಷಣದ ದ್ವಿತೀಯ ಮುದ್ರಣದಲ್ಲಿ 269 ಸೂತ್ರಗಳಿವೆ. ಕವಿಚರಿತೆಯಲ್ಲಿ ಕೊಟ್ಟಿರುವ ಸೂತ್ರಸಂಖ್ಯೆಗಳು ಪ್ರಥಮ ಮುದ್ರಣಕ್ಕೆ ಅನ್ವಯಿಸುತ್ತವೆ

ಸರ್ವಜ್ಞಂ ತದಹಂ ವಂದೇ । ಪರಂ ಜ್ಯೋತಿಸ್ತಮೋಪಹಂ ।
ಪ್ರವೃತ್ತಾ ಯನ್ಮುಖಾದ್ದೇವೀ । ಸರ್ವಭಾಷಾ ಸರಸ್ವತೀ ॥

ಎಂಬ ಶ್ಲೋಕವೂ, ಅಂತ್ಯದಲ್ಲಿ--

ಕರ್ಣಾಟಶಬ್ದಸೂತ್ರಾಣಿ । ಲೋಕವ್ಯುತ್ಪತ್ತಿಹೇತವೇ ।
ರಚಿತಾನಿ ಸ್ಫುಟಾರ್ಥಾನಿ । ಕೃತಿನಾ ನಾಗವರ್ಮಣಾ ॥

ಎಂಬ ಶ್ಲೋಕವೂ ಇವೆ.

## 3. ವಸ್ತುಕೋಶ.

ಇದು ಕನ್ನಡದಲ್ಲಿ ಉಪಯೋಗಿಸುವ ಸಂಸ್ಕೃತಪದಗಳಿಗೆ ಅರ್ಥವನ್ನು ಹೇಳುವ ಪದ್ಯರೂಪವಾದ ಸಂಸ್ಕೃತಕರ್ಣಾಟಕನಿಘಂಟು ಈ ಗ್ರಂಥದಲ್ಲಿ (1) ಏಕಾರ್ಥಕಾಂಡ, (2) ನಾನಾರ್ಥಕಾಂಡ, (3) ಸಾಮಾನ್ಯಕಾಂಡ ಎಂದು ಮೂರು ಕಾಂಡಗಳು ಇವೆ; ವರ್ಗಗಳು 17 ; ಗ್ರಂಥಪ್ರಮಾಣ 800. ವರರುಚಿ, ಹಲಾಯುಧ, ಭಾಗುರಿ, ಶಾಶ್ವತ, ಅಮರಸಿಂಹ ಮೊದಲಾದವರ ಕೋಶಗಳನ್ನು ನೋಡಿ ಈ ಗ್ರಂಥವನ್ನು ಬರೆದಂತೆ ಕವಿ ಹೇಳುತ್ತಾನೆ. ಗ್ರಂಥಾವತಾರದಲ್ಲಿ ವರ್ಧಮಾನನನ್ನು ಸ್ತುತಿಸಿ, ಎರಡನೆಯ ಪದ್ಯದಲ್ಲಿ ಸರಸ್ವತಿಯ ಪರ್ಯಾಯನಾಮಗಳನ್ನು ಕೊಟ್ಟು ಸ್ತುತಿಸಿ, ಬಳಿಕ ಜಿನನ ಪರ್ಯಾಯನಾಮಗಳನ್ನು ಹೇಳಿ ಸ್ತುತಿಸಿದ್ದಾನೆ. ಈ ಗ್ರಂಥದ ಉತ್ಕೃಷ್ಟತೆಯನ್ನು ಈ ಪದ್ಯಗಳಲ್ಲಿ ಸೂಚಿಸಿದ್ದಾನೆ:—

ಪುದಿದ ಮನಸ್ತಮಮುಂ ಬಿಡೆ । ಬೆಡಂಗೆ ಸದರ್ಥಪ್ರಕಾಶಮುಂ ಮಾಡುಗುಮು ।
ಪ್ಪುದಱಿಂ ಸಮಸ್ತವಿದ್ಯಾ । ಪ್ರದೀಪಮಭಿಧಾನಕೋಶಮಲ್ಲದೆ ಪೆಱತೇಂ ॥
ಕರಮೆ ಜಡಮತಿಯುಮಱಿವಂ । ತಿರೆ ಕನ್ನಡದಿಂ ಜಲಕ್ಕನಾಗಿರ್ಪಿನೆಗಂ ।
ವಿರಚಿಸಿದಂ ಕವಿಕಂಠಾ । ಭರಣನಿದಂ ನಾಗವರ್ಮನೆಸೆ ಮುಚ್ಚದರಾರ್ ॥

ಕಾಂಡಗಳ ಅಂತ್ಯದಲ್ಲಿ ಈ ಗದ್ಯವಿದೆ:—

ಇದು ಸಮಸ್ತಭುವನಜನಸಂಸ್ತೂಯಮಾನ ಮಾನನಾನೂನಕವಿತಾಗುಣೋದಯಂ ಶ್ರೀ ನಾಗವರ್ಮವಿರಚಿತಮಪ್ಪಭಿಧಾನವಸ್ತುಕೋಶದೊಳ್.

ಈ ಗ್ರಂಥದಿಂದ ಅಕ್ಷೋಹಿಣಿಯ ಅರ್ಥವನ್ನು ವಿವರಿಸುವ ಈ ಪದ್ಯವನ್ನು ಉದ್ಧರಿಸಿ ಬರೆಯುತ್ತೇವೆ:—

### ಪಿರಿಯಕ್ಕರ.

ಒಂದುಸಾಮಜವೊಂದುತೇರ್ ಮೂಱಶ್ವಮಯ್ದುಕಾ(ಲಾಳ್ಗಳುಂ)ಪತ್ತಿಯಕ್ಕುಂ ।
ಸಂದ ಪತ್ತಿ ಮೂಱಾಗೆ ಸೇನಾಮುಖಂ ಮೂಱಱಿಂ ಗುಲ್ಮಂ ಮೂಱುಗುಲ್ಮ ॥

ಕ್ಕೊಂದುಗಣಮುವು ಮೂಱು ವಾಹಿನಿ ತತ್ತ್ರಯಂ ಪೃತನಾಖ್ಯೆ ಪೃತನೆಗಳ್ಮೂ |
ಱೊಂದಿ ತೋಱ ಚಮೂ ಮೂಱುಮನೀಕಿನಿ ಪತ್ತನೀಕಿನಿಯಕ್ಕಾಹಿಣಿಯೆನಿಕ್ಕುಂ
॥ 312 ॥

ನಮಗೆ ದೊರೆತಿರುವ ಕನ್ನಡ ವ್ಯಾಕರಣಗ್ರಂಥಗಳಲ್ಲಿ ಇವನದೇ ಮೊದಲನೆಯದು. ಕಾವ್ಯಾವಲೋಕನದ ಪ್ರಥಮಾಧಿಕರಣವಾದ ಶಬ್ದಸ್ಮೃತಿಯಲ್ಲಿ ಈತನು ಸಂಗ್ರಹವಾಗಿ ಹೇಳಿರುವ ವ್ಯಾಕರಣಪ್ರಕ್ರಿಯೆಗಳನ್ನು **ಕೇಶಿರಾಜನು** ಶಬ್ದಮಣಿದರ್ಪಣದಲ್ಲಿ ವಿಸ್ತರಿಸಿ ಬರೆದಿದ್ದಾನೆ. ಶಬ್ದಸ್ಮೃತಿಯಲ್ಲಿ ಉದಾಹೃತವಾದ ಪದ್ಯಗಳನ್ನೇ ಕೇಶಿರಾಜನು ತನ್ನ ಗ್ರಂಥದಲ್ಲಿ ಪ್ರಾಯಶಃ ಉದಾಹರಿಸಿದ್ದಾನೆ. ಕರ್ಣಾಟಕ ಭಾಷೆಗೆ ಸಂಸ್ಕೃತದಲ್ಲಿ ಸೂತ್ರರೂಪವಾಗಿ ಬರೆದಿರುವ ವ್ಯಾಕರಣಗ್ರಂಥಗಳಲ್ಲಿ ಭಾಷಾಭೂಷಣವೇ ಮೊದಲನೆಯದು. ಇವರ ರೀತಿಯನ್ನೇ ಅನುಸರಿಸಿ **ಭಟ್ಟಾಕಳಂಕನು** (1604) ಶಬ್ದಾನುಶಾಸನವೆಂಬ ದೊಡ್ಡ ವ್ಯಾಕರಣಗ್ರಂಥವನ್ನು ಬರೆದಿದ್ದಾನೆ.

**ನೃಪತುಂಗನು** ಹೇಳುವಂತೆಯೇ ನಾಗವರ್ಮನೂ ಉತ್ತರಮಾರ್ಗ, ದಕ್ಷಿಣಮಾರ್ಗ ಎಂಬ ಭೇದಗಳನ್ನು ಹೇಳುತ್ತಾನೆ. ಆದರೆ, ಈತನು ಹೇಳುವ ದಕ್ಷಿಣೋತ್ತರಮಾರ್ಗಗಳು ವೈದರ್ಭ ಗೌಡಮಾರ್ಗಗಳೇ ಹೊರತು ಕನ್ನಡದ ಭೇದಗಳಲ್ಲ [1] ಅಲಂಕಾರಪ್ರಕರಣವು ನೃಪತುಂಗನ ಗ್ರಂಥದಲ್ಲಿರುವುದಕ್ಕಿಂತ ಈತನ ಕಾವ್ಯಾವಲೋಕನದಲ್ಲಿ ವಿಸ್ತಾರವಾಗಿ ಹೇಳಿದೆ. ಆದರೆ ಈ ಗ್ರಂಥದಲ್ಲಿ ಹೇಳಿರುವ ರಸನಿರೂಪಣ ಮೊದಲಾದ ಅಂಶಗಳು ನೃಪತುಂಗನ ಗ್ರಂಥದಲ್ಲಿಲ್ಲ. ಈತನ ರಸಪ್ರಕರಣವನ್ನು ಅನುಸರಿಸಿ, **ಸಾಳ್ವನು** (ಸು. 1550) ರಸರತ್ನಾಕರವೆಂಬ ತನ್ನ ಗ್ರಂಥವನ್ನು ಬರೆದಂತೆ ಹೇಳುತ್ತಾನೆ. ಕನ್ನಡಭಾಷೆಯಲ್ಲಿ ನಮಗೆ ದೊರೆತಿರುವ ನಿಘಂಟುಗಳಲ್ಲಿ ವಸ್ತುಕೋಶವೇ ಮೊದಲನೆಯದು. **ಮಂಗರಾಜನೂ** (1398), **ದೇವೋತ್ತಮನೂ** (ಸು. 1600) ಈ ನಿಘಂಟುವನ್ನು ನೋಡಿ ತಮ್ಮ ಕೋಶಗಳನ್ನು ರಚಿಸಿದಂತೆ ಹೇಳುತ್ತಾರೆ.

---

## ದುರ್ಗಸಿಂಹ. ಸು. 1145.

ಈತನು ಪಂಚತಂತ್ರವನ್ನು ಬರೆದಿದ್ದಾನೆ. ಈತನ ವಿಷಯವಾಗಿ ಇವನ ಗ್ರಂಥದಿಂದ ಈಯಂಶಗಳು ತಿಳಿಯಬರುತ್ತವೆ:— ಕರ್ಣಾಟಕದೇಶದಲ್ಲಿಯ ಕಿಸುಕಾಡುನಾಡಿನಲ್ಲಿ ಸಯ್ಯಡಿಯೆಂಬ ಅಗ್ರಹಾರದಲ್ಲಿ “ಮನ್ವಾದಿಪುರಾಣಮುನಿಗಣ

1. ದ್ವಿತೀಯಸಂಪುಟದ ಅವತರಣಿಕೆಯ 27ನೆಯ ಪುಟವನ್ನು ನೋಡಿ.

ಪ್ರಣೂತಶ್ರುತಿವಿಹಿತವಿಶುದ್ಧಮಾರ್ಗನುಂ, ನಿತ್ಯಹೋಮಾಧ್ಯಯನಾನೇಕಯಾಗಾವಭೃತಸ್ನಾನಪವಿತ್ರಗಾತ್ರನುಂ, ಭಗವನ್ನಾರಾಯಣಚರಣಾಂಬುಜಸ್ಮರಣಪರಿಣತಾಂತಃಕರಣನುಂ, ತರ್ಕವ್ಯಾಕರಣಕಾವ್ಯನಾಟಕಭರತವಾತ್ಸ್ಯಾಯನಾದ್ಯಶೇಷವಿದ್ಯಾಸಮುದ್ರತರಣಗುಣೈಕಪುಣ್ಯನುಂ, ಧರಾಮರಾಗ್ರಗಣ್ಯನುಂ" ಆದ ದುರ್ಗಮಯ್ಯನಿದ್ದನು. ಇವನ ಮಗ "ದೇವದ್ವಿಜಗುರುಜನಪದಸೇವಾನಿರತ" ನಾದ ಈಶ್ವರಾರ್ಯ; ಇವನ ಹೆಂಡತಿ ರೇವಕಬ್ಬೆ; ಮಗ ಕವಿ ದುರ್ಗಸಿಂಹ. ಈತನು ಬ್ರಾಹ್ಮಣಕವಿ; ಕಮ್ಮೆ ಕುಲದವನು; ಗೌತಮಗೋತ್ರದವನು. ಇವನ ಗುರು 'ಮಹಾಯೋಗಿ'ಯಾದ ಶಂಕರಭಟ್ಟ. ಚಾಳುಕ್ಯರಾಜರಲ್ಲಿ 'ಕಲಿಕಾಲಕರ್ಣಂ,' 'ನೃಪಚಕ್ರವರ್ತಿತಿಲಕಂ,' 'ಶ್ರೀಕೀರ್ತಿವಿದ್ಯಾಧರಂ,' 'ಸತ್ಯಾಶ್ರಯಕುಲತಿಲಕಂ,' 'ಚೋಳಕಾಲಾನಲಂ' ಎಂಬ ಬಿರುದುಗಳುಳ್ಳ ಜಗದೇಕಮಲ್ಲ ಅಥವಾ ಜಯಸಿಂಹ ಎಂಬ ರಾಜನಲ್ಲಿ ಶ್ರೀಗಂಡಭೂರಿಶ್ರಯನೆಂಬ ಬಿರುದುಳ್ಳ ಸಿಂಹಸನ್ನಾಹನೆಂಬ ದಂಡನಾಯಕನಿದ್ದನು. ತಚ್ಚರಣಕಮಲಭೃಂಗನಾದ ಚಕ್ರವರ್ತಿದಂಡಾಧೀಶ, ಕೋದಂಡರಾಮಾಧಿಪ, ಮೊದಲಾದ ಬಿರುದುಗಳುಳ್ಳ ಕುಮಾರಸ್ವಾಮಿ ಕವಿಗೆ ಜಗದೇಕಮಲ್ಲನಲ್ಲಿ ಸಂಧಿವಿಗ್ರಹಿಪದವಿಯನ್ನು ಕೊಡಿಸಿದನು. ತನ್ನ ಸ್ವಾಮಿಯಾದ ಜಗದೇಕಮಲ್ಲನ ಆಜ್ಞೆಯಂತೆ ಕವಿ ಸಯ್ಯಡಿಯಲ್ಲಿ ಹರಿಹರಭವನಗಳನ್ನು ಕಟ್ಟಿಸಿದನು.

**ಮಲ್ಲಿಕಾರ್ಜುನನು** (ಸು. 1245) ಈ ಕವಿಯು ಪಂಚತಂತ್ರದಿಂದ ಪದ್ಯಗಳನ್ನು ಉದ್ಧರಿಸಿ ಬರೆದಿರುವುದರಿಂದ ಈತನು 1245 ಕ್ಕೆ ಹಿಂದೆ ಇದ್ದನೆಂಬುದು ಸ್ಪಷ್ಟವಾಗಿದೆ. ಪೂರ್ವಕವಿಸ್ತವಾವಸರದಲ್ಲಿ ಈತನು ನಾಗಚಂದ್ರನ (ಸು. 1100) ಹೆಸರನ್ನು ಹೇಳುವುದರಿಂದ ಆತನ ಕಾಲಕ್ಕೆ ಈಚೆಯವನಾಗಿರಬೇಕು. ಆದುದರಿಂದ 1138 ರಿಂದ 1150 ರ ವರೆಗೆ ಆಳಿದ ಜಗದೇಕಮಲ್ಲನೆಂಬ ಚಾಳುಕ್ಯರಾಜನಲ್ಲಿಯೇ ಈತನು ಸಂಧಿವಿಗ್ರಹಿಯಾಗಿದ್ದಿರಬೇಕು; ಸುಮಾರು 1145 ರಲ್ಲಿ ಇದ್ದಿರಬಹುದು.

ವರರುಚಿ ಕಾಳಿದಾಸಸುಕುಮಾರಕುಮಾರಕವಾಸಬಾಣನುಂ ।
ಹರಿಹರಸಾರ್ವಭೌಮಕವಿರನ್ನನು ರೇಚುಗಮುರ್ಗಸಿಂಹನುಂ ॥
ವರಕವಿಬತ್ತಲೇಶ್ವರನು ರಾಘವನಗ್ಗಳರುದ್ರಭಟ್ಟನುಂ ।
ತುರುಗಮಯೂರಹಂಪುಗನು ಕುಂತಿ ಚವುಂಡಿಯರೇ ಕವೀಂದ್ರರು ॥

ಎಂಬ ಒಂದು ಪದ್ಯವು ದೊರೆಯುತ್ತದೆ.[1] ಇದಾವ ಕವಿಯಿಂದ ರಚಿತವಾದುದೋ ತಿಳಿಯದು. ಇದರಲ್ಲಿ ದುರ್ಗಸಿಂಹನನ್ನೂ ಕವೀಂದ್ರರ ಗೋಷ್ಠಿಯಲ್ಲಿ ಸೇರಿಸಿ ಹೇಳಿದೆ.

---

1. ಬೆಂಗಳೂರಲ್ಲಿ ಅಚ್ಚಾಗಿರುವ ನೀತಿಸಾರ ಎಂಬ ಗ್ರಂಥದಲ್ಲಿ

ಈತನು ಪೂರ್ವಕವಿಗಳಲ್ಲಿ—ವಾಲ್ಮೀಕಿವ್ಯಾಸಾದಿಕವಿಗಳು, "ನಾಭೇಯಂ ಸುರಾಮಾತ್ಯನಿಂದ್ರನದೀನಂದನನುದ್ಭವಂ ಮನುವಿಶಾಲಾಕ್ಷೇಭದಂತಂ ಕುಬೇರನ ಜಾತ ಪ್ರಿಯಪುತ್ರ"ರೆಂಬೀ ನೀತಿಶಾಸ್ತ್ರಪ್ರವರ್ತಕರು, ಚಂದ್ರಗುಪ್ತನಿಗೆ ರಾಜ್ಯವನ್ನು ಸಂಪಾದಿಸಿ ಕೊಟ್ಟ ನೀತಿವಿದನಾದ ವಿಷ್ಣುಗುಪ್ತ, ಗುಣಾಢ್ಯ, ವರರುಚಿ, ಕಾಳಿದಾಸ, ಹರ್ಷರಾಜನಿಂದ ಕವಿಚಕ್ರವರ್ತಿಬಿರುದಂ ಪಡೆದ ಬಾಣ, ಸೂರ್ಯನನ್ನು ಮೆಚ್ಚಿಸಿದ ಮಯೂರ, ರಾಘವಪಾಂಡವೀಯವನ್ನು ಬರೆದ ಧನಂಜಯ, 'ವಾಮನಕುಮಾರನುದ್ಭಟ। ಭೀಮಂ ಭವಭೂತಿಭಾರವೀಭಟ್ಟಿವಚ॥ ಶ್ರೀಮಾಘರಾಜಶೇಖರ। ಕಾಮಂದಕರು,' ದಂಡಿ, ಈ ಸಂಸ್ಕೃತ ಕವಿಗಳನ್ನೂ, **ಶ್ರೀವಿಜಯ,** ಮಾಳವೀಮಾಧವವನ್ನು ಬರೆದ **ಕನ್ನಮಯ್ಯ, ಅಸಗ, ಮನಸಿಜ, ಚಂದ್ರ (ಭಟ್ಟ), ಪೊನ್ನ,** ಮಾರ್ಗದ್ವಯಪರಿಣತಕವಿಮಾರ್ಗನಾದ **ಪಂಪ,** ದಂಡನಾಯಕ **ಗಜಾಂಕುಶ, ಕವಿತಾವಿಲಾಸ,** ಈ ಕನ್ನಡ ಕವಿಗಳನ್ನೂ ಸ್ತುತಿಸಿದ್ದಾನೆ. ತನ್ನ ಗ್ರಂಥವನ್ನು 'ಕವಿಗಮಕಿವಾದಿವಾಗ್ಮಿಪ್ರವರ' ನಾದ ಶ್ರೀಮಾದಿರಾಜ ಮುನಿಪುಂಗವನು ತಿದ್ದಿದನೆಂದು ಹೇಳುತ್ತಾನೆ.

ತನ್ನ ಗುಣಾದಿಗಳನ್ನು ಈ ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ:—

ಅನವದ್ಯಾಚರಣಕ್ಕುದಾಹರಣಮುದ್ಯತ್ಕೀರ್ತಿಗಾಧಾರಮಾ |
ಳ್ದನ ಕಾರ್ಯಕ್ಕೆ ಮರುತ್ತನೂಜನೆನಿಪಂ ದಾರ್ತ್ರೀಯ ವಂಶಕ್ಕೆ ಮಂ ||
ಡನರತ್ನಂ ಕಟಕಾರ್ಣವಪ್ರತರಣಪ್ರೋದ್ಭಾಸಿ ಸಿದ್ಧೋಷ್ಟಶಿ |
ಷ್ಟನಿಕಾಯಕ್ಕೆ ವಹಿತ್ರಮೆಂದು ಪೊಗಟ್ಟುಂ ವಿದ್ವಜ್ಜನಂ ದುರ್ಗನಂ ||
ವಿನಯಾಧೀನನಹೀನಂ | ವಿನುತಕುಲೀನಂ ನಿಜೇಶಕಾರ್ಯಧುರೀಣಂ |
ಮನುವಿಹಿತಧರ್ಮಮಾರ್ಗಾ | ಧ್ವನೀನನಿವನೆಂದು (ದುರ್ಗನೆನಿಸಿ)ದನಲ್ತೇ ||
ಅಜಿವಿಂಗಾಕರಮೊಳ್ಗುಣಕ್ಕೆ ಕಣಿ ಶೌಚಕ್ಕಾಸ್ಪದಂ ಜಾಣ್ತನ |
ಕ್ಕೆ ಜೀವಪೊಳ್ಕುಡಿಗಾರ್ಮಮಾಯತಿಗಡಪರ್ಪಿಂಗೆ ಲೀಲಾಗೃಹಂ ||
ಗುಜಿ ಧರ್ಮಕ್ಕೆ ವಿನೀತವೃತ್ತಿಗೆ ತವರ್ ಸತ್ಯಕ್ಕಧಿಷ್ಠಾನಮುಂ |
ದಜಿತಂ ಕೆಯ್ಮಿಗೆ ಕೂರ್ತು ಕೀರ್ತಿಸುವುದುರ್ವೀಮಂಡಲಂ ದುರ್ಗನಂ ||
ನಿಶ್ಚಿತಮನರಲ್ಲದರಂ | ದುಶ್ಚರಿತರನೆಯ್ದೆ ಪಡೆದ ದೋಷಕ್ಕಂ ಪ್ರಾ |
ಯಶ್ಚಿತ್ತಮೆಂದು ಸಕಲವಿ | ಪಶ್ಚಿನ್ನಿಧಿಯೆನಿಪ ದುರ್ಗನಂ ಬಿದಿ ಪಡೆದಂ ||
ವಿನಯಾಂಭೋನಿಧಿ ಶಿಷ್ಟಕಲ್ಪಮುಜಂ ಸತ್ಯವ್ರತಂ ವಿಪ್ರವಂ |
ಶನಭೋಮಂಡಲಚಂಡಭಾನು ವಿಲಸದ್ವಾಕ್ಶ್ರೀಮನೋರಮನೆಂ ||
ಪೆನಸುಂ ಧಾರಿಣಿ ಬಣ್ಣಿಕುಂ ನಿಜಯಶೋವಲ್ಲೀವೃತಾಂಭೋದವಾ |
ರ್ಗನನಾರಾಧಿತಭರ್ಗನಂ ಭೃತವಿಪಶ್ಚಿದ್ವರ್ಗನಂ ದುರ್ಗನಂ ||
**ಜಗದೊಳ್ ಪತಿಹಿತದೆಡೆಯೊಳ್ | ನೆಗಳ್ದನಜನನೇಕದಂತನಿಂ ಪವನಜನಿಂ |**
**ಖಗರಾಜನಿನೀದುರ್ಗಂ | ದ್ವಿಗುಣಂ ತ್ರಿಗುಣಂ ಚತುರ್ಗುಣಂ ಪಂಚಗುಣಂ ||**

ದಾನಶೂರನಪವಾದಭೀರು ವಿ। ಜ್ಞಾನಮೂರ್ತಿ ಭುವನೈಕವತ್ಸಲಂ।
ಮಾನನೀಯಗುಣನೆಂಬ ಪೆಂಪಿನು। ದ್ಭಾನಿಯಂ ತಳೆದ ದುರ್ಗನನ್ನರಾರ್॥
ಉದಯೋತ್ತುಂಗನಗಸ್ವಭಾವದಿನಪಂ ಪ್ರೋದ್ದಾಮಧರ್ಮಕ್ಷಮಾ।
ಪದ ಚೇರ್ ಸ್ವಾಮಿಹಿತೌಘನಿರ್ಮಲಮಹಾರತ್ನಾಕರಂ ನೀತಿಶಾ॥
ಸ್ತ್ರದ ಮಂತ್ರಕ್ಕಧಿದೈವತಂ ದ್ವಿಜಕುಲಶ್ರೀಕೇಳಿಸಂವಾಸಮಂ।
ಬುದು ಸರ್ವೋರ್ವರೆ ಧರ್ಮನಿರ್ಮಳಯಶಸ್ಸದ್ವರ್ಗನಂ ದುರ್ಗನಂ॥
ಪತಿಹಿತನಂಜನಾತನಯನಾಪವನಾತ್ಮಜನಿಂ ಖಗೇಶ್ವರಂ।
ಪತಿಹಿತನಾಮರುತ್ತನಯನಿಂ ಖಗರಾಜನಿನರ್ಕನಂದನಂ॥
ಪತಿಹಿತನಾಮರುತ್ತನಯನಿಂ ಖಗರಾಜನಿನರ್ಕಜಾತನಿಂ।
ಪತಿಹಿತನೀತನೆಂದು ಪೊಗಟ್ಬುಂ ಸಲೆ ದುರ್ಗನನುರ್ವರಾಜನಂ॥

ಇವನ ಗ್ರಂಥ

## ಪಂಚತಂತ್ರ.

ಇದು ಚಂಪೂರೂಪವಾಗಿದೆ. ಇದರಲ್ಲಿ (1) ಭೇದಪ್ರಕರಣವರ್ಣನಂ. (2) ಪರೀಕ್ಷಾವ್ಯಾವರ್ಣನಂ, (3) ವಿಶ್ವಾಸಪ್ರಕರಣವರ್ಣನಂ, (4) ವಂಚನಾಪ್ರಕರಣವರ್ಣನಂ, (5) ಮಿತ್ರಕಾರ್ಯಪ್ರಕರಣಂ ಎಂಬ ಐದು ತಂತ್ರಗಳಿವೆ. ಪಂಚತಂತ್ರಕಥೆ ಹುಟ್ಟಿದ ವಿಷಯವನ್ನು ಈ ರೀತಿಯಾಗಿ ಹೇಳಿದ್ದಾನೆ:—

ರಜತಗಿರಿಯಲ್ಲಿ ಸಮಸ್ತಾಮರಮಣಿಮಕುಟೋದ್ಘೃಷ್ಟಪಾದಾರವಿಂದಂ ಗಿರಿಜಾಧೀಶನಿರ್ದಂ. ಅಂತಿರ್ದ ಪರಮೇಶ್ವರಂಗೆ ಗಿರಿರಾಜತನೂಜೆ ಕರಕಮಲಂಗಳಂ ಮುಗಿದು—ದೇವಾ ನೀವೆನಗೊಂದಪೂರ್ವಮಪ್ಪ ಕಥೆಯಂ ಪೇಳ್ವೇಳ್ಬುದೆನೆ, ಹರಂ ದರಹಸಿತವದನಾರವಿಂದನಾಗಿ ಪಾರ್ವತಿಗಪೂರ್ವಮಪ್ಪ ಕಥೆಯಂ ಪೇಳುತ್ತಿರಲಾಕಥಾಗೋಷ್ಠಿಯೊಳ್ ಪುಷ್ಪದಂತನೆಂಬಂ ಗಣಪ್ರಧಾನನಿರ್ದೆಲ್ಲಮಂ ಕೇಳ್ದಿತ್ತಾನುಮೊಂದು ಕಾರಣದಿಂ ಮಾನವಲೋಕದೊಳ್ ಪುಟ್ಟಿ ಗುಣಾಢ್ಯನೆಂಬ ಸತ್ಕವಿಯಾಗಿ ಶಾಲಿವಾಹನನೆಂಬ ಚಕ್ರವರ್ತಿಯ ಕವಿಯಾಗಿರ್ದು ಹರಂ ಗಿರಿಸುತೆಗೆ ಪೇಳ್ದಾ ಕಥೆಗಳಂ ಪೈಶಾಚಿಕಭಾಷೆಯೊಳ್ ಬೃಹತ್ಕಥೆಗಳಂ ಮಾಡಿ ಪೇಳ್ದೊಡವಂ ವಸುಭಾಗಭಟ್ಟಂ ಕೇಳ್ದಾ ಕಥಾಸಮುದ್ರದೊಳ್ ಪಂಚರತ್ನಮಪ್ಪಯ್ದು ಕಥೆಗಳನಾಯ್ದುಕೊಂಡು ಪಂಚತಂತ್ರಮೆಂದು ಪೆಸರಿಟ್ಟು ಸಮಸ್ತಜನೋಪಕಾರಾರ್ಥಂ ಪೇಳ್ದಂ.

ಈ ವಸುಭಾಗಭಟ್ಟನ ಕೃತಿಯನ್ನೇ ತಾನು ಕನ್ನಡದಲ್ಲಿ ಬರೆವುದಾಗಿ—

ವಸುಭಾಗಭಟ್ಟಕೃತಿಯಂ। ವಸುಧಾಧಿಪಹಿತಮನಖಿಲವಿಬುಧಸ್ತುತಮಂ।
ಪೊಸತಾಗಿರೆ ವಿರಚಿಸುವೆಂ। ವಸುಮತಿಯೊಳ್ ಪಂಚತಂತ್ರಮಂ ಕನ್ನಡದಿಂ॥

ಎಂಬ ಪದ್ಯದಲ್ಲಿ ಹೇಳುತ್ತಾನೆ.

ಗ್ರಂಥಾವತಾರದಲ್ಲಿ ವಿಷ್ಣುವನ್ನು ಸ್ತುತಿಸಿದ್ದಾನೆ. ಬಳಿಕ ಈಶ್ವರ, ಬ್ರಹ್ಮ, ಸರಸ್ವತಿ, ಚಂದ್ರ, ಮನ್ಮಥ, ಸೂರ್ಯ, ಗಣಪ, ದುರ್ಗಿ ಇವರುಗಳನ್ನು ಕ್ರಮವಾಗಿ ಸ್ತುತಿಸಿದ್ದಾನೆ. ತಂತ್ರಗಳ ಕೊನೆಯಲ್ಲಿ—

ಇದು ವಿನಮದಮರರಾಜಮೌಳಿಮಾಣಿಕ್ಯಮರೀಚಿಮಂಜರೀಪುಂಜರಂಜಿತಭಗವದ್ಭವಾನೀವಲ್ಲಭಚರಣಸರಸಿರುಹಷಟ್ಚರಣಂ ಶ್ರೀಮನ್ಮಹಾಸಂಧಿವಿಗ್ರಹಿ ದುರ್ಗಸಿಂಹವಿರಚಿತಮಪ್ಪ ಪಂಚತಂತ್ರದೊಳ್

ಎಂಬ ಗದ್ಯವಿದೆ.

ಇವನ ಬಂಧವು ಪ್ರೌಢವಾಗಿಯೂ ಪ್ರಾಸಬದ್ಧವಾಗಿಯೂ ಇದೆ. ಇವನ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

### ಪಿಂಗಳಕನೆಂಬ ಸಿಂಹವು.

ಭಂಗುರಭೀಷಣಭ್ರುಕುಟಿದಂಷ್ಟ್ರನುದಗ್ರದವಾನಳಪ್ರಭಾ ।
ಭಂಗಪಿಶಂಗಕೇಸರಸಟಾವೃತರೌದ್ರಮುಖಂ ಮದಾಂಧಮಾ ॥
ತಂಗಘಟಾವಿಘಟ್ಟನಪಟಿಷ್ಠಕಠೋರನಖಾಳಿ ನಾಮದಿಂ ।
ಪಿಂಗಳಕಂ ಮೃಗೇಂದ್ರನೆಸೆದಿರ್ಪುದತರ್ಕ್ಯಪರಾಕ್ರಮಕ್ರಮಂ ॥ 313 ॥

[1]ಚಳದಳಕಂ ಹರ್ಷೋದ್ಗತ । ಪುಳಕಂ ನಖಮುಖವಿದಾರಿತೋಗ್ರೇಭಶಿರಃ ।
ಫಳಕಂ ಮೃಗತಿಳಕಂ ಪಿಂ । ಗಳಕಂ ಪೋಗೆಂದು ಕಳಿಪಿದಂ ದಮನಕನಂ ॥ 314 ॥

### ಸಮುದ್ರ.

ಬಲವದ್ವೈರಿಸ್ಫಾರವಜ್ರಾಧಿಕಭಯಚಕಿತೋದ್ಧೂತಮೈನಾಕಗೋತ್ರಾ ।
ಚಲಪಕ್ಷತ್ರಾಯಿ ಸಿಂಧುಪ್ರಿಯತಮನತಿಗಂಭೀರನಂತರ್ನಿವಿಷ್ಟಾ ॥
ಖಿಲಲೋಕಂ ನಕ್ರಚಕ್ರಸ್ಫುರದುರುತರಯಾದಶ್ಚರಾಧ್ಯಾಸಿತಪ್ರೋ ।
ಚ್ಛಲಿತಾಂಭಃಕುಂಭಿಕುಂಭೋನ್ಮದರಸವಿಲಸತ್ ಕ್ಷೋಭರೌದ್ರಂ ಸಮುದ್ರಂ ॥315॥

### ಕತ್ತಲೆ.

ಮೇದಿನಿಯುಂ ಕ್ರಮಕ್ರಮದೆ ಪರ್ವಿದುದಾತ್ತನಭೋವಿಭಾಗಮಾ ।
ಚ್ಛಾದಿತದಿಙ್ಮುಖಂ ವ್ಯವಹಿತಾಖಿಲದೃಷ್ಟಿಪಥಂ ತಮಾಲಭೃಂ ॥
ಗೋದರನೀರದಾಗಮಘನಪ್ರಕರಾಂಜನಪುಂಜಕೋಕಿಳಾ ।
ಚ್ಛೋದರಕಾಯಕಾಂತಿಶಿತಿಕಂಠಗಲಪ್ರತಿಮಪ್ರಭಂ ತಮಂ ॥ 316 ॥

1. ಈ ಪದ್ಯವು ಶಬ್ದಾನುಶಾಸನದ 140 ನೆಯ ಸೂತ್ರದ ವ್ಯಾಖ್ಯಾನದಲ್ಲಿ ಉದಾಹರಿಸಿದೆ.

## ನರ್ಮದೆ.

ಮದವದ್ವನ್ಯಗಜೇಂದ್ರದಾನಮಲಿನೋದ್ಯದ್ಭೃಂಗಸಂಘಾತಸಂ |
ಪದೆಯಂ ಬಾಲಮೃಣಾಲಜಾಲಕಲಸತ್ಸ್ವಾದುಪ್ರಪುಷ್ಪೋತ್ಕರ ||
ಚ್ಛದೆಯಂ ತೀರನವೀನಚೂತಕುಸುಮವ್ರಾತಾಸವೋನ್ಮತ್ತಷ |
ಟ್ಪದೆಯಂ ನರ್ಮದೆಯಂ ಮಹಾಪ್ರದೆಯನಾವಿಪ್ರಂ ಸಮಂತೆಯ್ದಿದಂ || 317 ||

## ಸೂರ್ಯಾಸ್ತ.

ಮುಗಿಯೆ ಸರೋಜಷಂಡಮಲರ್ದೊಪ್ಪೆ ನವೋತ್ಪಲರಾಜಿ ಜಕ್ಕವ |
ಕ್ಕಿಗಳ ಮನಕ್ಕೆ ತಾಪಮೊದವುತ್ತಿರೆ ವಿದ್ರುಮಭಂಗಕಾಂತಿ ಕೆ ||
ಯ್ಮಿಗೆ ಘನವೀಧಿಯೊಳ್ ನಿಜಕುಲಾಯತನಕ್ಕೆ ಪಾಱಿ ಪ |
ಕ್ಕಿಗಳಪರಾಂಬುರಾಶಿಗಿೞಿದಂ ನಳಿನೀವನಜೀವಿತೇಶ್ವರಂ || 318 ||

## ಸಮೀರಣ.

ವಿದಳಿತಪುಷ್ಪಸೌರಭಮನಾವಗಮಿರ್ಕುಳಿಗೊಂಡು ಕೊಂಡು ಷ |
ಟ್ಪದಪದಪದ್ಮಿನೀನಿವಹಶೈತ್ಯದೊಳೊಯ್ಯನೆ ಕೂಡಿ ಕೂಡಿ ಮಾ ||
ಣದೆ ವಿವಿಧದ್ರುಮೋತ್ಕರದಿಱುಂಬಿನೊಳಿಂಬಿನೆ ನಿಂದು ನಿಂದು ತೀ |
ಡಿದುದಘಹಾರಣಂ ಪಥಪರಿಶ್ರಮವಾರಣಮಾಸಮೀರಣಂ || 319 ||

## ವಿವಿಧನೀತಿ.

ಹಿತನಪ್ಪ ಭೃತ್ಯನೆಂದುಂ | ಪತಿಗಪಜಯಮಾಗದಂತೆ ಪೇೞ್ವುದು ಪತಿ ದು |
ರ್ಮತಿಯಾಗಿ ದುಷ್ಟಜನಸಂ | ಗತಿಗೆಱಗಿದೊಡೆಱಗಲೀಯದಿರ್ಪುದಮೋಘಂ || 320 ||

ಅಱಿದುದನಾಳ್ದನೊಳ್ ಮಱಸಿ ಮಾಣ್ಬರದೊಯ್ಕನೆ ಪೇೞದಾತನೇ |
ತಱಿ ಹಿತನೆಯ್ದೆ ಕೂರ್ಪವರ ಪೇೞ್ದುದನಿಂಬಿನೆ ಕೇಳದಾತನೇ ||
ತಱಿ ವಿಭು ಮಂತ್ರಿಯುಂ ನೃಪತಿಯುಂ ಬಗೆಗೊಂಡನುಕೂಲವೃತ್ತಿಯೊಳ್ |
ಮೆಱೆದಿರೆ ಕೂಡುಗುಂ ನಿಖಿಳರಾಜ್ಯವಿಭೂತಿಗಳಾವಕಾಲಮುಂ || 321 ||

ಸುರಪತಿ ಗೃಧ್ರನಾಗಿ ತಗುಳಲ್ ಮಱೆವೊಕ್ಕ ಕಪೋತನಂ ಕ್ಷಿತೀ |
ಶ್ವರಕುಲಚಕ್ರವರ್ತಿ ಶಿಬಿಯೆಂಬ ನೃಪೋತ್ತಮನಾತ್ಮಮಾಂಸಮಂ ||
ಸುರಪತಿಗಿತ್ತು ರಕ್ಷಿಸಿ ಪಯೋಧಿಪರೀತಧರಿತ್ರಿ ಬಣ್ಣಿಸು |
ತ್ತಿರೆ ತಳೆದಂ ಶರತ್ಸಮಯಚಂದ್ರಕರೋಜ್ವಲರುಂದ್ರಕೀರ್ತಿಯಂ || 322 ||

ಸಾಲದೆ ಪೆಱರಂ ಪೊಡಮ | ಟ್ಟೋಲೈಸದೆ ನಿಚ್ಚವಯುಣಮಿಲ್ಲದೆ ತನ್ನಿ |
ರ್ದಾಲಯದೊಳಿರ್ದು ಬಾೞ್ವುದೆ | ಮೂಲೋಕಮನಾಳ್ವ ಸುಖದಿನಗ್ಗಳಮಲ್ತೇ || 323 ||

ಪುರುಷಂ ದೈವಮೆ ಶರಣಂ । ದಿರಲಾಗದು ತನಗೆ ತಾನೆ ಮಾಡದು ದೈವಂ ।
ಪುರುಷಾರ್ಥಂಗೆಯ್ಯುತ್ತಿರೆ । ಪರಮಾರ್ಥಂ ದೈವಮುಂ ಕೃತಾರ್ಥಂಮಾಳ್ಕುಂ ॥324॥

ನಂಬಿಪರೆನ್ನರಪ್ಪರುಮನೇತಱಿದಿಂ ಸಲೆ ನಂಬಿ ಪಾಣ್ಬೆಯರ್ ।
ನಂಬಿಸರಿಂತನೇಕವಿಧದಿಂದೆ ವಿಚಾರಿಸಿ ನೋಡೆ ಪೆಂಡಿರಂ ॥
ನಂಬಳೆ ಆಗ ನಂಬದಿರಲಾಗವರಿಲ್ಲದೆ ಬಾಳಲಾಗದೇ ।
ನೆಂಬುದಿದರ್ಕೆ ತಕ್ಕುದನೆ ಬಲ್ಲವನುಳ್ಳೊಡೆ ದೇವನಲ್ಲನೇ ॥ 325 ॥

---

## ಸುಕರಸುಕವಿಕಂಠಾಭರಣ. ಸು. 1145.

ಸೊರಬದ 138 ನೆಯ ಶಾಸನದಲ್ಲಿ ಒಬ್ಬ ಎಕ್ಕಲದೇವನನ್ನು ವಿಶೇಷವಾಗಿ ಸ್ತುತಿಸಿ "ಸುಕರಸುಕವಿಕಂಠಾಭರಣಾದ್ಯನೇಕಕವಿಜನಪ್ರಿಯ" ಎಂದು ವಿಶೇಷಿಸಿ ಹೇಳಿದೆ. ಇದರಿಂದ ಸುಕರಸುಕವಿಕಂಠಾಭರಣ ಎಂಬ ಒಬ್ಬ ಕವಿ ಎಕ್ಕಲದೇವನ ಆಶ್ರಿತನಾಗಿದ್ದಂತೆ ತಿಳಿಯುತ್ತದೆ. ಈ ಕವಿ ಆವ ಗ್ರಂಥಗಳನ್ನು ಬರೆದಿದ್ದಾನೆಯೋ ತಿಳಿಯದು. ಕನ್ನಡಕವಿಗಳಾದ ನೇಮಿಚಂದ್ರನಿಗೂ (ಸು. 1170) ಸೋಮನಾಥ ಪಂಡಿತನಿಗೂ (1234) ಸುಕವಿಕಂಠಾಭರಣ ಎಂಬ ಬಿರುದಿದೆ. ಈತನನ್ನು ಅನುಸರಿಸಿ ಅವರಿಬ್ಬರೂ ಈ ಬಿರುದನ್ನು ಇಟ್ಟುಕೊಂಡಿದ್ದರೂ ಇರಬಹುದು. ಎರಡನೆಯ ನಾಗವರ್ಮನಿಗೆ (ಸು. 1145) ಕವಿಕಂಠಾಭರಣ ಎಂಬ ಬಿರುದುಂಟು. ಈ ಶಾಸನವು ಚಾಳುಕ್ಯ ಜಗದೇಕಮಲ್ಲನ (1138–1150) ಆಳಿಕೆಯಲ್ಲಿ ಬರೆದುದು.

---

## ಮಧುಸೂದನದೇವ. 1147.

ಈತನು ದಾವಣಗೆರೆಯ 41 ನೆಯ ಶಾಸನವನ್ನು ಬರೆದುದಾಗಿ ಆ ಶಾಸನದಲ್ಲಿಯ—

ಶ್ರೀವೀರಪಾಂಡ್ಯದೇವನು । ಓೀವಲ್ಲಭನುಹಿತಪಾದಪರಮಾರಾಧ್ಯ ।
ಶ್ರೀವಿಭವರ್ ಮಧುಸೂದನ । ದೇವರ್ ವಿರಚಿಸಿದರೆಸೆಯೆ ಶಾಸನಕೃತಿಯಂ ॥

ಎಂಬ ಪದ್ಯದಿಂದ ತಿಳಿಯುತ್ತದೆ. ಈ ಶಾಸನವು ಚಾಳುಕ್ಯ ಜಗದೇಕಮಲ್ಲನ (1138—1150) ಆಳಿಕೆಯಲ್ಲಿ 1147 ರಲ್ಲಿ ಬರೆದುದು. ಇದರಲ್ಲಿ ಜಗದೇಕಮಲ್ಲನ ಸಾಮಂತ ವೀರಪಾಂಡ್ಯರಾಜನು ಶಂಕರನಾರಾಯಣದೇವರಿಗೆ ಒಂದು ಗ್ರಾಮವನ್ನು ದತ್ತಿಯಾಗಿ ಬಿಟ್ಟಂತೆ ಹೇಳಿದೆ. ಈ ಶಾಸನದ ಬಂಧವನ್ನು

ನೋಡಿದರೆ ಮಧುಸೂದನದೇವನು ಉದ್ದಾಮಕವಿ ಎಂಬುದಕ್ಕೆ ಆವ ಅಡ್ಡಿಯೂ ಇಲ್ಲ. ಈತನು ವೀರಪಾಂಡ್ಯನ ಅಣ್ಣನಾದ ಪಂಡಿತಪಾಂಡ್ಯನಿಗೆ ಉಪಾಧ್ಯಾಯನಾಗಿದ್ದಂತೆ

ಅಧಿಗತಸಮಸ್ತವಿದ್ಯಂ । ಮಧುಸೂದನದೇವರಿಂದಮೆನೆ ಪಂಡಿತಪಾಂ ।
ಡ್ಯಧರಾಧಿಪತಿಯ ಪೋಲ್ಕೆಗೆ । ಬಧಿರಧರಾಧೀಶರೆಂತುಮೇಂ ಬಂದಪರೇ ॥

ಎಂಬ ಶಾಸನಪದ್ಯದಿಂದ ವ್ಯಕ್ತವಾಗುತ್ತದೆ. ಇವನು ಬ್ರಾಹ್ಮಣ ಕವಿ.

ಈ ಶಾಸನದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

ಸಮುದ್ರ.

ಮಕರವ್ರಾತಾಭಿಘಾತೋಚ್ಚಲಿತಕಮಠಸಂಘಟ್ಟಸಂಸ್ಪರ್ಧಿಮೀನ ।
ಪ್ರಕರಪ್ರಕ್ಷೋಭಿತೋದ್ಯತ್ತರಳತರತರಂಗೋತ್ಕರಂ ಕ್ಷಿಪ್ತಮುಕ್ತಾ ॥
ನಿಕರಂ ಕಣ್ಗೆಯ್ದು ಚೆಲ್ವಂ ಪಡೆದುದವಿರಳೋತ್ತಾಳಕಲ್ಲೋಳಮಾಳಾ ।
ಧಿಕಸಂಘರ್ಷಪ್ರಜಾತಪ್ರಬಳಘನಘನಧ್ವಾನರೌದ್ರಂ ಸಮುದ್ರಂ ॥ 326 ॥
ಅದು ನಾನಾನಕ್ರಚಕ್ರಕ್ರಮಕರಿಮಕರೋಡ್ಡೀನಪಾಠೀನಪುಚ್ಛ ।
ಚ್ಛದವಾತಾಘಾತಭೀತಾಚಳಚಳನಚಳತ್ತುಂಗರಂಗತ್ತರಂಗಾ ॥
ಘದುರಂತಪ್ರಾಂತಮುಜ್ಜೃಂಭಿತಬಹಳತಡಿಜ್ಜ್ವಾಳಲೀಳಾವಿನೀಳಾಂ ।
ಬುದಬಿಂಬಾಡಂಬರಂ ಕಣ್ಗೆಸೆವುದು ಲಹರೀಲೋಳಬಾಳಪ್ರವಾಳಂ ॥ 327 ॥

ಚಾಳುಕ್ಯಾನ್ವಯಾವತಾರ.

ಶ್ರೀರಮಣೀರಮಣನ ಗಂ । ಭೀರತರೋದಾರನಾಭಿಕಾಸಾರಸರ ।
ದ್ವಾರಿಯೊಳಾದುದು ಸಿತಸರ । ಸೀರುಹಮತಿಬಹಳಸುರಭಿಪರಿಮಳಮಿಳಿತಂ ॥328॥
ಜಳರುಹಜಠರನ ಜಠರದ । ಜಳಜಾತದೊಳೊಗೆದ ಜಳಜಜಾತನ ಹೃದಯ ।
ಸ್ಥಳಜಳರುಹಜಾತಂ ನಿಜ । ಕುಳಾದಿಭೂತಂ ಹರೀತನತಿವಿಖ್ಯಾತಂ ॥ 329 ॥

ತೈಲಪ.

ಗಣನಾತೀತವಿಚರದ । ಪ್ರಣತಪ್ರಣತಾವನೀಪಕವನೀಪಕಮಾ ।
ರ್ಗಣಮಾರ್ಗಣಪ್ರದಾಯಕ । ರಣವಿತರಣಗುಣವಿನಿರ್ಜಿತೈಲಂ ತೈಲಂ ॥ 330 ॥

ಚಂದ್ರ.

ನಿಜಮೆನಲಂಬುಜಜನನಾ । ಬ್ಧಿಜನನಮುನಿನಯನಜನನಮೆಂಬೀಜನನ ।
ತ್ರಿಜನನಮನೆಯ್ದಿ ಸೋಮಂ । ತ್ರಿಜಾತನೆಂತತ್ರಿಜಾತನಿದು ಚಿತ್ರತರಂ ॥ 331 ॥

ರಾಜರಾಜಪಾಂಡ್ಯ.

ನೆನೆನೆನೆದು ರಾಜರಾಜೇಂ । ದ್ರನ ಪೃಥುಳಗದಾಶನಿಪ್ರತಾಪಮನಹಿತಾ ।
ವನಿಭೃನ್ನಿಕಾಯಮಂಭೋ । ಧಿನಿಲೀನಂ ಮಿಡುಕಲಣ್ಮದಚಳಮೆನಿಕ್ಕುಂ ॥ 332 ॥

ವೀರಪಾಂಡ್ಯ.

ಕರವಾಳಾಘಾತಶಾತಾಹಿತಕರಿವಿಲುಠದ್ದಂತಶಲ್ಕಂಗಳಿಂ ತ |
ತ್ಪರಿಬರ್ಹೋದ್ದಾಮಹೇಮಾಭರಣಕಿರಣದಿಂ ತತ್ಪತಾಕಾಸ್ತ್ರವರ್ಮಾಂ ||
ಬರಚಿತ್ರೋದ್ಯೋತದಿಂ ತದ್ರುಧಿರವಿಸರಕಾಸಾರಿಕಾಪೂರದಿಂ ಪಾಂ |
ಡುರಿತಂ ಪೈಶಂಗಿತಂ ಕರ್ಬುರಿತಮರುಣಿತಂ ವೀರಪಾಂಡ್ಯಾಜಿರಂಗಂ || 333 ||

ವಿಜಯಶ್ರೀಪತಿಪಾಂಡ್ಯಭೂಭುಜಭುಜಾವಷ್ಟಂಭವಿತ್ರಸ್ತವೈ ||
ರಿಜನಾಧೀಶರ ದೇಶದೊಳ್ ತಿಲಕಪುನ್ನಾಗಾಂಜನಸ್ಯಂದನ ||
ಧ್ವಜಬಾಣಾಸನಸಾಲಕಾಂಚನಸಿತಚ್ಛತ್ರಂಗಳಿಂದುಂ ಕುಜ |
ವ್ರಜದೊಳ್ ತೋರ್ಪುವು ನೋಲ್ಪೊಡಿಲ್ಲಿತರವಸ್ತುಸ್ತೋಮನಾಮಂಗಳಿಂ || 334 ||

ಅದಿರದಿದಿರಿದಿರನಿದಿರಿಡು | ವದಟರನದಟಳಿದು ಚಿದಱಿ ಬೆಂಕೊಂಡು ಸಮ |
ಸ್ತದಿಗಂತರಮಂ ಪುದಿದೊದ | ವಿದ ಜಸದಿಂದೆಸೆವನಸದಳಂ ಪಾಂಡ್ಯನೃಪಂ || 335 ||

---

## ಕವಿಕಾಳಿದಾಸ. 1147.

ಚಿಕ್ಕಮುಗಳೂರು 140 ನೆಯ ಶಾಸನದಲ್ಲಿ (ಶಕ 1069) ಕಾಳಿದಾಸನೆಂಬ ಒಬ್ಬ ಕವಿಯ ಹೆಸರು "ಪೆಂಪನೆ ತಾಳ್ದಲ್ ಕವಿಕಾಳಿದಾಸನೆ ವಲಂ ಧನ್ಯಂ ಪೆಱರ್ ಧನ್ಯರೇ" ಎಂಬ ಪದ್ಯಭಾಗದಲ್ಲಿ ಹೇಳಿದೆ. ಇವನ ತಂದೆ ಚೌಂಡ ಮಯ್ಯ, ತಾಯಿ ಚಂದ್ರಾಮತಿ, ಸಹೋದರರು ಕಾವರಾಜ, ಜನಾರ್ದನ, ಮಲ್ಲಿ ದೇವ. ಈತನು ಆವ ಗ್ರಂಥವನ್ನು ಬರೆದಿದ್ದಾನೆಯೋ ತಿಳಿಯದು.

---

## ಮುಖ್ಯಪಂಡಿತ. 1147.

ಈತನು ಲಕ್ಷ್ಮೇಶ್ವರದಲ್ಲಿರುವ ಒಂದು ಶಾಸನವನ್ನು[1] ಬರೆದಂತೆ ಆ ಶಾಸನದ ಕೊನೆಯಲ್ಲಿರುವ "ಶ್ರೀಮತ್ಕರ್ಣಾಟಸುಕವಿ ಮುಖ್ಯಪಂಡಿತರ ಕವಿತೆ" ಎಂಬ ವಾಕ್ಯದಿಂದ ತಿಳಿಯುತ್ತದೆ. ಈ ಶಾಸನದಲ್ಲಿ ಚಾಳುಕ್ಯರಾಜನಾದ 2 ನೆಯ ಜಗದೇಕಮಲ್ಲನ ಆಳಿಕೆಯಲ್ಲಿ ಮೇಚರಸನು ಸೋಮನಾಥದೇವಸ್ಥಾನಕ್ಕೆ ಚಿನ್ನದ ಕಲಶವನ್ನು 1147 ರಲ್ಲಿ ಹಾಕಿಸಿ ಭೂಮಿಯನ್ನು ಬಿಟ್ಟನೆಂದು ಹೇಳಿದೆ. ಇದರಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ:—

1. *Epigraphia Indica*, XVI, 46.

## ತೈಲಪ.

ಶ್ರೀಮಚ್ಚಾರುಚಳುಕ್ಯವಂಶನಳಿನೀಬಾಳಾತಪಂ ದುರ್ವಿನೀ |
ತಾಮೇಯಾರಿನೃಪಾಳಬಾಳಕದಳೀಷಂಡೋಗ್ರವೇದಂಡನು ॥
ದ್ದಾಮಾನಮ್ರನರೇಂದ್ರಮೌಳಿಮಣಿಸಂಘೃಷ್ಟಾಂಘ್ರಿಪದ್ಮದ್ವಯಂ |
ಭೂಮೀಶಂ ನೆಗಳ್ದಂ ಸಮಗ್ರವಿಜಯಶ್ರೀಲೋಲುಪಂ ತೈಲಪಂ ॥ 336 ॥

## ವಿಕ್ರಮಾದಿತ್ಯ.

ಚಲಚಿಂರೀಭೇರಿಯಿಂ ಕೀಚಕಕುಳವಿಳಸದ್ಗಾಯಕಾನೀಕದಿಂ ಭೂ |
ತಲಭೂಭೃತ್ಸೀಠದಿಂ ಪನ್ನಗಫಣಮಣಿದೀಪಂಗಳಿಂ ಸರ್ಪನಿರ್ಮೋ ॥
ಕಲಸದ್ವಸ್ತ್ರಂಗಳಿಂ ಬೇಱವರ್ಗೆ ವಿಭವಮಂ ಮಾಡಿ ವಿದ್ವಿಷ್ಟರಂ ದೋಃ |
ರ್ಬಲದೃಪ್ತಂ ಭಿಲ್ಲಪಲ್ಲೀಸ್ಥಿತಿಯೊಳಿರಿಸಿದಂ ವಿಕ್ರಮಾದಿತ್ಯದೇವಂ ॥ 337 ॥

## ಜಗದೇಕಮಲ್ಲ.

ಕಮಠಕಠೋರಕರ್ಪರದ ತಾಪಮಡಂಗಿತು ನಾಗರಾಜನು |
ತ್ತಮಮಣಿಮಸ್ತಕಕ್ಕೆ ಹೊಱೆ ಹಿಂಗಿದುದಾದಿಗಿಭಕ್ಕೆ ಕಂಠಭಾ ॥
ರಮುದುಡುಗಿತ್ತೆನಲ್ ವಸುಮತೀತಳಮಂ ಜಗದೇಕಮಲ್ಲನ |
ಶ್ರಮದೊಳೆ ತಾಳ್ದಿದಂ ನಿಜಭುಜದ್ರಢಿಮಪ್ರಬಳಪ್ರದೇಶದೊಳ್ ॥ 338 ॥

## ಕೇಶಿರಾಜ.

ಸತತಾಳಂಕೃತಭದ್ರಲಕ್ಷಣಯುತಂ ಗೋತ್ರೋದ್ಭವಂ ದಾನಸಂ |
ಭೃತನಂಗೀಕೃತಗೋಮಿನೀಪ್ರಿಯಕರಿಣ್ಯಾಲಿಂಗನೋದ್ಯದ್ಯಶೋ ॥
ರ್ಜಿತನುದ್ಯಜ್ಜಗದೇಕಮಲ್ಲವಿಜಯಸ್ತಂಬೇರಸೆಂಬೀಮಹೋ |
ನ್ನತಿಯಿಂದಾನೆಯ ಕೇಶಿರಾಜಪೃತನಾಧೀಶಂಗಿದನ್ವರ್ಥಕಂ ॥ 339 ॥

## ಕಂಚಿದಂಡಾಧಿಪ.

ಕಾಲಾಗ್ನಿಸ್ಫುರಿತಶಿಖಾ | ಮಾಲೆ ಮಹಾರಾಹುರಸನಮಂತಕದಂಷ್ಟ್ರಂ |
ಕಾಲಾಹಿಯ ಫೂತ್ಕಾರಂ | ಸೂಲಿಗೆ ಸೂಲಿಗೆಯ ಕಂಚಿದಂಡಾಧಿಪನಾ ॥ 340 ॥

## ಮೇಚರಸ.

ಕನಕಾಚಳಚೂಡಾಕಾಂ | ಚನಬಂಬಿಮಕಳಶಮೆನಿಪ ದಕ್ಷಿಣಸೋಮೇ |
ಶನ ಮಂದಿರಕ್ಕೆ ಕಾಂಚನ | ಘನಕಳಶಮನಿಟ್ಟನನುಪಮಂ ಮೇಚರಸಂ ॥ 341 ॥

---

## ಮೇಘಚಂದ್ರ. 1148.

ಈತನು ಪೂಜ್ಯಪಾದಕೃತಸಮಾಧಿಶತಕಕ್ಕೆ ಕನ್ನಡ ವ್ಯಾಖ್ಯಾನವನ್ನು 1148 ರಲ್ಲಿ ಬರೆದುದಾಗಿ ತಿಳಿಯಬರುತ್ತದೆ[1]. ಈತನು 1176 ರಲ್ಲಿ ಗತಿಸಿದ ನಯಕೀರ್ತಿಯ ಶಿಷ್ಯನಾಗಿರಬಹುದು.[2] ಈ ವ್ಯಾಖ್ಯಾನವನ್ನು— 'ವಿತತಯಶೋನಿಧಿ ಪಂಪನ ಸುತಂಗೆ ತಿಳಿವಂತು ಪೊಚ್ಚಪೊಸಗನ್ನಡದಿಂ'—ಬರೆದಂತೆ ಹೇಳುತ್ತಾನೆ. ಈ ಪದ್ಯಭಾಗದಲ್ಲಿ ಹೇಳಿರುವ ಪಂಪನು ನಾಗಚಂದ್ರನೇ ಆಗಿದ್ದ ಪಕ್ಷದಲ್ಲಿ ಅವನ ಕಾಲವಾದ ಮೇಲೆ ಅವನ ಮಗನಿಗೋಸ್ಕರ ಈತನು ಈ ವ್ಯಾಖ್ಯಾನವನ್ನು ಬರೆದಿರಬಹುದು.[3]

---

## ಉದಯಾದಿತ್ಯ. ಸು. 1150.

ಈತನು ಉದಯಾದಿತ್ಯಾಲಂಕಾರವೆಂಬ ಒಂದು ಅಲಂಕಾರ ಗ್ರಂಥವನ್ನು ಬರೆದಿದ್ದಾನೆ. ಈತನ ಬಿರುದುಗಳನ್ನೂ ರಚನಾಚಾತುರಿಯನ್ನೂ ನೋಡಿದರೆ ಇನ್ನೂ ಗ್ರಂಥಗಳನ್ನು ಬರೆದಿರುವಂತೆ ತೋರುತ್ತದೆ. ಆದರೆ ನಮಗೆ ಇವನ ಇತರ ಗ್ರಂಥಗಳಾವುವೂ ದೊರೆತಿಲ್ಲ.

"ವಸುಧಾನಾಥನ ಸೋಮನಾಥನ ಸುತಂ ಚೋಳೋದಯಾದಿತ್ಯಂ," "ಸೋಮಮಹೀಭೃನ್ನಂದನಂ" ಎಂದು ಹೇಳಿಕೊಂಡಿರುವುದರಿಂದ ಈತನು ಆವನೋ ಒಬ್ಬ ಸೋಮನಾಥನೆಂಬ ಚೋಳರಾಜನ ಮಗನೆಂದು ತಿಳಿಯುತ್ತದೆ.

ಒದವಿದೊಂದು ತಮಂ ಜಗಕ್ಕೆ ಸಜೀವನ್ನಂ ತನ್ನ ಸಿಂಹಾಸನ।
ಕ್ಕುದಯಾದ್ರೀಂದ್ರಕೆ ಬರ್ಪ ಪೆರ್ಮೆ ಮೊಱೆವನ್ನಂ ಸತ್ಕವಿಪ್ರೋಲ್ಲಸ॥
ದ್ವದನಾಂಭೋರುಹಷಂಡಮುಳ್ಳಲರ್ವಿನಂ ಭೂಮಂಡಲಾಧೀಶನ।
ಪ್ಪುದಯಾದಿತ್ಯನುದಾರಕಾರ್ಯನೆಸೆದಂ ಸಾಹಿತ್ಯವಿದ್ಯಾಧರಂ॥

ಎಂಬುದರಿಂದ ಈತನು ಪಟ್ಟಾಭಿಷಿಕ್ತನಾಗಿ ಆಳುತ್ತಿದ್ದಂತೆ ತೋರುತ್ತದೆ. ತನ್ನ ಹೆಸರನ್ನು ಉದಯ, ಉದೆಗ ಎಂದೂ ಹೇಳಿಕೊಂಡಿದ್ದಾನೆ. ಈತನಿಗೆ ಕವಿರತ್ನಶೇಖರ, ಸಾಹಿತ್ಯವಿದ್ಯಾಧರ, ರಾಜಸುಕವಿರತ್ನಾಭರಣ, ಕವಿರಾಜಶೇಖರ, ಸಾಹಿತ್ಯರತ್ನಾಕರ ಎಂಬ ಬಿರುದುಗಳು ಇದ್ದಂತೆ ತಿಳಿಯುತ್ತದೆ.

'ಽದವಿದ ಮುಂಜನ ಭೋಜನ। ವಿದಿತಶ್ರೀಹರ್ಷನುದಯ ಮತ್ಕೃತಿಯೊಳ್'

---

1. *Ind. Ant.*, XIV, 14.
2. ಶ್ರ. ಬೆ. ಶಾ. 66, 3. ಪುಟ 103.

ಎಂಬ ಪದ್ಯದಲ್ಲಿ ಭೋಜನ ಹೆಸರನ್ನು ಹೇಳುತ್ತಾನೆ. ಭೋಜನು 997 ರಿಂದ 1053 ರ ವರೆಗೆ ಆಳಿದುದಾಗಿ ತಿಳಿವುದರಿಂದ ಕವಿ ಆ ಕಾಲಕ್ಕೆ ಈಚೆಯವನಾಗಿರ ಬೇಕು. ಅಲ್ಲದೆ ಮಲ್ಲಿಕಾರ್ಜುನನು (ಸು 1245) ಸೂಕ್ತಿಸುಧಾರ್ಣವದಲ್ಲಿ ಮಹಾಕಾವ್ಯದ ಹದಿನೆಂಟಂಗವನ್ನು ಹೇಳುವ—

ಉದಧಿಪುರಾಧಿಪಸುತಮುಂ । ತ್ರಿದಶಗಮನಾಜಿವಿರಹಪರಿಣಯಸುರತ ।
ರ್ತುದಿನೇಶಚಂದ್ರಮಧುಕುಭೃ । ದುದಕವನಸ್ಪತಿಯೆ ಕೃತಿಗೆ ಪದಿನೆಂಟಂಗಂ ॥

ಎಂಬ ಪದ್ಯವನ್ನು ಈ ಕವಿಯ ಗ್ರಂಥದಿಂದ ಉದ್ಧರಿಸಿ ಬರೆದಿರುವುದರಿಂದ ಈತನು 1245 ಕ್ಕೆ ಹಿಂದೆ ಇದ್ದನೆಂಬುದು ವ್ಯಕ್ತವಾಗುತ್ತದೆ. ಕರ್ಣಾಟಕದೇಶದಲ್ಲಿ ಚೋಳರ ಪ್ರಾಬಲ್ಯವು 12 ನೆಯ ಶತಮಾನಕ್ಕೆ ಹಿಂದೆಯೇ ಕ್ಷೀಣದಶೆಗೆ ಬಂದಂತೆ ಶಾಸನಗಳಿಂದ ತಿಳಿವುದರಿಂದ ಈತನು ಸ್ವತಂತ್ರರಾಜನಾಗಿದ್ದಿರಲಾರನು. ಆವ ದೊರೆಯಲ್ಲಿಯೋ ಸಾಮಂತರಾಜನಾಗಿದ್ದಿರಬೇಕು. ಇವನು ಸುಮಾರು 1150 ರಲ್ಲಿ ಇದ್ದಿರಬಹುದೆಂದು ಊಹಿಸುತ್ತೇವೆ.

ಸಾಳ್ವನು (ಸು. 1550) ತನ್ನ ರಸರತ್ನಾಕರದಲ್ಲಿ ಈತನ ಹೆಸರನ್ನು ಹೇಳಿದ್ದಾನೆ.

ಈತನು ಪೂರ್ವಕವಿಗಳಲ್ಲಿ ಮುಂಜ, ಭೋಜ, ಶ್ರೀಹರ್ಷ ಇವರುಗಳ ಹೆಸರನ್ನು ಹೇಳಿದ್ದಾನೆ; ಆವ ಕನ್ನಡಕವಿಯ ಹೆಸರನ್ನೂ ಹೇಳಿಲ್ಲ.

ತನ್ನ ಕವಿತಾಚಾತುರಿ ಮುಂತಾದುದನ್ನು ಈ ಪದ್ಯದಲ್ಲಿ ಹೇಳಿಕೊಂಡಿದ್ದಾನೆ:—

ಪದಮಲಕಾಂತಿಯಿಂ ಸಮತೆಯಿಂ ಸುಕುಮಾರತೆಯಿಂದೆ ಭಿನ್ನಭಾ ।
ವದೆ ನುತಲಕ್ಷ್ಯದಿಂ ಸಕಲಭೂಗದಿನುಜ್ವಳರೂಪದಿಂ ಪ್ರದ ॥
ಪ್ರೌಢವಿದ ಕಾವ್ಯದಿಂ ಕವಿಖ್ಯಾಮಣಿಯಾದುದಜಾಂದಮಾದನಿಂ ।
ತುದಯನೃಪೇಶ್ವರಂ ನೃಪಕವೀಶ್ವರರಿಂ ಕವಿರಾಜಶೇಖರಂ ॥

ಇದಲ್ಲದೆ ತನ್ನನ್ನೇ ಸ್ತುತಿಸಿಕೊಳ್ಳುವ ಅನೇಕಪದ್ಯಗಳು ಉದಾಹರಣಗಳಲ್ಲಿಯೂ ದೊರೆಯುತ್ತವೆ

ಇವನ ಗ್ರಂಥ

## ಉದಯಾದಿತ್ಯಾಲಂಕಾರ.

ಇದು ಸಣ್ಣ ಗ್ರಂಥ; ಇದರೊಳಗೆ 72 ಪದ್ಯಗಳಿವೆ. ಈ ಗ್ರಂಥದಲ್ಲಿ (1) ಕಾವ್ಯಭೇದ, (2) ರೀತಿ, (3) ರಸ, (4) ಕಾವ್ಯಗುಣಗಳು, (5) ಅಲಂಕಾರಗಳು, ಇವುಗಳ ಲಕ್ಷಣವನ್ನು ಕ್ರಮವಾಗಿ ಹೇಳಿದ್ದಾನೆ. ಚಂದ್ರಾಲೋಕದಲ್ಲಿ

ಹೇಳಿರುವಂತೆಯೇ ಲಕ್ಷ್ಯಲಕ್ಷಣಗಳು ಪ್ರಾಯಶಃ ಒಂದೇ ಪದ್ಯದಲ್ಲಿ ಹೇಳಿವೆ. ನೃಪತುಂಗನು ಹೇಳುವ ಚತ್ತಾಣ, ಬೆದಂಡೆ ಎಂಬ ಕಾವ್ಯಭೇದಗಳನ್ನು ಈತನೂ ಹೇಳುತ್ತಾನೆ. ಗ್ರಂಥಾವತಾರದಲ್ಲಿ ಸರಸ್ವತಿಯನ್ನು ಸ್ತುತಿಸಿದ್ದಾನೆ. ಇವನ ಸೂತ್ರೋದಾಹರಣೆಗಳಲ್ಲಿ ಕೆಲವು ದಂಡಿಯ ಕಾವ್ಯಾದರ್ಶದಲ್ಲಿಯ ಸೂತ್ರೋದಾಹರಣೆಗಳ ಭಾಷಾಂತರವಾಗಿವೆ.

ಈತನ ಬಂಧವು ಪ್ರೌಢವಾಗಿದೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ:—

### ರೂಪಕ.

ಸಸಿಯಂ ಪೋಲ್ವುದು ಮೊಗಮೆಂ। ದುಸಿರದೆ ನಗೆಮೊಗಮೆ ಸಸಿ ದಲೆಂದಿಂತು ಸಮಂ।
ತುಸಿರ್ದೊಡೆ ರೂಪಕಮಕ್ಕುಂ। ವಸುಧಾಧಿಪ ರಾಜಸುಕವಿರತ್ನಾಭರಣಾ ॥342॥

### ಉತ್ಪ್ರೇಕ್ಷೆ.

ಇರೆ ವಸ್ತುವೊಂದು ತನ್ನಯ। ಪರಿಯಿಂ ಬೇಱೊಂದನದಱೊಳುತ್ಪ್ರೇಕ್ಷಿಸುವಾ।
ಪರಿಯುತ್ಪ್ರೇಕ್ಷಾಲಂಕೃತಿ। ಬಿರಿದುವು ನಗುವಂತೆ ಬಿರಯಿಯಂ ಮಲ್ಲಿಗಗಳ್ ॥ 343 ॥

### ರಸವತ್ತ್ವ.

ಉದೆಗನೊಳಾಂಪರಾರ್ ಮುಳಿದೊಡಂತಕನಾಂತೊಡೆ ಕಂಡದಿಂಡೆಯಂ।
ಕೆದಱುವನೊಡ್ಡಿದಾನೆಗಳನಿರ್ಕಡಿಮಾಡುವನಾತನೊಳ್ಳಸಂ॥
ಬೆದಱಿಸದಾರನೋಡಿಸದದಾರನದಾರನುದಾತ್ತದೈನ್ಯದೊಳ್।
ಪುದಿಯಿಸದಾರನಾಗಿಸದು ತಾಪಸವೃತ್ತಿಯನಬ್ಜಲೋಚನೇ ॥ 344 ॥

---

## ಸುಮನೋಬಾಣ. ಸು. 1150.

ಜನ್ನನು ಅನಂತನಾಥಪುರಾಣದಲ್ಲಿ ಜೈನಪುರಾಣಗಳನ್ನು ಬರೆದ ಕವಿಗಳ ಗೋಷ್ಠಿಯಲ್ಲಿ "ಪುಷ್ಪಬಾಣ" ಎಂದು ಈತನ ಪೆಸರನ್ನೂ ಸೇರಿಸಿರುವುದರಿಂದ ಇವನು ಆವುದೋ ಒಂದು ಜೈನಪುರಾಣವನ್ನು ಬರೆದಿದ್ದಾನೆ ಎಂಬುದರಲ್ಲಿ ಸಂಶಯವಿಲ್ಲ. ಇವನ ಗ್ರಂಥಗಳಾವುವೂ ದೊರೆತಿಲ್ಲ.

ಈತನು ಜೈನಕವಿ: '(ಕವಿ) ಭಾಳಲೋಚನ' ಎಂಬ ಬಿರುದುಳ್ಳ ಜನ್ನನ (1209) ತಂದೆಯೆಂಬುದು ಆತನ ಯಶೋಧರಚರಿತೆಯಲ್ಲಿಯ—"ಭಾಳಲೋಚನಂ ಕವಿಸುಮನೋ। ಬಾಣನ ಮಗನೆಂದಖಿಳ। ಕ್ಷೋಣಿಗೆ ಪೆಸರಾಯ್ತು" ಎಂಬ ಪದ್ಯಭಾಗದಿಂದ ತಿಳಿಯುತ್ತದೆ. ಅನಂತನಾಥಪುರಾಣದಲ್ಲಿ ಜನ್ನನು

"ಶಂಕರಪುತ್ರಂ ಕವಿ ಕಮ್ಮೆವಂಶನಧಿಕಜ್ಞಂ ಕಾಶ್ಯಪಂ" ಎಂದೂ, "ಶಂಕರ ಶುದ್ಧಾಂತಾಂಗನಾಗಂಗೆಗೇನುದಯಂಗೆಯ್ದನೊ ಕಾಶ್ಯಪೋದ್ಭವಕರಂ ಸಾಹಿತ್ಯ ರತ್ನಾಕರಂ" ಎಂದೂ ಹೇಳುವುದರಿಂದ ಈ ಕವಿಯ ನಿಜವಾದ ಹೆಸರು ಶಂಕರ ಎಂದು ತಿಳಿಯುಬರುತ್ತದೆ. ಈತನು ಕಮ್ಮೆವಂಶದವನೆಂದೂ ಕಾಶ್ಯಪ ಗೋತ್ರದವನೆಂದೂ ಈತನ ಹೆಂಡತಿ ಗಂಗೆಯೆಂದೂ ಮೇಲೆ ಬರೆದಿರುವ ಪದ್ಯ ಭಾಗಗಳಿಂದ ವ್ಯಕ್ತವಾಗುತ್ತದೆ. **ಮಲ್ಲಿಕಾರ್ಜುನನು** (ಸು. 1245) **ಸೂಕ್ತಿ ಸುಧಾರ್ಣವದಲ್ಲಿ** ತಾನು "ಯಾದವಕಟಕಾಚಾರ್ಯ ಕವಿಸುಮನೋಬಾಣನ ಜಾಮಾತೃ" ಎಂಬುದರಿಂದ ಈತನು ಮಲ್ಲಿಕಾರ್ಜುನನ ಮಾವನೆಂದೂ, ಈ ಮಲ್ಲಿಕಾರ್ಜುನನ ಮಗನಾದ **ಕೇಶಿರಾಜನು** (ಸು. 1260) **ಶಬ್ದಮಣಿದರ್ಪಣ** ದಲ್ಲಿ 'ಕವಿಸುಮನೋಬಾಣನ ಯಾ। ದವಕಟಕಾಚಾರ್ಯನೆಸೆವ ದೌಹಿತ್ರನೆನಾಂ' ಎಂಬುದರಿಂದ ಕೇಶಿರಾಜನ ಮಾತಾಮಹನೆಂದೂ ತಿಳಿಯುತ್ತದೆ. ಈತನು "ಯಾದವಕಟಕಾಚಾರ್ಯನು" ಎಂದು ಮಲ್ಲಿಕಾರ್ಜುನನೂ ಕೇಶಿರಾಜನೂ ಹೇಳುವ ಅಂಶವನ್ನೇ ಜನ್ನನೂ ಈ ಪದ್ಯದಲ್ಲಿ ವಿವರಿಸಿದ್ದಾನೆ:—

ಜನನಾಥಂ ಜಗದೇಕನಲ್ಲಿ ಕಟಕೋಪಾಧ್ಯಾಯನಾನಾಗವ।
ರ್ಮನಿದಾಸೀಂತನಶರ್ವವರ್ಮನೆ ಗಡಂ ಜನ್ನಂಗುಪಾಧ್ಯಾಯನಿಂ॥
ದು ನೃಸಿಂಹಕ್ಷಿತಿಪಾಲನಲ್ಲಿ ಕಟಕೋಪಾಧ್ಯಾಯನಾರೆಂಬ ಸೂ।
ಕ್ತಿನವೀನೋಜ್ಜ್ವಳಬಾಣನಪ್ಪ ಸುಮನೋಬಾಣಂ ಕವಿಶ್ರೇಷ್ಠರೊಳ್॥

ಇದರಿಂದ ಜನ್ನನ ಉಪಾಧ್ಯಾಯನಾದ **ಎರಡನೆಯ ನಾಗವರ್ಮನು** ಚಾಳುಕ್ಯಜಗದೇಕಮಲ್ಲನಲ್ಲಿಯೂ ಜನ್ನನ ತಂದೆಯಾದ **ಸುಮನೋಬಾಣನು** ಹೊಯ್ಸಳನರಸಿಂಹನಲ್ಲಿಯೂ ಕಟಕೋಪಾಧ್ಯಾಯರಾಗಿದ್ದಂತೆ ವ್ಯಕ್ತವಾಗುತ್ತದೆ. ಈ ನರಸಿಂಹನು 1141 ರಿಂದ 1173 ರ ವರೆಗೆ ಆಳಿದುದಾಗಿ ತಿಳಿಯಬರುವುದ ರಿಂದ ಕವಿ ಸುಮಾರು 1150 ರಲ್ಲಿ ಇದ್ದಿರಬಹುದು.

**ಮಲ್ಲಿಕಾರ್ಜುನ, ಜನ್ನ, ಕೇಶಿರಾಜ** ಮೊದಲಾದವರು ಈತನನ್ನು ಸ್ತುತಿಸಿರುವ ರೀತಿಯನ್ನು ನೋಡಿದರೆ ಈತನು ದೊಡ್ಡ ಕವಿಯಾಗಿ ಇದ್ದಿರ ಬೇಕೆಂದು ತೋರುತ್ತದೆ. ಈ ಕವಿಯ ನಿಜವಾದ ಹೆಸರು ಶಂಕರ ಎಂದು ಜನ್ನನು ಹೇಳುವುದರಿಂದ ಸುಮನೋಬಾಣ ಎಂಬುದು ಇವನ ಬಿರುದಾಗಿರಬಹುದು. "ನವೀನೋಜ್ಜ್ವಳಬಾಣನಪ್ಪ" ಎಂಬುದರಿಂದ ಈತನಿಗೆ ಅಭಿನವಬಾಣ ಎಂಬ ಬಿರುದೂ ಇದ್ದಂತೆ ಊಹಿಸಬಹುದಾಗಿದೆ.

ಈ ಕವಿಗೆ ಶಂಕರ ಎಂದೂ, ಈತನ ಹೆಂಡತಿಗೆ ಗಂಗೆ ಎಂದೂ, ಅಳಿಯ ನಿಗೆ ಮಲ್ಲಿಕಾರ್ಜುನ ಎಂದೂ ಹೆಸರುಗಳಿರುವುದರಿಂದ ಇವನು ಶೈವನಾಗಿದ್ದು

ಬಳಿಕ ಜೈನಮತವನ್ನು ಅವಲಂಬಿಸಿರಬಹುದೋ ಎಂಬ ಸಂದೇಹವುಂಟಾಗುತ್ತದೆ.

---

## ಶಂಕರವಿಬುಧ. 1150.

ಸೊರಬದ 19 ನೆಯ ಶಾಸನದ (ಶಕ 1072) ಕೊನೆಯಲ್ಲಿ "ಕಡುಜಾಣಂ ಸತ್ಕವೀಂದ್ರ ಶಂಕರವಿಬುಧಂ" ಎಂದಿದೆ. ಈತನು ಆವ ಗ್ರಂಥವನ್ನು ಬರೆದಿದ್ದಾನೆಯೋ ತಿಳಿಯದು.

---

## ಚಾವುಂಡರಾಯ. ಸು. 1150.

ಈತನು **ಲೋಕೋಪಕಾರ** ಎಂಬ ಗ್ರಂಥವನ್ನು ಬರೆದಿದ್ದಾನೆ. ಆಶ್ವಾಸಗಳ ಕೊನೆಯ ಗದ್ಯದಲ್ಲಿ "ಶ್ರೀಮತ್ಕವಿಳಾಸತನೂಜಂ" ಎಂದಿದೆ. ಇಲ್ಲಿ ಕವಿತಾವಿಳಾಸ ಎಂಬುದಕ್ಕೆ ಪ್ರತಿಯಾಗಿ "ಕವಿಳಾಸ" ಎಂದು ತಪ್ಪು ಬಿದ್ದಿರಬಹುದು. ಕವಿತಾವಿಳಾಸ ಎಂಬ ಬಿರುದುಳ್ಳ ಒಬ್ಬ ಕವಿ ಸು. 1100 ರಲ್ಲಿ ಇದ್ದನು. ಚಾವುಂಡರಾಯನು ಈ ಕವಿತಾವಿಳಾಸನ ಮಗನಾಗಿದ್ದಲ್ಲಿ ಸು. 1150 ರಲ್ಲಿ ಇದ್ದಿರಬಹುದು. "ಹರವರಪ್ರಸಾದೋತ್ಪನ್ನವಾಗ್ವಿಳಾಸಂ" ಎಂಬುದರಿಂದ ಇವನು ಬ್ರಾಹ್ಮಣಕವಿ ಎಂದು ತೋರುತ್ತದೆ. ಕೆಲವು ಪದ್ಯಗಳ ಕೊನೆಯಲ್ಲಿ ಜಯಬಂಧುನಂದನ, ಶಿಷ್ಟಕಲ್ಪದ್ರುಮ, ಅಚಳಿತವಚನ, ಬುಧೈಕಾಶ್ರಯ ಎಂಬ ಅಂಕಿತಗಳು ದೊರೆಯುತ್ತವೆ. ಇವುಗಳಲ್ಲಿ ಜಯಬಂಧುನಂದನ ಎಂಬ ಅಂಕಿತವಿರುವ ಪದ್ಯಗಳು ಆ ಕವಿಯ ಗ್ರಂಥದ ಪದ್ಯಗಳಾಗಿರಬಹುದು. ಉಳಿದುವು ಇವನ ಬಿರುದುಗಳಾಗಿರಬಹುದೋ ಏನೋ ತಿಳಿಯದು.

ಈ "ಕವಿಳಾಸ" ಎಂಬುದು "ಕಲಾವಿಳಾಸ" ಎಂಬುದಕ್ಕೆ ಪ್ರತಿಯಾಗಿ ಬಿದ್ದಿದ್ದ ಪಕ್ಷದಲ್ಲಿ ಚಾವುಂಡರಾಯನು ಕಲಾವಿಲಾಸನ ಮಗನೆಂದು ತಿಳಿಯಬೇಕಾಗುತ್ತದೆ. ಕಲಾವಿಲಾಸನೆಂಬ ಬಿರುದುಳ್ಳ ಒಬ್ಬ ಕನ್ನಡಕವಿ ಇದ್ದಂತೆ **ಅಭಿನವವಾದಿವಿದ್ಯಾನಂದನ** (1533) **ಕಾವ್ಯಸಾರದ** ಅಂತ್ಯಭಾಗದ ಪದ್ಯಗಳಿಂದ ತಿಳಿಯಬರುತ್ತದೆ. ಆತನ ಕಾಲವಾಗಲಿ ಗ್ರಂಥವಾಗಲಿ ಗೊತ್ತಿಲ್ಲ.

ಇವನ ಗ್ರಂಥ

### ಲೋಕೋಪಕಾರ. [1]

ಇದರ ಸಮಗ್ರವಾದ ಪ್ರತಿ ದೊರೆತಿಲ್ಲ; 5, 6 ನೆಯ ಆಶ್ವಾಸಗಳು ಮಾತ್ರ ದೊರೆತಿವೆ. ಇವುಗಳಲ್ಲಿ 5 ನೆಯ ಆಶ್ವಾಸದಲ್ಲಿ ಉದಕಾರ್ಗಳವರ್ಣನವೂ

---

1. ಈ ಗ್ರಂಥಕ್ಕೆ ಒಂದು ಕನ್ನಡ ವ್ಯಾಖ್ಯಾನವೂ ಇದೆ.

6 ನೆಯ ಆಶ್ವಾಸದಲ್ಲಿ ಸ್ತ್ರೀಪುರುಷರ ಸಾಮುದ್ರಿಕಲಕ್ಷಣವೂ ಇವೆ. ಗ್ರಂಥದ ಈ ಭಾಗವು ಕಂದವೃತ್ತರೂಪವಾಗಿದೆ. ಆಶ್ವಾಸಗಳ ಕೊನೆಯಲ್ಲಿ

ಇದು ಸಮಸ್ತಭುವನಜನವಿನೂತಂ ಹರವರಪ್ರಸಾದೋತ್ಪನ್ನವಾಗ್ವಿಳಾಸಂ ಶ್ರೀಮತ್ಕವಿಳಾಸತನೂಜಂ ಶ್ರೀಚಾವುಂಡರಾಯವಿರಚಿತಮಪ್ಪ ಲೋಕೋಪಕಾರದೊಳ್

ಎಂಬ ಗದ್ಯವಿದೆ.

ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

ತುಱುಗಿ ತಳಿರ್ತರ್ ಪೂತು ಫಲಮಾದೆಲೆಯಿಕ್ಕಿದ ಕೊಂಬುಗಳ್ ನೆಲ ।
ಕ್ಕೊಱಗಿದ ನುಣ್ಪುವೆತ್ತ ಮರನುಳ್ಳೆಡೆಯೊಳ್ ಜಳಮುಕ್ಕುಮಲ್ಲಿಯೆಂ ॥
ದಱುವುದು ತಾಱಿದಂಬಿದ ನಱುಂಕಿದ ಕೊಂಬೊಣಗಿರ್ದ ಪೂಟೆಯೆ ।
ಟ್ಟೊಱಗಿದ ವೃಕ್ಷದಿಂದಱುವುದಾಯೆಡೆಯೊಳ್ ಜಲಮಾಗದೆಂಬುದಂ ॥ 345 ॥

ಪುಲ್ಲಿಲ್ಲದ ನೆಲದೊಳ್ ಪಸು । ರ್ಪುರ್ಗಲ್ಲಾದೊಡಮಲ್ಲದಂದು ಪುಲ್ಲುಳ್ಳೆಡೆಯೊಳ್ ।
ಪುಲ್ಲಿನಿತುಮಿಲ್ಲದಿರ್ದೊಡ । ಮಲ್ಲಿಯೆ ನೀರಕ್ಕುಮಲ್ಲಿ ಮೇಣ್ ನಿಧಿಯಕ್ಕುಂ ॥ 346 ॥

ಬೆವರದೆ ಬೆಚ್ಚನಾಗಿ ಮೃದುವಪ್ಪಡಿ ನೆಟ್ಟನೆ ಕೆಂಪುವೆತ್ತು ವಿಂ ।
ಚುವ ನಖಮಾದಮೊಂದಿದ ಬೆರಲ್ಗಳಡಂಗಿದ ಗುಲ್ಫಮೊಡ್ಡಿ ತೋ ॥
ಱುವ ಮಡಮುನ್ನತಾಂಘ್ರಿ ಪರಿವೃತ್ತಮನೋಹರಜಂಘೆ ಹಸ್ತಿಹ ।
ಸ್ತವನಿಟಿಪುತ್ತುಮಿರ್ಪ ತೊಡೆಗಳ್ ಪಡೆಗುಂ ಶುಭಮುಂ ನಿರಂತರಂ ॥ 347 ॥

---

## ಜಗದ್ದಳ ಸೋಮನಾಥ. ಸು. 1150.

ಇವನು ಕರ್ಣಾಟಕ ಕಲ್ಯಾಣಕಾರಕವನ್ನು ಬರೆದಿದ್ದಾನೆ. ಈತನು ಜೈನ ಕವಿ. ಇವನಿಗೆ ವಿಚಿತ್ರಕವಿ ಎಂಬ ಬಿರುದಿದ್ದಂತೆ ತಿಳಯುತ್ತದೆ. ತನ್ನ ಗ್ರಂಥವನ್ನು ಸುಮನೋಬಾಣಕವಿಯೂ ಅಭಯಚಂದ್ರಸಿದ್ಧಾಂತಿಯೂ ತಿದ್ದಿದಂತೆ

ಸುಮನೋಬಾಣಕವೀಂದ್ರ । ಪ್ರಮುಖಂ ಬೆರಸಭಯಚಂದ್ರಸಿದ್ಧಾಂತಿಗಳು ।
ತ್ತಮಮಾಗೆ ತಿರ್ದಿದೀಕೃತಿ । ಗಮರ್ದುದು ಸೌಭಾಗ್ಯಮೊಂದಿದಾಯುಂ ಶ್ರೀಯುಂ ॥

ಎಂಬ ಪದ್ಯದಲ್ಲಿ ಹೇಳುವುದರಿಂದ ಕವಿ ಸುಮನೋಬಾಣನ ಸಮಕಾಲದವನು ಎಂಬುದು ವ್ಯಕ್ತವಾಗುತ್ತದೆ. ಸುಮನೋಬಾಣನು ಸುಮಾರು 1150 ರಲ್ಲಿ ಇದ್ದುದಾಗಿ ತಿಳಿವುದರಿಂದ ಕವಿಯ ಕಾಲವೂ ಅದೇ ಆಗಿರಬೇಕು. ಅಲ್ಲದೆ ಇವನು ಸ್ತುತಿಸುವ ಮಾಘವೇಂದು 1131 ರಲ್ಲಿ ಗತಿಸಿದ ಗಂಗರಾಜನ ಮಗನಾದ ಬೊಪ್ಪನ ಗುರುವಾಗಿದ್ದಂತೆ ಸುಮಾರು 1135 ರಲ್ಲಿ ಬರೆದ ಶ್ರವಣಬೆಳ್ಗೊಳದ

384 ನೆಯ ಶಾಸನದಿಂದ ತಿಳಿವುದರಿಂದ ಈ ವಿಷಯವೂ ನಾವು ಕವಿಗೆ ಕೊಟ್ಟಿರುವ ಕಾಲವನ್ನು ದೃಢಪಡಿಸುತ್ತದೆ.

ಇವನ ಗ್ರಂಥ

## ಕರ್ಣಾಟಕ ಕಲ್ಯಾಣಕಾರಕ.

ಇದು ವೈದ್ಯಗ್ರಂಥ; ಪೂಜ್ಯಪಾದಕೃತ ಕಲ್ಯಾಣಕಾರಕದ ಭಾಷಾಂತರವು. ನಮಗೆ ದೊರೆತ ಅಸಮಗ್ರಪ್ರತಿಯಲ್ಲಿ (1) ಪೀಠಿಕಾಪ್ರಕರಣ, (2) ಪರಿಭಾಷಾಪ್ರಕರಣ, (3) ಷೋಡಶಜ್ವರನಿದಾನಚಿಕಿತ್ಸಾನಿರೂಪಣ, (4) ಅತಿಸಾರಗ್ರಹಣೀನಿದಾನಚಿಕಿತ್ಸಾನಿರೂಪಣ, (5) ರಕ್ತಪಿತ್ತನಿದಾನಚಿಕಿತ್ಸಾನಿರೂಪಣ, (6) ಕ್ಷಯನಿದಾನಚಿಕಿತ್ಸಾನಿರೂಪಣ, (7) ಉದರರೋಗನಿದಾನಚಿಕಿತ್ಸಾನಿರೂಪಣ, (8) ಗುಲ್ಮನಿದಾನಚಿಕಿತ್ಸಾನಿರೂಪಣ ಎಂಬ 8 ಅಧ್ಯಾಯಗಳು ಮಾತ್ರ ಇವೆ. ಬಾಹಟ, ಸಿದ್ಧಸಾರ, ಚರಕ ಎಂಬ ವೈದ್ಯಗ್ರಂಥಗಳಿಗಿಂತ ಪೂಜ್ಯಪಾದನ ಕಲ್ಯಾಣಕಾರಕವು ಉತ್ಕೃಷ್ಟವಾದುದೆಂದೂ ಅದರಲ್ಲಿ ಹೇಳಿರುವ ಚಿಕಿತ್ಸೆ ಮದ್ಯಮಾಂಸಮಧುವರ್ಜಿತವೆಂದೂ ಈ ಪದ್ಯದಲ್ಲಿ ಹೇಳುತ್ತಾನೆ—

ಸುಕರಂ ತಾನೆನೆ ಪೂಜ್ಯಪಾದಮುನಿಗಳ್ ಮುಂ ಪೇಳ್ದ ಕಲ್ಯಾಣಕಾ ।
ರಕಮಂ ಬಾಹಟಸಿದ್ಧಸಾರಚರಕಾದ್ಯುತ್ಕೃಷ್ಟಮಂ ಸದ್ಗುಣಾ ॥
ಧಿಕಮಂ ವರ್ಜಿತಮದ್ಯಮಾಂಸಮಧುವಂ ಕರ್ಣಾಟದಿಂ ಲೋಕರ ।
ಕ್ಷಕಮಂ ಚಿತ್ರಮದಾಗೆ ಚಿತ್ರಕವಿ ಸೋಮಂ ಪೇಳ್ದನಿಂತಳ್ತಿಯಿಂ ॥

ಗ್ರಂಥಾವತಾರದಲ್ಲಿ ಚಂದ್ರನಾಥಸ್ತುತಿ ಇದೆ. ಬಳಿಕ ಕವಿ ಸಿದ್ಧಾದಿಗಳು [1], ಸರಸ್ವತಿ, ಮಾಘವೇಂದು, ಸೈದ್ಧಾಂತಿಕಚಕ್ರವರ್ತಿ ಅಭಯಚಂದ್ರ, ಕನಕಚಂದ್ರ ಪಂಡಿತದೇವ, ಇವರುಗಳನ್ನು ಹೊಗಳಿದ್ದಾನೆ. ಅಧ್ಯಾಯಾಂತ್ಯದಲ್ಲಿ—

ಇದು ವಿಚಿತ್ರಕವಿ ಜಗದ್ದಳಸೋಮನಾಥವಿರಚಿತಮಪ್ಪ ಕರ್ಣಾಟಕಕಲ್ಯಾಣಕಾರಕದೊಳ್—

ಎಂದಿದೆ.

ಕೀರ್ತಿವರ್ಮನ (ಸು. 1125) ಗೋವೈದ್ಯವನ್ನು ಬಿಟ್ಟರೆ ಇದೇ ನಮಗೆ ದೊರೆತಿರುವ ಕನ್ನಡ ವೈದ್ಯಗ್ರಂಥಗಳಲ್ಲಿ ಪುರಾತನವಾದುದು. ಇದರಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ:—

### ಜ್ವರೋತ್ಪತ್ತಿ.

ಮಲಸಂಗ್ರಹದಿಂದುದರಾ । ನಲನಳ್ಳಿವಿಂದಾಮುಚಲನೆಯಿಂ ಜ್ವರಮೊಗೆಗುಂ ।
ಕೆಲರಾತ್ರಿಪುರಧ್ವಂಸಿಯ । ಲಲಾಟಲೋಚನದಿನೊಗೆದುದೆಂಬರ್ ಜ್ವರಮಂ ॥348॥

1. ಸಿದ್ಧರು, ಆಚಾರ್ಯರು, ಉಪಾಧ್ಯಾಯರು, ಸಾಧುಗಳು

### ಚಿಕಿತ್ಸೆ.

ಜ್ವರವಾದಿಯೊಳುಪವಾಸಂ । ಜ್ವರಮುಷ್ಣಮುದಲ್ಲಿ ಗಂಜಿ ಪೇಟ್ಟು ಕಷಾಯಂ ।
ಜ್ವರಪಾಕವೊಳಸ್ತಮಿತ । ಜ್ವರದೊಳ್ ಮಲಹರಣಮಿನಿತಿವಾರೋಗ್ಯಕರಂ ॥ 349 ॥

### ಪಿತ್ತಜ್ವರಕ್ಕೆ ಕಲ್ಕ.

ಸಿರಿಕಂಡಂ ಬಾಳಂ ಶ । ರ್ಕರೆ ಬೇವಿನ ಕಡ್ಡಿ ಭದ್ರಮುಸ್ತೆ ದ್ರಾಕ್ಷಂ ।
ಬೆರಸರೆದು ಕುಡಿಯಲೆಱಿದೊಡೆ । ಪರಿಹರಿಸುಗುಮೆಯ್ದೆ ಪಿತ್ತಜನಿತಜ್ವರಮಂ
॥ 350 ॥

### ವಿಷಮಜ್ವರಕ್ಕೆ ನಸ್ಯ.

ಪೊಸಚಿಕ್ಕಣಿಕೆಯ ಪುಲ್ಲಂ । ಪೊಸಬೆಳ್ಳುಳ್ಳಿಯ ರಸಂಗಳಂ ತಳದಿಂದಂ ।
ಪೊಸೆದಾಗಳೆ ನಸ್ಯಂಗೆಯೆ । ಬಸವಲ್ಲಿನಿಪಾ ಜ್ವರಂಗಳಂ ಮಸುಳಿಸುಗುಂ ॥ 351 ॥

### ಬಿದ್ದ ನಾಲಗೆಗೆ.

ಪಲಕಾಲದ ಪುಣಿಸೆಯ ಪ । ಣ್ಣ ಲೇಹ್ಯಮಂ ಮಾಡೆ.ಸನ್ನಿಪಾತಜ್ವರದಿಂ ।
ಸಲೆ ಪೊರಳದಿರ್ದ ನಾಲಗೆ। ಗೆ ಲೇಸನೀಗುಂ ಜ್ವರಂಗಳಂ ಪಿಂಗಿಸುಗುಂ ॥ 352 ॥

### ಪಿತ್ತಾತಿಸಾರಕ್ಕೆ.

ಪರಿವತಿಸಾರಂ ಪಿರಿದಾ । ಗಿರೆ ಹೂಲಿಯ ಬೇರ ತಿಗುಡನೆಮ್ಮೆ ರ್ಯ ಮೊಸರೊಳ್ ।
ಬೆರಸಿಟ್ಟು ಸೈಂಧವಂ ಕೂ । ಡಿರೆ ಮೆಲ್ವುದು ದಿವ್ಯಯೋಗಮಿದು ಪರಿಹರಿಕುಂ ॥353॥

### ರಕ್ತಪಿತ್ತಕ್ಕೆ.

ಬೆರಸುವುದುಱ ಘೃತಮುಂ ಶ । ರ್ಕರೆಯುಂ ನೆಲ್ಲಿಯುಮನಮರ್ದುವಳ್ಳಿಯ
ಪುಡಿಯಂ ।
ಪಿರಿದೆನಿಪ ರಕ್ತಪಿತ್ತದ । ಭರಮಂ ಪರಿಹರಿಕುಮಱಗಿದಮೃತಾಮಳಕಂ ॥ 354 ॥

---

## ಸಕಲೇಶಮಾದರಸ. ಸು. 1150.

ಈತನು ವಚನಗಳನ್ನು ಬರೆದಿದ್ದಾನೆ. ಇವನು ವೀರಶೈವಕವಿ. **ಪದ್ಮಣಾಂಕನ** (ಸು. 1385) **ಪದ್ಮರಾಜಪುರಾಣದಿಂದ** ಇವನ ವಿಷಯವಾಗಿ ಈಯಂಶಗಳು ತಿಳಿಯುತ್ತವೆ:—

ಇವನ ತಂದೆಯಾದ ಮಲ್ಲರಸನು ಕಲ್ಲಕುರಿಕೆಯಲ್ಲಿ ದೊರೆಯಾಗಿದ್ದು ವಿರಕ್ತನಾಗಿ ಶ್ರೀಶೈಲಕ್ಕೆ ಹೋದನು. ಇವನೂ ಕೆಲವುಕಾಲ ಅಲ್ಲಿ ಆಳುತ್ತಿದ್ದು ವಿರಕ್ತಿಹುಟ್ಟಿ ಅಂಬಿಯ

ಮಾರ್ಗವಾಗಿ ಶ್ರೀಶೈಲಕ್ಕೆ ಹೋಗಿ ತಂದೆಯನ್ನು ಕಾಣಲು ಅವನು—ನೀನು ಕಲ್ಯಾಣದಲ್ಲಿ ಧರ್ಮಸ್ಥಾಪನೆಗಾಗಿ ಹುಟ್ಟುವ ಬಸವನೊಡನೆ ಕಾಲವನ್ನು ಕಳೆಯಬೇಕು—ಎಂದು ಹೇಳಿ ಹಿಂದಕ್ಕೆ ಕಳುಹಿಸಿದನು. ಇವನ ಮಗ ಮಾಯಿದೇವ, ಮಮ್ಮಗ ಕೆರೆಯ ಪದ್ಮರಸ.

ಬಸವನೊಡನೆ ಕೆಲವುಕಾಲ ಇದ್ದುಬಾ—ಎಂದು ಮಲ್ಲರಸನು ಇವನನ್ನು ಶ್ರೀಶೈಲದಿಂದ ಹಿಂದಕ್ಕೆ ಕಳುಹಿಸಿದನು: ಎಂದು ಭೀಮಕವಿಯ (1369) ಬಸವಪುರಾಣದಲ್ಲಿಯೂ (ಸಂಧಿ 20) ಹೇಳಿದೆ.

ಇದರಿಂದ ಇವನು ಬಸವನಿಗಿಂತ (ಸು. 1160) ಕೆಲವುಕಾಲ ಹಿಂದೆ ಇದ್ದವನೆಂದೂ ಕೆರೆಯಪದ್ಮರಸನ (ಸು. 1165) ಪಿತಾಮಹನೆಂದೂ ತಿಳಿಯುತ್ತದೆ. ಆದುದರಿಂದ ಇವನ ಕಾಲವು ಸುಮಾರು 1150 ಆಗಿರಬಹುದು.

## ವಚನಗಳು.

ಇವನ ವಚನಗಳ ಸಂಖ್ಯೆ 113.[1] ಇವುಗಳಲ್ಲಿ **ಸಕಲೇಶ್ವರದೇವ** ಎಂಬ ಅಂಕಿತವು ಉಪಯೋಗಿಸಿದೆ. ಒಂದೆರಡು ವಚನಗಳನ್ನು ತೆಗೆದು ಬರೆಯುತ್ತೇವೆ:—

(1) ಸರ್ವಸಂಗಪರಿತ್ಯಾಗಿಯಾದಡೇನು? ಭೋಗಕ್ಕೆ ಮುಱುಗಿಸುವೆ; ಪಾಕನೇಮವೆಂದಡೆ ಷಡ್ರಸಾನ್ನಕ್ಕೆಱಗಿಸುವೆ; ಮೌನವ್ರತಿಯೆಂದಡೆ ಸನ್ನೆಯಲ್ಲಿ ಬೇಡಿಸುವೆ; ಬ್ರಹ್ಮಚಾರಿಯೆಂದಡೆ ಅಂಗನೆಯರಿಗೆಱಗಿಸುವೆ: ಸಕಲೇಶ್ವರದೇವ ಎನ್ನನಾಳವಾಡಿ ಕಾಡುವೆ. ‖ 355 ‖

(2) ಜನಮೆಚ್ಚಿ ಶುದ್ಧನಲ್ಲದೆ ಮನಮೆಚ್ಚಿ ಶುದ್ಧನಲ್ಲಯ್ಯಾ; ವೇಷದಲ್ಲಧಿಕನಲ್ಲದೆ ಭಾಷೆಯಲ್ಲಧಿಕನಲ್ಲಯ್ಯಾ; ನುಡಿಯಜಾಣನಲ್ಲದೆ ನಡೆಯಜಾಣನಲ್ಲಯ್ಯಾ; ಧನದೊರೆಯದಿರ್ದಡೆ ನಿಃಪ್ರಿಯನಲ್ಲದೆ ಧನದೊರೆತು ನಿಃಪ್ರಿಯನಲ್ಲಯ್ಯಾ; ಏಕಾಂತದ್ರೋಹಿ ಗುಪ್ತಪಾತಕ ಯುಕ್ತಿಹೀನಂಗೆ ಸಕಲೇಶ್ವರದೇವ ಎಂತೊಲಿವ. ‖ 356 ‖

(3) ಬಲೀಂದ್ರನ ಸಿರಿಯಿಂದಲಧಿಕರ ನಾನಾರನೂ ಕಾಣೆ; ಅಂತಹ ಸಂಪತ್ತು ಮೂಱಡಿಗೈದವೆ ಹೋಯಿತ್ತು. ಕೆಡುವಂತಿದ್ದಿತೇ ಕೌರವನ ರಾಜ್ಯ? ಮಡಿವಂತಿದ್ದಿತೇ ರಾವಳನ ಬಲ್ಲಾಳಿಕೆ? ಪರಸ್ತ್ರೀ ಒಕ್ಸ್ತ್ರೀದೇವಿಗೊಲಿದು ಒಂದು ನಿಮಿಷದಲ್ಲಿ ಮಡಿದ. ಇದು ಸತ್ಯ, ಇದು ಸತ್ಯ. ಸಿರಿಸೌಕರ್ಯವೆಂಬುದು ಆಕಾಶದ ರಚನೆ. ಇದನಱಿದು ದೇಹದಿಚ್ಛೆಯ ನತಿಗಳೆದು ನಮ್ಮ ಸಕಲೇಶ್ವರದೇವಂಗೋತು ನೀನೆಂಬ ಭ್ರಮೆಯ ಬಿಡಿಯಾ ಮರುಳೆ ‖ 357 ‖

---

1. ನಮಗೆ ದೊರೆತ ಪ್ರತಿಯಲ್ಲಿ ಕೆಲವು ವಚನಕಾರರ ವಚನಗಳ ಸಂಖ್ಯೆಗಳು ಕೊಟ್ಟಿವೆ.

## ವೀರಣಂದಿ. 1153.

ಈತನು ಸ್ವಕೃತವಾದ ಆಚಾರಸಾರಕ್ಕೆ ಕನ್ನಡ ವ್ಯಾಖ್ಯಾನವನ್ನು ಬರೆದಿದ್ದಾನೆ. ಇವನು ಜೈನಕವಿ; ಇವನ ಗುರು ಮೇಘಚಂದ್ರ. ಶಕ 1076 ಶ್ರೀಮುಖದಲ್ಲಿ–ಎಂದರೆ 1153ರಲ್ಲಿ ಈ ವ್ಯಾಖ್ಯಾನವನ್ನು ಬರೆದಂತೆ ಅದರಲ್ಲಿರುವ ಸ್ವಸ್ತಿಶ್ರೀಮನ್ಮೇಘಚಂದ್ರತ್ರೈವಿದ್ಯದೇವರ ಶ್ರೀಪಾದಪ್ರಸಾದಾಸಾದಿತಾತ್ಮಪ್ರಭಾವ ಸಮಸ್ತವಿದ್ಯಾಪ್ರಭಾವ ಸಕಲದಿಗ್ವರ್ತಿಕೀರ್ತಿ ಶ್ರೀಮದ್ವೀರಣಂದಿಸಿದ್ಧಾಂತಚಕ್ರವರ್ತಿಗಳ್ ಶಕವರ್ಷಂ 1076 ಶ್ರೀಮುಖನಾಮಸಂವತ್ಸರದ ಜ್ಯೇಷ್ಠಶುಕ್ಲ 1 ಸೋಮವಾರದಂದು ತಾವು ಮಾಡಿದಾಚಾರಸಾರಕ್ಕೆ ಕರ್ಣಾಟಕವೃತ್ತಿಯುಂ ಮಾಡಿದಪರ್[1]—ಎಂಬ ಗದ್ಯದಿಂದ ತಿಳಿಯುತ್ತದೆ. ಇದರಿಂದ ಮಾದರಿಗಾಗಿ ಒಂದು ಶ್ಲೋಕದ ವ್ಯಾಖ್ಯಾನವನ್ನು ತೆಗೆದು ಬರೆಯುತ್ತೇವೆ :—

ಪರಿವ್ರಾಡ್ಬ್ರಹ್ಮಕಲ್ಪಾಂತಂ ಯಾತ್ಯುಗ್ರಾಚಾರವಾನಪಿ ।
ಆಜೀವಕಃ ಸಹಸ್ರಾರಕಲ್ಪಾಂತಂ ದರ್ಶನೋಜ್ಝಿತಃ ॥

ಪರಿವ್ರಾಟ್, ಪರಿವ್ರಾಜಕಂ. ಬ್ರಹ್ಮಕಲ್ಪಾಂತಂ, ಬ್ರಹ್ಮಕಲ್ಪಂಬರಂ. ಅತ್ಯುಗ್ರಾಚಾರವಾನಪಿ, ಬೆಟ್ಟಿತ್ತಪ್ಪ ನೆಗಟ್ತೆಯನುಳ್ಳನಾದೊಡಂ. ಆಜೀವಕಃ, ಬೌದ್ಧಭೇದಮಪ್ಪ ಕಾಂಜಭಿಕ್ಷು. ಸಹಸ್ರಾರಕಲ್ಪಾಂತಂ, ಸಹಸ್ರಾರಕಲ್ಪಂಬರಂ. ದರ್ಶನೋಜ್ಝಿತಃ, ಸಮ್ಯಕ್ತ್ವಮಿಲ್ಲದಂ. ಯಾತಿ, ಪೋಕುಂ.

---

## ಶಾಂತಿವರ್ಮ. ಸು. 1160.

ಈ ಕವಿಯನ್ನು **ರುದ್ರಭಟ್ಟನು** (ಸು. 1180) "ಶಾಂತಿವರ್ಮನ ನಯುಂ" ಎಂದು ಹೊಗಳುವುದರಿಂದ ಈತನು ರುದ್ರಭಟ್ಟನಿಗೆ ಹಿಂದೆ ಇದ್ದನೆಂಬುದು ವ್ಯಕ್ತವಾಗುತ್ತದೆ. ಈತನು ಆವ ಗ್ರಂಥಗಳನ್ನು ಬರೆದಿದ್ದಾನೆಯೋ ತಿಳಿಯದು. **ನಂಜುಂಡನು** (ಸು. 1525) ತನ್ನ ಕುಮಾರರಾಮಕಥೆಯಲ್ಲಿ ಇವನನ್ನು ಇತರ ಪೂರ್ವ ಕವಿಗಳೊಡನೆ ಸೇರಿಸಿ ಈ ಪದ್ಯದಲ್ಲಿ ಸ್ತುತಿಸಿದ್ದಾನೆ :—

ಗಜಗನ ಗುಣವರ್ಮನ ನಾಗಚಂದ್ರನ । ಸುಜನೋತ್ತಂಸನೆಸಗನ ।
ಸುಜನರನ್ನನ ಶಾಂತಿವರ್ಮನ ಪದಸರ । ಸಿಜಗಳಿಗೊಲಿದೆಱಗುವೆನು ॥

ಪುಷ್ಪದಂತಪುರಾಣವನ್ನು ಬರೆದ **ಎರಡನೆಯ ಗುಣವರ್ಮನು** (ಸು. 1235) ತನ್ನ ಪೋಷಕನಾದ ಒಬ್ಬ "ನಾಟ್ರಿಭು" ಶಾಂತಿವರ್ಮನನ್ನು ಹೊಗಳು

1. *Ind. Ant.*, XLI, 88.

ತ್ತಾನೆ. **ರುದ್ರಭಟ್ಟನು** ಹೇಳುವ ಶಾಂತಿವರ್ಮನಿಗೂ ಈ ಶಾಂತಿವರ್ಮನಿಗೂ ಆವ ಸಂಬಂಧವೂ ಇಲ್ಲ. ಈ ಕವಿಯನ್ನು ರುದ್ರಭಟ್ಟನು ಸ್ತುತಿಸುವುದರಿಂದ ಇವನು ಅವನಿಗೆ ಹಿಂದೆ—ಎಂದರೆ ಸುಮಾರು 1160 ರಲ್ಲಿ ಇದ್ದಿರಬಹುದು.

---

## ವೃತ್ತವಿಲಾಸ. ಸು. 1160.

ಈತನು **ಧರ್ಮಪರೀಕ್ಷೆಯನ್ನು** ಬರೆದಿದ್ದಾನೆ. **ಶಾಸ್ತ್ರಸಾರವೆಂಬ** ಮತ್ತೊಂದು ಗ್ರಂಥವನ್ನು ಬರೆದಿರುವಂತೆ ತಿಳಿಯಬರುತ್ತದೆ. ಇದು ನಮಗೆ ದೊರೆತಿಲ್ಲ. ಆದರೆ ಪ್ರಾಕ್ಕಾವ್ಯಮಾಲಿಕೆಯಲ್ಲಿ ಈ ಗ್ರಂಥದ ಕೆಲವು ಭಾಗಗಳು ಉದ್ಧೃತವಾಗಿವೆ.

ಈತನು ಜೈನಕವಿ; ತನ್ನ ವಿಷಯವಾಗಿ ಗ್ರಂಥದಲ್ಲಿ ಏನೂ ಹೇಳಿಕೊಂಡಿಲ್ಲ. ಇವನ ಕಾಲವನ್ನು ನಿರ್ಣಯಿಸುವುದಕ್ಕೆ ಸರಿಯಾದ ಆಧಾರವಿಲ್ಲ; ಇವನು ಸ್ತುತಿಸಿರುವ ಜೈನಗುರುಗಳಿಂದ ಇವನ ಕಾಲವನ್ನು ಊಹಿಸಬೇಕಾಗಿದೆ. ಶುಭಕೀರ್ತಿವ್ರತಿ, ಸೈದ್ಧಾಂತಿಕಮಾಘಣಂದಿಯತಿ, ಭಾನುಕೀರ್ತಿಯತಿ, ಧರ್ಮಭೂಷಣ, ಅವನ ಮಗ ಮತ್ತು ಶಿಷ್ಯ ಅಮರಕೀರ್ತಿ (ಕವಿಯ ಗುರು), ಅಭಯಸೂರಿವಾದೀಶ್ವರ, ಇವರುಗಳನ್ನು ಸ್ತುತಿಸಿದ್ದಾನೆ.

ಒಬ್ಬ ಅಭಯಸೂರಿ ಹೊಯ್ಸಳರಾಜನಾದ 1 ನೆಯ ಬಲ್ಲಾಳನ (1100–1106) ಆಳಿಕೆಯಲ್ಲಿ ಚಾರುಕೀರ್ತಿಗೆ ಸಮಕಾಲದವನಾಗಿ ಇದ್ದಂತೆ ತಿಳಿಯುತ್ತದೆ.[1] 1115 ರಲ್ಲಿ ಗತಿಸಿದ ಮೇಘಚಂದ್ರನ[2] ಸಮಕಾಲದವನಾದ ಒಬ್ಬ ಶುಭಕೀರ್ತಿ ಇದ್ದನು.[3] 1176 ರಲ್ಲಿ ಗತಿಸಿದ ನಯಕೀರ್ತಿಗೆ[4] ಮಾಘಣಂದಿ, ಭಾನುಕೀರ್ತಿ ಎಂಬ ಶಿಷ್ಯರುಂಟು.[5] ಇವರ ಕಾಲವು ಸುಮಾರು 1150 ಆಗಬಹುದು. ಶ್ರವಣಬೆಳ್ಗೊಳದ 274 ನೆಯ ಶಾಸನದಲ್ಲಿ ಧರ್ಮಭೂಷಣನೆಂಬ ಒಬ್ಬ ಜೈನಗುರುವೂ ಅವನ ಶಿಷ್ಯನಾದ ಒಬ್ಬ ಅಮಲಕೀರ್ತಿಯೂ ಹೇಳಲ್ಪಟ್ಟಿದ್ದಾರೆ. ಈ ಅಮಲಕೀರ್ತಿ ಕವಿಯ ಗುರುವಾಗಿರಬಹುದೆಂಬ ಸಂದೇಹವುಂಟಾಗುತ್ತದೆ. ಆದರೆ ಕವಿಯ ಗುರು ಅಮರಕೀರ್ತಿ ಎಂಬುದರಿಂದ ಈತನು ತದ್ಭಿನ್ನನೆಂದು ತೋರುತ್ತದೆ. ಅಲ್ಲದೆ ಅಮಲಕೀರ್ತಿಯ ಕಾಲವು ಈ ಶಾಸನದ ಪ್ರಕಾರ ಸುಮಾರು 1350 ಆಗುತ್ತದೆ. ಕವಿ ಅಷ್ಟು ಈಚೆಯವನು ಬೇರೆ ಅಲ್ಲ. **ಇವನು ಸುಮಾರು 1160 ರಲ್ಲಿ ಇದ್ದಿರಬಹುದೆಂದು ಊಹಿಸುತ್ತೇವೆ.**

---

1. ಶ್ರ. ಬೆ. ಶಾ. 254. 2. ಶ್ರ. ಬೆ. ಶಾ. 127. 3. ಶ್ರ. ಬೆ. ಶಾ. 140. 4. ಶ್ರ. ಬೆ. ಶಾ. 66. 5. ಶ್ರ. ಬೆ. ಶಾ. 327.

**ದೇವಚಂದ್ರನು** ರಾಜಾವಳೀಕಥೆಯಲ್ಲಿ "ಬಲ್ಲಾಳರ ಕಾಲದಲ್ಲಿ ಅಮರಕೀರ್ತಿರಾವುಳಯತಿಯರ ಶಿಷ್ಯಂ ವೃತ್ತವಿಳಾಸನೆಂಬಂ ಸಂಸ್ಕೃತಧರ್ಮಪರೀಕ್ಷೆಯಂ ವಸ್ತುಕವಾಗಿ ಮಾಡಿದಂ" ಎನ್ನುತ್ತಾನೆ.

ಈ ಕವಿ ಪೂರ್ವಕವಿಗಳಲ್ಲಿ ಆರನ್ನೂ ಹೇಳಿಲ್ಲ. "ಕವಿತಾಚಾತುರ್ಯರ್ತಿದುರ್ಗೆ ಮದೀಯಕೃತಿಯಂ ಪಯೆಯಿಂ" ಎಂದು ಮಾತ್ರ ಹೇಳಿದ್ದಾನೆ.

ತನ್ನ ಗುಣಗಳನ್ನು ಈ ಪದ್ಯದಲ್ಲಿ ಹೇಳಿಕೊಂಡಿದ್ದಾನೆ:—

ಜಿನಪದಸೇವಕಂ ಜಿನಮುನೀಂದ್ರಪದಾರ್ಚಕನನ್ಯದೈವಮುಂ ।
ಕನಸಿದೊಳಾದೊಡಂ ನೆನೆಯದುತ್ತಮ...... ನುದಾರಮೇರು ಸ ॥
ಜ್ಜನನಿಧಿ ಸತ್ಯಶೌಚಗುಣದಾಗರಮಾಜ್ಞೆಯ ಜನ್ಮಭೂಮಿಯೆಂ ।
ದನುನಯದಿಂದೆ ಕೀರ್ತಿಪುದು ವೃತ್ತವಿಳಾಸನನೀಜಗಜ್ಜನಂ ॥

ಇವನ ಗ್ರಂಥಗಳಲ್ಲಿ

## ಧರ್ಮಪರೀಕ್ಷೆ.

ಅಮಿತಗತಿಯೆಂಬವನು ಸಂಸ್ಕೃತದಲ್ಲಿ ಬರೆದಿರುವ ಧರ್ಮಪರೀಕ್ಷೆಯನ್ನು ಕವಿ ಎಲ್ಲರಿಗೂ ತಿಳಿವಂತೆ ಕನ್ನಡದಲ್ಲಿ ರಚಿಸಿದುದಾಗಿ "ಮುನ್ನಿನ ಚಾರುಸಂಸ್ಕೃತದ ಧರ್ಮಪರೀಕ್ಷೆಯಂ ಸನ್ನುತಮಾಗೆಯೆಲ್ಲರಱಿವಂತಿರೆ ಕನ್ನಡದಿಂ ಪೇೞ್ದೆಂ" ಎಂಬ ಪದ್ಯಭಾಗದಲ್ಲಿ ಹೇಳಿದ್ದಾನೆ. ಇದು ಚಂಪೂಗ್ರಂಥ; 10 ಆಶ್ವಾಸಗಳಾಗಿ ಭಾಗಿಸಲ್ಪಟ್ಟಿದೆ. ಈ ಗ್ರಂಥದಲ್ಲಿ—ಮನೋವೇಗಪವನವೇಗರೆಂಬ ರಾಜಕುಮಾರರು ಪಾಟಲೀಪುರಕ್ಕೆ ಹೋಗಿ ಬ್ರಹ್ಮನ ದೇವಸ್ಥಾನದಲ್ಲಿದ್ದ ಭೇರಿಯನ್ನು ಹೊಡೆದು ಅಲ್ಲಿದ್ದ ಸಿಂಹಾಸನದಲ್ಲಿ ಕುಳಿತುಕೊಂಡಿರಲು, ಅಲ್ಲಿಯ ಶಾಸ್ತ್ರಜ್ಞರಾದ ಬ್ರಾಹ್ಮಣರು ಬಂದು—ವಿದ್ವಾಂಸರಾದವರು ವಾದಾರ್ಥವಾಗಿ ಬಂದು ಭೇರೀರವವನ್ನು ಮಾಡಿ ವಾದದಲ್ಲಿ ಗೆದ್ದ ಮೇಲೆಯೇ ಸಿಂಹಾಸನದಲ್ಲಿ ಕುಳಿತುಕೊಳ್ಳುವ ಪದ್ಧತಿ ಇದೆ. ನೀವು ಆವ ಶಾಸ್ತ್ರದಲ್ಲಿ ಪಂಡಿತರು? ಎಂದು ಕೇಳಲು, ರಾಜಕುಮಾರರು—ನಮಗೇನೂ ತಿಳಿಯದು; ಸುಮ್ಮನೆ ಬಂದು ಕುಳಿತುಕೊಂಡೆವು—ಎಂದು ಹೇಳಿ ಸಿಂಹಾಸನವನ್ನು ಬಿಟ್ಟು ಇಳಿದು ಕೆಳಗೆ ಕುಳಿತುಕೊಂಡು ಬ್ರಾಹ್ಮಣರಿಗೆ ಕಥೆಗಳನ್ನು ಹೇಳಿ ಅವರ ಮತವನ್ನು ಅನೇಕ ವಿಧವಾಗಿ ನಿರಾಕರಿಸಿ ಜಯಪತ್ರವನ್ನು ಹೊಂದಿದಂತೆಯೂ ಜೈನಮತದ ಉತ್ಕೃಷ್ಟತೆಯನ್ನು ಪ್ರಕಟಿಸಿದಂತೆಯೂ—ಕವಿ ಹೇಳಿದ್ದಾನೆ.

ಈ ಗ್ರಂಥದ ಉತ್ಕೃಷ್ಟತೆಯನ್ನು—

ಇದು ದುರಿತತಿಮಿರರವಿರುಚಿ । ಯಿದು ಸತ್ಕೈವಲ್ಯಪದದ ನಿಶ್ರೇಣಿ ಸಮಂ ।
ತಿದು ರತ್ನತ್ರಯಖನಿಯೆನಿ । ಪುದು ಧರ್ಮಪರೀಕ್ಷೆ ಭವ್ಯಜನಹಿತಕಾರಿಣಂ ॥

ಎಂಬ ಪದ್ಯದಲ್ಲಿ ಹೇಳಿಕೊಂಡಿದ್ದಾನೆ. ಗ್ರಂಥಾವತಾರದಲ್ಲಿ ವರ್ಧಮಾನಜಿನನನ್ನು ಸ್ತುತಿಸಿದ್ದಾನೆ. ಬಳಿಕ ಸಿದ್ಧಾದಿಗಳನ್ನೂ ಯಕ್ಷಿಯಕ್ಷರನ್ನೂ ಸರಸ್ವತಿಯನ್ನೂ ಸ್ತೋತ್ರಮಾಡಿ ಅನಂತರ ಕೇವಲಿಗಳು ಮೊದಲಾಗಿ ಚಿಕ್ಕಹೇಮದೇವನವರೆಗೆ[1] ಗುರುಗಳನ್ನು ಹೊಗಳಿದ್ದಾನೆ. ಆಶ್ವಾಸಗಳ ಕೊನೆಯಲ್ಲಿ—

ಇದು ವಿನಮದಮರಮಕುಟತಟಘಟಿತಮಣಿಗಣಮರೀಚಿಮಂಜರೀಪುಂಜರಂಜಿತಪಾದಾರವಿಂದ ಭಗವದರ್ಹತ್ಪರಮೇಶ್ವರವದನವಿನಿರ್ಗತಶ್ರುತಾಂಭೋಧಿವರ್ಧನಸುಧಾಕರಂ ಶ್ರೀಮದಮರಕೀರ್ತಿರಾವುಳವ್ರತೀಶ್ವರಚರಣಸರಸಿರುಹಷಟ್ಪದಂ ವೃತ್ತವಿಳಾಸವಿರಚಿತಮಪ್ಪ ಧರ್ಮಪರೀಕ್ಷೆಯೊಳ್

ಎಂಬ ಗದ್ಯವಿದೆ.

ಇವನ ಬಂಧವು ಸರಳವಾಗಿಯೂ ಲಲಿತವಾಗಿಯೂ ಇದೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ :—

ಕೋಳಿ.

ಪರಿಹರಿಸಿ ನಿದ್ರೆಯುಮುಡುಗಿದ | ಕೊರಲಂ ನಿಮಿರ್ದೆತ್ತಿ ನೋಡಿ ನಾಲ್ದೆಸೆಯುಂ ಕೇ |
ಸರಮಂ ಬಿದಿರ್ದ್ದೆಱಂಕೆಯ | ನೆರಡಂ ಬಡಿದೆೞ್ದು ಕೋೞಿ ಕೂಗಿದುವಾಗಳ್
॥ 358 ॥

ಸೂರ್ಯೋದಯ.

ತಳತಳಿಸಿ ಪೊಳೆವ ಪೊಸಕೆಂ | ದಳಿರ್ಗಳ ಕಾವಣಮೊ ಕಮಲಿನಿಯ ರಾಗದ ಪೆ |
ರ್ಗಳವಿಗೆಯೊ ಪೇೞಿಮೆನೆ ಕೆಂ | ಗೊಳಿಸಿದುದರುಣೋದಯಂ ಸುರೇಂದ್ರನ
ದೆಸೆಯೊಳ್ ॥ 359 ॥

ಬಾಡಿತು ನೆಯ್ದಲೋಡಿತು ತಮಂ ತೆಗೆದೋಡಿತು ದೈತ್ಯಸಂಕುಳಂ |
ತೀಡಿತು ಸೌರಭಂ ನಲಿದು ನೋಡಿತು ಪಂಕಜವಲ್ಲಿ ಷಟ್ಪದಂ ॥
ಪಾಡಿದುವೆಯ್ದೆ ಕೋಕಮಿಥುನಂ ನೆಱೆ ಕೂಡಿದುವೊಲ್ದು ಮೂಡಿದಂ |
ಮೂಡಣ ದಿಕ್ಕಿನೊಳ್ ತೊಳಗುತುಂ ಬೆಳಗುತ್ತೆ ಸರೋಜಬಾಂಧವಂ ॥ 360 ॥
ಸಸಿಗೆ ಕಳಂಕಮೇಱೆ ದನುಜರ್ಗೆ ಬಲೇಱೆಯುಮುಳೂಕವೃಂದಕು |
ಬ್ಬಸಮುಣಮೇಱೆಯುಪ್ಪಳಿನಿಗುಮ್ಮಳಮೇಱೆ ಸರೋರುಹಕ್ಕೆ ಸಂ ॥

---

1. ಕೇವಲಿಗಳು, ಶ್ರುತಕೇವಲಿಗಳು, ಅನುಬದ್ಧಕೇವಲಿಗಳು, ಕೊಂಡಕುಂದ, ಸಮಂತಭದ್ರ, ಗೃಧ್ರಪಿಂಛ, ಬಳಾಕಪಿಂಛ, ಮಯೂರಪಿಂಛ, ಉಳೂಕಭಟ್ಟಾಚಾರ್ಯ, ಪೂಜ್ಯಪಾದ, ಜಿನಸೇನ, ವೀರಸೇನ, ಶುಭಕೀರ್ತಿವ್ರತಿ, ಸೈದ್ಧಾಂತಿಕಮಾಘಣಂದಿ, ಭಾನುಕೀರ್ತಿ, ಧರ್ಮಭೂಷಣ, ಇವನ ಮಗನೂ ಶಿಷ್ಯನೂ ಆದ ಅಮರಕೀರ್ತಿವ್ರತಿ (ಸ್ವಗುರು), ಹೇಮದೇವ, ಅಭಯಸೂರಿವಾದೀಶ್ವರ, ಮುನಿವಲ್ಲಭ, ತತ್ಪುತ್ರ ಚಿಕ್ಕಹೇಮದೇವ.

ತಸದೊದವೇಱಿ ಕೋಕಮಿಥುನಕ್ಕನುರಾಗತೆಯೇಱಿ ಲೀಲೆಯಿಂ ।
ಬಿಸರುಹಮಿತ್ರನಂದುದಯಪರ್ವತಮಂ ಭರದಿಂದಮೇಱಿದಂ ॥ 361 ॥

## ನಕ್ಷತ್ರ.

ನೆಲನಗಲಕೆ ತೀವಿದ ಕ । ಟ್ಟಲೆಯಿಂ ಕಳೆಯಲ್ಕೆ ಗಗನತಳದೊಳ್ ಪಲವುಂ ।
ಬೆಳಗಂಡಿಗಳಂ ಸಮೆದಂ । ಜಳಜಜನೆನೆ ತೊಳಗಿ ಬೆಳಗಿದುವು ಭಗಣಂಗಳ್ ॥ 362 ॥

## ಮೋಲೋಗರ.

ಹಾಗಲ ಹಡಲಂ ಕು . ಳಂ । ಕೂಗಲಿ ಕೂಷ್ಮಾಂಡಮವರೆಬದಣೆಗಳಿಂ ಲೇ ।
ಸಾಗಿರೆ ಮಾಡಿದ ಸವಿಮೇ । ಲೋಗರಮಂ ತಂದು ಬಡಿಸಿದರ್ ಮಾನಿನಿಯರ್ ॥363॥

## ಮುದುಕ.

ನರೆದೆಲೆ ಜೋಲ್ದ ಪುರ್ಬು ಕುಱಿದಕ್ಷಿಯುಗಂ ತುಟಿಯರ್ತ ಬೋಡ ಬಾಯ್ ।
ತೆರೆ ಮುಸಗಿರ್ದ ಮೋರೆಯುಡುಗಿರ್ದುರಮುಕ್ಕಳಿಸಿರ್ದ ಪೊಟ್ಟೆ ಮೇ ॥
ಲ್ಸಿರೆಮುಸಗಿರ್ದ ಕಾಲ್ ಮುಱಿದ ಬೆನ್ನುಱಿ ಕಂಪಿಪ ಹಸ್ತಮಸ್ತಕಂ ।
ಪರಿಕಿಸೆ ತಾಪಸಂಗೆನಗೆ ಪೇಸದೆ ಕನ್ನೆಯನೀಯಬಲ್ಲರೇ ॥ 364 ॥

## ಸಮಯಮೂಢತೆ.

ಪೂಸಿದ ಬೂದಿ ತೊಟ್ಟ ಮಣಿಯುಟ್ಟ ತೊವಲ್ ತಳೆಗಾರ್ಸೆ ಲಾಗುಳಂ ।
ಬಾಸಣಿಸಿರ್ದ ಜಾದು ಮುಸಿಯಸ್ಥಿಯ ಮಾಲೆಯನಿಕ್ಕಿಕೊಂಡು ದು ॥
ರ್ವೇಷದೊಳಿರ್ಪರಂ ಸಮಯಿಯೆಂದು ತಪಸ್ವಿಗಳೆಂದು ನಾಡೆ ಸಂ ।
ತೋಷದೆ ಕಾಣ್ಬುದೇ ಸಮಯಮೂಢತೆಯೆಂಬುದು ವಿಶ್ವಧಾತ್ರಿಯೊಳ್ ॥ 365 ॥

## ಧೂರ್ತಸ್ವಭಾವ.

ಮನೆಯೊಳ್ ಪಾಲುಂಡು ನಿಶ್ಚಿಂತದೆ ಬಳೆದು ಕರಂ ಸಾಧುವಾಗಿರ್ದು ಠಾವಿಂ ।
ದಿನಿಸುಂ ಬೆಕ್ಕತ್ತಲಿತ್ತಲ್ ಮಿಡುಕದೆ ಪಲವುಂ ಪ್ರಾಣಿಯಂ ಕಾಣುತುಂ ನೆ ॥
ಟ್ಟನೆ ನುಂಗುತ್ತಿರ್ಕುಮಂತೀನರರೊಳೆ ಕೆಲಬರ್ ಧರ್ಮಮಂ ಕೇಳುತುಂ ಸ ।
ಜ್ಜನರೊಳ್ ಬಱ್ದಿಂ ಬೞಿಕ್ಕಂ ಬಿಡುವರೆ ಕೊಲೆಯಂ ಕ್ರೂರಮಂ ಕಷ್ಟ
ಚಿತ್ತರ್ ॥ 366 ॥

## ಸೇತುಬಂಧದ ಪರಿಹಾಸ.

ಅಂದು ಕಪಿವ್ರಜಂ ಪರಿದು ಬೆಟ್ಟುಗಳಂ ನೆಱಿ ಕಿೞ್ತು ನೆತ್ತಿಯೊಳ್ ।
ಸಂದಿಸಿ ಮೂಱುನಾಲ್ಕನಡಕಿಲ್ಗಿರಿಯಾಗಿರೆ ಪೊತ್ತು ಬೇಗದಿಂ ॥
ತಂದು ಸಮುದ್ರಮಂ ಕ್ಷಣದೆ ಕಟ್ಟಿದರೆಂಬಿದು ನಿಮ್ಮ ಶಾಸ್ತ್ರದೊಳ್ ।
ಸಂದ ಪುರಾಣದೊಳ್ ಪದೆದು ಪೇೞ್ವುದು ಸತ್ಯಮೊ ಮೇಣಸತ್ಯಮೋ ॥ 367 ॥

ಪ್ರಾಕ್ಕಾವ್ಯಮಾಲಿಕೆಯಲ್ಲಿ ಶಾಸ್ತ್ರಸಾರದಿಂದ ಉದ್ಧರಿಸಿ ಬರೆದಿರುವ ಭಾಗದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ:—

### ಪಾಪ.

ನಲಿನಲಿದಾಡಿ ಪಾಪಮನುಪಾರ್ಜಿಸಿ ತತ್ಪರಿಪಾಕದಿಂದೆ ಕೋ ।
ಟಲೆಗೊಳಗಾಗಿ ಬಾಯ್ವಿಡುವ ಮೂಢಜನಂಗಳ ಕೃತ್ಯಮುೞ್ತಿಯಿಂ ॥
ಜಲಜಲಿಪಗ್ನಿಯುಂ ಪಿಡಿದು ಬೆಂದ ಬೞಿಕ್ಕೆ ಕನಲ್ದೊಸಲ್ದು ಮ ।
ಮ್ಮಲಮಱುಗುತ್ತೆ ಬಾಯುೞಿವ ಬಾಲಕಜಾಲಕದಂದಮಲ್ಲವೇ ॥ 368 ॥

ಬಯಸಿ ನಿಧಾನಮಂ ಸುಕೃತಮಿಲ್ಲದವಂ ಭರದಿಂ ತದಗ್ರಭೂ ।
ಮಿಯನಗೞುತ್ತುಮಿರ್ದು ನಿಧಿಗಾಣ್ಬೆಡೆಯೊಳ್ ಮರುಳಾಗಿ ಪೋಪ ಮಾ ॥
ೞ್ಕಿಯೊಳಪವರ್ಗಮಾರ್ಗದೊಲವಿಂ ಪಲರುಂ ಪಿರಿದೋದಿ ತತ್ತ್ವನಿ ।
ರ್ಣಯಜನಿತೋಕ್ತಿಯಲ್ಲಿ ಜಡರಪ್ಪರಿದೇನಘಶಕ್ತಿ ಚಿತ್ರಮೋ ॥ 369 ॥

### ದೈವಮೂಢತೆ.

ಒಗೆವ ದಿನೇಶನಂ ಪರಿವ ಸಿಂಧುವನೂದುವ ಗಾಳಿಯುಂ ಧಗಂ ।
ಧಗಿಸುವ ಕಿಚ್ಚನುೞ್ವ ನೆಲನಂ ಕಱೆವಾಕಳನಿರ್ಪ ಸದ್ಮಮಂ ॥
ಸೊಗಯಿಸಿ ನಿಂದ ಪೆರ್ಮರಮನುಣ್ಬಗುಳಂ ಬೆಸಕೆಯ್ವ ತಮ್ಮ ಮು ।
ಟ್ಟುಗಳನೆ ದೈವಮೆಂದೆಱಗುವಾತನೆ ದೈವದ ಮೂಢನಲ್ಲವೇ ॥ 370 ॥

### ಮೋಕ್ಷಚಿಂತೆ.

ಹುಟ್ಟದ ಯೋನಿ ಮೆಟ್ಟದ ನೆಲಂ ನೆಱೆ ಕೊಳ್ಳದ ಕಾಲಮೊರ್ಮೆಯುಂ ।
ಮುಟ್ಟದ ಭಾವಮೊಂದದ ಭವಂ ಪೆಱತಿಲ್ಲೆನೆ ದುರ್ವಿಮೋಹದಿಂ ॥
ತಿಟ್ಟನೆ ಬಂದೆ ನೀಂ ತಿಳಿಯದಕ್ಕಟ ನಿನ್ನ ನಿಜಸ್ವರೂಪಮಂ ।
ನೆಟ್ಟನೆ ನೋಡಿ ಕೂಡಿ ಪಡೆ ನಿತ್ಯನಿರಂಜನಮೋಕ್ಷಲಕ್ಷ್ಮಿಯಂ ॥ 371 ॥

### ಬಲಿಪ್ರದಾನಪರಿಹಾಸ.

ಕುಱಿಯುಂ ಬೇಡಿದೊಡೀವನೊಂದು ಬಡವಂ ತನ್ನಿಚ್ಛೆಯಿಂ ದೈವಮಾ ।
ಕುಱಿವಿಂಡಿರ್ದೆಡೆಗೆಯ್ದಿಯೊಂದೆರಡುಮೂಱುಂನಾಲ್ಕುಮಯ್ದಾಱು ಬ ॥
ಲ್ಗುಱಿಯುಂ ತಿಂದೊಡೆ ಕಾಪಿನರ್ ಬಡಿಗುಮೋ ನಾಯ್ ತಿನ್ಗುಮೋ ದೈವಮುಂ ।
ಪೆಱರಂ ಬೇಡುವ ದೈವಮೇಕೆ ಗಡ ಪೇೞಾತೋಳನಿಂ ಕಷ್ಟಮೋ ॥ 372 ॥

---

## ಬಸವ. ಸು. 1160.

ಈತನು ಷಟ್ಸ್ಥಲವಚನ, ಶಿಖಾರತ್ನವಚನ, ಕಾಲಜ್ಞಾನವಚನ, ಮಂತ್ರಗೋಪ್ಯ ಎಂಬ ಗ್ರಂಥಗಳನ್ನು ಬರೆದಿದ್ದಾನೆ.

ಇವನು ವೀರಶೈವಕವಿ; ಕರ್ಣಾಟಕದೇಶದಲ್ಲಿ ಪ್ರಸಿದ್ಧವಾದ ಇಂಗಳೇಶ್ವರ ಬಾಗವಾಡಿಯಲ್ಲಿ ಹುಟ್ಟಿದವನು. ಈತನ ಅಜ್ಜನು ಲಿಂಗಭಟ್ಟ; ತಂದೆ ಬಾಗವಾಡಿಯ ಅಗ್ರಹಾರದ "ಗ್ರಾಮಣೀಮಣಿ, ಭೂಮಿದೇವಾಗ್ರಣಿ, ಶೈವಾಂಬುರುಹತರಣಿ" ಯಾದ ಮಂಡಿಗೆ ಮಾದಿರಾಜ; ತಾಯಿ ಮಾದಾಂಬಿಕೆ; ಒಡಹುಟ್ಟಿದವಳು ನಾಗಾಂಬಿಕೆ. ಈಕೆಯ ಮಗನೇ ಚೆನ್ನಬಸವ. ಬಸವನ ಸೋದರದ ಮಾವನು ಬಲದೇವನು. ಈತನು ಬಿಜ್ಜಳರಾಜನಲ್ಲಿ (1156—1167) ಪ್ರಧಾನಿಯಾಗಿದ್ದನು. ಬಲದೇವನ ಮಗಳಾದ ಗಂಗಾಂಬಿಕೆ ಬಸವನ ಹೆಂಡತಿ. ಈತನಿಗೆ ನೀಲಲೋಚನೆ ಅಥವಾ ನೀಲಮ್ಮ ಎಂಬ ಮತ್ತೊಬ್ಬಳು ಹೆಂಡತಿ ಇದ್ದಂತೆ ತಿಳಿಯುತ್ತದೆ. ಬಸವನಿಗೆ ಬಾಲಸಂಗಯ್ಯನೆಂಬ ಒಬ್ಬ ಮಗನಿದ್ದಂತೆಯೂ, ಆತನು ಇವನ ಕಾಲಕ್ಕೆ ಮುಂಚೆಯೇ ಗತಿಸಿದಂತೆಯೂ, ಆ ಕಾಲದಲ್ಲಿ ಬಸವನು "ಪುಷ್ಪವಿದ್ದಂತೆ ಮೊಗ್ಗೆಯನರ್ಪಿಸಿಕೊಂಡ ಶಿವನು; ಪಕ್ವವಾದ ಫಳವಿದ್ದಂತೆ ಕಸುಗಾಯ ಕೊಯ್ದ ಶಿವನು" ಎಂದು ಪ್ರಲಾಪಿಸಿದಂತೆಯೂ ತಿಳಿಯಬರುತ್ತದೆ.[1]

ಬಸವನು ನಂದೀಶ್ವರನ ಅವತಾರವೆಂದು ವೀರಶೈವಗ್ರಂಥಗಳಲ್ಲಿ ಹೇಳಿದೆ. ಈತನಿಗೆ ಎಂಟು ವಯಸ್ಸಾದಾಗ ಇವನ ತಂದೆಯಾದ ಮಾದಿರಾಜನು ಬ್ರಾಹ್ಮಣಸಂಪ್ರದಾಯಕ್ಕೆ ಅನುಸಾರವಾಗಿ ಉಪನಯನವನ್ನು ಮಾಡಬೇಕೆಂದಿರಲು ಬಸವನು ತಂದೆಯನ್ನು ಕುರಿತು—

ಜನಕ ಕೇಳ್ ಶಿವದೀಕ್ಷೆಯಿಲ್ಲದ । ವನವೊಲೆನ್ನಂ ಮುಂಜಿಗಟ್ಟುವ ।
ಮನವಿದೆಂತಾಯಿತ್ತಾಗ ನಿನಗವಿವೇಕಿಯುಂದದಲಿ ॥
ಜನಿಸಿದಾಗಳೆ ಸಂಗಮೇಶ್ವರ । ನೆನಗೆ ಸದ್ಗುರುವಾಗಿ ಬೋಧಿಸಿ ।
ವಿನುತಶೈವಾಚಾರಮಾರ್ಗದೊಳಿರಿಸಿ ಸಲಹಿದನು ॥
ಸಾರಸಂಸಾರದ್ವಿಜತ್ವವ । ಪಾರಪತಿತವಲಾ ಸದಮಳಾ ।
ಚಾರಸದ್ಗುರುವಿನ ಕರಾಬ್ಜದಿ ಜನ್ಮವಾದಂಗೆ ॥
ಜಾತಿಗೋತ್ರಾತೀತಸದ್ಗುರು । ಜಾತನಂ ಬಹುಜಾತಿಗೋತ್ರಸ ।
ಮೇತದುಷ್ಕ್ರಿಯದಾಶ್ರಯನ ನೀನೆಂತು ಮಾಡಿದಪೆ ॥

ಎಂದು ಹೇಳಿ ಬ್ರಾಹ್ಮಣಕರ್ಮವನ್ನು ನಿರಾಕರಿಸಿದನು. ಬಳಿಕ ಕಲ್ಯಾಣಕ್ಕೆ ಹೋಗಿ ಬಲದೇವನ ಮಗಳಾದ ಗಂಗಾಂಬಿಕೆಯನ್ನು ಮದುವೆಯಾಗಿ ಬಲದೇವನ ಕಾಲಾನಂತರ ಬಿಜ್ಜಳನಿಗೆ ತಾನೇ ಮಂತ್ರಿಯಾದನು. ತರುವಾಯ ತನ್ನ ಅಧಿಕಾರದ ಬಲದಿಂದ ವೀರಶೈವಮತಕ್ಕೆ ಪ್ರಾಬಲ್ಯವನ್ನು ಉಂಟುಮಾಡಿ, ಆ ಮತಾವಲಂಬಿಗಳಿಗೆ ವಿಶೇಷವಾಗಿ ಸಹಾಯ ಮಾಡಿದನು. ಈ ಮತವು ಸ್ವಲ್ಪ ಕಾಲದಲ್ಲಿಯೇ ಕರ್ಣಾಟಕಾಂಧ್ರದೇಶಗಳಲ್ಲಿ ಹರಡಿ

1. ಭೈರವೇಶ್ವರ ಕಾವ್ಯದ ಕಥಾಸೂತ್ರರತ್ನಾಕರ

ಕೊಂಡಿತು. ಹೀಗೆ ವೀರಶೈವರ ಮತವೂ ಅಧಿಕಾರವೂ ತನ್ನ ರಾಜ್ಯದಲ್ಲಿ ಹೆಚ್ಚಿದುದನ್ನು ನೋಡಿ ಜೈನನಾದ ಬಿಜ್ಜಳನು ಅಸಮಾಧಾನಪಟ್ಟು ಬಸವನನ್ನು ಅಧಿಕಾರದಿಂದ ತೆಗೆವುದಕ್ಕೆ ಪ್ರಯತ್ನಪಟ್ಟನು. ಆದರೆ ಈ ಪ್ರಯತ್ನವು ಕೈಗೂಡಲಿಲ್ಲ. ಬಸವನ ಅಧಿಕಾರವು ಮತ್ತೂ ಹೆಚ್ಚಿ ಅವನ ಕಡೆಯವರು ಹಗೆ ತೀರಿಸಿಕೊಳ್ಳುವುದಕ್ಕಾಗಿ ಬಿಜ್ಜಳನನ್ನು 1167 ರಲ್ಲಿ ಕೊಂದುಬಿಟ್ಟರು. ಬಿಜ್ಜಳನ ಮಗನಾದ ರಾಯಮುರಾರಿಸೋಯಿದೇವನು ಬಸವನನ್ನು ದಂಡಿಸಬೇಕೆಂದು ಸೈನ್ಯವನ್ನು ಕೂಡಿಸಲು ಬಸವನು ಉಳಿವೆಗೆ ಓಡಿಹೋದಂತೆಯೂ, ರಾಜನು ಬೆನ್ನಟ್ಟಿಕೊಂಡು ಹೋಗಿ ಆ ಸ್ಥಳಕ್ಕೆ ಮುತ್ತಿಗೆಹಾಕಲು ಬಸವನು ನಿರಾಶೆಯಿಂದ ಬಾವಿಯಲ್ಲಿ ಬಿದ್ದು 1168 ರಲ್ಲಿ [1] ಮೃತನಾದಂತೆಯೂ ಕೆಲವರು ಹೇಳುತ್ತಾರೆ. [2] ಆದರೆ ವೀರಶೈವಗ್ರಂಥಗಳಲ್ಲಿ ಈತನು ಕೂಡಲ ಸಂಗಮೇಶ್ವರಲಿಂಗದಲ್ಲಿ ಐಕ್ಯವಾದಂತೆ ಹೇಳಿದೆ. ಈತನು 88 ಪವಾಡಗಳನ್ನು ಮಾಡಿದಂತೆ ಅನೇಕ ವೀರಶೈವ ಗ್ರಂಥಗಳಲ್ಲಿ ಹೇಳಿದೆ.[3]

ಇವನ ವಿಷಯವಾಗಿ **ಬಸವಪುರಾಣ, ಬಸವರಾಜವಿಜಯ, ಮಲಬಸವರಾಜಚಾರಿತ್ರ, ಬಸವಶತಕ, ಬಸವಸ್ತೋತ್ರದ ತ್ರಿವಿಧಿ, ಬಸವಸ್ತೋತ್ರದ ವಚನ** ಮೊದಲಾದ ಗ್ರಂಥಗಳು ಹುಟ್ಟಿವೆ.

ಈತನ ವಚನಗಳಲ್ಲಿ **ಕೂಡಲ ಸಂಗಮದೇವ** ಎಂಬ ಅಂಕಿತವು ಉಪಯೋಗಿಸಿದೆ.

ಇವನ ಗ್ರಂಥಗಳಲ್ಲಿ

## 1. ಷಟ್ಸ್ಥಲವಚನ.

ಇದು ವೀರಶೈವಸಿದ್ಧಾಂತಪ್ರತಿಪಾದಕವಾದ ಗ್ರಂಥ. ಇದರಲ್ಲಿ "ಭಕ್ತಸ್ಥಲವಚನ—527, ಮಾಹೇಶ್ವರಸ್ಥಲವಚನ-240, ಪ್ರಸಾದಿಸ್ಥಲವಚನ—30, ಪ್ರಾಣಲಿಂಗಿಸ್ಥಲವಚನ—58, ಶರಣಸ್ಥಲವಚನ—65, ಐಕ್ಯಸ್ಥಲವಚನ—40, ಅಂತೂ ಸ್ಥಲ 6 ಕ್ಕೆ ಸೇರಿದ ಮಿಶ್ರ 36 ಕ್ಕೆ ಸೇರಿದ ವಚನ 960" ಇವೆ.

ಇದರಿಂದ ಕೆಲವು ವಚನಗಳನ್ನು ಉದ್ಧರಿಸಿ ಬರೆಯುತ್ತೇವೆ:—

(1) ಉಳ್ಳವರು ಶಿವಾಲಯವ ಮಾಡಿಸೀಯರು. ನಾನೇ ಮಾಡುವೆ ಬಡವನಯ್ಯ ಎನ್ನ ಕಾಲೇ ಕಂಭ, ದೇಹವೇ ದೇಗುಲ, ಶಿರವೇ ಹೊನ್ನಕಳಸ ನೋಡಯ್ಯ. ಕೂಡಲ ಸಂಗಮದೇವಯ್ಯ ಕೇಳಯ್ಯ ಸ್ಥಾವರಕ್ಕಳಿವುಂಟು ಜಂಗಮಕ್ಕಳಿವುಂಟೆ? ॥ 373 ॥

1. ಚೆನ್ನಬಸವಪುರಾಣ 5 ನೆಯ ಕಾಂಡ 9 ನೆಯ ಸಂಧಿ 18 ನೆಯ ಪದ್ಯದಲ್ಲಿ—ಬಸವನು ಶಾಲಿವಾಹನ ಶಕ 707 ನೆಯ ರಕ್ತಾಕ್ಷಿಸಂವತ್ಸರದಲ್ಲಿ ಗತಿಸಿದಂತೆ ಹೇಳಿದೆ

2. *Journa lof the Bombay Br. R. A. S.* VIII, 97. Rice's *Mysore* I, 332.

3. ಚೆನ್ನಬಸವಪುರಾಣ 5 ನೆಯ ಕಾಂಡ 4 ನೆಯ ಸಂಧಿಯಲ್ಲಿ ಸಂಗ್ರಹವಾಗಿ ಹೇಳಿದೆ.

(2) ಹಾಲತೊಱೆಗೆ ಬೆಲ್ಲದಂತಹ ಕೆಸಱು, ಸಕ್ಕರೆಯಂತಹ ಮಱಲು, ತವರಾಜ ನಂತಹ ನೊರೆತೆರೆಗಳು. ಇಂತಪ್ಪ ಆದ್ಯರ ವಚನವಿರಲು ಬೇಱೆ ಬಾವಿಯ ತೋಡಿ ಉಪ್ಪು ನೀರ ಸವಿದಂತಾಯಿತ್ತಯ್ಯಾ ಎನ್ನ ಯುಕ್ತಿ. ನಿಮ್ಮ ವಚನಂಗಳ ಕೇಳದೆ ಅನ್ಯಪುರಾಣ ಗಳ ಕೇಳಿ ಕೆಟ್ಟೆನಯ್ಯಾ ಕೂಡಲಸಂಗಮದೇವ ‖ 374 ‖

(3) ಇನ್ನೇವೆನಿನ್ನೇವೆನಯ್ಯಾ ಎನ್ನ ಮನವೆಂಬ ಮರ್ಕಟನ ದಾಟಿ ಘನವಾ ಯಿತ್ತು ; ಎನ್ನ ನಿಂದಲ್ಲಿ ನಿಲ್ಲಲೀಯದು ; ಎನ್ನ ಕುಳಿತಲ್ಲಿ ಕುಳ್ಳಿರಲೀಯದು ; ಕ್ಷಣದಲ್ಲಿ ಪಾತಾಳಕ್ಕೈದುತ್ತಿದೆ ; ಕ್ಷಣದಲ್ಲಿ ಆಕಾಶಕ್ಕೈದುತ್ತಿದೆ ; ಕ್ಷಣದಲ್ಲಿ ದಿಗ್ದೆಸೆಗೈದುತ್ತಿದೆ ; ಕೂಡಲ ಸಂಗಮದೇವ ಈ ಮನವೆಂಬ ಮರ್ಕಟನ ದಾಟಿಯನೆಂದಿಗೆ ನೀಗಿ ಎಂದು ನಿಮ್ಮ ನೊಡಗೂಡುವೆನಯ್ಯಾ ‖ 375 ‖

(4) ಹೊನ್ನ ಹಾವುಗೆಯ ಮೆಟ್ಟಿದಾತನ, ಮಿಡಿಮುಟ್ಟಿದ ಕೆಂಜೆಡೆಯವನ, ಮೈ ಯಲ್ಲಿ ವಿಭೂತಿಯ ಪೂಸಿದವನ, ಕರದಲ್ಲಿ ಕಪಾಲವ ಹಿಡಿದವನ, ಶರೀರದಲರ್ಧವ ಸತಿಗೆ ಕೊಟ್ಟವನ, ಬಾಣನ ಬಾಗಿಲ ಕಾದವನ, ನಂಬಿಗೆ ಕುಂಟಣಿಯಾದವನ, ಚೋಳಂಗೆ ಹೊನ್ನ ಮಟಿಯ ಕಱೆದವನ, ಮಾಡಿದ ಪೂಜೆಯ ಕೊಂಬವನ, ಸದ್ಭಕ್ತರ ಹೃದಯದಲಿಪ್ಪವನ ಕೊಂಡುಬಾರೆಲವ್ವಾ ಕೂಡಲಸಂಗಯ್ಯನೆಂಬವನ ‖ 376 ‖

## 2. ಶಿಖಾರತ್ನವಚನ.

ಇದರಲ್ಲಿ 34 ವಚನಗಳಿವೆ. ಒಂದನ್ನು ಉದಾಹರಿಸುತ್ತೇವೆ :—

ಕಲ್ಲದೇವರು ದೇವರಲ್ಲ ; ಮಣ್ಣದೇವರು ದೇವರಲ್ಲ ; ಮರದದೇವರು ದೇವರಲ್ಲ ; ಪಂಚಲೋಹದಲ್ಲಿ ಮಾಡುವ ದೇವರು ದೇವರಲ್ಲ ; ಸೇತುರಾಮೇಶ್ವರ ಗೋಕರ್ಣ ಕಾಶಿ ಕೇದಾರ ಮೊದಲಾದ ಅಷ್ಟಾಷಷ್ಟಿಕೋಟಿಪುಣ್ಯತೀರ್ಥಂಗಳು ಪುಣ್ಯಕ್ಷೇತ್ರಂಗಳಲ್ಲಿ ಇಹ ದೇವರು ದೇವರಲ್ಲ ; ತನ್ನ ತಾನಱಿದು ತಾನಾರೆಂದು ತಿಳಿದಡೆ ತಾನೇ ದೇವ ನೋಡಾ ಅಪ್ರಮಾಣ ಕೂಡಲಸಂಗಮದೇವಾ ‖ 377 ‖

## 3. ಕಾಲಜ್ಞಾನವಚನ.

ಇದರಲ್ಲಿ 64 ಪದಗಳಿವೆ. ಗ್ರಂಥಾಂತ್ಯದಲ್ಲಿ—

ಕಾಲಕರ್ಮವ ದಹಿಪುದು ಬಸವಣ್ಣನು। ಪೇಳಿದ ಕಾಲಜ್ಞಾನವನು।
ಶೂಲಧರನ ಭಕ್ತರಾಲಿಸಿ ಕೇಳಲು। ಮೇಲೆ ಮುಕ್ತಿದೊರಕುವುದು ‖

ಎಂಬ ಪದ್ಯವಿದೆ.

ಈ ಗ್ರಂಥದಿಂದ ಎರಡು ಪದಗಳನ್ನು ಉದ್ಧರಿಸಿ ಬರೆಯುತ್ತೇವೆ:—

ಸೃಷ್ಟಿಯೊಳಿರುತಿಹ ಭ್ರಷ್ಟಮನುಜರಲ್ಲಿ ಕೆಟ್ಟಪಾಪವು ಹಱವುದಕೆ।
ಹೊಟ್ಟೆಹಾಱಿಸಿ ಘಟ್ಟಿಯು ಬಿಸುವುದಕೆ ಶಿವಬಿಟ್ಟ ಕಳುಹುವನು ಮಾರಿಯನು ‖ 378 ‖

ಮಳೆಯಿಲ್ಲ ಬೆಳೆಯಿಲ್ಲ ಹೊಟೆಯಿಲ್ಲ ಕೆಱೆಯಿಲ್ಲ ನೆಲಿಲಿಲ್ಲ ಉದಕ ಮುನ್ನಿಲ್ಲ ।
ಮೊಳೆಯಿಲ್ಲ ಸೂರ್ಯನ ಕಳೆಯಿಲ್ಲ ಗೆಲವಿಲ್ಲ ಉಟ್ಟಿವಿಲ್ಲ ಆ ಪಾಪಿಗಳಿಗೆ ॥ 379 ॥

## 4. ಮಂತ್ರಗೋಪ್ಯ.

ಇದು ಹಾಡಿನ ರೂಪವಾಗಿದೆ. ಇದರಲ್ಲಿ ವೀರಶೈವಸಿದ್ಧಾಂತವು ಸಂಗ್ರಹವಾಗಿ ಹೇಳಿದೆ.

---

## ಚೆನ್ನಬಸವ. ಸು. 1160.

ಈತನು ಷಟ್ಸ್ಥಲವಚನ, ಕರಣಹಸುಗೆ, ಮಿಶ್ರಾರ್ಪಣ, ಪದಮಂತ್ರಗೋಪ್ಯ, ಮಂತ್ರಗೋಪ್ಯ, ಕಾಲಜ್ಞಾನ—ಎಂಬ ಗ್ರಂಥಗಳನ್ನು ರಚಿಸಿದ್ದಾನೆ. ಘುಟಚಕ್ರದವಚನ, ರಾಜಯೋಗದವಚನ, ರುಪ್ರಭಾರತದಸೃಷ್ಟಿ ಎಂಬ ಗ್ರಂಥಗಳನ್ನೂ ಬರೆದಿರುವಂತೆ ತೋರುತ್ತದೆ.

ಇವನು ವೀರಶೈವಕವಿ: ಬಸವನ ಸಹೋದರಿಯಾದ ನಾಗಲಾಂಬಿಕೆಯ ಮಗನು. ಈತನು ಬಿಜ್ಜಳರಾಜನಿಂದ (1156—1167) ಮಾನಿತನಾಗಿದ್ದಂತೆಯೂ ಸೊನ್ನಲಿಗೆಯ ಸಿದ್ಧರಾಮನಿಗೆ ವೀರಶೈವಸಿದ್ಧಾಂತವನ್ನು ಉಪದೇಶ ಮಾಡಿದಂತೆಯೂ ತಿಳಿಯಬರುತ್ತದೆ. ಈತನ ವಿಷಯವಾಗಿ ಚೆನ್ನಬಸವಪುರಾಣ, ಚೆನ್ನಬಸವಸ್ತೋತ್ರದರಗಳೆ ಮುಂತಾದ ಗ್ರಂಥಗಳು ಹುಟ್ಟಿವೆ.

ಇವನ ಗ್ರಂಥಗಳು ಪ್ರಾಯಶಃ ವಚನರೂಪವಾಗಿವೆ; ಎಲ್ಲವೂ ವೀರಶೈವಮತವನ್ನು ಪ್ರತಿಪಾದಿಸುತ್ತವೆ. ವಚನಗಳಲ್ಲಿ **ಕೂಡಲಚೆನ್ನಸಂಗಮದೇವ** ಎಂಬ ಅಂಕಿತವಿದೆ.

ಈ ಗ್ರಂಥಗಳಲ್ಲಿ—

## 1. ಷಟ್ಸ್ಥಲವಚನ.

ಇದು **ಬಸವನ ಷಟ್ಸ್ಥಲವಚನದಂತೆಯೇ** ಇದೆ. ಇದರಿಂದ ಒಂದೆರಡು ವಚನಗಳನ್ನು ತೆಗೆದು ಬರೆಯುತ್ತೇವೆ :—

(1) ಪರರಾಶಿಯೆಂಬ ಜ್ವರಹತ್ತಿ ನಾನು ಕಳವಳಿಸಿ ನುಡಿವೆನಯ್ಯಾ; ಹೊನ್ನು ಹೆಣ್ಣು ಮಣ್ಣು ಬಯಸಿ ವಿಕಳತೆಗೊಂಡಂತೆ ಪ್ರಲಾಪಿಸುತ್ತ ನುಡಿವೆನಯ್ಯಾ. ಈ ಕಳವಳವ ನಿಲಿಸಿ ನಿಮ್ಮ ಕರುಣಾಮೃತವೆಂಬ ಕಷಾಯವನೆಱೆದು ಪರರಾಶಿಯೆಂಬ ಜ್ವರವ ಮಾಣಿಸು ಬಸವಪ್ರಿಯ ಕೂಡಲಚೆನ್ನಸಂಗಮದೇವ ॥ 380 ॥

(2) ಆನೆಯನೇಱಿದ ಮಾವತಿಗ ಚಕ್ರೇಶ್ವರನಾಗಬಲ್ಲನೆ ? ಅಯ್ಯಾ. ವೇದಶಾಸ್ತ್ರಾಗಮಪುರಾಣಂಗಳನೋದಿ ಕೇಳಿ ಹೇೞುವರೆಲ್ಲರೂ ನಡೆನುಡಿಪೂರಾಯವಾದ ಪುರಾತನರಾಗಬಲ್ಲರೆ ? ಅಯ್ಯಾ. ತೊತ್ತುಲಕ್ಷಣವಿರಲು ಸಾಣ್ಯವ ನುಡಿಸಿ ನವರತ್ನದಾಭರಣಂಗಳಂ ತೊಡಿಸಿ ದಂಡಿಗೆಯನೇಱಿಸಲು 'ಶಂಕರಸ್ಯ ಯಥಾ ಗೌರೀ' ಎನಿಸಿಕೊಳಬಲ್ಲಳೆ ? ಅಯ್ಯಾ. ಖ್ಯಾತಿಯಾಗಿ ನಿಜತತ್ವಂಗಳನೋದಿ ಕೇಳಿ ಹೇೞಿದಡೇನು ? ಅದಕ್ಕೆ ತಕ್ಕ ಅಱಿವು ಆಚಾರವು ನಡೆನುಡಿಯಲ್ಲಿ ನಿರ್ಣಯವಿಲ್ಲದಿದ್ದಡೆ ಕುಂಭೀಪಾಕ ನಾಯಕನರಕ ತಪ್ಪದು ಕೂಡಲಚೆನ್ನಸಂಗಮದೇವ ॥ 381 ॥

## 2. ಕರಣಹಸುಗೆ.

ಇದು ಗದ್ಯಗ್ರಂಥ; ವೇದಾಂತಕ್ಕೆ ಸಂಬಂಧಿಸಿದ ಸಾಂಕೇತಿಕ ಶಬ್ದಗಳನ್ನು ವಿವರಿಸುತ್ತದೆ. ಇದರೊಳಗೆ ಅಲ್ಲಲ್ಲಿ ಸಂಸ್ಕೃತ ಶ್ಲೋಕಗಳು ಅನುವಾದವಾಡಲ್ಪಟ್ಟಿವೆ. ಈ ಗ್ರಂಥದಿಂದ ಸ್ವಲ್ಪ ಭಾಗವನ್ನು ಉದ್ಧರಿಸಿ ಬರೆಯುತ್ತೇವೆ :—

ಇನ್ನು ಪೃಥ್ವಿ ಸಲಿಲ ಪಾವಕ ಪವನ ಅಂಬರ ರವಿ ಶಶಿ ಆತ್ಮ ಎಂಬುವು ಅಷ್ಟಮೂರ್ತಿಯ ಮದಂಗಳು. ಇವಕ್ಕೆ ವಿವರ—ಪೃಥ್ವೀಮದವೆತ್ತಿದಲ್ಲಿ ತನುಗುಣಭರಿತನಾಗಿ ವಸ್ತ್ರಾಭರಣಾನುಲೇಪನತಾಂಬೂಲವುಂ ಬಯಸುತ್ತಿಹನು. ಸಲಿಲಮದವೆತ್ತಿದಲ್ಲಿ ಸಂಸಾರಭರಿತನಾಗಿ ಎನಗೆ ಬೇಕು, ಮನೆಗೆ ಬೇಕು, ಮಕ್ಕಳಿಗೆ ಬೇಕೆನುತ್ತಿಹನು. ಪಾವಕಮದವೆತ್ತಿದಲ್ಲಿ ಕಾಮರಸಭರಿತನಾಗಿ ಕರಸಬೇಕು, ನೋಡಬೇಕು, ನುಡಿಸಬೇಕು, ಆಲಿಂಗಿಸಬೇಕು ಎನುತ್ತಿಹನು. ಪವನಮದವೆತ್ತಿದಲ್ಲಿ ಪಯಣಭರಿತನಾಗಿ ಹೋದಹೆ, ಬಂದಹೆ, ಕೊಂಡಹೆ, ಕೊಟ್ಟಹ ಎನುತ್ತಿಹನು. ಅಂಬರಮದವೆತ್ತಿದಲ್ಲಿ ವಾಹನಭರಿತನಾಗಿ ಆನೆ ಬೇಕು, ಕುದುರೆ ಬೇಕು, ಅಂದಳ ಬೇಕು; ಸೇನೆ ತಳತಂತ್ರ ಛತ್ರಚಾಮರಂಗಳಂ ಬಯಸುತ್ತಿಹನು. ರವಿಮದವೆತ್ತಿದಲ್ಲಿ ಕೋಪಾಗ್ನಿಭರಿತನಾಗಿ ಸಾಧಿಸಿ ಭೇದಿಸಿ ಕೊಂದಹ ತಿಂದಹನೆನುತ್ತಿಹನು. ಶಶಿಮದವೆತ್ತಿದಲ್ಲಿ ಚಿಂತಾಭರಿತನಾಗಿ ಆದೀತೋ ಆಗದೋ, ಇದ್ದೀತೋ ಇಲ್ಲವೋ, ಏನೋ ಎಂತೋ ಎಂದು ಚಿಂತಿಸುತ್ತಿಹನು. ಆತ್ಮಮದವೆತ್ತಿದಲ್ಲಿ ಅಹಂಕಾರಭರಿತನಾಗಿ ಎನ್ನಿಂದ ಬಲ್ಲಿದರಿಲ್ಲ, ಎನಗೆ ಇನ್ನಾರು ಇದಿರಿಲ್ಲವೆಂದು ಅಹಂಭಾವದಿಂದ ಅಹಂಕರಿಸುತ್ತಿಹನು. ಇಂತಿವು ಅಷ್ಟಮೂರ್ತಿಯ ಮದಂಗಳು ॥ 382 ॥

## 3. ಮಿಶ್ರಾರ್ಪಣ.

ಇದೂ ಗದ್ಯಗ್ರಂಥ. ಇದರಿಂದ ಒಂದು ವಾಕ್ಯವನ್ನು ಉದ್ಧರಿಸಿ ಬರೆಯುತ್ತೇವೆ:—

ಇನ್ನು ಆಚಾರಲಿಂಗ ಮಿಶ್ರಷಡ್ವಿಧಲಿಂಗಾರ್ಪಣದ ವಿವರವೆಂತೆಂದೊಡೆ—ಆವುದಾನೊಂದು ಅರ್ಪಣಕ್ಕೆ ಬೇಕಾದುದು ಬೇರು ಗೆಣಸು ಮೊದಲಾದ ಗಂಧವನಱಿವುದು ಆಚಾರಲಿಂಗದಲ್ಲಿ. ಮರದ ತಿಗುಡು ಹಗಿನ ಮೊದಲಾದ ಗಂಧವನಱಿವುದು ಗುರುಲಿಂಗ

ದಲ್ಲಿ. ಚಿಗುರು ಮೊದಲಾದ ಪತ್ರೆಯು ಗಂಧವನರ್ಪಿಸುವುದು ಶಿವಲಿಂಗದಲ್ಲಿ. ಮೊಗ್ಗೆ ಮೊದಲಾದ ಪುಷ್ಪದ ಗಂಧವನರ್ಪಿಸುವುದು ಜಂಗಮಲಿಂಗದಲ್ಲಿ. ಕಾಯಿ ಕಣ್ಣು ಮೊದಲಾದ ಫಲಗಳ ಗಂಧವನರ್ಪಿಸುವುದು ಪ್ರಸಾದಲಿಂಗದಲ್ಲಿ. ಇವೆಲ್ಲವಱಲ್ಲಿಯೂ ಗಂಧವನರ್ಪಿಸುವುದು ಮಹಾಲಿಂಗದಲ್ಲಿ. ಇಂತೀ ಆಚಾರಲಿಂಗದ ಮಿಶ್ರಾರ್ಪಣ ॥ 383 ॥

## 4. ಪದಮಂತ್ರಗೋಪ್ಯ.

ಇದು ಪದಗಳ ರೂಪದಲ್ಲಿದೆ. ಇದರಲ್ಲಿ ಚೆನ್ನಬಸವನು ಸಿದ್ಧರಾಮನಿಗೆ "ಶಿವಯೋಗಸುಮಾರ್ಗಲಕ್ಷಣ" ವನ್ನು ಬೋಧಿಸುತ್ತಾನೆ. ಇದರಿಂದ ಒಂದೆರಡು ಪದಗಳನ್ನು ಉದ್ಧರಿಸಿ ಬರೆಯುತ್ತೇವೆ :—

ನೋಡನೋಡಲು ಲಿಂಗದಾಕಾರ ತಾನಾಗಿ । ನಾದಬಿಂದುವಿನ ಕಳೆ ಶಿವಕಳೆಯೊಳು ।
ಕೂಡಬಲಿದಾಲಿಂಗ ತಾನು ತಾನಾದಲ್ಲಿ । ನಾದಬಿಂದುಕಳಾತೀತನಾದ ॥ 384 ॥
ಪಂಚದೇವರಿಯೊಳಗೆ ಪಂಚಸೂತ್ರವು ಮಿಂಚಿ । ಕಂಚುಮಿಂಚಿನ ಸಂಚಲವ ನುಂಗಿ ।
ಪಂಚಸೂತ್ರವು ಮಿಂಚಿ ಸಂಚದೇವರಿಗೊಂಡು । ಪಂಚಮುಖಪರಮಗುರುವಾದ ಶರಣ ॥ 385 ॥

## 5. ಮಂತ್ರಗೋಪ್ಯ.[1]

ಈ ಗ್ರಂಥದಲ್ಲಿ 27 ಹಾಡುಗಳಿವೆ; ಒಂದೆರಡನ್ನು ಉದ್ಧರಿಸಿ ಬರೆಯುತ್ತೇವೆ :—

ಮುಟ್ಟಿದಲ್ಲಿ ಮುಟ್ಟದಲ್ಲಿ ತೂಟ್ಟುಬಿಟ್ಟ ಹಣ್ಣಿನಂತೆ ।
ಬಟ್ಟಬಯಲ ತುಟ್ಟತುದಿಯ ಮುಟ್ಟಿನಿಂದನು ॥
ಸೃಷ್ಟಿಯಂತೆ ತನುಗುಣದಂಗಲಿಂಗವಾದಿಯುಳಿದು ।
ಪುಟ್ಟುಗೆಟ್ಟ ಬಟ್ಟಬಯಲ ಮುಟ್ಟಿ ನಿಂದನು ॥ 386 ॥
ತನುಮನಧನವೆಂಬ ತ್ರಿವಿಧವನು ಮೂಱು ಲಿಂಗ ।
ದನುವನನುಕರಿಸಿ ಅವಱೊಳರ್ಪಿಸುವನು ॥
ತನುಮುಟ್ಟಿ ಮನಮುಟ್ಟಿ ಧನಮುಟ್ಟಿಯರ್ಪಿಸುವ ।
ಅನುವನಱಿದಾತನೆ ತುರೀಯಕೊಪ್ಪುವನು ॥ 387 ॥

## 6. ಕಾಲಜ್ಞಾನ.

ಇದು ಬಸವನ ಕಾಲಜ್ಞಾನದಂತೆಯೇ ಇದೆ.

## 7. ರುದ್ರಭಾರತದ ಸೃಷ್ಟಿ.

ಇದು ಗದ್ಯಗ್ರಂಥ; ಅಲ್ಲಲ್ಲಿ ಸಂಸ್ಕೃತ ಶ್ಲೋಕಗಳು ಉದಾಹೃತವಾಗಿವೆ. ಇದರಲ್ಲಿ ಸೃಷ್ಟಿಕ್ರಮ, ಯುಗ ಮೊದಲಾದ ವಿಷಯಗಳು ಹೇಳಿವೆ.

---

1 2–5 ಗ್ರಂಥಗಳಿಗೆ ಕನ್ನಡ ವ್ಯಾಖ್ಯಾನಗಳಿವೆ.

## ಪ್ರಭುದೇವ. ಸು. 1160.

ಈತನು ಷಟ್ಸ್ಥಲಜ್ಞಾನಚಾರಿತ್ರ, ಶೂನ್ಯಸಂಪಾದನೆ, ಮಂತ್ರಗೋಪ್ಯ, ಸೃಷ್ಟಿಯವಚನ, ಬೆಡಗಿನವಚನ, ಮಂತ್ರಮಾಹಾತ್ಮ್ಯ, ಕಾಲಜ್ಞಾನವಚನ ಎಂಬ ಗ್ರಂಥಗಳನ್ನು ಬರೆದಿದ್ದಾನೆ. ಇವನಿಗೆ ಅಲ್ಲಮ ಎಂಬ ಹೆಸರೂ ಉಂಟು; ಮಾಯಾಕೋಳಾಹಳ ಎಂಬ ಬಿರುದೂ ಇದ್ದಂತೆ ತಿಳಿಯುತ್ತದೆ. ಈತನ ವಿಷಯ ವಾಗಿ ಚೆನ್ನಬಸವಪುರಾಣ, ಪ್ರಭುಲಿಂಗಲೀಲೆ ಮೊದಲಾದ ಗ್ರಂಥಗಳಿಂದ ಈ ಯಂಶಗಳು ತಿಳಿಯಬರುತ್ತವೆ :—

ಇವನು ವೀರಶೈವಕವಿ; ಈತನ ತಂದೆ ನಿರಹಂಕಾರ; ತಾಯಿ ಸುಜ್ಞಾನಿ. ಇವನ ಚಿತ್ತಸ್ಥೈರ್ಯವನ್ನು ಪರೀಕ್ಷಿಸುವುದಕ್ಕಾಗಿ ಪಾರ್ವತೀದೇವಿ ತನ್ನ ತಾಮಸಗುಣವನ್ನು ಸ್ತ್ರೀರೂಪವಾಗಿ ಹುಟ್ಟುವಂತೆ ಅಟ್ಟಿದಳು. ಅದು ಬೆಳವೊಲನಾಡಿನ ಬನವಸೆಯ ರಾಜನಾದ ಮಮಕಾರನೃಪನ ಪತ್ನಿ ಮೋಹಿನೀದೇವಿಯ ಗರ್ಭದಲ್ಲಿ ಮಾಯೆ ಎಂಬ ಹೆಣ್ಣುಮಗಳಾಗಿ ಹುಟ್ಟಿತು. ಆ ಹೆಣ್ಣುಮಗಳು ಈತನನ್ನು ಮೋಹಗೊಳಿಸಲು ಯತ್ನಿಸಿದಾಗ ಈತನು ಅವಳನ್ನು ತಿರಸ್ಕರಿಸಿದನು. ಇವನು ಅನಿಮಿಷನ ಕೈಯ ಲಿಂಗವನ್ನು ಸ್ವೀಕರಿಸಿದನು: ಗೊಗ್ಗಯ್ಯ ಮುಕ್ತಾಯಿಗಳಿಗೆ ಬೋಧಿಸಿ ಮುಕ್ತಿಯನ್ನು ಕೊಟ್ಟನು: ಸೊನ್ನಲಿಗೆಗೆ ಹೋಗಿ ಸಿದ್ಧರಾಮನಿಗೆ ಶಿವತತ್ತ್ವವನ್ನು ತಿಳಿಸಿ ಅವನೊಡನೆ ಕಲ್ಯಾಣಕ್ಕೆ ಹೋಗಿ ಬಸವನಿಂದ ಸತ್ಕೃತನಾಗಿ ಶೂನ್ಯಪೀಠವನ್ನು ಹತ್ತಿದನು. ಬಳಿಕ ಶ್ರೀಶೈಲಕ್ಕೆ ಹೋಗಿ ಅಲ್ಲಿ ಮಹಾದೇವಿಗೆ ನಿರ್ವಾಣಪದವಿಯನ್ನು ಉಪದೇಶಿಸಿ ಬಸವನಿಗಿಂತ ಸ್ವಲ್ಪ ಕಾಲ ಮುಂಚೆ ಕದಳಿಯಲ್ಲಿ ಬಯಲಾದನು.

ಇವನು ವೀರಶೈವಗುರುಗಳಲ್ಲಿ ಬಹಳ ಪ್ರಖ್ಯಾತನು; "ಶ್ರೀಮದ್ದೇಶಿಕ ಷಟ್ಸ್ಥಲಚಕ್ರವರ್ತಿ ಬ್ರಹ್ಮಾನಂದ ಪರಶಿವಮೂರ್ತಿ ವಿರಕ್ತಶಿಖಾಮಣಿ ಮಾಯಾ ಕೋಳಾಹಳ ಪ್ರಭುದೇವರು" ಎಂದು ಕೆಲವರು ವೀರಶೈವಗ್ರಂಥಕರ್ತರು ಈತ ನನ್ನು ವಿಶೇಷಿಸಿ ಬರೆದಿದ್ದಾರೆ. ಇವನ ವಿಷಯವಾಗಿ ಪ್ರಭುಲಿಂಗಲೀಲೆ, ಪ್ರಭು ದೇವರ ಪುರಾಣ, ಪ್ರಭುನಟನತಾರಾವಳಿ, ಪ್ರಭುಚರಿತ್ರೆ, ಪ್ರಭುಗೀತೆ ಮೊದಲಾದ ಗ್ರಂಥಗಳು ಹುಟ್ಟಿವೆ.

ಈತನ ವಚನಗಳಲ್ಲಿ ಗುಹೇಶ್ವರ ಎಂಬ ಅಂಕಿತವು ದೊರೆಯುತ್ತದೆ.

ಇವನ ಗ್ರಂಥಗಳಲ್ಲಿ—

### 1. ಷಟ್ಸ್ಥಲಜ್ಞಾನಚಾರಿತ್ರ.

ಇದು ಬಸವ, ಚೆನ್ನಬಸವ, ಇವರುಗಳ ಷಟ್ಸ್ಥಲವಚನದಂತೆಯೇ ಇದೆ. ಇದರಲ್ಲಿ 694 ವಚನಗಳಿವೆ. ಇದಕ್ಕೆ ಒಂದು ಕನ್ನಡ ವ್ಯಾಖ್ಯಾನವೂ ಇದೆ.

**ಈ ಗ್ರಂಥವನ್ನು ಗುಹೇಶ್ವರವಚನ ಎಂದೂ ಕರೆವಂತೆ ತೋರುತ್ತದೆ. ಇದರಿಂದ ಕೆಲವು ವಚನಗಳನ್ನು ಉದ್ಧರಿಸಿ ಬರೆಯುತ್ತೇವೆ:—**

(1) ಕೌಸಮುತ್ತಿನ ಸುಪ್ಪಾಣಿಯಂತೆ ಆಲಿಂಗ್ಯೈಕ್ಯವು ; ಸ್ಫಟಿಕದ ಘಟದೊಳಗಣ ಪ್ರಭೆಯಂತೆ ವಾಯುವಿನ ಸಂಚದ ಪರಿಮಳದ ನಿಲವಿನಂತೆ ಲಿಂಗೈಕ್ಯನ ಸಂಬಂಧವದು ಗುಹೇಶ್ವರ ॥ 388 ॥

(2) ಪಾತಾಳದಿಂದತ್ತ ಮಾತ ಬಲ್ಲವರಿಲ್ಲ. ಗಗನದಿಂದಾಮೇಲೆ ಅನುಭಾವಿ ತಾನಿಲ್ಲ. ಒಳಗಣ ಜ್ಯೋತಿಯ ಬೆಳಗಬಲ್ಲವರಿಲ್ಲ. ಹೊಱಗಣ ಹೊಱಗನು ಅಱಯಬಲ್ಲವರಿಲ್ಲ. ಹಿಂದಣ ಹಿಂದನು ಮುಂದಣ ಮುಂದನು ತಂದೆ ತೋಱದನು ನಮ್ಮ ಗುಹೇಶ್ವರ ॥389॥

(3) ಸುತ್ತಿ ಸುತ್ತಿ ಬಂದಡಿಲ್ಲ ; ಲಕ್ಷಗಂಗೆಯ ಮಿಂದಡಿಲ್ಲ ; ತುಟ್ಟತುದಿಯ ಮೇರುಗಿರಿಯ ಮೆಟ್ಟಿ ಕೂಗಿದಡಿಲ್ಲ ; ನಿತ್ಯನೇಮದಿಂದ ತನುಮುಟ್ಟಿಕೊಂಡಡಿಲ್ಲ ; ನಿಚ್ಚಕ್ಕೆ ಮನವನಂದಂದಿಂಗೆ ಅತ್ತಿತ್ತ ಹರಿಯಲೀಯದೆ ಚಿತ್ತದಲ್ಲಿ ಧರಿಸಬಲ್ಲಡೆ ಬಚ್ಚಬಱಯ ಬೆಳಗು ಗುಹೇಶ್ವರಲಿಂಗವು ॥ 390 ॥

(4) ಕರಿ ಸ್ಪರ್ಶನೇಂದ್ರಿಯದಿಂದ ಬಂಧನವಡೆದೞಯಿತ್ತು ; ಪತಂಗನು ರೂಪೇಂದ್ರಿಯದಿಂದ ಬಂಧನವಡೆದೞಯಿತ್ತು ; ಕುರಂಗನು ಶ್ರೋತ್ರೇಂದ್ರಿಯದಿಂದ ಬಂಧನವಡೆದೞಯಿತ್ತು ; ಮತ್ಸ್ಯವು ಜಿಹ್ವೇಂದ್ರಿಯದಿಂದ ಬಂಧನವಡೆದೞಯಿತ್ತು ; ಇಂತೀಯೊಂದೊಂದು ಇಂದ್ರಿಯೋದ್ರೇಕದಿಂದ ಒಂದೊಂದು ಪ್ರಾಣಿ ಪ್ರಳಯವಾಯಿತ್ತು ; ಪಂಚೇಂದ್ರಿಯಂಗಳ ಒಂದು ಘಟದಲ್ಲಿ ತಾಳಿಹ ಮನುಷ್ಯಪ್ರಾಣಿಗಳಿಗೆ ಮಱವೆಯೆಡೆಗೊಂಡು ದೇಹಮೋಹಭ್ರಾಂತು ಮುಸುಕಿ ಮಾಯೆಯ ಬಾಯ ತುತ್ತಹುದು ಚೋದ್ಯವೇನು ಹೇೞಾ ಗುಹೇಶ್ವರ ॥ 391 ॥

## 2. ಶೂನ್ಯಸಂಪಾದನೆ.

ಇದರಿಂದ ಒಂದು ವಚನವನ್ನು ಉದ್ಧರಿಸಿ ಬರೆಯುತ್ತೇವೆ:—

ಕನಕಾಚಲದಲ್ಲಿ ದಿನನಾಯಕನೆಂಬ ರತ್ನ ಹುಟ್ಟಿ ಅಹುದಲ್ಲ ಎಂಬ ಕೊಳಗದ ಕೊರಳಲ್ಲಿ ಅಳೆಯುತ್ತೈದಾರೆ. ಕೊಳಗದ ಕೊರಳು ತುಂಬಿ ಅಳೆವಾತನ ಹೃದಯ ತುಂಬಿ ಗುಹೇಶ್ವರಲಿಂಗದ ಕಂಗಳು ತುಂಬಿ ಮಂಗಳಮಯವಾಯ್ತು. ಭಕ್ತಿಯೇ ಓಗರವಾಗಿ ಸತ್ಯವೇ ಮೇಲೋಗರವಾಗಿ ನಿಜತತ್ತ್ವವೇ ಸವಿಯಾಗಿ ಗುಹೇಶ್ವರಲಿಂಗಕ್ಕಿಕ್ಕಬಲ್ಲವ ಸಂಗನ ಬಸವಣ್ಣನಲ್ಲದಿಲ್ಲ ॥ 392 ॥

## 3. ಮಂತ್ರಗೋಪ್ಯ.

ಇದರಲ್ಲಿ 27 ಪದಗಳಿವೆ; ಒಂದೆರಡನ್ನು ತೆಗೆದು ಬರೆಯುತ್ತೇವೆ:—

ಹಜ್ಜೆಯಿಲ್ಲದ ಮೃಗವು ಹಲವು ದ್ವೀಪಕೆಹೋಗಿ। ವಜ್ಜವಿಲ್ಲದ ಮಣಿಯ ನೋಡಿ ಕಂಡು।
ಪ್ರಜ್ವಲಿಸಿ ಬೆಳಗುವಾರಚನೆಯಲಿ ಹೊಸೆದು। ವೆಜ್ಜವಿಲ್ಲದ ಮಣಿಯ ಪವಣಿಸಿದನು ॥393॥

ಹೃತ್ಕಮಲಕರ್ಣಿಕಾವಾಸದೊಳಗಿರುತಿರ್ಪ। ಇಕ್ಕೆಹಿಕ್ಕೆಗಳ ತಾನೊಂದುಮಾಡಿ।
ಸಿಕ್ಕಿಲ್ಲ ತೊಡಕಿಲ್ಲ ದರ್ಕಜಲಪಂಜರವ। ಮಿಕ್ಕು ಮಿಾಱೆಯೆನಿಂದ ಪರಮಯೋಗಿ ॥394॥

ಎಂಟೆಸಳ ಕಮಲದಾ ನವಬ್ರಹ್ಮಪುರದೊಳಗೆ। ಎಂಟು ಬೀದಿಯೊಳೆಂಟು ಕರಿಗಳುಂಟು।
ಎಂಟುಕರಿಗಳ ಸುಟ್ಟು ಕಂಟಕಂಗಳ ಗೆಲಿದು। ದಾಂಟಿದೆನು ಸಂಸಾರಸಾಗರವನು ॥395॥

## 4. ಸೃಷ್ಟಿಯ ವಚನ.[1]

ಇದು ಗದ್ಯಗ್ರಂಥ. ಇದರಿಂದ ಒಂದು ವಾಕ್ಯವನ್ನು ಉದಾಹರಿಸುತ್ತೇವೆ:—

ತತ್ಪದವೇ ಲಿಂಗ ತ್ವಂಪದವೇ ಅಂಗ ಈ ಎರಡಱ ಐಕ್ಯವೇ ಅಸಿ ॥ 396 ॥

## 5. ಬೆಡಗಿನ ವಚನ.

ಜ್ಯೋತಿರ್ಮಯಶಾಂಭವೀಜ್ಞಾನದೀಕ್ಷಾಬೋಧೆಯೆಂಬ ಗ್ರಂಥದಲ್ಲಿ "ವೀರಶೈವವು ಈಶ್ವರಪ್ರೋಕ್ತವು. ಅದನ್ನು ಅಲ್ಲಮಪ್ರಭು ಕಲ್ಯಾಣಪಟ್ಟಣದಲ್ಲಿ ಬಸವಾದಿ ಪ್ರಮಥಗಣಂಗಳಿಗೆ ಎರಡೆಂಬತ್ತುಕೋಟಿ ಬೆಡಗಿನ ವಚನಗಳಿಂದ ಉಪದೇಶ ಮಾಡಿದರು" ಎಂದಿದೆ.

---

## ಮಡಿವಳ ಮಾಚಯ್ಯ. ಸು. 1160.

ಈತನು ವಚನಗಳನ್ನು ಬರೆದಿದ್ದಾನೆ. ಒಂದು ಕಾಲಜ್ಞಾನವನ್ನೂ ಬರೆದಿರುವಂತೆ ತೋರುತ್ತದೆ.

ಇವನು ವೀರಶೈವಕವಿ; ಇವನಿಗೆ ಮಡಿವಾಳಯ್ಯ ಎಂಬ ಹೆಸರೂ ಉಂಟು. ಈತನ ವಿಷಯವಾಗಿ ಬಸವಪುರಾಣದಿಂದ ಈಯಂಶಗಳು ತಿಳಿಯುತ್ತವೆ:—

ಇವನು ಹಿಪ್ಪಲಿಗೆಯಲ್ಲಿ ಪುಟ್ಟಿದವನು; ಕಲ್ಯಾಣದಲ್ಲಿ ಜಂಗಮರ ಬಟ್ಟೆಯನ್ನು ಒಗೆಯುತ್ತ ಮಡಿವಳಕಾಯಕವನ್ನು ಮಾಡುತ್ತಿದ್ದನು. ಒಂದು ದಿವಸ ಇವನು ಮಡಿಗಳನ್ನು ತೆಗೆದುಕೊಂಡು ಹೋಗುತ್ತಿರುವಾಗ ಇದಿರಲ್ಲಿ ಬರುತ್ತಿದ್ದ ಒಬ್ಬ ಭವಿ ಅವುಗಳನ್ನು ಸೋಕಲು ಅವನನ್ನು ಕೊಂದುಹಾಕಿದನು. ಪಟ್ಟಣದ ಜನರು ಬಿಜ್ಜಳರಾಯನಲ್ಲಿ ದೂರನ್ನು ಹೇಳಿಕೊಳ್ಳಲು ದೊರೆ ಮಾಚಯ್ಯನನ್ನು ಕೊಲ್ಲುವಂತೆ ಭಟರಿಗೆ ಆಜ್ಞಾಪಿಸಿದನು. ಆಗ ಸಭೆಯಲ್ಲಿದ್ದ ಬಸವನು—ಶಿವಶರಣರ ಮಹಿಮೆ ತಿಳಿಯದೆ? ಏತಕ್ಕೆ ದುಡಿಯುತ್ತೀಯೆ—ಎನಲು, ರಾಜನು ಸಿಟ್ಟುಗೊಂಡು ಮಾವಂತರನ್ನು ಕರೆಯಿಸಿ ಮಾಚಯ್ಯನನ್ನು ಆನೆಯಿಂದ ಮೆಟ್ಟಿಸಿ ಕೊಲ್ಲುವಂತೆ ಆಜ್ಞಾಪಿಸಿದನು. ಮಾಚಯ್ಯನು ಆ ಆನೆಯೊಡನೆ ಕಾದಿ ಅದನ್ನು ಸಂಹರಿಸಿದನು.

---

1. 2-4 ಗ್ರಂಥಗಳಿಗೂ ಕನ್ನಡ ವ್ಯಾಖ್ಯಾನಗಳಿವೆ.

ಇವನ ವಿಷಯವಾಗಿ **ಮಡಿವಾಳಯ್ಯನ ಚರಿತೆ, ಮಡಿವಾಳಯ್ಯನ ತಾರಾವಳಿ** ಮೊದಲಾದ ಗ್ರಂಥಗಳು ಹುಟ್ಟಿವೆ.

## ವಚನಗಳು.

ಇವನ ವಚನಗಳ ಸಂಖ್ಯೆ 100. ಇವುಗಳಲ್ಲಿ **ಅರ್ಕೇಶ್ವರಲಿಂಗ** ಎಂಬ ಅಂಕಿತವಿದೆ. ಒಂದೆರಡು ವಚನಗಳನ್ನು ತೆಗೆದು ಬರೆಯುತ್ತೇವೆ:—

(1) ತನು ನಿರ್ವಾಣ, ಮನ ಸಂಸಾರ; ಮಾತು ಬ್ರಹ್ಮ, ನೀತಿ ಅಧಮ; ಅದೇತಕ್ಕೆ ಅಜಾವು ಘಾತುಕನ ಕೈಯ ಕತ್ತಿಯಂತೆ. ಅದು ನಿಹಿತವಲ್ಲ ಅರ್ಕೇಶ್ವರಲಿಂಗವ ಅಜಾವುದಕ್ಕೆ ॥ 397 ॥

(2) ನೆನಹು ನಿಜದಲ್ಲಿ ನಿಂದಲ್ಲಿ ಸುರುಳಿನ ತೊಡಕುಗಟ್ಟುಂಟೆ? ಅಂಬರವ ನಡರಿದವಂಗೆ ಚೀಱಿಕೊಂದು ಇಂಬುಮಾಡಲುಂಟೆ? ವಸ್ತುವಿನ ಅಂಗದಲ್ಲಿ ಸರ್ವವು ಹಿಂಗಿದಲ್ಲಿ ಅರ್ಕೇಶ್ವರಲಿಂಗವ ಕಟ್ಟುವುದಕ್ಕೆ ಠಾವುಂಟೆ? ॥ 398 ॥

---

## ಸಿದ್ಧರಾಮ. ಸು. 1160.

ಈತನು **ವಚನಗಳು, ಮಿಶ್ರಸ್ತೋತ್ರದ ತ್ರಿವಿಧಿ, ಬಸವಸ್ತೋತ್ರದ ತ್ರಿವಿಧಿ, ಅಷ್ಟಾವರಣಸ್ತೋತ್ರದ ತ್ರಿವಿಧಿ, ಕಾಲಜ್ಞಾನ, ಮಂತ್ರಗೋಪ್ಯ** ಎಂಬ ಗ್ರಂಥಗಳನ್ನು ಬರೆದಿದ್ದಾನೆ.

ಇವನು ವೀರಶೈವಕವಿ; ಈತನ ವಿಷಯವಾಗಿ **ರಾಘವಾಂಕನು** (ಸು. 1165) ಬರೆದಿರುವ ಸಿದ್ಧರಾಮಪುರಾಣದಿಂದ ಈಯಂಶಗಳು ತಿಳಿಯಬರುತ್ತವೆ:—

ಈತನು ಸೊನ್ನಲಿಗೆಯಲ್ಲಿ 60 ವರ್ಷ ವಯಸ್ಸಾಗಿದ್ದ ಸುಗ್ಗವ್ವೆಗೂ ಮುದ್ದಗೌಡನಿಗೂ ಮಗನಾಗಿ ಜನಿಸಿದನು. ಆ ಕಾಲದಲ್ಲಿ ಸೊನ್ನಲಿಗೆಯಲ್ಲಿ ನನ್ನಪ್ಪನೆಂಬವನು ದೊರೆಯಾಗಿಯೂ, ಚಾಮಲದೇವಿ ಎಂಬವಳು ರಾಣಿಯಾಗಿಯೂ ಇದ್ದರು. ಸಿದ್ಧರಾಮನು ಜ್ಞಾನಭಕ್ತಿವೈರಾಗ್ಯವುಳ್ಳವನಾಗಿ ಸೊನ್ನಲಿಗೆಯಲ್ಲಿ ಒಂದು ಕೆರೆಯನ್ನು ಕಟ್ಟಿಸಿ, ಅನೇಕ ಲಿಂಗಗಳನ್ನು ಪ್ರತಿಷ್ಠೆಮಾಡಿ, ವಿದ್ಯಾಸಮುದ್ರನೆಂಬ ಬಿರುದನ್ನು ವಹಿಸಿದ್ದ ಕರ್ಪರನೆಂಬ ಜೋಗಿಯನ್ನು ಸೋಲಿಸಿ, ತಾನು ಕಟ್ಟಿಸಿದ ಕೆರೆಯ ಮಧ್ಯದಲ್ಲಿ ಸಮಾಧಿಯನ್ನು ಮಾಡಿಸಿಕೊಂಡು, ಅಲ್ಲಿಯೇ ಬಯಲಾದನು.

ಇವನ ಜನನವನ್ನು ಸುಗ್ಗವ್ವೆಗೆ ರೇವಣಸಿದ್ಧನು ಸೂಚಿಸಿದಂತೆಯೂ ಸಿದ್ಧರಾಮನು ಚೆನ್ನಬಸವನಿಂದ ಲಿಂಗದೀಕ್ಷೆಯನ್ನು ತಾಳಿ ತತ್ತ್ವೋಪದೇಶವನ್ನು ಪಡೆದಂತೆಯೂ ಇತರ ವೀರಶೈವಗ್ರಂಥಗಳಿಂದ ತಿಳಿಯುತ್ತದೆ.

ಈತನ ವಚನಗಳಲ್ಲಿ ಕಪಿಲಸಿದ್ಧಮಲ್ಲಿಕಾರ್ಜುನ ಎಂಬ ಅಂಕಿತವಿದೆ. ತ್ರಿವಿಧಿಗಳಲ್ಲಿ ಯೋಗಿನಾಥ ಎಂಬ ಸಂಬೋಧನವಿದೆ. ಈ ಯೋಗಿನಾಥ ಶಬ್ದವು ಚೆನ್ನಬಸವನಿಗೆ ಅನ್ವಯಿಸುತ್ತದೆ.

ಇವನ ಗ್ರಂಥಗಳಲ್ಲಿ—

## 1. ವಚನಗಳು.

ಈ ವಚನಗಳಲ್ಲಿ ಎರಡು 1256 ರಲ್ಲಿ ಬರೆದ ಸೊರಬದ 561 ನೆಯ ಶಾಸನದ ಆದಿಭಾಗದಲ್ಲಿ ಅನುವಾದಮಾಡಲ್ಪಟ್ಟಿವೆ. ಈ ಶಾಸನದಲ್ಲಿ ಅಭಿನವ ಶ್ರೀಶೈಲವೆನಿಪ ಸೊನ್ನಲಿಗೆಯಪುರದ ಕಪಿಲಸಿದ್ಧಮಲ್ಲಿಕಾರ್ಜುನದೇವರಿಗೆ ಬೀರರಸನು ಗ್ರಾಮವನ್ನು ಬಿಟ್ಟಂತೆ ಹೇಳಿದೆ ಈ ಗ್ರಂಥದಿಂದ ಒಂದೆರಡು ವಚನಗಳನ್ನು ಉದ್ಧರಿಸಿ ಬರೆಯುತ್ತೇವೆ:—

(1) ಸಂಸಾರವೆಂಬ ಸರ್ಪನ ಅಣಲೊಳಗಿಹೆನಯ್ಯಾ. ಆವಾಗ ನುಂಗೀತೆಂದ ಱಾಯೆ; ಆವಾಗ ಉಗುೞೀತೆಂದಱಾಯೆನಯ್ಯಾ. ಅದರ ಬಾಯಿಂದೆನ್ನ ತೆಗೆದು ಕಾಯಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನ ॥ 399 ॥

(2) ಧರೆಯ ದೆಸೆವಳಯವೆಲ್ಲಾ ತನಗಾದಡಂ ನಿಲ್ಲಳು; ಎನಿತು ತ್ರಿಭುವನರಾಜ್ಯಪದಂಗಳು ತನಗಾದಡಂ ನಿಲ್ಲಳು; ಅನಿತಱೊಳಂ ತೃಪ್ತಿವಡೆಯಳು. ಈಯಾಶೆಯೆಂಬ ವಳಿಂದಲೆ ನಿಮ್ಮೆಡೆಗಾಣದಿರ್ಪೆ. ಈಯಾಶೆಯೆಂಬ ಪಾತಕಿಯನೆಂದಿಂಗೆ ನೀಗಿ ನಿಮ್ಮನೊಡಗೂಡಿ ಬೇಱಾಗದೆಂದಿರ್ಪೆನೋ ಕಪಿಲಸಿದ್ಧಮಲ್ಲಿಕಾರ್ಜುನ ॥ 400 ॥

## 2. ಮಿಶ್ರಸ್ತೋತ್ರದ ತ್ರಿವಿಧಿ.

ಇದರಲ್ಲಿ 109 ಪದ್ಯಗಳಿವೆ. ಎರಡು ಪದ್ಯಗಳನ್ನು ತೆಗೆದು ಬರೆಯುತ್ತೇವೆ:—

ಇಹಪರದ ಪರಿಯನು ಅಯ್ಯ ನೀನೇ ಬಲ್ಲೆ | ನಿಮ್ಮ ಶರಣನು ಬಲ್ಲ ಪ್ರಭುರಾಯನು |
ಆತನನುಮತದಿಂದ ಮಾಯೆಯನು ಗೆಲುವುದನು | ನೀವೆನಗ ಕಲಿಸುವುದು
ಯೋಗಿನಾಥ ॥ 401 ॥

ಚೆನ್ನೆಯರ ಬಲೆಯಲ್ಲಿ ಎನ್ನ ನಿರಿಸಿವೆ ಪ್ರಭುವೆ | ಇನ್ನಿದಕೆ ಭಾವಜನು ಬೇಂಟೆಗಾಱ |
ಕುನ್ನಿಗಳು ತಾವ್ಐದು ಎನ್ನ ಗ್ರಹಿಸದಮುನ್ನ | ಚಿನ್ಮಯಪ್ರಭು ಸಲಹೊ
ಯೋಗಿನಾಥ ॥ 402 ॥

## 3. ಬಸವಸ್ತೋತ್ರದ ತ್ರಿವಿಧಿ.

ಇದರಲ್ಲಿ 125 ಪದ್ಯಗಳಿವೆ. ಗ್ರಂಥಾದಿಯಲ್ಲಿ ಚೆನ್ನಬಸವಾದಿಗಳ ಸ್ತುತಿಯಿದೆ. ಇದರಿಂದ ಎರಡು ಪದ್ಯಗಳನ್ನು ತೆಗೆದು ಬರೆಯುತ್ತೇವೆ:—

ಹನ್ನೆರಡು ಮನೆಯೊಳಗೆ ಹದಿನಾಱನಿರಿಸಿದನು | ಉನ್ನಂತ ಶರಧಿಯನು ದಾಂಟಿನಿಂದ |
ಇನ್ನು ನಿರ್ಮಲವಾದ ಕಳೆಮೊಳೆಯನೊಳಕೊಂಡ | ಚಿನ್ಮೂರ್ತಿ ಬಸವನ್ನೆ
ಯೋಗಿನಾಥ ॥ 403 ॥

ಲೋಕಲೋಕವನೆಲ್ಲ ಲೋಕಿಸದೆ ನಿಂದಲ್ಲಿ । ಬೇಕುಮಾಡಿದನೆನ್ನ ಬಸವಲಿಂಗ ।
ಮುಕುಟಮಂಡಲದಲ್ಲಿ ಮನೆಗಟ್ಟಿ ನಿಂದವನು । ಅಕಳಂಕಬಸವನ್ಕೆ ಯೋಗಿನಾಥ ॥ 404 ॥

## 4. ಅಷ್ಟಾವರಣಸ್ತೋತ್ರದ ತ್ರಿವಿಧಿ.

ಇದರಲ್ಲಿ 144 ಪದ್ಯಗಳಿವೆ. ಈ ಗ್ರಂಥವು ಗುರು, ಲಿಂಗ, ಜಂಗಮ, ವಿಭೂತಿ, ರುದ್ರಾಕ್ಷಿ, ಮಂತ್ರ, ಪ್ರಸಾದ, ಪಾದೋದಕ, ಇವುಗಳ ಮಹಿಮೆಯನ್ನು ವಿವರಿಸುತ್ತದೆ. ಇದರಿಂದ ಒಂದು ಪದ್ಯವನ್ನು ಉದಾಹರಿಸುತ್ತೇವೆ:—

ಶಿವಭಕ್ತಿಶರಧಿಯಲಿ ನೆಲೆಗೊಳಿಸಿದಾತ ಗುರು । ಪರಿಕಿಸಿಯೆ ಭವವ ಹಱಿದಾತ ಗುರುವ್ಕೆ ।
ಶ್ರೀಗುರುವೆ ಎಂಬ ನಾಮಾಕ್ಷರತ್ರಯದಲ್ಲಿ । ಆನು ಪ್ರಜ್ವಲಿತನ್ಕೆ ಯೋಗಿನಾಥ ॥ 405 ॥

## 5. ಕಾಲಜ್ಞಾನ.

ಇದರಿಂದ ಒಂದು ವಚನವನ್ನು ತೆಗೆದು ಬರೆಯುತ್ತೇವೆ:—

ನಾನಾಕೃತ್ಯ ನೇಮಂಗಳಾದಾವು. ಸತ್ಯಶುದ್ಧಕಾಯಕ ನಿತ್ಯನೇಮಂಗಳಾದಾವು. ಖಂಡಿತಕಾಯಕದ ಅಖಂಡಿತರ ಖಂಡಿತರ ಕಂಡೆವು. ನಮ್ಮ ಕಪಿಲಸಿದ್ಧಮಲ್ಲಿಕಾರ್ಜುನ ದೇವರಲ್ಲಿ ಅಂದಿಗೆ ನೂಱು ತುಂಬಿತೆಂಬ ಪುರಾತನರ ಕಂಡೆವು ॥ 406 ॥

---

## ಕೊಂಡಗೂಳಿ ಕೇಶಿರಾಜ. ಸು. 1160.

ಈತನು ಷಡಕ್ಷರಕಂದವನ್ನು ಬರೆದಿದ್ದಾನೆ; ವಚನಗಳನ್ನೂ ಬರೆದಿರುವಂತೆ ತಿಳಿಯುತ್ತದೆ.

ಇವನು ವೀರಶೈವಕವಿ; ಈತನ ವಿಷಯವಾಗಿ ಭೈರವೇಶ್ವರಕಾವ್ಯದ ಕಥಾಸೂತ್ರರತ್ನಾಕರದಲ್ಲಿ ಹೀಗೆ ಹೇಳಿದೆ:—ಕೊಂಡಗೂಳಿಯೆಂಬ ಪುರದಲ್ಲಿ ಕೇಶಿರಾಜಯ್ಯನು ವಸ್ತುಕವರ್ಣಕದಿಂದ ಷಡಕ್ಷರಮಂತ್ರಮಹತ್ವವನು ನವರಸಾರ್ಥಯುಕ್ತವಾಗಿ ಸ್ತುತಿಗೆಯ್ಯುತ್ತಿದ್ದನು. ಕಲ್ಯಾಣದಿಂದ ಪೆರ್ಮಾಡಿರಾಜನು ನಿಯೋಗಿಗಳ ಕಳುಹಿ ಕರೆಯತರಿಸಿ ಪ್ರಧಾನಪಟ್ಟವಂ ಕಟ್ಟಿ ಕೇಶಿರಾಜದಣ್ಣಾಯಕನೆಂದು ಹೆಸರಿಟ್ಟನು. ಹೀಗಿರಲು ಪರವಾದಿಗಳ ಕೃತಕದಿಂದ ದಣ್ಣಾಯಕನ ನಂದಿಮುದ್ರೆಯುಂಗುರವಂ ಅರಸು ತೆಗೆದುಕೊಳಲು ಕೇಶಿ ಕೈಮುಗಿಯದೆ ಮನೆಗೆ ಹೋದನು.

ಇತರ ಗ್ರಂಥಗಳಿಂದ—ಈತನು ಶಿವಪುರಕ್ಕೆ ಬಂದು ಜಂಗಮಾರ್ಚನೆಯನ್ನು ಮಾಡುತ್ತ ಪ್ರತಿದಿನವೂ ಶಿವನನ್ನು ಎಂಟು ಶ್ಲೋಕಗಳಿಂದ ಸ್ತುತಿಸುತ್ತಿದ್ದಂತೆಯೂ ಬಸವೇಶ್ವರನೊಡನೆ ಸಂಗಮೇಶ್ವರಕ್ಕೆ ಹೋದಂತೆಯೂ ತಿಳಿಯುತ್ತದೆ.

ಷಿಕಾರಿಪುರದ 119 ನೆಯ ಮತ್ತು 123 ನೆಯ ಶಾಸನಗಳಿಂದ ಈತನ ವಿಷಯವಾಗಿ ಈಯಂಶಗಳು ತಿಳಿಯುತ್ತವೆ :—

ಈತನು ಭಾರದ್ವಾಜಗೋತ್ರದವನು. ಇವನ ತಂದೆ ಹೊಳಲಮರಸ; ತಾಯಿ ದುರ್ಗಾದೇವಿ. ಈತನು ಬಿಜ್ಜಳರಾಜನ (1156–1167) ಕೈಯ ಕೆಳಗೆ ದಂಡನಾಯಕನಾಗಿ ಬನವಸೆ ಪನ್ನಿರ್ಛಾಸಿರವನ್ನು ಆಳುತ್ತ ಬಲಿಪುರದಲ್ಲಿ ಇದ್ದನು. ಬಿಜ್ಜಳನ ಕಾಲವಾದ ಮೇಲೆ ಅವನ ಮಗ ರಾಯಮುರಾರಿಸೋಯಿದೇವನ ಕಾಲದಲ್ಲಿಯೂ ಇದ್ದನು. ಇವನು ಬಹಳ ಪರಾಕ್ರಮಶಾಲಿ.

ಇವನನ್ನು ಸ್ತುತಿಸುವ ಕೆಲವು ಶಾಸನಪದ್ಯಗಳನ್ನು ಇಲ್ಲಿ ಬರೆಯುತ್ತೇವೆ :—

ಧುರದೊಳ್ ಕೇಶವದಂಡನಾಥನ ಭುಜೋತ್ಖಾತಾಸಿಘಾತಕ್ಕೆ ವಿ ।
ಶ್ವರಿಪೂರ್ವೀಶ್ವರರಂಜಿ ಹುತ್ತಡರ್ದು ಜೀವಂಜಿತ್ತೊಡೆಮ್ಮೊಮ್ಮೆ ಕಾಂ ।
ತರನೊಲ್ದಿಂತಿದು ರಕ್ಷಿಸಿತ್ತಿದುವೆ ದೈವಂ ತಾನೆನುತ್ತಾ ವಧೂ ।
ತ್ಕರದಿಂದಾದುದು ಹುತ್ತನೂದುವ ಕೃತವ್ಯಾಪಾರವೀಧಾತ್ರಿಯೊಳ್ ॥

ಪುಸಿಯುಲ್ದು ಬೇಳ್ದುರಂ ಪು । ಟ್ಟಿಸುವ ಬೆಸಂ ಬರ್ಮನದು ಸಮಂತವರಂ ರ ।
ಕ್ಷಿಸುವ ಬೆಸಂ ತನ್ನದು ಗಡ । ನಿಸದಂ ಕೇಶವನಿದೇನುದಾತ್ತನೊ ಧರೆಯೊಳ್ ॥

ಇನಜಂ ಕೊಟ್ಟ ತೊವಲ್ ಶಿಬಿ । ಮುನಿ ಕೊಟ್ಟಡಗಾದಧೀಚಿ ಕೊಟ್ಟೆಲ್ವುಗಳೀಂ ।
ಧನದಂತೆ ಸೇವ್ಯಮೇ ವೇ । ಡ್ಕೆನುತುಂ ಹೊಂಗಳನೆ ಕೇಶವಂ ಕುಡುತಿರ್ಪಂ ॥

ಈತನ ಗ್ರಂಥಗಳಲ್ಲಿ—

## ಷಡಕ್ಷರಕಂದ.

ಈ ಗ್ರಂಥಕ್ಕೆ ಮಂತ್ರಮಹತ್ತ್ವದ ಕಂದ ಎಂಬ ಹೆಸರೂ ಉಂಟು. ಇದರಲ್ಲಿ ಓಂನಮಶ್ಶಿವಾಯ ಎಂಬ ಷಡಕ್ಷರಮಂತ್ರದ ಮಹಿಮೆ ಹೇಳಿದೆ. ಕಂದಗಳು 110. ಒಂದೊಂದು ಕಂದವೂ 'ಓಂನಮಶ್ಶಿವಾಯೆಂಬ ಪದಂ' ಎಂದು ಮುಗಿಯುತ್ತದೆ.

ಇವನ ಬಂಧವು ಪ್ರೌಢವಾಗಿದೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ :—

ಅಟಮಟದ ಮಾತನಾಡಿಯೆ । ತುಟಿ ಮಿಡುಕಲದೇಕೆ ಜನನಮರಣಾರ್ಣವದಾ ।
ತಟವಂ ಸಾರ್ಚುವ ತೆಪ್ಪಂ । ದಿಟಮಿದೆ ಕೇಳೋಂನಮಶ್ಶಿವಾಯೆಂಬ ಪದಂ ॥ 407 ॥

ಉಬ್ಬಿನಲಿನಲಿದು ವಿಷಯದೊ । ಳಬ್ಬರಿಸುವ ಮುನಿಸು ಮನದ ಕನಲಿಕೆ ಕಾಮಂ ।
ಬೊಬ್ಬಿಡುವ ದುರಿತಕೋಟಿಯ । ನೆಬ್ಬಟ್ಟುವುದೋಂನಮಶ್ಶಿವಾಯೆಂಬ ಪದಂ ॥ 408 ॥

ತಱಿಯಲ್ ಮೋಹದ ಕೆಚ್ಚಂ । ಪಱಿಯಲ್ ಭವಪಾಶಮಂ ಮನೋಜನ ಬಿಲ್ಲಂ ।
ಮುಱಿಯಲ್ ಮಾಯೆಯ ಬೇರಂ । ಕೊಱೆಯಲ್ ಜಪಮೋಂನಮಶ್ಶಿವಾಯೆಂಬ
ಪದಂ ॥ 409 ॥

ಇವನ ವಚನಗಳು ನಮಗೆ ದೊರೆತಿಲ್ಲ.

---

## ಸೊಡ್ಡಳ ಬಾಚರಸ. ಸು. 1160.

ಈತನು ವಚನಗಳನ್ನು ಬರೆದಿದ್ದಾನೆ; ಒಂದು **ಕಾಲಜ್ಞಾನ**ವನ್ನೂ ಬರೆದಿರುವಂತೆ ತೋರುತ್ತದೆ.

ಇವನು ವೀರಶೈವಕವಿ; ಬಿಜ್ಜಳರಾಜನಲ್ಲಿ (1156–1167) ಕರಣಿಕನಾಗಿದ್ದನು. ಈತನು ಸುಳ್ಳುಲೆಕ್ಕವನ್ನು ಬರೆದನೆಂದು ಕೊಂಡೆಯರು ದೂರೆಯಲ್ಲಿ ದೂರಲು, ಬಸವನು ಸೂರ್ಯಗತಿಯನ್ನು ಹನ್ನೊಂದು ದಿವಸ ನಿಲ್ಲಿಸಿ ಲೆಕ್ಕವನ್ನು ಪೂರ್ತಿಮಾಡಿ ತೋರಿಸಿದಂತೆಯೂ ಬಿಜ್ಜಳನು ಇಬ್ಬರನ್ನೂ ಮನ್ನಿಸಿದಂತೆಯೂ ಇತಿಹಾಸವಿದೆ.

### ವಚನಗಳು.

ಇವನ ವಚನಗಳಲ್ಲಿ **ಸೊಡ್ಡಳ** ಎಂಬ ಅಂಕಿತವಿದೆ. ಒಂದೆರಡು ವಚನಗಳನ್ನು ಉದ್ಧರಿಸಿ ಬರೆಯುತ್ತೇವೆ:—

(1) ಗಂಡನುಳ್ಳ ಹೆಂಡಿರ ಕಂಡು ಅಳಿಪದಿರಾ ಮನವೇ ! ಬಂದ ಬಸಿಱನು ಉಂಡ ಮೊಲೆಯನು ಕಂಡು ಮಱುಗದಿರಾ ಮನವೇ ! ಉದ್ದಂಡತನದಲಿ ನಡೆದ ಭಂಡರನು ಹುಬ್ಬುಗೊಂಡದಲ್ಲಿಕ್ಕದೆ ಬಿಡುವನೆ ನಮ್ಮ ದೇವರಾಯ ಸೊಡ್ಡಳ ॥ 410 ॥

(2) ಗಂಗಾನದಿಯಲ್ಲಿ ಮಿಂದು ಗಂಜಳದಲ್ಲಿ ಹೊರಳುವರೆ? ಚಂದನವಿದ್ದಂತೆ ದುರ್ಗಂಧವ ಮೈಯಲ್ಲಿ ಪೂಸುವರೆ? ಸುರಭಿ ಮನೆಯಲ್ಲಿ ಕಱೆಯುತ್ತಿರೆ ಹರಿವರೆ ಸೊಣಗನ ಹಾಲಿಂಗೆ? ಬಯಸಿದಮೃತವಿದ್ದಂತೆ ಅಂಬಲಿವನೆಱೆದುಂಬ ಭ್ರಮಿತಮಾನವ ನೀನು ಕೇಳಾ ! ಪರಮಪದವಿಯನೀವ ಚೆನ್ನಸೊಡ್ಡಳನಿದ್ದಂತೆ ಸಾವದೈವವನೊಂತಡೆ ಕಾವುದೇ ನಿನ್ನ? ॥411॥

---

## ಮಹಾದೇವಿಯಕ್ಕ. ಸು. 1160.

**ಈಕೆ ವಚನಗಳನ್ನೂ ಯೋಗಾಂಗತ್ರಿವಿಧಿಯನ್ನೂ ಬರೆದಿದ್ದಾಳೆ; ಸೃಷ್ಟಿಯ ವಚನ,** ಅಕ್ಕಗಳ ಪೀಠಿಕೆ ಎಂಬ ಗ್ರಂಥಗಳನ್ನೂ ಬರೆದಿರುವಂತೆ ತಿಳಿಯುತ್ತದೆ.

ಇವಳು ವೀರಶೈವಕವಿ; ಉಡುತಡಿಯೆಂಬ ಪಟ್ಟಣದಲ್ಲಿ ಹುಟ್ಟಿದಳು. ಆ ಪಟ್ಟಣದ ದೊರೆ ಕೌಶಿಕನು ಇವಳನ್ನು ಮದುವೆಯಾಗಬೇಕೆಂದು ಬಯಸಲು, ಭವಿಯೆಂದು ಅವನನ್ನು ಪರಿಹರಿಸಿ ವಿರಕ್ತಳಾಗಿ ಕಲ್ಯಾಣಕ್ಕೆ ಹೋಗಿ ಬಸವಾದಿಗಳೊಡನೆ ಇದ್ದಳು.

ಇವಳ ವಿಷಯವಾಗಿ ಮಹಾದೇವಿಯಕ್ಕನ ಪುರಾಣ ಎಂಬ ಗ್ರಂಥವು ಹುಟ್ಟಿದೆ.

ಈಕೆಯ ಗ್ರಂಥಗಳಲ್ಲಿ—

## 1. ವಚನಗಳು.

ಈಕೆಯ ವಚನಗಳಲ್ಲಿ ಚೆನ್ನಮಲ್ಲಿಕಾರ್ಜುನ ಎಂಬ ಅಂಕಿತವಿದೆ. ಕೆಲವು ವಚನಗಳನ್ನು ತೆಗೆದು ಬರೆಯುತ್ತೇವೆ :—

(1) ಅಮೇಧ್ಯದ ಹಡಿಕೆ; ಮೂತ್ರದ ಕುಡಿಕೆ; ಎಲುವಿನ ತಡಿಕೆ; ಕೀವಿನ ಹಡಿಕೆ; ಸುಡಲಿ ದೇಹವ. ಒಡಲುವಿಡಿದು ಕೆಡದಿರು, ಚೆನ್ನಮಲ್ಲಿಕಾರ್ಜುನನನರಿಯದ ಮರುಳೆ ॥ 412 ॥

(2) ಒಮ್ಮೆ ಕಾಮನ ಕಾಲಹಿಡಿವ; ಮತ್ತೊಮ್ಮೆ ಚಂದ್ರಮಂಗೆ ಸೆರಗೂಡ್ಡಿಬೇಡುವೆ; ಸುಡಲಿ ವಿರಹವ. ನಾನಾರಿಗೆ ಧೃತಿಗೆಡುವೆ? ಚೆನ್ನಮಲ್ಲಿಕಾರ್ಜುನದೇವನೆನ್ನನೊಲ್ಲದಕಾರಣ ಎಲ್ಲರಿಗೆ ಹಂಗುಗಿತ್ತಿಯಾದೆನವ್ವಾ ॥ 413 ॥

(3) ಬೆಟ್ಟದಮೇಲೊಂದು ಮನೆಯಮಾಡಿ ಮೃಗಂಗಳಿಗಂಜಿದಡೆಂತಯ್ಯಾ? ಸಮುದ್ರದ ತಡಿಯಲ್ಲಿ ಮನೆಯಮಾಡಿ ನೊರೆತೆರೆಗಳಿಗಂಜಿದಡೆಂತಯ್ಯಾ? ಸಂತೆಯೊಳಗೊಂದು ಮನೆಯಮಾಡಿ ಶಬ್ದಕ್ಕೆ ನಾಚಿದಡೆಂತಯ್ಯಾ? ಚೆನ್ನಮಲ್ಲಿಕಾರ್ಜುನದೇವ ಕೇಳಯ್ಯಾ. ಲೋಕದೊಳಗೆ ಹುಟ್ಟಿದಬಳಿಕ ಸ್ತುತಿನಿಂದೆಗಳು ಬಂದಡೆ ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು ॥ 414 ॥

## 2. ಯೋಗಾಂಗ ತ್ರಿವಿಧಿ.

ಇದರಿಂದ ಒಂದು ಪದ್ಯವನ್ನು ಉದಾಹರಿಸುತ್ತೇವೆ :—

ಅಷ್ಟದಳಕಮಲದಾ । ಬಟ್ಟಬಯಲೊಳಗೊಂದು । ಮುಟ್ಟಬಾರದ ಘನವಿಹುದು ।
ಮನದೊಳಗೆ । ದೃಷ್ಟಿಯಿಟ್ಟವನೆ ಕಡುಜಾಣ ॥ 415 ॥

## 3. ಸೃಷ್ಟಿಯವಚನ.

ಇದು ಗದ್ಯರೂಪವಾಗಿದೆ. ಇದಕ್ಕೆ ಒಂದು ಕನ್ನಡ ವ್ಯಾಖ್ಯಾನವಿದೆ.

---

## ಘಟ್ಟಿವಾಳಯ್ಯ. ಸು. 1160.

ಈತನು ವಚನಗಳನ್ನೂ ಕಾಲಜ್ಞಾನವನ್ನೂ ಬರೆದಿದ್ದಾನೆ. ಇವನು ವೀರಶೈವಕವಿ; ತನ್ನ ಮಹಿಮೆಯನ್ನು ಬಸವನ ಹೆಂಡತಿಯಾದ ನೀಲಮ್ಮನಿಗೆ ಹೇಳಿದಂತೆ ತಿಳಿಯುತ್ತದೆ.

ಇವನ ಗ್ರಂಥಗಳಲ್ಲಿ—

### 1. ವಚನಗಳು.

ಇವನ ವಚನಗಳ ಸಂಖ್ಯೆ 56. ಇವುಗಳಲ್ಲಿ **ಚಿಕ್ಕಯ್ಯಪ್ರಿಯಸಿದ್ಧಲಿಂಗ** ಎಂಬ ಅಂಕಿತವಿದೆ ಒಂದೆರಡು ವಚನಗಳನ್ನು ತೆಗೆದು ಬರೆಯುತ್ತೇವೆ:—

(1) ರೋಗಿಗೆ ಹಾಲು ಸಿಹಿಯಪ್ಪುದೆ? ಗೂಗೆಗೆ ರವಿ ಲೇಸಪ್ಪುದೆ? ಚೋರಂಗೆ ಬೆಳಗು ಗುಣವಪ್ಪುದೆ? ಭವಸಾಗರದ ಸಮುಯದಲಿದ್ದವರಿಗೆ ಸಿಭಾರ್ಗವನ ಭಾವನೆಯೆತ್ತಹುದು? ಚಿಕ್ಕಯ್ಯಪ್ರಿಯಸಿದ್ಧಲಿಂಗ ಇಲ್ಲ ಇಲ್ಲ ಎಂದೆ ॥416॥

(2) ಆಸೆಗಾಗಿ ವೇಷವ ಹೊತ್ತು ತಿರುಗುವ ವೇಷಗಾಜರ ಗಂಡ; ಈಷಣತ್ರಯಕಾಗಿ ಈಶನ ಪೂಜಿಸುವ ದಾಸರ ಗಂಡ; ಇಷ್ಟನಱಿದು ತನುವಿಗೆ ಆಸೆಯಮಾಡುವ ಭಾಷೆವಂತರ ಗಂಡ; ನಾನಂಜುವೆ ತ್ರಿವಿಧದ ಹಂಗಱಿದವರಿಗೆ. ನಾನವರಿಗಿಱಿದ ಬಂಟ. ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಬಲ್ಲ ಎಂದೆನು ॥417॥

### 2. ಕಾಲಜ್ಞಾನ.

ಇದರಲ್ಲಿ ಸಂಧಿ 7, ಪದ 393 ಇವೆ. ಒಂದೆರಡು ಪದಗಳನ್ನು ಉದ್ಧರಿಸಿ ಬರೆಯುತ್ತೇವೆ:—

(1) ಅತ್ತೆಯ ಮಾತ ಸೊಸೆ ಕೇಳಳಮ್ಮ। ಅತ್ತೆಯು ಸೆ ಒತ್ತಿ ದುಭಾರ್ಷೆಯಮ್ಮ।
ಪತಿವ್ರತವು ಕೆಟ್ಟು ಹೋದೀತಮ್ಮ। ಇನ್ನು ಪತಿಯ ಮಾತನು ಸಡ್ಡೆಗೊಳ್ಳರಮ್ಮ ॥418॥

(2) ಮುಕ್ತಿಯೆಂಬುದು ಮುಱುಗಿಹೋದೀತಮ್ಮ। ವಿರಕ್ತಿಯೆಂಬುದು ನಿಲ್ಲಲಾರದಮ್ಮ।
ಸೂಕ್ತಿಯೆಂಬುದು ಸವೆದು ಹೋದೀತಮ್ಮ। ತಮ್ಮ ನಿತ್ಯನೇಮವು ಅಮಂಗಲವಾದೀ ತಮ್ಮ ॥419॥

---

## ಮೋಳಿಗೆಯ ಮಾರಯ್ಯ. ಸು. 1160.

ಇವನು ವಚನಗಳನ್ನು ಬರೆದಿದ್ದಾನೆ. ಈತನು ವೀರಶೈವಕವಿ; ಇವನಿಗೆ ಮೋಳಿಗಯ್ಯ ಎಂಬ ಹೆಸರೂ ಉಂಟು. ಇವನ ಹೆಂಡತಿ ಮಹಾದೇವಿ.

ಈತನು ಬಂದರುದೇಶದ ಮಾಂಡವ್ಯಪುರವನ್ನು ಆಳುತ್ತ ಶಿವಭಕ್ತರನ್ನು ಆರಾಧಿಸುತ್ತಿದ್ದನು. ಬಸವನು ಇವನಲ್ಲಿದ್ದ ಶಿವಭಕ್ತರನ್ನು ಕರೆದುಕೊಂಡು ಹೋಗಲು, ಆತನನ್ನು ಇರಿದು ಕೊಲ್ಲುವಂತೆ ಇಬ್ಬರು ಬಂಟರನ್ನು ಕಳುಹಿದನು. ಅವರು ಜಂಗಮವೇಷವನ್ನು ಹಾಕಿಕೊಂಡು ಬಸವನ ಮನೆಯಲ್ಲಿ ಶಿವಭಕ್ತರ ನಡುವೆ ಕುಳಿತಿರಲು. ಬಸವನ ಮಹಿಮೆಯಿಂದ ಅವರ ಕೊರಳಲ್ಲಿದ್ದ ಬದಣೆಯ ಕಾಯಿಗಳು ಲಿಂಗವಾದುವು. ಇದನ್ನು ಕೇಳಿ ಮೋಳಿಗಯ್ಯನು ವೈರಾಗ್ಯದಿಂದ–

ಹಿರಿಯರ ದರ್ಶನ ನಯನಕ್ಕೆ ಚೆಲುವು ; ಸತ್ಪಾತ್ರಕ್ಕೀವುದು ಹಸ್ತಕ್ಕೆ ಚೆಂದ : ಸತ್ಯವ ನುಡಿವುದು ವಾಕ್ಯಕ್ಕೆ ಭೂಷಣ : ಶಿವಸ್ತುತಿ ಕೇಳುವುದು ಕರ್ಣಕ್ಕೆ ಅಲಂಕಾರ ; ಶರಣರಕೂಡೆ ಸಂಭಾಷಣೆ ಪ್ರಾಣಕ್ಕೆ ಶೃಂಗಾರ ; ಇಂತಿಲ್ಲದ ನರನ ಬಾಳು ಹೊಲೆಯ ಜೋಗಿಯ ಕೈಯ ಪಾತ್ರದಿಂದ ಕಡೆ.

ಎಂದು ಗೀತವ ಹಾಡಿ ರಾಜ್ಯವನ್ನು ಬಿಟ್ಟು ಕಲ್ಯಾಣಕ್ಕೆ ಹೋಗಿ ಅಲ್ಲಿ ಕಟ್ಟಿಗೆಯ ಮಾರುವ ಕಾಯಕದಿಂದ ಜಂಗಮಕ್ಕೆ ನೀಡುತ್ತಿದ್ದನು.

## ವಚನಗಳು.

ಇವನ ವಚನಗಳ ಸಂಖ್ಯೆ 230. ಈ ವಚನಗಳಲ್ಲಿ **ನಿಃಕಳಂಕಮಲ್ಲಿಕಾರ್ಜುನ** ಎಂಬ ಅಂಕಿತವಿದೆ. ಒಂದೆರಡು ವಚನಗಳನ್ನು ಉದಾಹರಿಸುತ್ತೇವೆ:—

(1) ತಲೆಯಿಲ್ಲದೆ ಕಾಲು ನಡೆಯಬಹುದೆ? ಕುಕ್ಷಿಯಿಲ್ಲದಿರೆ ಬಾಯಿ ಉಣಬಲ್ಲುದೆ? ಆತ್ಮವಿಲ್ಲವೆ ಕರಚರಣಾದಿಗಳಿಗೆ ಏತಱ ಹೊಲಬು? ನಿನ್ನ ಭಕ್ತಿಯ ಬೆಳೆ ಎನಗೆ ಸತ್ಯದ ಹಾದಿಯುದು ನಿಃಕಳಂಕಮಲ್ಲಿಕಾರ್ಜುನಾ ॥ 420 ॥

(2) ವಸ್ತುವ ಕುಱಿತು ಇಷ್ಟವ ನೋಡಬೇಕಲ್ಲದೆ ಇಷ್ಟವ ಕುಱಿತು ವಸ್ತುವ ನೋಡಬಹುದೆ? ಹಿಡಿತೆಯ ಹಿಡಿದು ಇಱಿಯಬೇಕಲ್ಲದೆ ಮೊನೆಯ ಹಿಡಿದು ಇಱಿದವರುಂಟೆ? ನೆನಹ ರೂಪಿನಲ್ಲಿ ಅನುಕರಿಸಬಹುದಲ್ಲದೆ ರೂಪ ನೆನಹಿನಲ್ಲಿ ಅನುಕರಿಸಬಹುದೆ? ತಿಟ್ಟವ ಲಕ್ಷಿಸುವುದು ಲೆಕ್ಕಣಿಕೆಯಲ್ಲದೆ ಆ ತಿಟ್ಟ ಲೆಕ್ಕಣಿಕೆಯ ಲಕ್ಷಿಸಬಹುದೆ? ಇಂತೀ ದ್ವಂದ್ವವನಱಿದು ಉಭಯದ ಸಂದಿನಬೆಸುಗೆ ಒಂದೆಂದಲ್ಲಿ ಐಕ್ಯಾನುಭಾವ ನಿಃಕಳಂಕಮಲ್ಲಿಕಾರ್ಜುನಾ ॥421॥

---

## ಮಹಾದೇವಿ. ಸು. 1160.

ಈಕೆ ವಚನಗಳನ್ನು ಬರೆದಿದ್ದಾಳೆ. ಇವಳು ವೀರಶೈವಕವಿ; ಮೋಳಿಗೆಯ ಮಾರಯ್ಯನ ಹೆಂಡತಿ. ಇವಳ ವಚನಗಳಲ್ಲಿ ಕೆಲವು ಗಂಡನ ವಚನಗಳಿಗೆ ಪ್ರತ್ಯುತ್ತರವಾಗಿವೆ.

### ವಚನಗಳು.

ಇವಳ ವಚನಗಳ ಸಂಖ್ಯೆ 41. ಇವುಗಳಲ್ಲಿ **ಇಮ್ಮಡಿ ನಿಃಕಳಂಕಮಲ್ಲಿಕಾರ್ಜುನ** ಎಂಬ ಅಂಕಿತವಿದೆ. ಒಂದು ವಚನವನ್ನು ತೆಗೆದು ಬರೆಯುತ್ತೇವೆ :—

ಪೂಜಿಸಿ ಕಂಡಿಹೆನೆಂದೊಡೆ ಪೂಜೆಗೆ ತನ್ನಯ ಮೂರ್ತಿ ನೀನು ; ನೆನಹಿನಲ್ಲಿ ಆತುರಿಸಿ ಕಂಡಿಹನೆಂದೊಡೆ ಆ ನೆನಹಿಂಗೆ ಆತ್ಮಸ್ವರೂಪ ನೀನು ; ಎಲ್ಲ ಎಡೆಯಲ್ಲಿ ಭಿನ್ನವಮಾಡಿ ಕಂಡಿಹೆನೆಂದೊಡೆ ಅಣೋರಣೀಯಾನ್ ಮಹತೋ ಮಹೀಯ ನೀನು ; ಸತ್ಯವೆಲ್ಲಿದ್ದಿತ್ತು ಅಲ್ಲಿ ತಪ್ಪದಿಪ್ಪೆ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕಮಲ್ಲಿಕಾರ್ಜುನನು ವಿಶ್ವಾಸವೆಲ್ಲಿಪ್ಪುದಲ್ಲಿ ತಪ್ಪದಿಪ್ಪನು ‖ 422 ‖

---

## ಆಯ್ದಕ್ಕಿಯ ಮಾರಯ್ಯ. ಸು. 1160.

ಈತನು ವಚನಗಳನ್ನು ಬರೆದಿದ್ದಾನೆ. ಇವನು ವೀರಶೈವ ಕವಿ.

### ವಚನಗಳು.

ಇವನ ವಚನಗಳ ಸಂಖ್ಯೆ 58. ಇವುಗಳಲ್ಲಿ **ಅಮರೇಶ್ವರಲಿಂಗ** ಎಂಬ ಅಂಕಿತವಿದೆ. ಒಂದೆರಡು ವಚನಗಳನ್ನು ತೆಗೆದು ಬರೆಯುತ್ತೇವೆ :—

(1) ಭಕ್ತರಿಗೆ ಬಡತನವುಂಟೆ? ಸತ್ಯರಿಗೆ ಕರ್ಮವುಂಟೆ? ಚಿತ್ತಮುಟ್ಟಿ ಸೇವೆಯ ಮಾಡುವ ಭಕ್ತಂಗೆ ಮರ್ತ್ಯ ಕೈಲಾಸವೆಂಬುದುಂಟೆ? ಆತನಿದ್ದುದೇ ಸುಕ್ಷೇತ್ರ, ಆತನ ಅಂಗವೇ ಅಮರೇಶ್ವರಲಿಂಗದ ಅಂಗದ ಸುಖ ‖ 423 ‖

(2) ಗರ್ವದಿಂದ ಮಾಡುವ ಭಕ್ತಿ ದ್ರವ್ಯದ ಕೇಡು ; ನಡೆಯಿಲ್ಲದ ನುಡಿ ಅಜ್ಞವಿಂಗೆ ಹಾನಿ ; ಕೊಡದೆ ತ್ಯಾಗಿಯೆನಿಸಿಕೊಂಬುದು ಮುಡಿಯಿಲ್ಲದ ಶೃಂಗಾರ ; ದೃಢವಿಲ್ಲದ ಭಕ್ತಿ ಅಡಿಯೊಡೆದ ಕುಂಭದಲ್ಲಿ ಸುಜಲವ ತುಂಬಿದಂತೆ, ಅಮರೇಶ್ವರಲಿಂಗವ ಮುಟ್ಟದ ಭಕ್ತಿ ‖ 424 ‖

---

## ಅಂಬಿಗರ ಚೌಡಯ್ಯ. ಸು. 1160.

ಈತನು ವಚನಗಳನ್ನು ಬರೆದಿದ್ದಾನೆ. ಇವನು ವೀರಶೈವ ಕವಿ.

### ವಚನಗಳು.

ಇವನ ವಚನಗಳ ಸಂಖ್ಯೆ 105. ಇವುಗಳಲ್ಲಿ ಇವನ ಹೆಸರು ವ್ಯಕ್ತವಾಗಿ ಹೇಳಿದೆ. ಒಂದೆರಡು ವಚನಗಳನ್ನು ಉದ್ಧರಿಸಿ ಬರೆಯುತ್ತೇವೆ :—

(1) ಎತ್ತ ಸುತ್ತಿ ಬಂದಡಂ ಊಱ ಬಪ್ಪುದೆ ತಪ್ಪದು. ಹಲವು ಮಾತನಾಡಿದ ಡೇನು? ಮೂಱುಮಲವ ಮಱಿದಿರಬೇಕು. ಹೊಲಬುದಪ್ಪಿ ಮೃಗ ಬಲೆಯೊಳಗೆ ಬಿದ್ದಂತಾಗ ಬೇಡ. ಇದನಱಿತು ಬದುಕೆಂದನಂಬಿಗರ ಚೌಡಯ್ಯ ॥ 425 ॥

(2) ಶುಕ್ಲಶೋಣಿತಪಿಂಡೈಕ್ಯನ ಚಿತ್ತವಾಯು ಆಱುದಳದ ಪದ್ಮದಲ್ಲಿಹುದು. ಮೊಲೆ ಮೂಡಿ ಬಂದಡೆ ಆ ಪಿಂಡವನು ಹೆಣ್ಣೆಂಬರು. ಗಡ್ಡಮೀಸೆಗಳು ಬಂದಡೆ ಆ ಪಿಂಡ ವನು ಗಂಡೆಂಬರು. ಆ ಇಬ್ಬರ ನಡುವೆ ಸುಳಿವ ಆತ್ಮನು ಹೆಣ್ಣೂ ಅಲ್ಲ ಗಂಡೂ ಅಲ್ಲ ನೋಡಾ. ಇವಱಂತುವ ತಿಳಿದು ನೋಡಿಹೆನೆಂದಡ ಶ್ರುತಿಗಗೋಚರವೆಂದಾತನಂಬಿಗರ ಚೌಡಯ್ಯ ॥ 426 ॥

---

## ಕೋಲಶಾಂತಯ್ಯ. ಸು. 1160.

ಇವನು ವಚನಗಳನ್ನು ಬರೆದಿದ್ದಾನೆ. ಈತನು ವೀರಶೈವಕವಿ; "ಚಿತ್ರಮಂ ನೋಡಿ ಜಂಗಮುವನಿಱಿದನಂ" ಕೊಂದನು ಎಂದು ಚೆನ್ನಬಸವಪುರಾಣ[1] ದಲ್ಲಿ ಹೇಳಿದೆ.

### ವಚನಗಳು.

ಇವನ ವಚನಗಳ ಸಂಖ್ಯೆ 100. ಇವುಗಳಲ್ಲಿ **ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ** ಎಂಬ ಅಂಕಿತವು ದೊರೆಯುತ್ತದೆ. ಕೆಲವು ವಚನಗಳನ್ನು ತೆಗೆದು ಬರೆಯುತ್ತೇವೆ:—

(1) ಜಡೆ ಮುಡಿ ಬೋಳು ಹೇಗಾದಡಾಗಲಿ. ನಡೆ ನುಡಿ ಸಿದ್ಧಾಂತವಾದಡೆ ಸಾಕು; ಆತ ಪರಂಜ್ಯೋತಿಗುರುವಹ. ಆ ಇರವ ನಿನ್ನ ನೀನಱಿ ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗಾ ॥ 427 ॥

(2) ಕ್ಷಮೆಯಿಲ್ಲದ ಭಕ್ತಿ, ನಯರತಿಯಿಲ್ಲದ ನಾಟ, ಶ್ರದ್ಧೆಯಿಲ್ಲದ ಕೂಟ, ಶಿವಲಿಂಗಾರ್ಚನೆಯಿಲ್ಲದವನ ಹೃದಯ, ನಂದಿಸಿದ ಕಜ್ಜಳದಂತೆ. ಆ ಸಂದೇಹವ ನಿನ್ನ ನೀನಱಿ ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗಾ ॥ 428 ॥

(3) ಮಾಡಿ ಆಡಲೇತಕ್ಕೆ? ಸಲಹಿಕೊಲ್ಲಲೇತಕ್ಕೆ? ಬಿತ್ತಿ ಕೀಳಲೇತಕ್ಕೆ? ಕಟ್ಟಿ ಒಡೆಯಲೇತಕ್ಕೆ? ಮಾಡಿ ಮಾಡಿ ಮನಗುಂದುವ ನೀಡಿ ನೀಡಿ ನಿಜಗುಂದುವ ಭೇದ, ಆ ಮಾಟವ ನಿನ್ನ ನೀನಱಿ ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗಾ ॥ 429 ॥

---

1. ಕಾಂಡ 5 ಸಂಧಿ 4 ಪದ್ಯ 62.

## ನುಲಿಯ ಚಂದಯ್ಯ. ಸು. 1160.

ಈತನು ವಚನಗಳನ್ನು ಬರೆದಿದ್ದಾನೆ. ಇವನು ವೀರಶೈವಕವಿ; ಕಲ್ಯಾಣದಲ್ಲಿ ನೊದೆಯ ಹುಲ್ಲನ್ನು ನುಲಿಹೊಸೆದು ಮಾರಿ ಜೀವಿಸುತ್ತಿದ್ದನು. ಇವನ ವಿಷಯವಾಗಿ ನುಲಿಯಚಂದಯ್ಯನ ಕಥೆ ಎಂಬ ಗ್ರಂಥವು ಹುಟ್ಟಿದೆ.

### ವಚನಗಳು.

ಇವನ ವಚನಗಳ ಸಂಖ್ಯೆ 49. ಇವುಗಳಲ್ಲಿ **ಚಂಡೇಶ್ವರಲಿಂಗ** ಎಂಬ ಅಂಕಿತವಿದೆ. ಒಂದೆರಡು ವಚನಗಳನ್ನು ತೆಗೆದು ಬರೆಯುತ್ತೇವೆ:—

(1) ಕೈದ ಹಿಡಿದಾಡುವರೆಲ್ಲರು ಇಱಿಯಬಲ್ಲರೆ? ಸಾಧನೆಯ ಮಾಡುವ ಬಾಲರೆಲ್ಲರು ಕಾದಬಲ್ಲರೆ? ಅರ್ಥಿಗೆ ಮಾಡುವ ಕೃತ್ಯವಂತರೆಲ್ಲರು ಸದ್ಭಕ್ತರಪ್ಪರೆ? ಅದು ಚಂಡೇಶ್ವರಲಿಂಗಕ್ಕೆ ಸಲ್ಲದ ಮಾಟ ‖ 430 ‖

(2) ಹಿಂದಣ ಭವಸಾಗರವನು ದಾಂಟಿದೆ; ಮುಂದಣ ಮುಕ್ತಿಪಥಕ್ಕೆ ಜ್ಞಾನವಂಕುರಿಸಿತ್ತು; ಇನ್ನಂಜೆನಂಜೆನಯ್ಯಾ. ಎನ್ನ ಮನೋಮೂರುತಿಯಪ್ಪ ಚಂಡೇಶ್ವರನ ಕಾರುಣ್ಯವಾಯಿತ್ತು. ಗೆದ್ದೆ ಗೆದ್ದೆ ಮಹಾಮಾಯೆಯ ‖ 431 ‖

---

## ಅಜಗಣ್ಣ. ಸು. 1160.

ಇವನು ವಚನಗಳನ್ನು ಬರೆದಿದ್ದಾನೆ. ಈತನು ವೀರಶೈವಕವಿ.

### ವಚನಗಳು.

ಇವನ ವಚನಗಳಲ್ಲಿ ಈತನ ಹೆಸರು ಸೂಚಿತವಾಗಿದೆ. ಒಂದು ವಚನವನ್ನು ಉದ್ಧರಿಸಿ ಬರೆಯುತ್ತೇವೆ:—

ಉಟ್ಟುದ ತೊಱೆದವಂಗೆ ಊರೇನು ಕಾಡೇನು? ನಷ್ಟಸಂತಾನಕ್ಕೆ ಕುಲವೇನು ಚಲವೇನು? ಹುಟ್ಟುಗೆಟ್ಟಾತಂಗ ಪುಣ್ಯವೇನು ಪಾಪವೇನು? ಅದು ಕೆಟ್ಟುದು ಕೆಟ್ಟುದು; ತನ್ನ ತಾನಱಿಯದೆ ಬಟ್ಟಬಯಲಲ್ಲಿ ಬಿದ್ದ ಅಜಗಣ್ಣತಂದೆ ‖ 432 ‖

---

## ನಿಜಗುಣದೇವ. ಸು. 1160.

ಈತನು ವಚನಗಳನ್ನು ಬರೆದಿದ್ದಾನೆ. ಇವನು ವೀರಶೈವಕವಿ.

## ವಚನಗಳು.

.... ಈತನ ವಚನಗಳಲ್ಲಿಯೂ ಇವನ ಹೆಸರು ಸೂಚಿತವಾಗಿದೆ.' ಒಂದು ವಚನವನ್ನು ಉದಾಹರಿಸುತ್ತೇವೆ :—

ಆನುಳ್ಳನಕ ನೀನುಂಟೆಲೆಮಾಯೆ, ಆನಿಲ್ಲದಿರ್ದಡೆ ನೀನಿಲ್ಲ. ಆರ್ ನೀನೆಂಬು ಭಯವಳಿಯಲು ಆನಂದನಿಜಗುಣಯೋಗ ॥ 433 ॥

---

## ಅಮುಗಿದೇವಯ್ಯ. ಸು. 1160.

ಇವನು ವಚನಗಳನ್ನು ಬರೆದಿದ್ದಾನೆ. ಈತನು ವೀರಶೈವಕವಿ.

## ವಚನಗಳು.

ಇವನ ವಚನಗಳಲ್ಲಿ **ಅಮುಗೇಶ್ವರಲಿಂಗ** ಎಂಬ ಅಂಕಿತವಿದೆ. ಒಂದು ವಚನವನ್ನು ತೆಗೆದು ಬರೆಯುತ್ತೇವೆ :—

ವಿಶ್ವಮಯರೂಪಾಗಿ ಬಂದೆಯಯ್ಯಾ. ಭಕ್ತಿಗೆ ಎನ್ನ ಮನಕ್ಕೆ ಸಲೆ ಸಂದ ನಿಲವು ಅಮುಗೇಶ್ವರಲಿಂಗಕ್ಕೆ ಮಾಟವಾಯಿತ್ತು ॥ 434 ॥

---

## ಕಲಿದೇವಯ್ಯ. ಸು. 1160.

ಈತನು ವಚನಗಳನ್ನು ಬರೆದಿದ್ದಾನೆ. ಇವನು ವೀರಶೈವಕವಿ.

## ವಚನಗಳು.

ಈತನ ವಚನಗಳಲ್ಲಿ **ಕಲಿದೇವರದೇವ** ಎಂಬ ಅಂಕಿತವಿದೆ. ಒಂದು ವಚನವನ್ನು ಉದಾಹರಿಸುತ್ತೇವೆ :—

ಹುಟ್ಟದ ಬೀಜವಿದ್ದಡೇನಯ್ಯಾ ಧರೆಯೊಳಗೆ; ಅಟ್ಟುಣಬಾರದ ಮಡಕೆಯಿದ್ದಡೇನಯ್ಯಾ ಮನೆಯೊಳಗೆ; ಶಿವ ನಿಮ್ಮ ಮುಟ್ಟದ ಮನವಿದ್ದಡೇನಯ್ಯಾ ತನುವಿನೊಳಗೆ. ಕೆಚ್ಚಲ ಕಚ್ಚಿಹ ಉಣ್ಣೆ ಬಲ್ಲುದೇ ಕ್ಷೀರದ ರುಚಿಯನು? ಬಚ್ಚಲೊಳಗಣ ಬಾಲಹುಳು ಬಲ್ಲುದೇ ನಿಚ್ಚಳದ ನೀರ ಸುಖವನು? ನಿಚ್ಚನಿಚ್ಚಲೋದುವ ಗಿಳಿ ಬಲ್ಲುದೇ ತನಗೆ ಬಹ ಬೆಕ್ಕಿನ ಬಾಧೆಯನು? ಹುಚ್ಚುಗೊಂಡ ನಾಯಿ ಬಲ್ಲುದೇ ಸಾಕಿದೊಡೆಯನನು? ಇದು ಕಾರಣ ಒಡಲ ಪಡೆದಡೇನು? ಮಡದಿಯರ ನೆರಹಿದಡೇನು? ಒಡವೆಯ ಗಳಿಸಿದಡೇನು? ಶಿವನೇ ನಿಮ್ಮ ನಱಿಯದ ಮನುಜನ ಒಡಲೆಂಬುದು ಹೊಲೆಜೋಗಿಯ ಕೈಯ ಒಡೆದ ಸೊರೆಯಂತೆ ಕಾಣಾ ಕಲಿದೇವರದೇವ ॥ 435 ॥

---

## ಗಜೇಶ ಮಸಣಯ್ಯ. ಸು. 1160.

ಇವನು ವಚನಗಳನ್ನು ಬರೆದಿದ್ದಾನೆ. ಈತನು ವೀರಶೈವ ಕವಿ.

### ವಚನಗಳು.

ಇವನ ವಚನಗಳ ಸಂಖ್ಯೆ 60. ಇವುಗಳಲ್ಲಿ **ಮಹಾಲಿಂಗಗಜೇಶ್ವರ** ಎಂಬ ಅಂಕಿತವಿದೆ. ಒಂದೆರಡು ವಚನಗಳನ್ನು ಉದ್ಧರಿಸಿ ಬರೆಯುತ್ತೇವೆ:—

(1) ಇಂದುವಿನಲ್ಲಿ ಉದಯವಾದ ಆಲಿಕಲ್ಲಿನಂತೆ ಮುನಿಸ ಮಱೆದಿರ್ದಳವ್ವ. ಅವನ ಸುಖದಲ್ಲಿ ಸುಖಿಯಾದಳು; ಅಗಲಿದಡೆ ಕಲಿಗೊಂಡಳು. ಮಹಾಲಿಂಗಗಜೇಶ್ವರ ದೇವರಲ್ಲಿ ಮನಸೋಂಕಿ ಮನಲೀನವಾದಳವ್ವಾ ॥ 436 ॥

(2) ಒಲಿದವರ ಕೊಲುವಡೆ ಮಸೆದ ಕೂರಲಗೇಕೆ? ಅವರನೊಲ್ಲೆನೆಂದಡೆ ಸಾಲದೆ? ಮಹಾಲಿಂಗಗಜೇಶ್ವರನ ಶರಣರನಗಲಿದಡೆ ತುಪ್ಪದಲ್ಲಿ ಕಿಚ್ಚ ನಂದಿಸಿದಂತಾದೆನವ್ವಾ ॥437॥

---

## ಸಿಮ್ಮಲಿಗೆಯ ಚೆನ್ನಯ್ಯ. ಸು. 1160.

ಈತನು ವಚನಗಳನ್ನು ಬರೆದಿದ್ದಾನೆ. ಇವನು ವೀರಶೈವ ಕವಿ.

### ವಚನಗಳು.

ಇವನ ವಚನಗಳಲ್ಲಿ **ಸಿಮ್ಮಲಿಗೆಯ ಚೆನ್ನರಾಮ** ಎಂಬ ಅಂಕಿತವಿದೆ. ಒಂದು ವಚನವನ್ನು ಉದಾಹರಿಸುತ್ತೇವೆ:—

ಬಟ್ಟೆಯಲ್ಲಿ ಹೋಗುತ್ತಿಪ್ಪ ಮನುಜನೊಬ್ಬನನು ಹುಲಿ ಕಾಡುಗಿಚ್ಚು ರಕ್ಕಸಿ ಕಾಡಾನೆಗಳು ನಾಲ್ಕು ದಿಕ್ಕಿನಲ್ಲಿ ಅಟ್ಟಿ ಬರುತ್ತಿರಲು, ಅವಂ ಕಂಡು ಭಯದಿಂದ ಹೋಗಲು ದಿಕ್ಕು ತೋಱದೆ ಹಾೞುಬಾವಿಯಂ ಕಂಡು ತಲೆಯೂಱಿ ಬೀೞುವಲ್ಲಿ ಹಾವ ಕಂಡು ಬೀೞಲಮ್ಮದೆ ಇಲಿ ಕಡಿದ ಬಳ್ಳಿಯಂ ಹಿಡಿದು ನಿಲ್ಲಲು, ಜೇನಹುೞು ಮೈನೂಱಿವಾಗ ಮೂಗಿನ ತುದಿಯಲೊಂದು ಹನಿ ಮಧುಬಿಂದು ಬೀೞಲಾಗಿ ಆ ಮಧುವಂ ಕಂಡು ಹಿರಿದಪ್ಪ ದುಃಖವನೆಲ್ಲವ ಸೈರಿಸಿ ನಾಲಗೆಯಲ್ಲಿ ಆ ಮಧುವ ಸೇವಿಸುವನಂತೆ ಈ ಸಂಸಾರ ಸುಖವ ವಿಚಾರಿಸಿ ನೋಡಿದಡೆ ದುಃಖದಾಗರವು. ಇದನಱಿದು ಸಕಲವಿಷಯಂಗಳಲ್ಲಿಯು ಸುಖವಿಂತುಟೆಂದು ನಿರ್ವಿಷಯಿಯಾಗಿ ನಿಂದ ನಿಲವು ನೀನೆ ಸಿಮ್ಮಲಿಗೆಯ ಚೆನ್ನರಾಮ ॥ 438 ॥

---

## ಮನುಮುನಿಗುಮ್ಮಟದೇವ. ಸು. 1160.

ಈತನು ವಚನಗಳನ್ನು ಬರೆದಿದ್ದಾನೆ. ನಮಗೆ ದೊರೆತ ಇವನ ವಚನಗಳ ಪ್ರತಿಯ ಆದಿಭಾಗದಲ್ಲಿ ಈತನ ವಿಷಯವಾಗಿ ಹೀಗೆ ಬರೆದಿದೆ:—

ಬಿಜ್ಜಳಂಗೆ ಹದಿನೆಂಟು ದೋಷಗಳಂ ತೀರ್ಚಿ ಎಂಬತ್ತುನಾಲ್ಕು ಲಕ್ಷ ಜೀವರಾಶಿಗಳ ಸರ್ವ ಆತ್ಮಭೂತಹಿತನಾಗಿ ಇರೆಂದು ಆತಂಗೆ ಉಪದೇಶಗುರುವಾದ ಮೀಮಾಂಸಕ ಅಮೀಮಾಂಸಕಂಗೆ ಸಕಲವ್ರತನೇಮ ನಿತ್ಯವರ್ತಮಾನಕೃತ್ಯ ಜೀವನೇಮಗುಣನಾಮವಂ ಬೋಧಿಸಿದ ಬೌದ್ಧ ಅವತಾರಕ್ಕೆ ಮುಖ್ಯ ಆಚಾರ್ಯನಾದ ತನ್ನ ಸಮಯಕ್ಕೆ ಸಿಂಧುಚಂದ್ರಮನಾದ ಮನುಮುನಿ ಗುಮ್ಮಟದೇವರು.

ಇದರಿಂದ ಇವನು ಬಿಜ್ಜಳನ ಸಮಕಾಲದವನೆಂದೂ ಅವನ ಗುರುವಾಗಿದ್ದನೆಂದೂ ತಿಳಿಯುತ್ತದೆ. ಇವನನ್ನು ಜೈನನೆಂಬುದಕ್ಕೆ ಬದಲಾಗಿ ಬೌದ್ಧನೆಂದು ಹೇಳಿರುವುದು ತಪ್ಪಾಗಿರಬಹುದು. ವೀರಶೈವವಚನಕಾರರ ಗೋಷ್ಠಿಯಲ್ಲಿ ಈತನನ್ನೂ ಸೇರಿಸಿರುವುದನ್ನು ನೋಡಿದರೆ ಇವನು ಜೈನನಾಗಿದ್ದು ಆಮೇಲೆ ವೀರಶೈವನಾಗಿರಬಹುದೋ ಎಂಬ ಸಂದೇಹವುಂಟಾಗುತ್ತದೆ.

### ವಚನಗಳು.

ಇವನ ವಚನಗಳ ಸಂಖ್ಯೆ 100. ಇವುಗಳಲ್ಲಿ **ಗುಮ್ಮಟನಾಥನೊಡೆಯ ಅಗಮ್ಮೇಶ್ವರಲಿಂಗ** ಎಂಬ ಅಂಕಿತವಿದೆ. ಒಂದೆರಡು ವಚನಗಳನ್ನು ತೆಗೆದು ಬರೆಯುತ್ತೇವೆ:—

(1) ತತ್ತ್ವಮಸಿ ಎಂಬ ತ್ರಿವಿಧಭೇದಂಗಳಲ್ಲಿ ತ್ರಿವಿಧಮಯನಾಗಿ, ತ್ರಿಗುಣಾತ್ಮಕನಾಗಿ, ತ್ರಿಶಕ್ತಿಪತಿಯಾಗಿ ಗತಿಯ ತೋಱಿಹೆನೆಂದು ಪ್ರತಿರೂಪಾದೆ. ಎಳ್ಳಿನೊಳಗಣ ಎಣ್ಣೆ, ಕಲ್ಲಿನೊಳಗಣ ಬೆಂಕಿ, ಬೆಲ್ಲದೊಳಗಣ ಮಧುರ ಅಲ್ಲಿಯೇ ಅಡಗಿ ಮಥನದಿಂದಲ್ಲದೆ ತೋಱದವೋಲ್ ಅಲ್ಲಿಯೇ ಅಡಗಿದೆ ಗುಡಿಯೊಳಗೆ ಗುಮ್ಮಟನಾಥನೊಡೆಯ ಅಗಮ್ಮೇಶ್ವರಲಿಂಗ ॥ 439 ॥

(2) ಕಣ್ಣಿನಲ್ಲಿ ನೋಡುವರೆ ತೊಗಲಿನವನಲ್ಲ; ಕೈಯಲ್ಲಿ ಹಿಡಿವರೆ ಮೈಯವನಲ್ಲ; ಭಾವದಲ್ಲಿ ನೋಡುವರೆ ಬಯಲಸ್ವರೂಪ: ನಿನ್ನೊದಗ ಏತಱಿಂದಱಿವೆ? ಎನ್ನ ಭ್ರಾಂತಿನ ಬಲೆಗೆ ಸಿಕ್ಕಿಸಿ ಹೋದೆ ಗುಡಿಯ ಗುಮ್ಮಟನಾಥನೊಡೆಯ ಅಗಮ್ಮೇಶ್ವರಲಿಂಗ ॥ 440 ॥

**ಹಡಪದ ಅಪ್ಪಣ್ಣ, ಬಿಜ್ಜಳದೇವಿ, ಕಾಳವ್ವೆ, ಚಾಚಿಕಾಯಕದ ಬಸವಪ್ಪ ಇವರುಗಳು ವಚನಗಳನ್ನು ಬರೆದಿರುವಂತೆ ತಿಳಿಯಬರುತ್ತದೆ.**

**ಕೊಂಡಗೂಳಿ ಕೇಶಿರಾಜ,**[1] **ಮುರುಳುದೇವ** ಇವರುಗಳೂ ವಚನಗಳನ್ನು ಬರೆದಿದ್ದಾರೆ. ಈ ವೀರಶೈವ ಕವಿಗಳ ವಚನಗಳು ಅವರವರ ನಾಮನಿರ್ದೇಶ ದೊಡನೆ ನಮಗೆ ದೊರೆತಿಲ್ಲ. ಇವರು ಉಪಯೋಗಿಸಿರುವ ಅಂಕಿತಗಳು ಇಂಥವು ಎಂದು ತಿಳಿದರೆ ನಮಗೆ ದೊರೆತಿರುವ ವಚನರಾಶಿಯಲ್ಲಿ ಆ ಅಂಕಿತವುಳ್ಳವು ಗಳನ್ನು ಆರಿಸಿ ಇಂಥಿಂಥವರವು ಎಂದು ಹೇಳಬಹುದು. ಪ್ರಕೃತದಲ್ಲಿ ಇದಕ್ಕೆ ಅವಕಾಶವಿಲ್ಲದಿರುವುದಕ್ಕಾಗಿ ವಿಷಾದಿಸಬೇಕಾಗಿದೆ.

ಈ ಕವಿಗಳ ವಿಷಯವಾಗಿ ವೀರಶೈವ ಗ್ರಂಥಗಳಿಂದ ತಿಳಿದುಬರುವ ಅಂಶ ಗಳನ್ನು ಸಂಗ್ರಹವಾಗಿ ಬರೆಯುತ್ತೇವೆ :—

## ಹಡಪದ ಅಪ್ಪಣ್ಣ. ಸು. 1160.

ಈತನು ಒಂದು ಕಾಲಜ್ಞಾನವನ್ನೂ ಬರೆದಿರುವಂತೆ ತಿಳಿಯುತ್ತದೆ. ಬಸವನು ಸಂಗಮೇಶ್ವರನಲ್ಲಿ ಐಕ್ಯವಾದುದನ್ನು ಕಂಡು ಇವನೂ ತನ್ನ ಇಷ್ಟ ಲಿಂಗದಲ್ಲಿ ಐಕ್ಯವಾದನು.

## ಬಿಜ್ಜಳದೇವಿ. ಸು. 1160.

ತಾಯಿಲ್ಲದ ತಬ್ಬಲಿಯಾದುದರಿಂದ ಶಿವನಿಗೆ ತಲೆಯೆಲ್ಲಾ ಜಡೆಗಟ್ಟಿ ಕೊಂಡು ಮೈಯೆಲ್ಲಾ ಬೂದಿಯಾಗಿದೆಯೆಂದು ಈಕೆ ಹಲುಬಿ, ಆತನಿಗೆ ನಾನಾ ದರೂ ತಾಯಾಗಿ ಸಲಹುವೆನು ಎಂದು ನಿಜಲಿಂಗವನ್ನು ನೋಡಲು ಅದು ಶಿಶು ರೂಪವನ್ನು ತಾಳಿತು. ಅದನ್ನು ಪ್ರೀತಿಯಿಂದ ಸಲಹಿ ಅದರ ಬಾಲಲೀಲೆಯನ್ನು ನೋಡಿ ಆನಂದಿಸಿದಳು.

## ಕಾಳವ್ವೆ. ಸು. 1160.

ಈಕೆ ಕಗ್ಗಲ್ಲಿನಿಂದ ಹಾಲನ್ನು ಕರೆದು ಈಶ್ವರನಿಗೆ ಉಣಿಸಿದಳು.

---

## ಮೈದುನರಾಮಯ್ಯ. ಸು. 1160.

ಇವನು ಕನ್ನಡದಲ್ಲಿ ಗೀತಿಗಳನ್ನು ಹಾಡಿದಂತೆ ತಿಳಿಯಬರುತ್ತದೆ.

ಈತನು ವೀರಶೈವಕವಿ; ಇವನ ತಂದೆ ಸೋಮನಾಥ, ತಾಯಿ ಮಹಾದೇವಿ, ಸ್ಥಳ ಆಂಧ್ರದೇಶದ ಭೀಮಾವತೀಪುರ. ದೀಪಾವಳಿಗೆ ಹುಡುಗರೆಲ್ಲಾ ಅಕ್ಕಬಾವಂದಿ

---

1. ಪುಟ 185.

ರನ್ನು ಕರೆದುತರಲು, ಇವನು ತನ್ನ ಅಕ್ಕಬಾವಂದಿರನ್ನು ತಾನೂ ಕರೆದುತರ ಬೇಕೆಂದು ತಂದೆತಾಯಿಗಳನ್ನು ಕಾಡಿದನು. ಅವರು—ನಿನಗೆ ಪಾರ್ವತಿಯೇ ಅಕ್ಕನು, ಈಶ್ವರನೇ ಬಾವನು—ಎಂದು ಹೇಳಿದಾಗ, ಶ್ರೀಶೈಲಕ್ಕೆ ಹೋಗಿ ಪಾರ್ವತಿಯನ್ನೂ ಈಶ್ವರನನ್ನೂ ಕರೆದುಕೊಂಡು ಬಂದನು—ಎಂದು ಇತಿಹಾಸ ಐದೆ.

ಇವನ ವಿಷಯವಾಗಿ ಮೈದುನರಾಮಯ್ಯನ ರಗಳೆ ಮೊದಲಾದ ಗ್ರಂಥ ಗಳು ಹುಟ್ಟಿವೆ.

---

## ನೀಲಮ್ಮ. ಸು. 1160.

ಈಕೆ ಪ್ರಸಾದಸಂಪಾದನೆಯನ್ನೂ ಒಂದು ಕಾಲಜ್ಞಾನವನ್ನೂ ಬರೆದಿರು ವಂತೆ ತಿಳಿಯಬರುತ್ತದೆ.

ಇವಳು ವೀರಶೈವಕವಿ; ಬಸವನ ಸೋದರದ ಮಾವನಾದ ಬಲದೇವ ಮಂತ್ರಿಯ ತಮ್ಮನಾದ ಸಿದ್ಧಣ್ಣಮಂತ್ರಿಯ ಮಗಳು. ಈಕೆಗೆ ಬಸವನು ಸಂಗಮೇಶ್ವರನ ಕೈಯಲ್ಲಿ ದೀಕ್ಷೆಕೊಡಿಸಿ ಈಕೆಯನ್ನು ಮದುವೆಯಾದನು.

ನೀಲಮ್ಮನ ಸ್ತೋತ್ರ, ನೀಲಾಂಬಿಕಾಪಂಚವಿಂಶತಿ, ನೀಲಮ್ಮನ ತ್ರಿವಿಧಿ ಮೊದಲಾದ ಗ್ರಂಥಗಳು ಇವಳ ಸ್ತುತಿರೂಪವಾಗಿವೆ.

---

## ಕವಿರಾಮ. ಸು. 1160.

**ಸಿಂಗಿರಾಜನು** (ಸು. 1500) ತನ್ನ ಮಲಬಸವರಾಜ ಚಾರಿತ್ರದಲ್ಲಿ **ರಸಕವಿರಾಮ** ಎಂಬವನನ್ನು ಬಿಜ್ಜಳನ ಆಸ್ಥಾನದಲ್ಲಿದ್ದ ಕೊಂಡೆಯರ ಗುಂಪಿ ನಲ್ಲಿ ಸೇರಿಸಿ ಹೇಳಿದ್ದಾನೆ. ಇವನು ಬ್ರಾಹ್ಮಣಕವಿಯೆಂದು ತೋರುತ್ತದೆ; ಆವ ಗ್ರಂಥವನ್ನು ರಚಿಸಿದ್ದಾನೆಯೋ ತಿಳಿಯದು.

---

## ನಿಂಬಾಣದ ಗಣೇಶ್ವರ. ಸು. 1160.

ಇವನು ಶಿವನ ಸಗುಣಲೀಲೆ, ನಿರ್ಗುಣಾನಂದಲೀಲೆ, ಭಕ್ತ್ಯಾನಂದಲೀಲೆ ಇವುಗಳನ್ನು ರಚಿಸಿರುವಂತೆ ತಿಳಿಯಬರುತ್ತದೆ.[1] ಈತನು ವೀರಶೈವಕವಿ.

---

1. ಭೈರವೇಶ್ವರಕಾವ್ಯದ ಕಥಾಸೂತ್ರರತ್ನಾಕರ.

## ಶಿವಯೋಗಿದೇವ. ಸು. 1160.

ಈತನು ಸಿರಸಿಗೆಯೆಂಬ ಪುರದಲ್ಲಿ ಹೊಸ ಹೊಸದಾಗಿ ಕಂದ ವೃತ್ತ ರಗಳೆ ತ್ರಿಪದಿ ದಂಡಕ ವಚನ ಅಷ್ಟಕ ವೊದಲಾದುವನ್ನು ರಚಿಸಿ ಶಿವನನ್ನು ಸ್ತುತಿಸುತ್ತಿದ್ದನೆಂದು ತಿಳಿಯುತ್ತದೆ.[1] **ರಾಘವಾಂಕನು** (ಸು. 1165) ತನ್ನ **ಹರಿಶ್ಚಂದ್ರಕಾವ್ಯ**ದಲ್ಲಿ ಶಿವನೆಂಬ ಒಬ್ಬ ಕವಿಯನ್ನು ಸ್ತುತಿಸಿದ್ದಾನೆ. ಈತನೇ ಆಗಿರಬಹುದೋ ಏನೋ ತಿಳಿಯದು. ಇವನು ವೀರಶೈವ ಕವಿ; ಈತನ ಗ್ರಂಥಗಳಾವುವೂ ದೊರೆತಿಲ್ಲ.

---

## ಶೀಲವಂತಯ್ಯ. ಸು. 1160.

ಈತನು ಆತ್ಮಲಿಂಗಪ್ರಣವಸಂಯೋಗಸ್ಥಲದ ತ್ರಿವಿಧಿಯನ್ನು ಬರೆದಿದ್ದಾನೆ. ಇವನು ವೀರಶೈವಕವಿ; ಜಟ್ಟಿಕಾಯಕದವನು. ಈತನು ವೊರದರಕ್ಕೆ ಪವಾಡವನ್ನು ಮಾಡಿ ಜಯಚಂದ್ರರಾಜನನ್ನು ಮೆಚ್ಚಿಸಿ ಕಾಶೀಕ್ಷೇತ್ರದಲ್ಲಿ ಮಠವನ್ನು ಕಟ್ಟಿ ಮಲ್ಲಿಕಾರ್ಜುನನೆಂಬವನಿಗೆ ಪಟ್ಟ ಕಟ್ಟಿ ಆ ಮಠದ ಕಂಬದಲ್ಲಿದ್ದು ಅದೃಶ್ಯನಾದನು ಎಂದು ಕೆಳದಿನೃಪವಿಜಯದಲ್ಲಿ ಹೇಳಿದೆ.

ಇವನ ಗ್ರಂಥ

### ಆತ್ಮಲಿಂಗಪ್ರಣವಸಂಯೋಗಸ್ಥಲದ ತ್ರಿವಿಧಿ.

ಇದಕ್ಕೆ **ಶೀಲವಂತಯ್ಯನ ತ್ರಿವಿಧಿ** ಎಂದು ಸಾಧಾರಣವಾದ ಹೆಸರು; **ಗುರುಸ್ತೋತ್ರ** ಎಂಬ ಹೆಸರೂ ಉಂಟು. ಇದರಲ್ಲಿ 111 ಪದ್ಯಗಳಿವೆ; ಪದ್ಯಗಳು ಪ್ರಾಯಿಕವಾಗಿ 'ಗುರುಲಿಂಗ' ಎಂದು ಮುಗಿಯುತ್ತವೆ ಇದಕ್ಕೆ ಎರಡು ಕನ್ನಡ ವ್ಯಾಖ್ಯಾನಗಳಿವೆ. ಗ್ರಂಥಾದಿಯಲ್ಲಿ ಯತಿವರಮುರುಳಾರ್ಯ್ಯನ ಸ್ತುತಿ ಇದೆ.

ಈ ಗ್ರಂಥದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ:—

ಗುರುವೆ ಇಹಪರಸುಖದ ವರವೆ ಅಂತಸ್ತಿಮಿರ। ಹರವೆ ಸುಜ್ಞಾನದಿರವೆ।
ಕಾರುಣ್ಯಸಾ। ಗರವೆ ಮುರುಳೇಶ ಶರಣಾಗು ॥ 441 ॥

ಸುರಚಾಪ ನಭದಲ್ಲಿ ಮರುತನೊಳ್ ಸುಟ್ಟಿ ಶಿಖಿಯೊ। ಳುರಿ ವಾರಿಯಲ್ಲಿ ಕರಕ।
ಧರೆಯೊಳು ಪಾಂಸು। ಬೆರೆದಂತೆ ಗುರುವಿನೊಳೇಕ ॥ 442 ॥

ಬಿಂದುರೂಪವೆ ಪೀಠ ಮುಂದೆ ನಾದವೆ ವೃತ್ತ। ಸಂದಗೋಮುಖವೆ ಕಳೆ ತ್ರಿವಿಧ।
ಹೃದಯದೊಳು। ನಿಂದ ಚಿನ್ಮಯನೆ ಗುರುಲಿಂಗ ॥ 443 ॥

---

1. ಭೈರವೇಶ್ವರಕಾವ್ಯದ ಕಥಾಸೂತ್ರರತ್ನಾಕರ.

## ಮರುಳುದೇವ. ಸು. 1160.

ಈತನು ಮರುಳುದೇವರ ಕಂದ, ಮರುಳುದೇವರ ವಚನ[1] ಎಂಬ ಗ್ರಂಥಗಳನ್ನು ಬರೆದಿದ್ದಾನೆ. ಇವನಿಗೆ ಮರುಳುಶಂಕರದೇವ, ಉಜ್ಜನಿಯ ಮರುಳುದೇವ ಎಂಬ ಹೆಸರುಗಳೂ ಉಂಟು. ಈತನು ವೀರಶೈವಕವಿ; ಕಾಳಿಂಗದೇಶದಿಂದ ಬಂದು ಕಲ್ಯಾಣದಲ್ಲಿ ಹನ್ನೆರಡು ವರ್ಷ ವಾಸಮಾಡಿದಂತೆ ತಿಳಿಯುಬರುತ್ತದೆ.

ಇವನ ಗ್ರಂಥಗಳಲ್ಲಿ

### ಮರುಳುದೇವರ ಕಂದ.

ಇದಕ್ಕೆ "ಮರುಳುದೇವರು ನಿರೂಪಿಸಿದ ಪ್ರಭುದೇವರಕಂದ" ಎಂಬ ಹೆಸರೂ ಉಂಟು. ಇದರಲ್ಲಿ 135 ಪದ್ಯಗಳಿವೆ.

ಪದ್ಯಗಳು ಪ್ರಾಯಶಃ 'ಪರಮಪ್ರಭುವೇ' ಎಂದು ಮುಗಿಯುತ್ತವೆ. ಗ್ರಂಥವು ಶಿವಸ್ತುತಿರೂಪವಾಗಿದೆ. ಇದು "ಲಿಂಗಾಂಗದ ಸಂಗದ ಸದಮಳ ಸದ್ಭಾವಪೂಜೆ" ಎಂದು ಕವಿ ಹೇಳುತ್ತಾನೆ. ಇದರಿಂದ ಕೆಲವು ಪದ್ಯಗಳನ್ನು ಎತ್ತಿ ಬರೆಯುತ್ತೇವೆ :—

ಹೊರೆಯೊಳ್ಜುತೆ ತನು ಪುಳಕಾಂ | ಕುರದೋಳ್ಜುತೆ ಕರಣತತಿಗಳುರವಣಿಸುತ್ತುಂ |
ಸೆರೆ ಬಿಗಿಯುತುಮಶ್ರುಜಲಂ | ಸುರಿಯುತುಮಿಹ ಸೊಗದ ಸೊಗಸದೆಂದಾದಪುದೋ || 444 ||

ಕಂಟಕವ ಕಳೆದೆನೆಲೆ ಶಿವ | ದಾಂಟಿದೆ ಸಂಸಾರಶರಧಿಯುಂ ಕರದೊಳ್ ನೀ |
ನಂಟಿ ನೆಲೆಗೊಂಡಕಾರಣ | ಮಿಾಂಟಿದೆನಾನಂದಸುಧೆಯ ಪರಮಪ್ರಭುವೇ || 445 ||

ಪರದೈವಕೆ ಪರವನಿತೆಗೆ | ಪರಹಿಂಸೆಗೆ ಪರಧನಕ್ಕೆ ಪರನಿಂದೆಗೆ ನಾಂ |
ಪರರ ತುತಿಗೈವ ದೈನ್ಯ | ಕ್ಕುರವಣಿಸದ ತೆಱನ ಮಾಡು ಪರಮಪ್ರಭುವೇ || 446 ||

ಬಾರೆನ್ನ ಕುಲವೆ ಚಲವೇ | ಬಾರೆನ್ನಯ ಸುಕೃತದೊಲವೆ ನಿತ್ಯದ ಬಲವೇ |
ಬಾರೆನ್ನ ಬಗೆಯ ನಲವೇ | ಬಾರೆನ್ನಯ ನಿಜದ ನಿಲವೆ ಪರಮಪ್ರಭುವೇ || 447 ||

ಎಲೆ ದೇವ ನಿನ್ನ ಕರುಣಾ | ನಿಲನಟ್ಟುಳಿಗಂಜಿ ತೊಲಗಿತಘಘನನಿಚಯಂ |
ಸಿಲುಕಿತ್ತು ಮನಂ ನಿಮ್ಮೊಳ್ | ಸಲುಗೆಯ ಮಗನಾದೆನಯ್ಯ ಪರಮಪ್ರಭುವೇ || 448 ||

---

1. ಪುಟ 197.

## ಇತರ ವಚನಕಾರರು.

ಬಸವನಿಂದ ಈಚೆಗೆ ಇದುವರೆಗೂ ಹೇಳಿದ ಕವಿಗಳು ಸ್ವಲ್ಪ ಹೆಚ್ಚು ಕಡಮೆ ಬಸವನ ಸಮಕಾಲದವರೆಂದು ತಿಳಿಯಬರುತ್ತದೆ. ಇವರಲ್ಲಿ ಹಲವರು ವಚನಗಳನ್ನು ಬರೆದಿರುವುದು ವಾಚಕರಿಗೆ ವೇದ್ಯವಾಗಿಯೇ ಇದೆ. ಇನ್ನೂ ಕೆಲವರು ವಚನಕಾರರು ಇದ್ದಾರೆ. ಇವರಲ್ಲಿ ಸ್ವಲ್ಪ ಜನ ಬಸವನ ಕಾಲಕ್ಕೆ ಹಿಂದಣವರೆಂದೂ ಉಳಿದವರು ಬಹಳಮಟ್ಟಿಗೆ ಅವನ ಸಮಕಾಲಿಕರೆಂದೂ ತಿಳಿಯುತ್ತದೆ. ಇವರೆಲ್ಲರೂ ವೀರಶೈವರು. ಇವರ ವಿಷಯವಾಗಿ ವೀರಶೈವ ಗ್ರಂಥಗಳಿಂದ ತಿಳಿದುಬರುವ ಅಂಶಗಳನ್ನು ಸಂಗ್ರಹಿಸಿ ಬರೆದು ಅವರವರ ವಚನಗಳನ್ನು ಉದಾಹರಿಸುತ್ತೇವೆ.

---

## ಜೇಡರ ದಾಸಿಮಯ್ಯ. ಸು. 1040.

ಇವನು ಜೈನರನ್ನು ಜಯಿಸಿ ತನ್ನ ಶಿಷ್ಯೆಯಾದ ಸುಗ್ಗಲದೇವಿಯ ಗಂಡ ಜಯಸಿಂಹರಾಜನನ್ನು (ದೇಸಿಂಗರಾಯ) ವೀರಶೈವನನ್ನಾಗಿ ಮಾಡಿದಂತೆ ತಿಳಿಯುತ್ತದೆ[1]. **ಬ್ರಹ್ಮಶಿವನು** (ಸು. 1125) ಈ ಕವಿಯ ಹೆಸರನ್ನು ಹೇಳುವುದರಿಂದ ಇವನು ಅವನ ಕಾಲಕ್ಕೆ ಹಿಂದೆ ಇದ್ದಿರಬೇಕು. ಆದುದರಿಂದ ಈರಾಜನು 1018 ರಿಂದ 1042 ರ ವರೆಗೆ ಆಳಿದ ಚಾಳುಕ್ಯರಾಜನಾದ 1 ನೆಯ ಜಯಸಿಂಹನಾಗಿರಬೇಕು.

### ವಚನಗಳು.

ಇವನ ವಚನಗಳ ಸಂಖ್ಯೆ 106. ಇವುಗಳಲ್ಲಿ **ರಾಮನಾಥ** ಎಂಬ ಅಂಕಿತವಿದೆ. ಕೆಲವು ವಚನಗಳನ್ನು ತೆಗೆದು ಬರೆಯುತ್ತೇವೆ:—

(1) ಕಡೆಗೀಲಿಲ್ಲದ ಬಂಡಿ ಹೊಡಗೆಡೆವುದಂ ಮಾಣ್ಬುದೆ? ಕಡೆಗೀಲು ಬಂಡಿಗಾಧಾರ. ಕಡುದರ್ಪವೇಱಿದ ಒಡಲೆಂಬ ಬಂಡಿಗೆ ಮೃಡಶರಣರ ನುಡಿಗಡಣವೇ ಕಡೆಗೀಲು ಕಾಣಾ ರಾಮನಾಥ ॥ 449 ॥

(2) ಅಡಗ ತಿಂಬರು ಕಣಕದಡಿಗೆಯಿರಲ್ಕೆ; ಸುರೆಯ ಕುಡಿವರು ಹಾಲಿರಲ್ಕೆ; ಮುಕ್ಕುವರು ಬಂಗಿಯ ಸಕ್ಕರೆಯಿರಲ್ಕೆ; ಸ್ವಸ್ತ್ರೀಯಿದ್ದಂತೆ ಪರಸ್ತ್ರೀಯರಿಗೆ ಅಳುವುವರು; ಸತ್ತ ನಾಯ ಭಕ್ಷಿಸುವ ಹಡಿಕಿಗರನೇನೆಂಬೆನಯ್ಯಾ ರಾಮನಾಥ ॥ 450 ॥

(3) ಮರದೊಳಗೆ ಮಂದಾಗ್ನಿಯನುರಿಯದಂತಿರಿಸಿದೆ; ನೊರೆವಾಲೊಳಗೆ ತುಪ್ಪವ ಕಂಪಿಲ್ಲದಂತಿರಿಸಿದೆ; ಶರೀರದೊಳಗಾತ್ಮನನಾರುಂ ಕಾಣದಂತಿರಿಸಿದೆ; ನೀ ಬೆರಸಿಹ ಭೇದಕ್ಕೆ ಬೆಱಗಾದೆನಯ್ಯ ರಾಮನಾಥ ॥ 451 ॥

---

1. ಬಸವಪುರಾಣ, ಸಂಧಿ 51; ವೃಷಭೇಂದ್ರವಿಜಯ, ಆಶ್ವಾಸ 35.

(4) ಹರ ತನ್ನ ಭಕ್ತರ ತಿರಿವಂತೆ ಮಾಡುವ; ಒರೆದು ನೋಡುವ ಸುವರ್ಣದ ಚಿನ್ನದಂತೆ; ಅರೆದು ನೋಡುವ ಚಂದನದಂತೆ; ಅರಿದು ನೋಡುವ ಕಬ್ಬಿನ ಕೋಲಿನಂತೆ, ಬಿದಜದೆ ಬೆಚ್ಚದೆ ಇದ್ದಡೆ ಕರವಿಡಿದೆತ್ತಿಕೊಂಬ ನಮ್ಮ ರಾಮನಾಥನು ॥ 452 ॥

---

## ಮೆರೆಮಿಂಡಯ್ಯ. ಸು. 1100.

ನಂಬಿಯಣ್ಣನ (ಸುಮಾರು 8 ನೆಯ ಶತಮಾನ) ಸಮಕಾಲಿಕನಾದ ಮೆರೆಮಿಂಡನಾರ್ ಎಂಬ ಒಬ್ಬ ದ್ರಾವಿಡದೇಶದ ಶಿವಭಕ್ತನ ಚರಿತೆ ಬಸವಪುರಾಣದ 26 ನೆಯ ಸಂಧಿಯಲ್ಲಿಯೂ ವೃಷಭೇಂದ್ರವಿಜಯದ 16 ನೆಯ ಆಶ್ವಾಸದಲ್ಲಿಯೂ ಹೇಳಿದೆ. ಕನ್ನಡ ವಚನಗಳನ್ನು ಬರೆದಿರುವ ಮೆರೆಮಿಂಡಯ್ಯನು ಈತನಲ್ಲವೆಂದು ತೋರುತ್ತದೆ. ಅವನು ಈ ಹೆಸರನ್ನು ಧರಿಸಿದ ಕನ್ನಡ ದೇಶದ ಕವಿಯಾಗಿರಬಹುದೆಂದೂ ಸುಮಾರು 1100 ರಲ್ಲಿ ಇದ್ದಿರಬಹುದೆಂದೂ ಅಭಿಪ್ರಾಯಪಡುತ್ತೇವೆ.

### ವಚನಗಳು.

ಈತನ ವಚನಗಳ ಸಂಖ್ಯೆ 101. ಇವುಗಳಲ್ಲಿ **ವಿಘಟದೂರ ರಾಮೇಶ್ವರ ಲಿಂಗ** ಎಂಬ ಅಂಕಿತವಿದೆ. ಒಂದೆರಡು ವಚನಗಳನ್ನು ಉದಾಹರಿಸುತ್ತೇವೆ:—

(1) ಸ್ವಪ್ನದ ಭಾಷೆ, ಮರ್ತ್ಯರ ಮಾಟದ ಭಕ್ತಿ, ಚಿತ್ತವನಱಯದೆ ಕಾಡುವನ ಯುಕ್ತಿ, ವ್ಯಾಪ್ತಿನ ಬೊಂಬೆ ಅಪ್ಪುವಿನ ಮಂದಿರಕ್ಕೆ ಹೋದಂತಾಯಿತ್ತು. ವಿಘಟದೂರ ರಾಮೇಶ್ವರ ಲಿಂಗವನಱ ॥ 453 ॥

(2) ತನ್ನವರನ್ಯರಹರು ಹೆಣ್ಣು ಹೊನ್ನು ಮಣ್ಣು ಹಿಡಿದು ಹೋರಲಾಗಿ; ಆಮೂಱ ಬಿಟ್ಟಡೆ ಅನ್ಯರು ತನ್ನವರಹರು. ಅಱದವಂಗು ಸರಿ, ಜಗದ ಒಡಲಾದವಂಗು ಸರಿ; ಆಸೆಯೊಂದೇ ಭೇದ: ಉಭಯಕ್ಕೆ ಹೊಱಗಾಗು ವಿಘಟದೂರ ರಾಮೇಶ್ವರ ಲಿಂಗವನಱವುದಕ್ಕೆ ॥ 454 ॥

---

## ಬಿಬ್ಬಬಾಚಯ್ಯ. ಸು. 1150.

ಇವನ ಸ್ಥಳ ಗೊಬ್ಬೂರು. ಇವನು ಶಿವಭಕ್ತರ ಪ್ರಸಾದವನ್ನು ಎಂಜಲೆಂದು ದೂಷಿಸಿದ ವಿಪ್ರರಿಗೆ ಪ್ರಸಾದಮಹಿಮೆಯನ್ನು ತೋರಿಸಿದನು.[1]

---

1. ಬ. ಪು. ಸಂ 56.

### ವಚನಗಳು.

ಇವನ ವಚನಗಳ ಸಂಖ್ಯೆ 100. ಇವುಗಳಲ್ಲಿ **ಏಣಾಂಕಧರ ಸೋಮೇಶ್ವರಲಿಂಗ** ಎಂಬ ಅಂಕಿತವಿದೆ. ಒಂದೆರಡು ವಚನಗಳನ್ನು ತೆಗೆದು ಬರೆಯುತ್ತೇವೆ :—

(1) ಹುಳಿ ಬೆಳೆದು ಸಿಹಿಯಹ ತೆಱನುಂಟು ; ಸಿಹಿ ಬಲಿದು ಹುಳಿಯಹ ತೆಱನುಂಟು : ಇಂತೀ ಉಭಯಸ್ಥಲಭೇದ ತದ್ಭಾವವಲ್ಲದೆ ಅನ್ಯವಲ್ಲ ಏಣಾಂಕಧರ ಸೋಮೇಶ್ವರ ಲಿಂಗಕ್ಕೆ ॥ 455 ॥

(2) ಎಲೆಯಿಲ್ಲದ ವೃಕ್ಷದಲ್ಲಿ ಹೂವಿಲ್ಲದ ಕಾಯಾಯಿತ್ತು ; ಕಾಯಿ ಉದುರಿ ಹಣ್ಣು ಬಲಿಯಿತ್ತು ; ಕಣ್ಣಿಗೆ ಹಣ್ಣಲ್ಲದೆ ಮೆಲುವುದಕಲ್ಲ. ಏಣಾಂಕಧರ ಸೋಮೇಶ್ವರ ಲಿಂಗಕ್ಕೆ ಅರ್ಪಿತವಾಯಿತ್ತು ॥ 456 ॥

---

## ಏಲೇಶ್ವರದ ಕೇತಯ್ಯ. ಸು. 1150.

**ಈತನು** ಭವಿಸಂಪರ್ಕವೇ ಇಲ್ಲದೆ ಇರಲು ದ್ವೇಷಿಗಳು ಇವನ ಕಣಜಕ್ಕೆ ಬೆಂಕಿಯನ್ನು ಹಾಕಿ ಉರಿಸಿಬಿಟ್ಟಾಗ ಬೆಂದ ಬೀಜವನ್ನು ಬಿತ್ತಿ ಬೆಳೆದನು.[1]

### ವಚನಗಳು.

ಇವನ ವಚನಗಳ ಸಂಖ್ಯೆ 200. ಇವುಗಳಲ್ಲಿ **ರಾಮೇಶ್ವರ ಲಿಂಗ** ಅಥವಾ **ಏಲೇಶ್ವರ ಲಿಂಗ** ಎಂಬ ಅಂಕಿತವಿದೆ. ಒಂದೆರಡು ವಚನಗಳನ್ನು ಉದ್ಧರಿಸಿ ಬರೆಯುತ್ತೇವೆ :—

(1) ಭಕ್ತಂಗೆ ಬಯಕೆಯುಂಟೆ? ನಿತ್ಯಂಗೆ ಸಾವುಂಟೆ? ಸದ್ಭಕ್ತಂಗೆ ಮಿಥ್ಯತಥ್ಯವುಂಟೆ? ಕೃತ್ಯಭೃತ್ಯನಾದ ಠಾವಿನಲ್ಲಿ ಪ್ರತ್ಯುತ್ತರಂಗೆಯ್ದಡೆ ಸತ್ಯ ಸದಾಚಾರಕ್ಕೆ ಹೊಱಗು. ಆಚಾರವೇ ಪ್ರಾಣವಾದ ರಾಮೇಶ್ವರಲಿಂಗದ ಆಣೆ ॥ 457 ॥

(2) ದಾಯಗಾಱನ ಶೀಲ, ತ್ರಿವಿಧದಾಳಕನ ಭಕ್ತಿ, ಶಬರನ ದಯೆ, ಚೋರನ ಲಲ್ಲೆ, ಕಳ್ಳೆಯ ಬಲ್ಲತನ, ಇವೆಲ್ಲವು ಕಲ್ಲಿಯ ಮಣಿಯದಂತೆ ಅಲ್ಲಿಗಲ್ಲಿಗೆ ದಾಯ. ಇಂತೀ ಕಳ್ಳರ ವ್ರತನೇಮ ಸುಱಿದಲ್ಲಿಯೇ ಕಾಣಬಂದಿತ್ತು ಏಲೇಶ್ವರ ಲಿಂಗಕ್ಕೆ ॥ 458 ॥

---

## ಆದಯ್ಯ. ಸು. 1150.

**ರಾಘವಾಂಕನ** (ಸು. 1165) **ಸೋಮನಾಥ ಚರಿತೆಯಿಂದ ಈತನು ಸೌರಾಷ್ಟ್ರದಲ್ಲಿ ಜನಿಸಿ ಪುಲಿಗೆರೆಗೆ ಬಂದು ಜೈನರನ್ನು ಜಯಿಸಿದಂತೆ ತಿಳಿಯುತ್ತದೆ.**

1. ಬ. ಪು ಸಂ 60.

## ವಚನಗಳು.

ಇವನ ವಚನಗಳ ಸಂಖ್ಯೆ 206. ಇವುಗಳಲ್ಲಿ **ಸೌರಾಷ್ಟ್ರಸೋಮೇಶ್ವರಲಿಂಗ** ಎಂಬ ಅಂಕಿತವಿದೆ. ಒಂದೆರಡು ವಚನಗಳನ್ನು ಉದ್ಧರಿಸಿ ಬರೆಯುತ್ತೇವೆ :—

(1) ಬೆಚ್ಚು ಬೇಱಿಲ್ಲದ ಸುಖವಚ್ಚಾದ ಪರಿಯ ನೋಡಾ. ಅಯ್ಯ ಅಂಗವಿಲ್ಲದ ಕೂಟ, ಸಮರಸವಿಲ್ಲದ ಬೇಟ, ಸಮರತಿಯಿಲ್ಲದ ಆನಂದ ಸನ್ನಹಿತವಾಗಿ ಸೌರಾಷ್ಟ್ರ ಸೋಮೇಶ್ವರಲಿಂಗದ ಸಂಗ ಏನೂ ಅಲ್ಲದ ನಿಸ್ಸಂಗದ ನಿಜಸುಖವನೇನೆಂಬೆನಯ್ಯ ॥ 459 ॥

(2) ಸೂಕರಂಗೆ ಸುಗಂಧಸೊಗಸುವುದೆ? ಶುನಕಂಗೆ ಷಡ್ರಸಾನ್ನಸಂಘಟ್ಟವೆ? ಕತ್ತೆಗೆ ಕರ್ಪೂರ ಯೋಗ್ಯವೆ? ಮರ್ಕಟಂಗೆ ಮುಕುರಸಾಮ್ಯವೆ? ದುರ್ವಿಷಯಿಗಳಪ್ಪ ದುರಾತ್ಮರ್ಗೆ ಸೌರಾಷ್ಟ್ರ ಸೋಮೇಶ್ವರಲಿಂಗ ಸನ್ನಹಿತವೆ? ॥ 460 ॥

---

## ಹಾವಿನಹಾಳ ಕಲ್ಲಯ್ಯ. ಸು. 1150.

ಈತನು ತನ್ನನ್ನು ಕಚ್ಚಿ ಸತ್ತ ಹಾವನ್ನು ಬದುಕಿಸಿದನು; ನಾಯಿಂದ ವೇದವನ್ನು ಹೇಳಿಸಿದನು.[1]

## ವಚನಗಳು.

ಇವನ ವಚನಗಳ ಸಂಖ್ಯೆ 58. ಇವುಗಳಲ್ಲಿ **ಮಹಾಲಿಂಗ ಕಲ್ಲೇಶ್ವರ** ಎಂಬ ಅಂಕಿತವಿದೆ ಕೆಲವು ವಚನಗಳನ್ನು ಉದಾಹರಿಸುತ್ತೇವೆ :—

(1) ಅತ್ಯಾಶೆಯೆಂಬುದೇ ಪಾಪದ ಬೇರು, ಪಾಪವೆಂಬುದಿಲ್ಲ ಕಂಡಿರೆ ಅಯ್ಯ. ಪರಿಣಾಮವೆಂಬುದೇ ಪರಮಾನಂದ, ಬೇಱೆ ಪರಲೋಕವಿಲ್ಲ ಕಂಡಿರೆ ಅಯ್ಯ. ಇಹಪರದಾಶೆಯಿಲ್ಲದಿಹುದೇ ಶಿವಯೋಗ. ಮಹಾಲಿಂಗ ಕಲ್ಲೇಶ್ವರ ಬಲ್ಲ ॥ 461 ॥

(2) ಹಗಲು ಹಸಿವೆಗೆ ಕುದಿದು ಇರುಳು ನಿದ್ರೆಗೆ ಮಱುಗಿ ಉೞಿದಾದ ಹೊತ್ತೆಲ್ಲ ವಿಷಯದಲ್ಲಿ ಬೆಂದು ನಾ ನಿಮ್ಮ ನೆನೆಯಲಱಿಯದ ಪಾಪಿ ನೋಡಯ್ಯಾ. ನಾ ನಿಮ್ಮ ದೆಸೆಯಱಿಯದ ಕರ್ಮಿ ನೋಡಯ್ಯಾ. ಮಹಾಲಿಂಗಕಲ್ಲೇಶ್ವರ! ಅಸಗ ನೀರಡಸಿ ಸಾವ ತೆಱನಂತೆ ಎನ್ನ ಯುಕ್ತಿ ॥ 462 ॥

(3) ಒಲಿದು ಒಲಿಸಿಕೊಳ್ಳಬೇಕು. ಒಲಿದಲ್ಲದೆ ಇಲ್ಲ. ಹಲವುಕೊಂಬೆಗೆ ಹಾಱಿದಿರು ಮರುಳೆ. ಅಟ್ಟಿ ನೋಡುವ; ಮುಟ್ಟಿನೋಡುವ; ತಟ್ಟಿನೋಡುವ; ಒತ್ತಿನೋಡುವ. ಅಟ್ಟಿದಡೆ ಮುಟ್ಟಿದಡೆ ತಟ್ಟಿದಡ ಒತ್ತಿದಡೆ ನಿಷ್ಠೆಯ ಬಿಡದಿರ್ದಡೆ ತನ್ನನೀವ ಮಹಾಲಿಂಗ ಕಲ್ಲೇಶ್ವರ ॥ 463 ॥

---

1. ಬ. ಪು. ಸ೦. 55.

## ಮಾದರ ದೂಳಯ್ಯ. ಸು. 1150.

ಇವನಿಗೆ ದೂಡಯ್ಯ ಎಂಬ ಹೆಸರೂ ಉಂಟು. ಇವನ ಬಚ್ಚಲಮನೆಯ ನೀರಿನ ಸಂಪರ್ಕದಿಂದ ವಿಪ್ರನ ಕುಷ್ಟವು ಪರಿಹಾರವಾಯಿತು.[1]

### ವಚನಗಳು.

ಇವನ ವಚನಗಳ ಸಂಖ್ಯೆ 102. ಇವುಗಳಲ್ಲಿ **ಕಾಮಧೂಮ ಧೂಳೇಶ್ವರ** ಎಂಬ ಅಂಕಿತವಿದೆ. ಎರಡು ವಚನಗಳನ್ನು ಉದಾಹರಿಸುತ್ತೇವೆ:—

(1) ನೆನೆವುದು ನೆನೆಹಿಸಿಕೊಂಬುದು ಜಡನೆಂದ ಮತ್ತೆ ನಾನೀನೆಂಬುದಿಲ್ಲ. ಶಾಲ್ಮಲಿಯ ಫಲದಂತೆ ಚೇಳಿಗೆ ಗರ್ಭವಾದಂತೆ ವೇಣುವಿಗೆ ಅಕ್ಕಿ ಹುಟ್ಟಿದ ಮತ್ತೆ ಬಾೞುವೆಯುಂಟೆ? ನೀನೆಂಬುದ ನಾನಱಿದಲ್ಲಿ ನಾನೀನೆಂಬ ಭಾವವೇನೂ ಇಲ್ಲ ಕಾಮಧೂಮ ಧೂಳೇಶ್ವರನನಱಿಯಬಲ್ಲಡೆ ॥ 464 ॥

(2) ಕುಸುಮದೊಳಡಗಿದ ಸುವಾಸನೆಯಂತೆ. ರಸಿಕನಲ್ಲಿ ಅಡಗಿದ ಎಸಕದಂತೆ, ಕೇಶದಲ್ಲಿ ಅಡಗಿದ ರಸರಂಜಸೆಯಂತೆ. ಅಱಿದಱುಹಿಸಿಕೊಂಬುದು ಎರಡೞಿದು ಪರಿಪೂರ್ಣವಾದಲ್ಲಿ ಹಲವು ಮಾತಿನ ಹೊಲಬಿನ ಸೂತಕವೇತಕ್ಕೆ ಕಾಮಧೂಮ ಧೂಳೇಶ್ವರ ॥ 465 ॥

---

## ಬಾಹೂರ ಬೊಮ್ಮಣ್ಣ. ಸು. 1160.

ಇವನು ಕಲ್ಲುನಂದಿಯನ್ನು ಹುಲ್ಲು ಮೇಯಿಸಿದನು; ಮದಕರಿಯನ್ನು ಭಂಗಿಸಿದನು.[2]

### ವಚನಗಳು.

ಈತನ ವಚನಗಳ ಸಂಖ್ಯೆ 45. ಇವುಗಳಲ್ಲಿ **ಸಂಗನ ಬಸವಣ್ಣಪ್ರಿಯ ಬ್ರಹ್ಮೇಶ್ವರಲಿಂಗ** ಎಂಬ ಅಂಕಿತವಿದೆ. ಒಂದು ವಚನವನ್ನು ತೆಗೆದು ಬರೆಯುತ್ತೇವೆ:—

ಸದ್ಭಕ್ತಿಯಿಲ್ಲದ ವಿಶ್ವಾಸಹೀನನು ವಾಚಾ ರಚನೆಗಳಿಂದ ಮಾತಿನ ಮಾಲೆಯ ಎಷ್ಟು ನುಡಿದಡೇನು? ಹೆ. ದಂಡದಂತೆ ಮೃತಘಟದಂತ ಸಿಡಿಲ ಫಳದಂತೆ ಅದಾರಿಗೆ ಯೋಗ್ಯ? ಸಂಗನ ಬಸವಣ್ಣ ಸಾಕ್ಷಿಯಾಗಿ ಬ್ರಹ್ಮೇಶ್ವರಲಿಂಗವು ಅವರಲ್ಲಿ ನಿಲ್ಲನಾಗಿ ॥ 466 ॥

---

1. ಬ. ಪು. ಸಂ. 56. 2. ಬ. ಪು. ಸಂ. 22.

## ಪ್ರಸಾದಿ ಭೋಗಣ್ಣ. ಸು. 1160.

ಇವನ ವಚನಗಳ ಸಂಖ್ಯೆ 102. ಇವುಗಳಲ್ಲಿ **ಚೆನ್ನಬಸವಣ್ಣಪ್ರಿಯ ಭೋಗಮಲ್ಲಿಕಾರ್ಜುನಲಿಂಗ** ಎಂಬ ಅಂಕಿತವಿದೆ.

### ವಚನ.

ವಿಹಂಗನ ತತ್ತಿಗೆ ಸ್ಪರ್ಶನದಿಂದ, ಕೂರ್ಮನ ಶಿಶುವಿಂಗೆ ಕೂರ್ಮೆಯಿಂದ, ಚತುಷ್ಪಾದಿ ನರಕುಲಕ್ಕೆ ಕುಚಗಳಿಂದ, ಮಿಕ್ಕಾದ ಜೀವಜಾತಿಲಕ್ಷಣಕ್ಕೆ ತಮ್ಮ ಸ್ವಸ್ಥಾನದಲ್ಲಿಯೇ ತೃಪ್ತಿ. ಆವ ಸ್ಥಲವ ನೆಮ್ಮಿದಲ್ಲಿಯೂ ಭಾವ ಶುದ್ಧವಾದಲ್ಲಿಯೇ ಮುಕ್ತಿ. ಉಭಯಕ್ಕೆ ಉಪಮಾತೀತನಾದಾಗಲೇ ನಿರ್ವಿಜ(?) ಚೆನ್ನಬಸವಣ್ಣಪ್ರಿಯ ಭೋಗಮಲ್ಲಿಕಾರ್ಜುನ ಲಿಂಗದಲ್ಲಿ ॥ 467 ॥

---

## ಅರಿವಿನ ಮಾರಿತಂದೆ. ಸು. 1160.

ಈತನ ವಚನಗಳ ಸಂಖ್ಯೆ 301. ಇವುಗಳಲ್ಲಿ **ಸದಾಶಿವಮೂರ್ತಿಲಿಂಗ** ಎಂಬ ಅಂಕಿತವಿದೆ.

### ವಚನಗಳು.

(1) ಓಗರ ಹಸಿಯಿತ್ತೆಂದು ಉಂಬವರಿಲ್ಲ; ನೀರು ಬಾಯಾರಿತ್ತೆಂದು ಕುಡಿವವರಿಲ್ಲ; ಭೂಮಿಗೆ ಬಡತನವೆಂದು ಬಿತ್ತುವರಿಲ್ಲ. ತಮ್ಮ ಒಲವರಕ್ಕೆ ತಾವು ಮಾಡುವಲ್ಲಿ ಗನ್ನದ ಆಶೆ ಬೇಡ ಸದಾಶಿವಮೂರ್ತಿಲಿಂಗವನರಿವುದಕ್ಕೆ ॥ 468 ॥

(2) ಹಾಲುಬತ್ತಿದ ಹಸುವಿಂಗೆ ಕಱುವ ಬಿಟ್ಟಡೆ ಒದೆವುದಲ್ಲದೆ ಉಣಲೀಸುವುದೆ? ಅಱಿವು ನಷ್ಟವಾದವ ಕ್ರಿಯೆಬಲ್ಲನೆ? ಕ್ರಿಯೆಯೆಂಬುದೆ ಹಸು, ಅಱಿವೆಂಬುದೆ ಹಾಲು, ಬಯಕೆಯೆಂಬುದೆ ಕಱು. ಇಂತೀ ತ್ರಿವಿಧವನಱಿದಲ್ಲಿ ಸದಾಶಿವಮೂರ್ತಿಲಿಂಗವು ತಾನೆ ॥ 469 ॥

---

## ಮನಸಂದ ಮಾರಿತಂದೆ. ಸು. 1160.

ಇವನ ವಚನಗಳ ಸಂಖ್ಯೆ 102. ಇವುಗಳಲ್ಲಿ **ಮನಸಂದಿತ್ತು ಮಾರೇಶ್ವರ** ಎಂಬ ಅಂಕಿತವಿದೆ.

### ವಚನಗಳು.

(1) ಮನವಱಿದು ನಯನಕಂಡು ಕೈಯಲ್ಲಿ ಹಿಡಿದು ತೀರಬೇಕು. ಏನನಱಿದಲ್ಲಿಯೂ ಕಾಯಕ್ಕೆ ಕರ್ಮವಟ್ಟಿದು ಜೀವಕ್ಕೆ ಭವಹಱಿದು ಉರಿಕೊಂಡ ಕಪ್ಪುರದಂತೆ ಉಭಯಕ್ಕೊಡಲಿಲ್ಲದೆ ನಿಂದ ನಿಜ ಮನಸಂದಿತ್ತು ಮಾರೇಶ್ವರ ॥ 470 ॥

(2) ವೇದವ ಕಲಿತಲ್ಲಿ ಪಾಠಕನಲ್ಲದೆ ಜ್ಞಾನಿಯಲ್ಲ; ಶಾಸ್ತ್ರಪುರಾಣವನೋದಿದಲ್ಲಿ ಪಂಡಿತನಲ್ಲದೆ ಜ್ಞಾನಿಯಲ್ಲ; ವ್ರತನೇಮಕೃತ್ಯಪೂಜಕನಾದಡೇನು? ದಿವ್ಯಜ್ಞಾನದ ಠಾವನಱಿಯಬೇಕು. ಈ ಭೇದಂಗಳನಱಿದು ತಿಳಿದಲ್ಲಿ ಮನ ಸಂದಿತ್ತು ಮಾರೇಶ್ವರ ॥ 471 ॥

---

## ನಗೆಯ ಮಾರಿದಂತೆ. ಸು. 1160.

ಈತನ ವಚನಗಳ ಸಂಖ್ಯೆ 100. ಇವುಗಳಲ್ಲಿ **ಆತುರವೈರಿ ಮಾರೇಶ್ವರ** ಎಂಬ ಅಂಕಿತವಿದೆ.

### ವಚನಗಳು.

(1) ಸಮತೆಯ ಸಮಾಧಾನವ ಹೇಳುವ ಪುಸ್ತಕ ಎತ್ತಿನಮೇಲೆ; ಹೊಯಿದೊಣ್ಣೆ ಕೈಯಲ್ಲಿ ಲೇಸಾಯಿತ್ತು. ಈತನಿರವು ಮಾತಿನಲ್ಲಿ ಆಗಮು ಮನದಲ್ಲಿ ತೂತಿನ ಕುಡಕೆಯ ಆಸೆ. ಇದು ನೀತಿಯಲ್ಲ ಆತುರವೈರಿ ಮಾರೇಶ್ವರ ॥ 472 ॥

(2) ಎಲ್ಲರಂತೆ ಮಾಡಿ ಮನಗುಂದಲಾಱೆ, ಅಱಿತು ಮಱೆಯಲಾಱೆ; ಕಂಡು ಕಾಣದಂತಿರಲಾಱೆ. ಹೇಳಿದಡೆ ಭಕ್ತರ ಒಡಕು, ಹೇಳದಿದ್ದರೆ ನಿನ್ನ ತೊಡಕು. ಇಂತೀ ಎರಡಱ ಎರವಿನಲ್ಲಿ ಗುಱಿಯಾಗಲಾಱೆ. ಆತುರವೈರಿ ಮಾರೇಶ್ವರ ॥ 473 ॥

---

## ಕಲ್ಯಾಣದ ವಚನಭಂಡಾರಿ ಶಾಂತರಸ. ಸು. 1160.

ಇವನ ವಚನಗಳ ಸಂಖ್ಯೆ 62. ಇವುಗಳಲ್ಲಿ **ಅಲೇಖನಾಥ** ಎಂಬ ಅಂಕಿತವಿದೆ.

### ವಚನ.

ಮಲವ ತೊಳೆಯಬಹುದಲ್ಲದೆ ಅಮಲವ ತೊಳೆಯಬಹುದೆ ಅಯ್ಯಾ; ಜಾತನಾಡಬಹುದಲ್ಲದೆ ಅಜಾತನ ಅಱಿಯಬಹುದೆ ಅಯ್ಯಾ; ಮಾಟವ ಮಾಡಬಹುದಲ್ಲದೆ ಮರ್ಮದ ಕೂಟವ ಕೂಡಬಹುದೆ ಅಯ್ಯಾ; ರಣದ ಸಂಘವ ಹೇಳಬಹುದಲ್ಲದೆ ಕಾದಬಹುದೆ ಅಯ್ಯಾ; ಮಾತುಗಳ ಕೂಡಿ ಓತು ಹೇಳುವರೆಲ್ಲರು ಉಮಾಕಾಂತನ ಬಲ್ಲರೆ? ಈ ಮಾತಿನ ಮಾಲೆಗೆ ಅಂಜಿ ಅಲೇಖನಾಥ ಶೂನ್ಯಕಲ್ಲಿನೊಳಗೆ ಅಡಿಗಿ ಹೋಯಿತು ॥ 474 ॥

---

## ಡಕ್ಕೆಯ ಬೊಮ್ಮಣ್ಣ. ಸು. 1160.

ಈತನ ವಚನಗಳ ಸಂಖ್ಯೆ 89. ಇವುಗಳಲ್ಲಿ **ಕಾಲಾಂತಕ ಭೀಮೇಶ್ವರ ಲಿಂಗ** ಎಂಬ ಅಂಕಿತವಿದೆ.

### ವಚನ.

ಬ್ರಹ್ಮಂಗೆ ಸರಸ್ವತಿಯಾಗಿ ಬೆನ್ನಿನಲ್ಲಿ ಬಂದಳು ಮಾಯೆ; ವಿಷ್ಣುವಿಂಗೆ ಲಕ್ಷ್ಮಿಯಾಗಿ ಭವಕ್ಕೆ ತಿರಿಗಿಸಿದಳು ಮಾಯೆ; ರುದ್ರಂಗೆ ಉಮಾದೇವಿಯಾಗಿ ಶಿರವ ತೊಡೆಯಲ್ಲಿ ಕಾಡಿದಳು ಮಾಯೆ. ಎಳ್ಳಿಗೆ ಎಣ್ಣೆ, ಮುಳ್ಳಿಗೆ ಮೊನೆಯಾಗಿ ಹೂವಿಗೆ ಗಂಧವಾಗಿ ಅವರವರಂಗದಲ್ಲಿ ಪಿಂಗದ ಪ್ರಕೃತಿರೂಪಾಗಿ ಸಂದಿಲ್ಲದೆ ಕಾಡುತ್ತಿದ್ದಾಳೆ ಮಾಯೆ. ಡಕ್ಕೆಯ ಉಲುಹಡಗುವುದಕ್ಕೆ ಮುನ್ನವೇ ನಿಶ್ಚಯಿಸಿಕೊಳ್ಳಿ ಕಾಲಾಂತಕ ಭೀಮೇಶ್ವರಲಿಂಗವನರಿಯಬಲ್ಲಡೆ ‖ 475 ‖

---

## ಸಗರದ ಬೊಮ್ಮಣ್ಣ. ಸು. 1160.

ಇವನ ವಚನಗಳ ಸಂಖ್ಯೆ 85. ಇವುಗಳಲ್ಲಿ **ಸಂಗಮೇಶ್ವರ** ಎಂಬ ಅಂಕಿತವಿರುವುದಲ್ಲದೆ ಈತನ ಹೆಸರೂ ಉಕ್ತವಾಗಿದೆ.

### ವಚನ.

ಮಾಡುವ ಮಾಟದವರೆಲ್ಲರೂ ಆರೈಕೆಗೊಂಬರಿಲ್ಲದಿರೆ ಕೋಡಗಸತ್ತ ಜೋಗಿಯಂತಾದರು. ಅಗಡುಹೇಳುವ ಅಣ್ಣಗಳೆಲ್ಲರೂ ಕೊಡುವರಿಲ್ಲದಿರೆ ಹಾವ ಹಿಡಿದ ಕೋಡಗದಂತಾದರು. ನಾನಿನ್ನಾರ ಕೇಳುವೆ? ಇನ್ನಾರಿಗೆ ಹೇಳುವೆ? ನಾ ನಂಬುವೆ ಸಗರದ ಬೊಮ್ಮನೊಡೆಯ ತನುಮನಸಂಗಮೇಶ್ವರ ‖ 476 ‖

---

## ಅವಸರದ ಕೇರಣ್ಣ. ಸು. 1160.

ಈತನ ವಚನಗಳ ಸಂಖ್ಯೆ 100. ಇವುಗಳಲ್ಲಿ **ಸದ್ಯೋಜಾತಲಿಂಗ** ಎಂಬ ಅಂಕಿತವಿದೆ.

### ವಚನ.

ದಾಕ್ಷಿಣ್ಯದ ಭಕ್ತಿ, ಕಲಿಕೆಯ ವಿರಕ್ತಿ, ಮಾತಿನಮಾಲೆಯ ಬೋಧೆ, ತೂತಜ್ಞಾನಿಗಳ ಸಂಸರ್ಗ: ಬೀತ ಕುಂಭದಲ್ಲಿ ಅಮೃತವ ಹೊಯ್ದಿರಿಸಲಿಕ್ಕೆ ಅದು ಎಷ್ಟು ದಿವಸ ಇರಲಾಪುದು? ಇಂತಿವ ಕಳೆದುಳಿದು ನಡೆನುಡಿಸಿದ್ಧಾಂತವಾಗಿ ಕೂಡಬೇಕು ಸದ್ಯೋಜಾತಲಿಂಗವ ‖ 477 ‖

---

## ತುರುಗಾಹಿ ರಾಮಣ್ಣ. ಸು. 1160.

ಇವನ ವಚನಗಳ ಸಂಖ್ಯೆ 45. ಇವುಗಳಲ್ಲಿ **ಗೋಪತಿನಾಥ ವಿಶ್ವೇಶ್ವರಲಿಂಗ** ಎಂಬ ಅಂಕಿತವಿದೆ.

### ವಚನಗಳು.

(1) ಕ್ರಿಯಾಶುದ್ಧತೆಯಾದಲ್ಲಿ ಭಾವಶುದ್ಧವಾಗಿಪ್ಪುದು; ಭಾವಶುದ್ಧವಾಗಿಪ್ಪಲ್ಲಿ ಸರ್ವೇಂದ್ರಿಯಂಗಳು ಏಕೇಂದ್ರಿಯವಾಗಿ ಚಿತ್ತಶುದ್ಧವಾಗಿಪ್ಪುದು; ಚಿತ್ತಶುದ್ಧಿ ಸಿದ್ಧಿಯಾದಲ್ಲಿ ಸರ್ವಜ್ಞಾನಸಂಪನ್ನನಪ್ಪನು. ಆಗುಣ ನಿಜದ ನೆಲೆಯಾದಲ್ಲಿ ಗೋಪತಿನಾಥ ವಿಶ್ವೇಶ್ವರಲಿಂಗವ ಬೆಚ್ಚಂತಿಪ್ಪನು ॥ 478 ॥

(2) ಕಂಗಳದೃಷ್ಟದಿಂದ ಇಷ್ಟವ ಕಂಡು, ಮನದದೃಷ್ಟದಿಂದ ನಿಷ್ಟೆಯನರಿತು, ನಿಷ್ಠ ನಿಜದಲ್ಲಿನಿಂದು ಅಜ್ಞಾವು ಕರಿಗೊಂಡಲ್ಲಿ ಗೋಪತಿನಾಥ ವಿಶ್ವೇಶ್ವರಲಿಂಗವು ದೃಷ್ಟವಾಯಿತ್ತು ॥ 479 ॥

---

## ದಾಸೋಹದ ಸಂಗಣ್ಣ. ಸು. 1160.

ಇವನ ವಚನಗಳ ಸಂಖ್ಯೆ 100. ಇವುಗಳಲ್ಲಿ **ಮಾತುಳಾಂಗ ಮಧುಕೇಶ್ವರ** ಎಂಬ ಅಂಕಿತವಿದೆ.

### ವಚನ.

ಹುತ್ತಕ್ಕೆ ಸರ್ಪನಾಗಿ ಉದಕಕ್ಕೆ ಒಳ್ಳೆಯಾಗಿ ಕೂಂಬಿಗ ಕೋಡಗವಾಗಿ ಅವರವರ ಬೆಂಬಳಿಯಲ್ಲಿ ಅಜಬಿಜವ ಕಾವ ಜಂಬುಕನಂತೆ ತಿರುಗಲೇತಕ್ಕೆ? ಆಯುಷ್ಯ ತೀರಿದಲ್ಲಿ ಮರಣ, ಐಶ್ವರ್ಯ ಹೋದಲ್ಲಿ ದಾರಿದ್ರ್ಯ ಬಪ್ಪುದು ಎಲ್ಲಿದ್ದಡಂ ತಪ್ಪದೆಂದರಿದ ಮತ್ತೆ ಬಾಯ ಮುಚ್ಚಿ ಸತ್ತಂತಿಪ್ಪುದೇ ತೆರು. ಇದು ಭಕ್ತಿ ವಿರಕ್ತಿಯ ಪಥ. ಶಂಭುಗಿಂದಿತ್ತ ಸ್ವಯಂಭುಗಿಂದತ್ತ ಅತಿಬಳ ನೋಡಾ ಮಾತುಳಾಂಗ ಮಧುಕೇಶ್ವರನು ॥ 480 ॥

---

## ಗುಪ್ತಮಂಚಣ್ಣ. ಸು. 1160.

ಈತನ ವಚನಗಳ ಸಂಖ್ಯೆ 99. ಇವುಗಳಲ್ಲಿ **ನಾರಾಯಣಪ್ರಿಯ ರಾಮನಾಥ** ಎಂಬ ಅಂಕಿತವಿದೆ.

### ವಚನಗಳು.

(1) ಕುರುಡನ ಕೈಯ ಕೋಲು ಹಿಂಗಿದಾಗ ಅವ ಆಡಿಯಿಡಬಲ್ಲನೆ? ಮೃಡಭಕ್ತಿಯ ಮಾಡುವಂಗೆ ದೃಢಚಿತ್ತವಿಲ್ಲದಿದ್ದಡೆ ಕಡೆಗಾಣಿಸಬಲ್ಲನೆ? ಇಂತೀ ವಿಶ್ವಾಸದಡಿ ಬೆಚ್ಚಂತಿರಬೇಕು ನಾರಾಯಣಪ್ರಿಯ ರಾಮನಾಥನಲ್ಲಿ ॥ 481 ॥

(2) ಡಂಬಕದ ಪೂಜೆ ಹೋಹ ಹೊತ್ತಿನ ಕೇಡು ; ಆಡಂಬರದ ಪೂಜೆ ತಾಮ್ರದ ಮೇಲಣ ಸುವರ್ಣಚ್ಛಾಯೆ ; ಇಂತೀಪೂಜೆಗೆ ಹೂಸೊಪ್ಪನಿಕ್ಕಿ ಮನಹೂಣದೆ ಮಾಡುವ ಪೂಜೆ ಬೇರು ನೆನೆಯದ ನೀರು, ಆಯುವಿಲ್ಲದ ಘಾಯ, ಭಾವವಿಲ್ಲದ ಘಟವಾಯಿತೆಂದ ನಾರಾಯಣಪ್ರಿಯ ರಾಮನಾಥ ॥ 482 ॥

---

## ಸುಂಕದ ಬಂಕಣ್ಣ. ಸು. 1160.

ಇವನ ಹೆಸರು ಬಸವಪುರಾಣದಲ್ಲಿ [1] ಬೊಂಕಿದೇವ ಎಂದು ಹೇಳಿದೆ. ಈತನ ವಚನಗಳ ಸಂಖ್ಯೆ 101. ಇವುಗಳಲ್ಲಿ **ಬಂಕೇಶ್ವರಲಿಂಗ** ಎಂಬ ಅಂಕಿತ ವಿದೆ.

### ವಚನ.

ಬಹುರೂಪ ತೊಟ್ಟಾಡಿದ ದೇಹವೊಂದೆ. ವೇಷರೂಪಿನ ಪಟವಲ್ಲದೆ ವೇಷಕ್ಕೆ ತಕ್ಕ ಭಾಷೆ, ಭಾಷೆಗೆ ತಕ್ಕ ವೇಷ, ಅಱಿವು, ಆಚರಣೆ ಒಂದಾಗಬೇಕು ಬಂಕೇಶ್ವರ ಲಿಂಗವನಱಿವುದಕ್ಕೆ ॥ 483 ॥

---

## ಬಹುರೂಪಿ ಚೌಡಯ್ಯ. ಸು. 1160.

ಇವನ ವಚನಗಳ ಸಂಖ್ಯೆ 38. ಇವುಗಳಲ್ಲಿ **ರೇಕಣ್ಣಪ್ರಿಯ ನಾಗಿನಾಥ** ಎಂಬ ಅಂಕಿತವಿದೆ.

### ವಚನಗಳು.

(1) ಅಪ್ಪ ಅಪ್ಪ ಎಂಬ ಚಿಕ್ಕ ಮೋಹವುಂ ತೊಟ್ಟು ಮುಖಕ್ಕೆ ಹೊತ್ತಿಗೊಂದು ಪರಿಯ ಬಚ್ಚಣೆಯನಿಕ್ಕಿ ಮತ್ತದನು ತಲೆಯಲ್ಲಿ ಹೊತ್ತು ತಪ್ಪಿ ಹಜ್ಜೆಯನಿಕ್ಕಿ ಆಡುತ್ತಿದ್ದ ರೇಕಣ್ಣಪ್ರಿಯ ನಾಗಿನಾಥನಲ್ಲಿ ಹೊತ್ತು ಹೋದ ಬಹುರೂಪವ ॥ 484 ॥

(2) ಕೈಯ ಮಱೆದು ಕಾದುವ ಅಂಕವದೇಕೋ? ಭಾವವಱೆದು ನೋಡುವ ನೋಟವದೇಕೋ? ಭಯವ ಮಱೆದು ಮಾಡುವ ಭಕ್ತಿಯದೇಕೋ? ಏಕಾಂತದ ಸುಖಕ್ಕೆ ಲೋಕಾಂತವೇಕೋ? ರೇಕಣ್ಣಪ್ರಿಯ ನಾಗಿನಾಥನಲ್ಲಿ ಗುರುವ ಮಱೆದು ಲಿಂಗವ ನೊಲಿಸೇನೆಂದಡೆ ಆ ಗುರುಲಿಂಗವೆರಡೂ ಇಲ್ಲ ॥ 485 ॥

---

## ಬೇರೆ ಅಂಕಿತಗಳು.

ನಮಗೆ ದೊರೆತಿರುವ ವಚನಗಳಲ್ಲಿ ಇನ್ನೂ ಸುಮಾರು 25 ಅಂಕಿತಗಳು ಉಪಯೋಗಿಸಿರುವುದರಿಂದ ಈ ಕಾಲದಲ್ಲಿಯೋ ಅಥವಾ ಸ್ವಲ್ಪ ಈಚೆಯೋ ಇನ್ನೂ

1. ಸಂಧಿ 58.

**ಕೆಲವರು** ವಚನಕಾರರು ಇದ್ದರು ಎಂಬುದು ವ್ಯಕ್ತವಾಗುತ್ತದೆ. ಈ ಅಂಕಿತಗಳಲ್ಲಿ **ಕೆಲವನ್ನು** ಇಲ್ಲಿ ಬರೆಯುತ್ತೇವೆ:—**ಮುಸಣಯ್ಯಪ್ರಿಯ ಗಜೇಶ್ವರ, ಸಂಗಯ್ಯಪ್ರಿಯ ಬಂಕೇಶ್ವರ, ಮಹಾಲಿಂಗ ತ್ರಿಪುರಾಂತಕದೇವ, ಸದ್ಗುರು ಸಿದ್ಧಸೋಮೇಶ್ವರಲಿಂಗ, ಉಳಿಯುಮೇಶ್ವರ, ಶಂಭುಜಕ್ಕೇಶ್ವರ, ಕಾಮಭೀಮ ಜೀವದನದೊಡೆಯ, ನಂದಗೋಪಿಯಕಂದಪ್ರಿಯ ನಿಸ್ಸಂಗಲಿಂಗರಾಮನಾಥ, ನಿಜಗುರು ಶಾಂತೇಶ್ವರ, ಭೌಂಭೇಶ್ವರ, ನಾಸ್ತಿನಾಥ, ಶಂಭುಸೋಮನಾಥಲಿಂಗ, ಸದ್ಗುರು ಶಂಭುಸೋಮೇಶ್ವರ, ಹುಲಿಗೆರೆಯ ವರದಸೋಮೇಶ, ರೇಕನಾಥಯ್ಯ, ಘನಗುರುಪ್ರಿಯ ಸೋಮನಾಥ, ಹಂಪೆಯ ವಿರುಪಯ್ಯ, ಅಭಿನವ ಮಲ್ಲಿಕಾರ್ಜುನ.** ಇವುಗಳಲ್ಲಿ ಕೆಲವು ಹಿಂದೆ ಹೇಳಿದ ಕೊಂಡಗೂಳಿ ಕೇಶಿರಾಜ ಮೊದಲಾದ ಆರು ವಚನಕಾರರ [1] ಅಂಕಿತಗಳಾಗಿದ್ದರೂ ಇರಬಹುದು. ಈ ಅಂಕಿತಗಳುಳ್ಳ ವಚನಗಳು ದ್ವಿತೀಯಸಂಪುಟದಲ್ಲಿ ಉದಾಹೃತವಾಗಿವೆ.[2] ನಾವು ನಿರ್ದೇಶದೊಡನೆ ಈ ವಚನಗಳು ದೊರೆವವರೆಗೆ ವಚನಕಾರರ ಹೆಸರನ್ನು ಹೇಳಲು ಸಾಧ್ಯವಲ್ಲ.

## ವೀರಶೈವಪಂಡಿತತ್ರಯ.

ವೀರಶೈವಕವಿಗಳು ತಮ್ಮ ಗ್ರಂಥಾದಿಯಲ್ಲಿ **ಶಿವಲೆಂಕಮಂಚಣ್ಣ, ಶ್ರೀಪತಿಪಂಡಿತ, ಮಲ್ಲಿಕಾರ್ಜುನಪಂಡಿತ** ಎಂಬ ಮೂವರು ಪಂಡಿತರನ್ನು ಪ್ರಾಯಿಕವಾಗಿ ಸ್ತುತಿಸುತ್ತಾರೆ. ಇವರುಗಳು **ಬಸವನ** (ಸು. 1160) ಸಮಕಾಲದವರೆಂದು ತಿಳಿಯಬರುತ್ತದೆ.[3] ಈ ಪಂಡಿತತ್ರಯದ ಚರಿತವನ್ನು **ಗುಬ್ಬಿಯ ಮಲ್ಲಣಾರ್ಯನು** (1513) ತನ್ನ **ಭಾವಚಿಂತಾರತ್ನ**ದಲ್ಲಿಯ—

ಹರಿಯ ನಖನಂಗೆ ವಂದನೆಗೆಯ್ಸಿ ಶಿಖಿಯನಂ ।
ಬರದಲ್ಲಿ ಕಟ್ಟಿ ಮೂರ್ಧಾಕ್ಷಿಗಳ ಪಡೆದು ಸಿ ।
ಪ್ಪುರವಕ್ರಮಂದತೀವ್ರದ ದುರ್ಗುಣಗಳ ವೈಷ್ಣವವಿಪ್ರಜೈನರೆಂಬ ॥
ವರವಾತಪಿತ್ತದುಶ್ಶ್ಲೇಷ್ಮಮಂ ಕಿಡಿಸಿ ಶಂ ।
ಕರಲೆಂಕಮಂಚಣ್ಣ ಶ್ರೀಪತೀಶ್ವರದೇವ ।
ನುರುಮಲ್ಲಿಕಾರ್ಜುನಂ ಪಂಡಿತತ್ರಯವಾದರೆಮ್ಮ ಭವರೋಗಗಳಿಗ ॥

ಎಂಬ ಪದ್ಯದಲ್ಲಿ ಸಂಗ್ರಹವಾಗಿ ಹೇಳಿದ್ದಾನೆ. ಇವರುಗಳ ವಿಷಯವನ್ನು ಸ್ವಲ್ಪ ಮಟ್ಟಿಗೆ ತಿಳಿಯಪಡಿಸುವುದು ಆವಶ್ಯಕವಾಗಿ ತೋರುವುದರಿಂದ ಇವರ ವಿಷಯವಾಗಿ ವೀರಶೈವ ಗ್ರಂಥಗಳಿಂದ ತಿಳಿವ ಅಂಶಗಳನ್ನು ಸಂಗ್ರಹವಾಗಿ ಬರೆಯುತ್ತೇವೆ.

---

1 ಪುಟ 196-7. 2 ಪುಟ 111—124. 3. ಬ. ಪು. ಸಂಧಿಗಳು 9, 58.

## ಶಿವಲೆಂಕಮಂಚಣ್ಣ. ಸು. 1160.

ಈತನು ವಚನಗಳನ್ನು ಬರೆದಿದ್ದಾನೆ. ಇವನು ವೀರಶೈವಕವಿ; ಇವನ ಅಜ್ಜನು ಸೋಮಶಂಭುದೇಶಿಕ; ತಂದೆ 'ಕಾಮಿಕಾದ್ಯಖಿಳಶಿವಕಥಿತತಂತ್ರಾವಳಿಗೆ। ಪ್ರೇಮದಿಂ ವೃತ್ತಿದೀಪಿಕೆಗಳಂ ಬಿತ್ತರಿಸಿ। ಸೋಮಧರಸಮಯಮಂ ಧರಣಿಯೊಳ್ ನಿಱಿಸಿದ'[1] ಸಕಲಾಗಮಾಚಾರ್ಯ. ಈತನು ಕಾಶೀಕ್ಷೇತ್ರದಲ್ಲಿ ಶಿವನೇ ಸರ್ವ ದೇವತೆಗಳಿಗೂ ಪೂಜ್ಯನೆಂದು ಸ್ಥಾಪಿಸಿ ಬಿಂದುಮಾಧವನನ್ನು ವಿಶ್ವೇಶ್ವರನ ಸನ್ನಿಧಾನವನ್ನೈದಿಸಿ ಶತ್ರುಪಕ್ಷವನ್ನು ಮುರಿದಂತೆಯೂ[2] ತನ್ನ ಹತ್ತು ಬೆರಳುಗಳನ್ನು ಕಡಿದು ಕಾಶಿಯ ವಿಶ್ವೇಶ್ವರನಿಗೆ ಅರ್ಪಿಸಿ ಮರಳಿ ಪಡೆದಂತೆಯೂ[3] ಕಲ್ಯಾಣಕ್ಕೆ ಬಂದು ಬಸವನನ್ನು (ಸು. 1160) ನೋಡಿದಂತೆಯೂ[4] ಗ್ರಂಥಗಳಲ್ಲಿ ಹೇಳಿದೆ.

### ವಚನಗಳು.

ಇವನ ವಚನಗಳ ಸಂಖ್ಯೆ 131 ಇವುಗಳಲ್ಲಿ **ಈಶಾನ್ಯಮೂರ್ತಿ ಮಲ್ಲಿಕಾರ್ಜುನಲಿಂಗ** ಎಂಬ ಅಂಕಿತವಿದೆ. ಒಂದೆರಡು ವಚನಗಳನ್ನು ತೆಗೆದು ಬರೆಯುತ್ತೇವೆ :—

(1) ಕಾಯವ ಮಱೆದು ಜೀವವನಱಿಯಬೇಕು : ಜೀವನ ಮಱೆದು ಜ್ಞಾನವನಱಿಯಬೇಕು ; ಜ್ಞಾನವ ಮಱೆದು ಬೆಳಗನಱಿಯಬೇಕು ; ಬೆಳಗಿನ ಮಱೆಯ ಈಶಾನ್ಯಮೂರ್ತಿ ಮಲ್ಲಿಕಾರ್ಜುನಲಿಂಗವನಱಿಯಬೇಕು ॥ 486 ॥

(2) ವಿಶ್ವಮಯರೂಪ ನೀನಾಗಿ ಅಜೀವ ಆತ್ಮನೊಬ್ಬನಲ್ಲಿಯೇ ಅಡಗಿದೆಯಲ್ಲಾ. ಬೀಗದ ಎಸಳು ಹಲವಾದಡೇನು? ಒಂದು ದ್ವಾರದಲ್ಲಿ ಅಡಗಿ ಮತ್ತಂತೆ ಇಷ್ಟ ತೇಜ ನೀನಾಗಿ ಭಕ್ತರ ಚಿತ್ತದಲ್ಲಿ ನಿಶ್ಚಲನಾದೆ ಈಶಾನ್ಯಮೂರ್ತಿ ಮಲ್ಲಿಕಾರ್ಜುನಲಿಂಗವೇ ॥487॥

---

## ಶ್ರೀಪತಿಪಂಡಿತ. ಸು. 1160.

ಈತನು ಕನ್ನಡದಲ್ಲಿ ಗ್ರಂಥಗಳನ್ನು ಬರೆದಿರುವುದಾಗಿ ತಿಳಿಯಬಂದಿಲ್ಲ; ಸಂಸ್ಕೃತದಲ್ಲಿ ಬ್ರಹ್ಮಸೂತ್ರಗಳಿಗೆ ಶ್ರೀಕರಭಾಷ್ಯವೆಂಬ ವ್ಯಾಖ್ಯಾನವನ್ನು ಬರೆದಿದ್ದಾನೆ. ಇವನು ಶಿವಪ್ರಸಾದವೇ ಪವಿತ್ರವಾದುದೆಂದು ಪ್ರತಿಜ್ಞೆಗೈದು ವಸ್ತ್ರದಲ್ಲಿ ಅಗ್ನಿಯನ್ನು ಹಾಕಿ ಬನ್ನಿಯಮರಕ್ಕೆ ಕಟ್ಟಿ ಏಳು ದಿನ ಪರ್ಯಂತ ಅಗ್ನಿಯೇ ದೊರೆಯದಂತೆ ಮಾಡಿದುದರಿಂದ ದೇವಯಜ್ಞ ಪಿತೃಯಜ್ಞಗಳಿಗೆ ವಿಘ್ನವುಂಟಾ

---

1. ನೀಲಕಂಠನ ಆರಾಧ್ಯಚಾರಿತ್ರ.
2. ಆನಯಿತ್ವಾ ಹಠಾದ್ವಿಷ್ಣುಂ ಕಾಶ್ಯಾಂ ವಿಶ್ವೇಶಸನ್ನಿಧಿಂ।
ಬಭಂಜ ವಿದ್ವಿಷೋ ಯಸ್ತಂ ಮನ್ಯೇ ಮಂಚಣಪಂಡಿತಂ॥ ಶಂಕರಾರಾಧ್ಯನ ಬಸವೇಶ ವಿಜಯಂ.
3. ಬ ಪು. ಸಂ 53.
4. ಭೈರವೇಶ್ವರಕಾವ್ಯದ ಕಥಾಸೂತ್ರರತ್ನಾಕರ.

ಗಲು ಶರಣಾಗತರಾದ ವಿಪ್ರರಿಂದ ಜಯಪತ್ರಿಕೆಯನ್ನು ಹೊಂದಿದಂತೆ ವೀರಶೈವ ಗ್ರಂಥಗಳಲ್ಲಿ ಹೇಳಿದೆ.[1]

---

## ಮಲ್ಲಿಕಾರ್ಜುನಪಂಡಿತಾರಾಧ್ಯ. ಸು. 1160.

ಈತನು ವಚನಗಳು, ಗಣಸಹಸ್ರನಾಮ, ಇಷ್ಟಲಿಂಗಸ್ತೋತ್ರ, ಬಸವಗೀತ ಎಂಬ ಗ್ರಂಥಗಳನ್ನು ರಚಿಸಿದಂತೆ ತಿಳಿಯುತ್ತದೆ. ಇವನು ವೀರಶೈವ ಕವಿ.

**ಗುರುರಾಜನ** (ಸು. 1430) **ಸಂಸ್ಕೃತಪಂಡಿತಚರಿತ್ರ**, **ನೀಲಕಂಠಾಚಾರ್ಯನ** (ಸು. 1485) **ಆರಾಧ್ಯಚಾರಿತ್ರ**, **ಸಿದ್ಧನಂಜೇಶನ** (ಸು. 1650) **ಗುರುರಾಜಚಾರಿತ್ರ**—ಇವೇ ಮೊದಲಾದ ಗ್ರಂಥಗಳಿಂದ ಈತನ ವಿಷಯವಾಗಿ ಈಯಂಶಗಳು ತಿಳಿಯುತ್ತವೆ:—

ಈತನು ಈಶ್ವರನಿಂದ ಭೂಲೋಕದಲ್ಲಿ ಬಸವೇಶ್ವರನೊಡನೆ ಹೋಗಿ ಅವತರಿಸುವಂತೆ ಆಜ್ಞಪ್ತನಾಗಿ[2], ಶ್ರೀಶೈಲದಲ್ಲಿ ಮಲ್ಲಿಕಾರ್ಜುನಲಿಂಗದ ಸನ್ನಿಧಿಯಲ್ಲಿ ಪುತ್ರಾರ್ಥಿಯಾಗಿ ತಪಂಬಟ್ಟಿದ್ದ, ವೆಂಗಿದೇಶಕ್ಕೆ ತಿಲಕಪ್ರಾಯವಾಗಿದ್ದ ದ್ರಾಕ್ಷಾರಾಮ ಪುರದಲ್ಲಿಯ ಭೀಮೇಶ್ವರಲಿಂಗದ ಪುರೋಹಿತನಾದ, ಪಾಣಸಾನ್ವಯಜ ಭೀಮನಪಂಡಿತನಿಗೂ ಗೌರಾಂಬೆಗೂ ಮಗನಾಗಿ ಹುಟ್ಟಿದನು. ಇವನ ಗುರು ಮಹೇಶ್ವರಗಣಾಗ್ರಣಿಯಾದ ಆರಾಂತರಾರ್ಯನ ಶಿಷ್ಯ, ರಾಜಮಂತ್ರಜ್ಞನಾದ ಕೋಟಿಪಲ್ಯಾರಾಧ್ಯನು. ಮಲ್ಲಿಕಾರ್ಜುನನು ವೆಲನಾಡು ಚೋಳರಾಜನ ಆಸ್ಥಾನಕ್ಕೆ ಹೋಗಿ ಅಲ್ಲಿ ಬಂದ ವಾದಿಗಳನ್ನು ಜಯಿಸಿ ಬೌದ್ಧಜೈನಚಾರ್ವಾಕಾದಿಮತಗಳನ್ನು ನಿರಸನಮಾಡಿ ವೀರಶೈವಾಚಾರವನ್ನು ಸ್ಥಾಪಿಸಿದನು. ಚೋಳನು ಈತನ ಕಣ್ಣನ್ನು ಕೀಳಿಸಲು ಈತನು ಅವನನ್ನು ಶಪಿಸಿ ಆ ದೇಶವನ್ನು ಬಿಟ್ಟು ಅಮರಾರಾಮನಗರಕ್ಕೆ ಬಂದು ಅಲ್ಲಿ ಗಣಸಹಸ್ರಸ್ತುತಿಯನ್ನು ಹೇಳಿ ಈಶ್ವರನ ಅನುಗ್ರಹದಿಂದ ಊರ್ಧ್ವನೇತ್ರವನ್ನು ಪಡೆದನು.[3]

ಅಮರಾರಾಮನಗರಕ್ಕೆ ಬಂದು ನೆಲಸಿದುದರಿಂದ ಈತನಿಗೆ **ಅಮರಗುಂಡದ ಮಲ್ಲಿಕಾರ್ಜುನ** ಎಂಬ ಹೆಸರೂ ಉಂಟು. ಬಸವನು ಕಳುಹಿಕೊಟ್ಟ ಭಸಿತವನ್ನು ಧರಿಸಿಕೊಳಲು ಈತನಿಗೆ ಆ ಕ್ಷಣವೇ ಕರ್ಣಾಟಭಾಷೆ ಬಂದಿತು. ಆ ಭಾಷೆಯಿಂದ ಇಷ್ಟಲಿಂಗಸ್ತೋತ್ರವನ್ನೂ ಬಸವಮಾಹಾತ್ಮ್ಯಗೀತಗಳನ್ನೂ ಮಾಡಿದನು. ಈತನು ಕಲ್ಯಾಣಕ್ಕೆ ಹೋಗಿ ಬಸವನನ್ನು ನೋಡ

---

1 ಪ್ರಸಾದಃ ಪಾವನ ಇತಿ ಪ್ರತಿಜ್ಞಾಯಾಗ್ನಿಮಂಡಲೇ |
ಬಧ್ವಾ ಬಬಂಧ ಯಶ್ಶಮ್ಯಾಂ ಜೀಯಾಚ್ಛ್ರೀಪತಿಪಂಡಿತಃ || ಶಂಕರಾರಾಧ್ಯನ ಬಸವೇಶ [ವಿಜಯ.

2. ಅನುಗಚ್ಛ ತ್ವಮಸ್ಮೇನಂ ಕುಮಾರಂ ಬಸವೇಶ್ವರಂ |

3 ಶ್ರೀಮಲ್ಲಿಕಾರ್ಜುನಾರಾಧ್ಯದೇವಾಯಾಂಜಲಿರಸ್ತು ತೇ |
ಅವಾಪ್ತೋರ್ಧ್ವದೃಶೇ ರುದ್ರಾತ್ ವಿದ್ರಾವಿತವಿರೋಧಿನೇ ಶಂಕರಾರಾಧ್ಯನ ಬಸವೇಶ [ವಿಜಯ.

ೀಕೆಂದು ಹೊರಟು ಹಾನುಗಲ್ಲಿಗೆ ಬಂದಾಗ ದಾರಿಯಲ್ಲಿ ಒಬ್ಬ ಚರನು ಬಂದು ಬಸವಂ ಕೂಡಲಸಂಗಮೇಶ್ವರನಲ್ಲಿ ಅಡಗಿದಂ; ಬಿಜ್ಜಳನಂ ಶರಣರು ಕೊಂದರು" ಎಂದು ಹೇಳಲು, "ಬಸವ ಬಯಲಾದೆಯಾ" ಎಂಬ ಅಳಲಿ ಗೀತವನ್ನು ಹಾಡಿದನು[1]. ಬಳಿಕ ಶ್ರೀಗಿರಿಗೆ ಹೋಗಿ ಅಲ್ಲಿ ಶಿವೈಕ್ಯನಾದನು. ಈತನ ವಿಷಯವಾಗಿ ಪಂಡಿತಚರಿತ್ರ, ಆರಾಧ್ಯಚಾರಿತ್ರ ಮೊದಲಾದ ಗ್ರಂಥಗಳು ಹುಟ್ಟಿವೆ.

ಈತನ ಗ್ರಂಥಗಳಲ್ಲಿ—

## 1. ವಚನಗಳು.

ಇವನ ವಚನಗಳಲ್ಲಿ ಅಮರಗುಂಡದ ಮಲ್ಲಿಕಾರ್ಜುನ ಎಂಬ ಅಂಕಿತವಿದೆ. ಒಂದು ವಚನವನ್ನು ಉದಾಹರಿಸುತ್ತೇವೆ:—

ನೆನೆವ ಮನಕ್ಕೆ ಮಣ್ಣನೆ ತೋಱದೆ; ನೋಡುವ ಕಣ್ಣಿಗೆ ಹೆಣ್ಣನೆ ತೋಱದೆ; ಪೂಜಿಸುವ ಕೈಗೆ ಹೊನ್ನನೆ ತೋಱದೆ. ಈ ತ್ರಿವಿಧವನೆ ತೋಱಕೊಟ್ಟು ಮಱಹನಿಕ್ಕಿದೆಯಯ್ಯಾ, ಅಮರಗುಂಡದ ಮಲ್ಲಿಕಾರ್ಜುನ. ನೀ ಮಾಡಿದ ಬಿನ್ನಾಣಕ್ಕಾನು ಬೆಱಗಾದೆನು ‖ 188 ‖

## 2. ಗಣಸಹಸ್ರನಾಮ.

ಈ ಗ್ರಂಥವನ್ನು ಪಂಡಿತಾರಾಧ್ಯನು—ವೆಲನಾಡು ಚೋಳನ ಸಭೆಯಲ್ಲಿ ಹರನಿಂದೆಯಂ ಕೇಳ್ದ ದೋಷ, ಬೌದ್ಧರ ಕೂಡೆ ಸರಿಯಾಗಿ ವಾದಿಸಿದ ತಪ್ಪು, ಅವರನ್ನು ನೋಡಿದ ತಪ್ಪು, ಪರವಾದಿಗಳನ್ನು ಸಂಹರಿಸದೆ ಸೈರಿಸಿದ ತಪ್ಪು, ಅವರನ್ನು ಸೋಂಕಿದ ಪಾತಕ—ಇವುಗಳನ್ನು ಪರಿಹರಿಸುವುದಕ್ಕೋಸ್ಕರ ಮಾಡಿದುದಾಗಿ ಸಿದ್ಧನಂಜೇಶನು ಹೇಳುತ್ತಾನೆ. ಇದರಲ್ಲಿ ಪ್ರಮಥಗಣ, ರುದ್ರಗಣ, ವೃಷಭಯೋಗಾಚಾರ್ಯರು, ಅರುವತ್ತುಮೂವರು, ಷೋಡಶಸುಮತಿಗಳು, ತೇರಸರು, ದಶಗಣ, ಪುರಾತನರು ಇವರುಗಳ ನಾಮಗಳು ಹೇಳಿವೆ.

ಈತನ ಇತರ ಗ್ರಂಥಗಳು ನಮಗೆ ದೊರೆತಿಲ್ಲ.

---

## ವೀರಶೈವಾಚಾರ್ಯಪಂಚಕ.

ವೀರಶೈವಕವಿಗಳು ತಮ್ಮ ಗ್ರಂಥಗಳಲ್ಲಿ—ರೇವಣ, ಮರುಳಸಿದ್ಧ, ಏಕೋರಾಮಿತಂದೆ, ಪಂಡಿತಾರಾಧ್ಯ, ವಿಶ್ವೇಶ್ವರ—ಎಂಬ ಐವರು ಆಚಾರ್ಯರುಗಳನ್ನು ಪ್ರಾಯಿಕವಾಗಿ ಸ್ತುತಿಸುತ್ತಾರೆ. ಇವರುಗಳಲ್ಲಿ ಕೆಲವರು ಬಸವನಿಗೆ

1. ಗುಬ್ಬಿ ರಾಜನ ಪಂಡಿತಚರಿತ್ರದಲ್ಲಿ ಇವನು ಬಸವನೊಂದಿಗೆ ಮಾತಾಡಿದಂತೆ ಹೇಳಿದೆ.

ಹಿಂದೆ ಇದ್ದಂತೆಯೂ ಕೆಲವರು ಅವನ ಸಮಕಾಲದಲ್ಲಿ ಇದ್ದಂತೆಯೂ ತೋರುತ್ತದೆ. [1]

ಇವರುಗಳಲ್ಲಿ ಒಬ್ಬಿಬ್ಬರು ಕನ್ನಡದಲ್ಲಿ ಗ್ರಂಥರಚನೆಮಾಡಿರುವುದಾಗಿ ತಿಳಿವುದರಿಂದ ಈ ಐವರನ್ನೂ ಒಂದೇ ಕಡೆಯಲ್ಲಿ ಸೇರಿಸಿ ವೀರಶೈವಗ್ರಂಥಗಳಲ್ಲಿ ಇವರುಗಳ ವಿಷಯವಾಗಿ ಹೇಳಿರುವ ಅಂಶಗಳನ್ನು ಸ್ವಲ್ಪ ಮಟ್ಟಿಗೆ ತಿಳಿಸುತ್ತೇವೆ.

## ರೇವಣಸಿದ್ಧ ಅಥವಾ ರೇಣುಕಾಚಾರ್ಯ.

ಈತನು ಕೊಲ್ಲಿಪಾಕದ ಮಹಾಲಿಂಗಗರ್ಭದಲ್ಲಿ ಜನಿಸಿದನು. ಕ್ಷಿತಿಪ ಚಾಳೋಕ್ಯಂಗೆ ಸುರಗಿಯುಂ ತೋರಿದನು; ವಿಕ್ರಮಂಗೆ ಒಂದು ಸುರಗಿಯನಿತ್ತನು. ಚಾಮುಲವ್ವೆಗೊಲಿದು ಸೊನ್ನಲಾಪುರದ ಸಿದ್ಧರಾಮನ ಉದಯವನು ಅರುಹಿದನು. ವೈಷ್ಣವಚೋಳನಂ ವಾದದಲ್ಲಿ ಗೆದ್ದನು; ರಾಜೇಂದ್ರಚೋಳಾದಿರಾಜರ ಮಕ್ಕಳನ್ನು ಮದುವೆಯಾದನು. ಇವನ ಮಗ ರುದ್ರಮುನಿ.

ರೇವಣಸಿದ್ಧನ ವಿಷಯವಾಗಿ ರೇವಣಸಿದ್ಧೇಶ್ವರಕಾವ್ಯ, ರೇವಣಸಾಂಗತ್ಯ, ರೇವಣಸಿದ್ಧೇಶ್ವರಪುರಾಣ, ರೇಣುಕಾರ್ಯಚರಿತೆ ಮೊದಲಾದ ಗ್ರಂಥಗಳು ಹುಟ್ಟಿವೆ.

## ಮರುಳಸಿದ್ಧ.

ಈತನು ಕಗ್ಗಲ್ಲಗವುಡನಿಗೆ ಮಗುವಾಗಿ ಸಿಕ್ಕಿದನು. ಜಜ್ಜುಗಂತೆಯ ಧರಿಸಿ ಕೊಲ್ಲಾಪುರದ ರಕ್ಕಸಿಯ ಕೊಂದು ಅವಳ ಅವಯವಗಳಿಂದ ಕಿನ್ನರ ವೀಣೆಯಂ ಮಾಡಿಕೊಂಡನು. ಮರುಳಂತೆ ಇದ್ದು ಉಜ್ಜಗಿಯಲ್ಲಿ ಬಯಲಾದನು.

## ಪಂಡಿತಾರಾಧ್ಯ.

ಈತನು ವೀರಶೈವಪಂಡಿತತ್ರಯದಲ್ಲಿಯೂ ಒಬ್ಬನು. ಇವನ ಚರಿತವು ಹಿಂದೆಯೇ ಬರೆದಿದೆ. [2]

## ಏಕೋರಾಮಿತಂದೆ.

ಇವನು ಚೆನ್ನಮುದ್ರಾಪುರದ ಭಕ್ತರುದರದಲ್ಲಿ ಜನಿಸಿದನು; ಘಂಟಾಕರ್ಣ ಗಣನಾಥಾಚಾರ್ಯನಿಂದ ಉಪದೇಶವನ್ನು ಪಡೆದು ಶಿವಮಹತ್ವಾಧಿಕ್ಯಮಂ ಶಾಸ್ತ್ರಪೂರ್ವಕವಾಗಿ ಶಿವಭಕ್ತರಿಗೆ ಬೋಧಿಸಿದನು. ಅನೇಕವಾದಿಗಳನ್ನು ಜಯಿಸಿದನು. ಮುದ್ರಾಪುರದ ವೀರಭಾಸ್ಕರನೃಪತಿ ವೈಷ್ಣವಮತೋದ್ಧಾರಕನೂ ಷಟ್ಶಾಸ್ತ್ರಪಾರ

---

1. ಸುಪ್ರಭೇದಾಗಮದ ಭಾಗವೆಂದು ಮುದ್ರಿತವಾಗಿರುವ ಸಂಸ್ಕೃತಪುಸ್ತಕದಲ್ಲಿ ಈ ಪಂಚಾಚಾರ್ಯರು ಈಶ್ವರನ ಪಂಚಮುಖಗಳ ಅವತಾರಗಳೆಂದೂ ಪಂಚಕ್ಷೇತ್ರಗಳ ಲಿಂಗಗಳಿಂದ ಉತ್ಪನ್ನರಾದವರೆಂದೂ ಹೇಳಿದೆ.

2. ಪುಟ 213.

ಗನೂ ಆದ ವ್ಯಾಸನೆಂಬ ವಿದ್ವಾಂಸನಿಗೆ ಮರ್ಯಾದೆಮಾಡಿದುದನ್ನು ತಿಳಿದು ಆವ ನನ್ನು ವಾದದಲ್ಲಿ ಸೋಲಿಸಿ ಅವನಿಗೆ ರಾಮನಾಥಾಚಾರ್ಯನೆಂಬ ಹೆಸರನ್ನಿಟ್ಟನು. ಭೋಗಮಲ್ಲಿಕಾರ್ಜುನಲಿಂಗದಾಲಯಕೆ ಬಂದು ಆ ಲಿಂಗದಲ್ಲಿ ಅಡಗಿದನು.[1]

## ವಿಶ್ವೇಶ್ವರಾಚಾರ್ಯ.

ನಮಗೆ ದೊರೆತ ವೀರಶೈವಗ್ರಂಥಗಳಲ್ಲಿ ಈತನ ಚರಿತವು ಎಲ್ಲಿಯೂ ವಿಸ್ತಾರ ವಾಗಿ ಹೇಳಿಲ್ಲ. ಸಿದ್ಧನಂಜೇಶನ (ಸು. 1650) ಗುರುರಾಜಚಾರಿತ್ರದಲ್ಲಿ "ಈಶ್ವ ರನೇ ಕಳಶದಾಚಾರ್ಯ ವಿಶ್ವೇಶ್ವರನಾಗಿ ಧರೆಯಂ ಪಾಲಿಸಿದಂ" ಎಂದೂ ಈತನ ಶಿಷ್ಯನು ಸದಾಶಿವಾಚಾರ್ಯ ಅಥವಾ ಪಂಚವರ್ಣಿಗೆಯ ಸ್ವಾಮಿಯೆಂದೂ ಈತನ ಶಿಷ್ಯಪರಂಪರೆಯಲ್ಲಿ ಕೆಲವರು ರಾಜಸನ್ಮಾನಿತರಾಗಿದ್ದರೆಂದೂ ಹೇಳಿದೆ

ಚತುರಾಚಾರ್ಯಪುರಾಣದಲ್ಲಿ (1698) ಹಿಂದೆ ಹೇಳಿದ ನಾಲ್ಕು ಆಚಾರ್ಯರು ಗಳ ಚರಿತ್ರವು ಮಾತ್ರ ವರ್ಣಿತವಾಗಿದೆ.

---

## ಹಂಸದೇವ. 1161.

ಈತನು ಚಿಕ್ಕನಾಯಕನಹಳ್ಳಿ 32 ನೆಯ ಶಾಸನವನ್ನು ಬರೆದುದಾಗಿ ಆ ಶಾಸನದಲ್ಲಿರುವ "ಹೇಟಿಂದ ಕವಿ ಹಂಸದೇವಂ" ಎಂಬ ವಾಕ್ಯದಿಂದ ತಿಳಿಯು ತ್ತದೆ. ಈ ಶಾಸನವು ಹೊಯ್ಸಳ ನಾರಸಿಂಹನ (1141—1173) ಆಳಿಕೆಯಲ್ಲಿ 1161 ರಲ್ಲಿ ಬರೆದುದು.

---

## ದೇವಭದ್ರಮುನಿ. 1161.

ಈತನು ಚಿಕ್ಕನಾಯಕನಹಳ್ಳಿ 21 ನೆಯ ಶಾಸನವನ್ನು ಬರೆದುದಾಗಿ ಆ ಶಾಸನದ ಕೊನೆಯಲ್ಲಿರುವ ಈ ಪದ್ಯದಿಂದ ತಿಳಿಯುತ್ತದೆ:—

ಉಚಿತಪದಾಳಂಕಾರಂ । ಪ್ರಚುರರಸಂ ನೆಗೞಲಿಂತು ಜಿನಶಾಸನಮಂ ।
ರಚಿಯಿಸಿದಂ ಹರಹಾಸ । ದ್ರುಚಿರಯಶಂ ದೇವಭದ್ರಮುನಿಪೋತ್ತಂಸಂ

ಈ ಶಾಸನವು ಹೊಯ್ಸಳ ನಾರಸಿಂಹನ ಆಳಿಕೆಯಲ್ಲಿ (1141—1173) ಶಕ 1083 ರಲ್ಲಿ ಬರೆದುದು. ಇದರಲ್ಲಿ ಸಾಮಂತಗೋವಿದೇವನು ಹೆಗ್ಗೆರೆಯ ಚೆನ್ನಪಾರ್ಶ್ವದೇವರ ಬಸದಿಗೆ ಸವಣಗೆರೆಯನ್ನು ಕೊಟ್ಟಂತೆ ಹೇಳಿದೆ.

1. ದೇವಾಂಗ ಪುರಾಣದಲ್ಲಿ—ದೇವಾಂಗನ ಏಳನೆಯ ಅವತಾರವಾದ ದೇವದಾಸನಿಗೆ ನಿಕೋ ರಾಮ ಎಂಬ ಒಬ್ಬ ಮಗನಿದ್ದಂತೆಯೂ ಆತನು ಜೈನನಾಗಿದ್ದ ಬಿಜ್ಜಳನ ಹೆಂಡತಿಯನ್ನು ಶೈವಳನ್ನಾಗಿ ಮಾಡಿದಂತೆಯೂ—ಹೇಳಿದೆ.

ಈ ಶಾಸನದ ಬಂಧವನ್ನು ನೋಡಿದರೆ ದೇವಭದ್ರನು ಸಂಸ್ಕೃತ ಕನ್ನಡ ಎರಡರಲ್ಲಿಯೂ ಉದ್ದಾಮಕವಿಯಾಗಿದ್ದಂತೆ ತಿಳಿಯುತ್ತದೆ. ಈ ಶಾಸನದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ:—

## ವಿಷ್ಣುನೃಪ.

ಅರಿಪುರಂದೊಳ್ ಧಗಿಲ್ಧಗಿಧಗಿಲ್ಧಗಿಲೆಂಬುದರಾತಿಭೂಮಿಪಾ |
ಳರ ಶಿರದೊಳ್ ಗರಿಲ್ಗರಿಗರಿಲ್ಗರಿಲೆಂಬುದು ವೈರಿಭೂತಳೇ ||
ಶರ ಕರುಳೊಳ್ ಚಿಮಿಲ್ಚಿಮಿಚಿಮಿಲ್ಚಿಮಿಲೆಂಬುದು ಕೋಪವಹ್ನಿ ದು |
ರ್ಧರತರಮೆಂದೊಡಳ್ಕುಜಿಪೆ ಕಾದುವರಾರ್ ಮಲೆರಾಜರಾಜನೊಳ್ || 489 ||

## ಬಿಟ್ಟಿದೇವಸಾಮಂತ.

ನಲಿದುಲಿದಟ್ಟಿಕೊಂಡು ಕವಿತರ್ಪ ವಿರೋಧಿಬಳಕ್ಕೆ ಭೀತಿಯಿಂ |
ನೆಲವೊಲನೆನ್ನದಲ್ಲದಿದು ಪೆರ್ಬಲಮೆನ್ನದೆ ದೋಃಪ್ರತಾಪದಿಂ ||
ಗಿಲಿಗಿಲಿಗಂಬವಾಡಿಸುವನಾಹವದೊಳ್ ಕಲಿಬಿಟ್ಟಿದೇವನಿ |
ನ್ನಲೆಗಳವಂಗೆ ಸಂಗರದೊಳಾಂಪನೆ ಗಾಂಪನವಾರ್ಯಶೌರ್ಯನೊಳ್ || 490 ||

ಹೊಡೆವ ಬಜ್ರಸಿಡಿಲ ಕಾಳನ | ಕುಡುದಾಡೆಯ ಹರನ ನೊಸಲ ಕಣ್ಣ ಪೊಡರ್ಪಂ |
ಪಡೆವುದು ಸಮರದೊಳೆಡಱ್ದ | ಕಡುಗಲಿಗಳ ಕಣ್ಗೆ ಬಿಟ್ಟಿದೇವನ ಸಬಳಂ || 491 ||

## ಗೋವಿದೇವ.

ಎರೆದವರ್ಗಿತ್ತ ಚಾಗಮುದು ಬಿತ್ತೆನಲೀಶ್ವರನದ್ರಿಮಧ್ಯದೊಳ್ |
ಗಿರಿಜೆಯಪಾಂಗವೀಕ್ಷಣದೊಳಂಕುರಿಸಿ ದ್ಯುನದೀಪ್ರವಾಹದಾ ||
ಪರಿಕರದಿಂದೆ ಪಲ್ಲವಿಸಿ ದಿಗ್ಗಜದಂತಮುಡರ್ಪೆನಲ್ಕೆ ಭಾ |
ಸುರಮೆನೆ ಗೋವಿದೇವನ ಯಶೋಲತೆ ಪರ್ಬಿದುದೆಯ್ದೆ ಲೋಕಮಂ || 492 ||

---

## ಶಾಂತಿನಾಥ. 1165.

ಈತನು ನಾಗಮಂಗಲದ 30 ನೆಯ ಶಾಸನವನ್ನೂ ಅರಸಿಯಕೆರೆಯ 48 ನೆಯ ಶಾಸನವನ್ನೂ ಬರೆದುದಾಗಿ ಆ ಶಾಸನಗಳ ಕೊನೆಯಲ್ಲಿರುವ

ದಕ್ಷಿಣಹೆ[1]ಮ್ಮನಮುಮ್ಮಂ | ಲ[1]ಕ್ಷಣಕವಿ ಶಾಂತಿನಾಥ ಕವಿಕುಳತಿಳಕಂ |
ದಾಕ್ಷಿಣ್ಯನಿಧಿ ಗು[1]ಣೋತ್ಕರ | ಶಿಕ್ಷಾಗುರು ಸೇಟ್ಟಿನಟ್ಟಿಯಿಂ.. ಶಾಸನಮಂ ||

ಎಂಬ ಪದ್ಯದಿಂದ ತಿಳಿಯುತ್ತದೆ. ಶಿಕ್ಷಾಗುರು ಎಂಬುದರಿಂದ ಈ ಕವಿ ಉಪಾಧ್ಯಾಯನಾಗಿದ್ದಿರಬಹುದು. ಈತನು ಬ್ರಾಹ್ಮಣಕವಿಯೆಂದು ತೋರುತ್ತದೆ.

---

1. ಅರಸಿಯಕೆರೆಯ ಶಾಸನದಲ್ಲಿ—ಸೋಮನ, ಲಕ್ಷ್ಮಣ ಗುಣಾಕರ— ಎಂಬ ಪಾಠಾಂತರಗಳಿವೆ.

ಮೇಲೆ ಹೇಳಿದ ಶಾಸನಗಳಲ್ಲಿ ಮೊದಲನೆಯದು ವೀರಬಲ್ಲಾಳನ ಆಳಿಕೆಯಲ್ಲಿ ಪಾರ್ಥಿವಸಂವತ್ಸರದಲ್ಲಿ—ಎಂದರೆ 1165 ರಲ್ಲಿ—ಬರೆದುದು; ಇದರಲ್ಲಿ ವೀರ ಬಲ್ಲಾಳನ ಚಮೂಪತಿಯಾದ ಹುಳ್ಳರಾಜನ ಅಣ್ಣ ಹೆಗ್ಗಡೆ ಕಂಟಿಮಯ್ಯನು ಮಧುಕೇಶ್ವರದೇವರಿಗೆ ದತ್ತಿಯಂ ಬಿಟ್ಟಂತೆ ಹೇಳಿದೆ. ಎರಡನೆಯ ಶಾಸನವೂ ವೀರ ಬಲ್ಲಾಳನ ಆಳಿಕೆಯಲ್ಲಿ ಶಕ 1051 ನೆಯ ಸೌಮ್ಯಸಂವತ್ಸರದಲ್ಲಿ—ಎಂದರೆ 1129 ರಲ್ಲಿ—ಬರೆದುದೆಂದು ಹೇಳಿದೆ. ಆದರೆ 1129 ರಲ್ಲಿ ವಿಷ್ಣುವರ್ಧನನು ಆಳುತ್ತಿದ್ದಂತೆಯೂ ವೀರಬಲ್ಲಾಳನು 1173 ರಿಂದ 1220 ರವರೆಗೆ ಆಳಿದಂತೆಯೂ ತಿಳಿಯಬರುವುದರಿಂದ ಈ ಶಾಸನದ ವರ್ಷವು 1189 ಆಗಿರಬೇಕು. ಮೊದಲನೆಯ ಶಾಸನದಲ್ಲಿ ಹೇಳಿರುವ ವರ್ಷದಲ್ಲಿ (1165) ವೀರಬಲ್ಲಾಳನು ಯುವರಾಜನಾಗಿದ್ದಿರಬಹುದು ಎರಡನೆಯದರಲ್ಲಿ 'ಹೊಯ್ಸಳವೀರಬಲ್ಲಾಳದೇವನ ಬೆಸದಿಂ ಜಗತಿಯ ಕೊತ್ತಳಿಗಳ್' ಮೊದಲಾದವರು ಜಗತೇಶ್ವರದೇವರಿಗೆ ದತ್ತಿಯಂ ಬಿಟ್ಟಂತೆ ಹೇಳಿದೆ.

ಶಾಂತಿನಾಥನು ಪ್ರೌಢಕವಿ ಎಂಬಂಶವು ಈ ಶಾಸನಗಳಲ್ಲಿಯ ಪದ್ಯಗಳಿಂದ ವ್ಯಕ್ತವಾಗುತ್ತದೆ ಇವುಗಳಲ್ಲಿ ಕೆಲವನ್ನು ಉದ್ಧರಿಸಿ ಬರೆಯುತ್ತೇವೆ:—

## ಎರೆಯಂಗನ ಮಹಿಷಿ ಏಚಲೆ.

ಕಡುಜಡ್ಡು ನಾರ್ಕುವಾಹಾ। ಲ್ಗಡಲ ಮಗಳ್ ಲಕ್ಷ್ಮಿ ನಾತರ್ಣಡಂ ಗೋಪಾಳಂ।
ಬಿಡನುಚಿತಮೆಂಬೊಳೊಪ್ಪಂ। ಬಡೆದೇಚಲೆ ಪದ್ಮಗಂಧಿ ಸಿರಿಗಂ ಪರಿಗಂ ॥ 493 ॥

## ವಿಷ್ಣುವರ್ಧನ.

ಕಮಲಾಕ್ಷಂ ಪುರುಷೋತ್ತಮಂ ವಿಬುಧಲೋಕಾಹ್ಲಾದನಂ ದ್ವಿಪ್ಟದೃ।
ತ್ತಮದಧ್ವಂಸನನಂತಭೋಗಯುತನುರ್ವೀದಾರಧಾರೇಯನು।
ತ್ತಮಸತ್ವಾನ್ವಿತನುದ್ಧ್ವಯಾದವಕುಳಾಳಂಕಾರನೆಂದಿಂತು ವಿ।
ಷ್ಣುಮಹೀಶಂ ಸಲೆ ತಾನೆ ವಿಷ್ಣುವೆನಿಪಂ ಲಕ್ಷ್ಮೀವಧೂವಲ್ಲಭಂ ॥ 494 ॥

## ನರಸಿಂಹ.

ಇದಿರಾದರಿಭೂಪಾಳರ। ಮದದಾನೆಯ ಕೊಂಬನುಡಿದು ದಂತದ ಬಳೆಯಂ।
ಬಿದುವಿನ ಮುತ್ತಿನ ಹಾರಮ। ನೊದವಿಸಿ ಜಯಸಿರಿಗೆ ತುಡಿಸುವಂ ನರಸಿಂಹಂ ॥
॥ 495 ॥

ವಿಸಸನದೊಳ್ ಕಿಚ್ಚಾಡೆ ನಿ। ನ್ನಸಿಲತೆ ವೈರಿಗಳ ಹೃದಯದೊಳ್ ನಾಂಟಿ ತಳಿರ್।
ಪಸರಿಸೆ ಬೆನ್ನೊಳ್ ಬಳೆವುದು। ಪೊಸತೊಂದಚ್ಚರಿ ನೃಸಿಂಹ ಭಾವಿಸೆ ಜಗದೊಳ್
॥ 496 ॥

## ವೀರಬಲ್ಲಾಳ.

ಕಲಿಕಾಲಕ್ಷತ್ರಪುತ್ರಪ್ರಬಳತರದುರಾಚಾರಸಂದೋಹದಿಂದಂ ।
ಹೊಲೆ ಹೊದ್ದಲ್ ಹೇಸಿ ಬೇಸತ್ತಳವಳಿದ ಮಹೀಕಾಂತೆಯಂ ರಕ್ಷಿಸಲ್ಕಾ ॥
ಜಲಜಾಕ್ಷಂ ತಾನೆ ಬಂದಂತವತರಿಸಿದವೋಲ್ ವೀರಬಲ್ಲಾಳಭೂಪಂ ।
ಕುಲಜಾತ್ಯಾಧಾ. . . ನೃಪವರನುದಯಂಗೆಯ್ದನಾಶ್ಚರ್ಯಶೌರ್ಯಂ ॥ 497 ॥

## ಹೆಮ್ಮ.

ಜವನೊಡನಾದೊಡಂ ಸೆಣಸಿ ಜತ್ತಕುಱಾಡುವ ವೀರಮುಂದೊಡೀ ।
ಭುವನದೊಳಾಂತು ನಿಂದರಿನೃಪಾಳರ ನುಂಗುವ ಕಾಲಮೃತ್ಯುವಾ ॥
ಹವದೆಡೆಗಾಗಳುಂ ಬಿಡದೆ ಬೀಸುವ ನಂಜಿನ ಗಾಳಿಯೆಂದೊಡೀ ।
ಸ್ಥಿವನ ಪೊಡರ್ಪನೇಂ ಪೊಗೞ್ವುದೋ ಕಲಿಹೆಮ್ಮನಜಿಗುಮ್ಮನಂ ॥ 498 ॥

## ಕಳಿಕಟ್ಟೆ.

ತೀವಿದ ಚೆನ್ನನಪ್ಪ ಕೆಱೆಯೊಪ್ಪುವ ಕಾತ ಕವುಂಗು ಸುತ್ತಲುಂ ।
ಶ್ರೀವನಲಕ್ಷ್ಮಿ ಕಣ್ದೆಱೆದವೋಲ್ ಬೆಳೆದಿರ್ದ ಸುಗಂಧಶಾಳಿಯುಂ ॥
ಭೂವಸುಧಾತಳಾಗ್ರದೊಳೆ ರಮ್ಯಮೆನಲ್ ಕಳಿಕಟ್ಟೆ ನಾಡೆಯುಂ ।
ದೇವಗೃಹಂಗಳಿಂ ಪೆಸೆದು ಶೋಭಿಸುತಿರ್ಪುದು ನೋಳ್ಪದುರ್ಗ್ಗಗಳೊಳ್ ॥ 499 ॥

---

## ಹರೀಶ್ವರ, ರಾಘವಾಂಕ, ಕೆರೆಯ ಪದ್ಮರಸ.

### ವಿಚಾರಂ.

ಹರೀಶ್ವರಾದಿಗಳ ಚರಿತವನ್ನು ಬರೆವುದಕ್ಕೆ ಮುಂಚೆ ಇವರ ಕಾಲವನ್ನು ನಿರ್ಧರಿಸುವುದಕ್ಕಾಗಿ ಸ್ವಲ್ಪ ವಿಚಾರವು ಆವಶ್ಯಕವಾಗಿದೆ.

ಹರೀಶ್ವರನು—1283 (?) ರಲ್ಲಿ ಆಳುವುದಕ್ಕೆ ಆರಂಭಿಸಿದ ವೀರನರಸಿಂಹ ಬಲ್ಲಾಳನ ಕಾಲದಲ್ಲಿ ಇದ್ದಿರಬೇಕೆಂದು ಮ॥ ಕಿಟಲ್ ಈ ರೀತಿಯಾಗಿ ನಿರ್ಣಯಿಸಿದ್ದಾರೆ[1]:—

ಹರೀಶ್ವರನ ಸೋದರದಳಿಯನಾದ ರಾಘವನು ಪಂಪಾಪುರದ ರಾಜನಾದ ದೇವರಾಜನ (1286–1328) ಸಭೆಯಲ್ಲಿ ಹರಿಶ್ಚಂದ್ರಕಾವ್ಯವನ್ನು ಓದಿದಂತೆಯೂ ಓರಗಲ್ಲಿಗೆ ಹೋಗಿ ಕಾಕತೀಯರುದ್ರನ (1292–1335) ಸಭೆಯಲ್ಲಿ ವೀರೇಶ್ವರಚರಿತವನ್ನು ನಿರ್ಮಿಸಿ ಓದಿ ಅಲ್ಲಿದ್ದ ಕುಕವಿಗಳನ್ನು ಸೋಲಿಸಿದಂತೆಯೂ ನರಸಿಂಹಬಲ್ಲಾಳನ ಮಂತ್ರಿಯಾದ ಕೆರೆಯಪದ್ಮರಸನನ್ನು ನೋಡುವುದಕ್ಕೆ ಬೇಲೂರಿಗೆ ಹೋದಂತೆಯೂ ರಾಘವಾಂಕಚರಿತದಿಂದ ತಿಳಿಯಬರುತ್ತದೆ. ಈ ನರಸಿಂಹಬಲ್ಲಾಳನು ದೇವರಾಜ, ಕಾಕತೀಯರುದ್ರ ಇವರ

---

1. ಛಂದೋಂಬುಧಿಯ ಉಪೋದ್ಘಾತ, ಪುಟ 53

ಸಮಕಾಲದವನಾಗಿರಬೇಕಾದುದರಿಂದ ಇವನು 1283 ರಿಂದ ರಾಜ್ಯಭಾರಮಾಡಿದ ವೀರ ನರಸಿಂಹಬಲ್ಲಾಳನೇ ಆಗಿರಬೇಕು. ಇವನನ್ನೇ ಚೆನ್ನಬಸವಪುರಾಣದಲ್ಲಿ ಬಿಟ್ಟಬಲ್ಲಾಳ ಎಂದು ಕರೆದಿದೆ. ಆದುದರಿಂದ ಹರೀಶ್ವರನು ಸು. 1290 ರಲ್ಲಿ ಇದ್ದಿರಬೇಕು.

ಆದರೆ ಹರೀಶ್ವರ, ರಾಘವ, ಕೆರೆಯ ಪದ್ಮರಸ ಇವರು ಸುಮಾರು 1165 ರಲ್ಲಿ ಇದ್ದರು ಎಂಬುದಕ್ಕೆ ಪ್ರಬಲವಾದ ಕಾರಣಗಳಿವೆ.

(1) ಮಲ್ಲಿಕಾರ್ಜುನನು (ಸು. 1245) ತನ್ನ ಸೂಕ್ತಿಸುಧಾರ್ಣವದಲ್ಲಿ ಹರೀಶ್ವರನ ಗಿರಿಜಾಕಲ್ಯಾಣದಿಂದ ಅನೇಕಪದ್ಯಗಳನ್ನು ಉದ್ಧರಿಸಿ ಬರೆದಿದ್ದಾನೆ. ಇದರಿಂದ ಹರೀಶ್ವರನು 1245 ಕ್ಕೆ ಹಿಂದೆ ಇದ್ದನೆಂಬುದು ವ್ಯಕ್ತವಾಗುತ್ತದೆ.

(2) ಸೋಮರಾಜನು (1222) ತನ್ನ ಉದ್ಭಟಕಾವ್ಯದಲ್ಲಿ—"ಪ್ರಮಥಾನೀಕ ಕಥಾರ್ಣವೇಂದು ಪರಿದೇವಾಚಾರ್ಯನಂ—ವಿಮಲಜ್ಞಾನಸುದೀಪಿಕಾಸ್ಫುರಿತಚೇತಸ್ಸದ್ಮನಂ ಪದ್ಮನಂ ಬಲಗೊಂಡು ಪೇಳ್ವೆಂ ಸೀಕಾವ್ಯಮಂ" ಎಂದು ಹರೀಶ್ವರನನ್ನೂ ಕೆರೆಯ ಪದ್ಮರಸನನ್ನೂ ಸ್ತುತಿಸುವುದರಿಂದ ಇವರಿಬ್ಬರೂ 1222 ಕ್ಕಿಂತ ಹಿಂದಣವರಾಗಿರಬೇಕು.

(3) ಬಿಟ್ಟಬಲ್ಲಾಳನು 1283 ರಲ್ಲಿ ರಾಜ್ಯವಾಳಿದ ವೀರನರಸಿಂಹಬಲ್ಲಾಳನೇ ಆಗಿರಬೇಕೆಂದು ಮ॥ ಕಿಟಲ್ ಹೇಳಿದ್ದಾರೆ. ಆದರೆ ಪದ್ಮಣಾಂಕನ (ಸು. 1385) ಕೆರೆಯ ಪದ್ಮರಸಚರಿತ್ರರೂಪವಾದ ಪದ್ಮರಾಜಪುರಾಣದಲ್ಲಿಯು—

ಶ್ರೀವಿಪುಳನರಸಿಂಹಬಲ್ಲಾಳಭೂಮಿಪಂ ।
ಕೋವಿದಂ ಯುವರಾಜಪಟ್ಟಾನ್ವಿತಂ ಬಿಟ್ಟ ।
ದೇವರಾಯನೆನಿಪ್ಪಪುತ್ರಸಹಿತಂ ಯಾದವಾನ್ವಯೋದ್ಧರಣನಾದಂ ॥

ನೃಸಿಂಹಬಲ್ಲಾಳಂ ಕುಮಾರಕುಲಚಿಂತಾಮಣಿಯೆನಿಪ್ಪ ಬಿಟ್ಟಿಭೂಪಂ ಬೆರಸು ಸಿಂಹಾಸನಸ್ಥನಾಗಿರ್ದಂ—ಎಂಬ ಪದ್ಯಭಾಗಗಳಿಂದ ಕೆರೆಯ ಪದ್ಮರಸನ ಕಾಲದಲ್ಲಿ ನೃಸಿಂಹಬಲ್ಲಾಳನು ರಾಜನಾಗಿದ್ದಂತೆಯೂ ಅವನ ಮಗನಾದ ಬಿಟ್ಟಿದೇವನು ಯುವರಾಜನಾಗಿದ್ದಂತೆಯೂ ತಿಳಿಯುತ್ತದೆ. ಸೋಮರಾಜನು (1222) ಕೆರೆಯ ಪದ್ಮರಸನನ್ನು ಸ್ತುತಿಸುವುದರಿಂದ 1222 ಕ್ಕಿಂತ ಹಿಂದೆ ಪದ್ಮರಸನೂ ನರಸಿಂಹನೂ ಅವನ ಮಗ ಯುವರಾಜ ಬಿಟ್ಟಿದೇವನೂ ಇದ್ದಿರಬೇಕು. ಹೊಯ್ಸಳರಾಜರ ಪರಂಪರೆಯಲ್ಲಿ ವಿಷ್ಣುವರ್ಧನನಿಗೆ (1111—1141) ಬಿಟ್ಟಿದೇವ ಎಂಬ ಹೆಸರುಂಟೆಂದು ಶಾಸನಗಳಿಂದ ತಿಳಿಯುತ್ತದೆ. ಈ ಬಿಟ್ಟಿದೇವನ ತಂದೆಗೆ ಎರೆಯಂಗ ಎಂಬ ಹೆಸರಿದೆ; ನರಸಿಂಹ ಎಂಬ ಹೆಸರು ಬೇರೆ ಇಲ್ಲ. 1222 ಕ್ಕೆ ಹಿಂದೆ ವಿಷ್ಣುವರ್ಧನನ ಮಗ ನರಸಿಂಹಬಲ್ಲಾಳನು ಹೊರತು ಬೇರೆ ನರಸಿಂಹಬಲ್ಲಾಳನು ಯಾರೂ ಇಲ್ಲ. ಈ ನರಸಿಂಹಬಲ್ಲಾಳನು 1141 ರಿಂದ 1173 ರ ವರೆಗೆ ಆಳಿದನು. ಇವನ ಮಗ ವೀರಬಲ್ಲಾಳ. ಪದ್ಮಣಾಂಕನು ಈ ವೀರಬಲ್ಲಾಳನಿಗೆ ಅವನ ತಾತನಾದ

ವಿಷ್ಣುವರ್ಧನನ ಹೆಸರನ್ನೇ ಇಟ್ಟು ಬಿಟ್ಟಿದ್ದೇವ ಎಂದು ಕರೆದಿರಬೇಕು.[1] ಈ ನರಸಿಂಹ ಬಲ್ಲಾಳನ ಕಾಲದಲ್ಲಿಯೇ (1141—1173) ಕೆರೆಯ ಪದ್ಮರಸನು ಇದ್ದಿರಬೇಕು.

(4) 1292 ರಿಂದ 1335 ರ ವರೆಗೆ ಆಳಿದ ರುದ್ರಪ್ರತಾಪಗಣಪತಿಯ ಕಾಲದಲ್ಲಿ ರಾಘವಾಂಕನು ಓರಗಲ್ಲಿಗೆ ಹೋಗಿದ್ದಂತೆ ಮೆ|| ಕಿಟಲ್ ಹೇಳಿದ್ದಾರೆ. ಆದರೆ ರಾಘವಾಂಕನು 1222 ಕ್ಕೆ ಹಿಂದೆ ಇದ್ದ ಹರೀಶ್ವರನ ಸೋದರದ ಅಳಿಯನಾದುದರಿಂದ ಆತನು 1292 ರಿಂದ 1335 ರ ವರೆಗೆ ಆಳಿದ ರುದ್ರಪ್ರತಾಪಗಣಪತಿಯ ಸಭೆಗೆ ಹೋದನೆಂಬುದು ಅಸಂಭಾವ್ಯವಾಗಿದೆ. ಒಬ್ಬ ಕಾಕತೀಯ ರುದ್ರದೇವನು ಶಕ 1084 ನೆಯ ಚಿತ್ರಭಾನು ಸಂವತ್ಸರದಲ್ಲಿ—ಎಂದರೆ ಕ್ರಿ. ಶ. 1162 ರಲ್ಲಿ—ಇದ್ದಂತೆ ಶಾಸನಗಳಿಂದ ತಿಳಿಯುತ್ತದೆ.[2] ಈ ದೊರೆಯ ಕಾಲದಲ್ಲಿ ರಾಘವಾಂಕನು ಓರಗಲ್ಲಿಗೆ ಹೋಗಿರಬೇಕು. ಚೆನ್ನಬಸವ ಪುರಾಣದಲ್ಲಿ ರಾಘವನು ಓರಗಲ್ಲಿಗೆ ಹೋದುದಾಗಿ ಹೇಳಿದೆಯೇ ಹೊರತು ಆಗಿನ ದೊರೆಯ ಹೆಸರು ಹೇಳಿಲ್ಲ.

(5) ಪಂಪಾಪುರದ ದೇವರಾಜನು ಹರಿಹರರಾಜನಿಗೆ ಹಿಂದೆ 1286 ರಿಂದ 1328 ರ ವರೆಗೆ ರಾಜ್ಯಭಾರ ಮಾಡಿದುದಾಗಿ ಮೆ|| ಬ್ರ್ಯಾನ್ ಹೇಳಿರುತ್ತಾರೆಂದು ಮೆ|| ಕಿಟಲ್ ಬರೆದಿದ್ದಾರೆ. ಆದರೆ ಮೇಲೆ ಹೇಳಿರುವ ಕಾರಣಗಳಿಂದ ಈ ದೇವರಾಜನು ರಾಘವನ ಕಾಲಕ್ಕಿಂತ ಸುಮಾರು 120 ವರ್ಷ ಈಚೆ ಇದ್ದಿರಬೇಕು. ವಸ್ತುತಃ ರಾಘವನ ಕಾಲದಲ್ಲಿಯಾಗಲಿ 1286 ರಿಂದ 1328 ರ ವರೆಗೆಯಾಗಲಿ ದೇವರಾಜನೆಂಬ ಒಬ್ಬ ದೊರೆ ಪಂಪೆಯಲ್ಲಿ ಆಳುತ್ತಿದ್ದನು ಎಂಬ ಹೇಳಿಕೆಗೆ ಆವ ಆಧಾರವೂ ಸಿಕ್ಕಿಲ್ಲ. ಪದ್ಮರಾಜಪುರಾಣದಲ್ಲಿ—ಕೆರೆಯ ಪದ್ಮರಸನ ಪಿತಾಮಹನಾದ ಸಕಳೇಶಮಾದರಸನು ತನ್ನ ತಂದೆಯಾದ ಕಲ್ಲಕುರಿಕೆ ಮಲ್ಲರಸನೊಡನೆ ತಾನು ಸಂಸಾರವನ್ನು ಬಿಟ್ಟು ವಿರಕ್ತನಾಗುವೆನೆಂದಾಗ ಮಲ್ಲರಸನು "ಎಮ್ಮ ಬಸವಾದಿಗಳ್ ಭಕ್ತಿಯಂ ನಿಲಿಸಲೆಂದು ಕಲ್ಯಾಣದೊಳ್ ಬಂದಿರ್ಪರ್; ಅವರೊಡನೆ ಕೆಲವು ಕಾಲಮಂ ಕಳೆ" ಎಂದು ಹೇಳಿದುದಾಗಿ ತಿಳಿವುದರಿಂದ ಸಕಳೇಶಮಾದರಸನ ಕಾಲದಲ್ಲಿ ಬಸವನು ಹುಟ್ಟಿರಬಹುದು. ಕೆರೆಯ ಪದ್ಮರಸನ ತಂದೆ ಮಾಯಿದೇವನೂ ಬಸವನೂ ಸಮಕಾಲದವರಾಗಿರಬಹುದು. ಕೆರೆಯ ಪದ್ಮರಸನು ಸುಮಾರು 1165 ರಲ್ಲಿ ನರಸಿಂಹಬಲ್ಲಾಳನ ಆಳಿಕೆಯಲ್ಲಿ ಇದ್ದಿರಬೇಕು.

ಅಲ್ಲದೆ ಪದ್ಮರಾಜಪುರಾಣದಿಂದ—ರಾಘವನು ಗತಿಸಿದ ಎಂಟು ದಿನಕ್ಕೆ ಹರೀಶ್ವರನು 'ಪಂಪಾವಿರೂಪಾಕ್ಷಲಿಂಗದೊಳಡಂಗಿದಂ' ಎಂದೂ ಕೆರೆಯಪದ್ಮರಸನು ಕಾಶಿಗೆ ಹೋಗುವಾಗ ಹರೀಶ್ವರನನ್ನು ನೋಡಿ 'ಉಮಾವರಂ ನಿಮ್ಮನಿಂದಿಗೆಂಟನೆಯ ದಿನಕೆ ತನ್ನೊಳ್ ನೆರಪಲಿರ್ದಪಂ' ಎಂದು ಹೇಳಿದಹಾಗೂ ಮತ್ತು ಹರೀಶ್ವರನು ನರಸಿಂಹಬಲ್ಲಾಳನಲ್ಲಿ

---

1 ಹಾಸನ 42 ನೆಯ ಮತ್ತು 43 ನೆಯ ಶಾಸನಗಳಲ್ಲಿ ವೀರಬಲ್ಲಾಳನಿಗೆ 'ವಿಷ್ಣುವರ್ಧನ ಶ್ರೀಪ್ರತಾಪ ಹೊಯ್ಸಳ ಭುಜಬಳ ವೀರಬಲ್ಲಾಳ' ಎಂಬ ವಿಶೇಷವಾದ ಹೆಸರು ಹೇಳಿದೆ

2 *Ind. Ant.*, IX, 9.

ಕರಣಿಕನಾಗಿದ್ದಂತೆಯೂ ಇದೇ ರಾಜನ ಸಭೆಯಲ್ಲಿ ಕೆರೆಯಪದ್ಮರಸನಿಗೂ ತ್ರಿಭುವನತಾತನಿಗೂ ವಾದವು ನಡೆದಾಗ ರಾಘವನೂ ಅಲ್ಲಿ ಇದ್ದಂತೆಯೂ ತಿಳಿವುದರಿಂದ ಈ ಮೂವರೂ ಸಮಕಾಲದವರು ಎಂಬುದು ವ್ಯಕ್ತವಾಗುತ್ತದೆ.

**ಆದುದರಿಂದ ಹರೀಶ್ವರ, ರಾಘವಾಂಕ, ಕೆರೆಯಪದ್ಮರಸ ಈ ಮೂವರೂ ಸುಮಾರು 1165 ರಲ್ಲಿ ಇದ್ದಿರಬೇಕು.**

## ಹರೀಶ್ವರಾದಿಗಳು ಸ್ತುತಿಸುವ ಪೂರ್ವಕವಿಗಳು.

ಈ ಮೂವರು ಕವಿಗಳ ಚರಿತವನ್ನು ಬರೆವುದಕ್ಕೆ ಮುಂಚೆ ಇವರು ತಮ್ಮ ಗ್ರಂಥಗಳಲ್ಲಿ ಸ್ತುತಿಸುವ ಪೂರ್ವಕವಿಗಳ ವಿಷಯವನ್ನು ಸ್ವಲ್ಪಮಟ್ಟಿಗೆ ತಿಳಿಸುವುದು ಆವಶ್ಯಕವಾಗಿದೆ.

ಹರೀಶ್ವರನು ತನಗೆ ಹಿಂದೆ ಇದ್ದ ಶೈವಕವಿಗಳನ್ನು ತನ್ನ ಗಿರಿಜಾಕಲ್ಯಾಣದಲ್ಲಿಯ—

ಘನಕವಿತಾವಿಳಾಸದೊಳಿ ಸಂದ ಮಯೂರನ ರೇಖೆ ಕಾಳಿದಾ |
ಸನ ರಸವೃತ್ತಿ ಬಾಣನ ಮೃದೂಕ್ತಿ ಹಲಾಯುಧನಂದು ಕೇಶಿರಾ ||
ಜನ ಬಗೆಯುದ್ಭಟಯ್ಯನ ಗಭೀರತೆ ಮಲ್ಲಣನೇಳ್ಗೆ ಭೋಜರಾ |
ಜನ ಜಸವೆನ್ನ ಕಾವ್ಯದೊಳನೂನತೆಯಿಂ ನೆಲಸಿರ್ಕೆ ಸಂತತಂ ||

ಎಂಬ ಪದ್ಯದಲ್ಲಿ ಹೇಳುತ್ತಾನೆ. ಈತನ ಸೋದರದಳಿಯನಾದ ರಾಘವನು ತನ್ನ ಹರಿಶ್ಚಂದ್ರಕಾವ್ಯದಲ್ಲಿಯ—

ಮನವಚನಕಾಯದೊಳಗೊಮ್ಮೆಯುಂ ಭಾಳಲೋ |
ಚನನನಲ್ಲದೆ ಹೊಗಳದುದ್ಭಟಯ್ಯನ ಮಯೂ |
ರನ ಕಾಳಿದಾಸನ ಹಲಾಯುಧನ ಕೇಶಿರಾಜನ ಮಲುಹಣನ ಬಾಣನ ||
ವಿನುತಭೋಜನ ಭಲ್ಲಟನ ಭಾರವಿಯ ಶಿವನ |
ನೆನೆದು ಬಲಗೊಂಡು ತೊಡಗಿದೆ ಮಹಾಕೃತಿಯನೆನೆ |
. . . . . . . . . . . . . . . . . . . . . . . . . . . . ||

ಎಂಬ ಪದ್ಯದಲ್ಲಿ ಹಿಂದಣ ಶೈವಕವಿಗಳನ್ನು ಹೇಳಿದ್ದಾನೆ. ಈ ಕವಿಗಳಲ್ಲಿ ಕಾಳಿದಾಸ, ಮಯೂರ, ಬಾಣ, ಭೋಜ, ಭಾರವಿ ಇವರು ಸಂಸ್ಕೃತಕವಿಗಳೇ ಆಗಿರಬೇಕು. ಇವರುಗಳಲ್ಲಿ ಕಾಳಿದಾಸ ಮಯೂರ ಬಾಣರು ಕಂಧಾರದ ನಂದಭೂಪನ ಸಭೆಯಲ್ಲಿದ್ದಂತೆಯೂ ಕಾಳಿದಾಸನು ಶಿವನ ಚರಣಕ್ಕೆ ಕಣ್ಣನರ್ಪಿಸಿ ಮರಳಿ ಪಡೆದಂತೆಯೂ ಮಯೂರನು ಸೂರ್ಯನಿಂದ ಹೋಗದ ಕುಷ್ಠವನ್ನು ಶಿವನಿಂದ ನೀಗಿ ನಿರ್ಮಲತನುವನ್ನು ಪಡೆದಂತೆಯೂ ಬಾಣನು ತನ್ನ ಕೈಕಾಲುಗಳನ್ನು

ಕತ್ತರಿಸಿಕೊಂಡು ಶಿವನನ್ನು ಸ್ತುತಿಸಿ ಮರಳಿ ಪಡೆದಂತೆಯೂ ಭೋಜನು ಶಿವ ಕಾವ್ಯವನ್ನು ಬರೆಯಲು ಶಿವನು ಮೆಚ್ಚಿ ಕೈಲಾಸಕ್ಕೆ ಕರೆದುಕೊಂಡುಹೋದಂತೆಯೂ ವೀರಶೈವಗ್ರಂಥಗಳಲ್ಲಿ ಹೇಳಿದೆ. ಬಾಣಮಯೂರರ ವಿಷಯವನ್ನು **ಬ್ರಹ್ಮಶಿವನು** (ಸು. 1125) ತನ್ನ ಸಮಯಪರೀಕ್ಷೆಯಲ್ಲಿ ಹೀಗೆ ಪರಿಹಾಸ ಮಾಡುತ್ತಾನೆ:—

> ಕಡಿದೊಡೆ ಬಾಣಂ ಕೆಯ್ಯುಂ । ಗಡ ಕೂಡೆ ಕೊನರ್ತುದಾ ಮಯೂರನ ತೊನ್ನಾ ।
> ಮೊಡಲುಂ ಸುವರ್ಣಮಾದುದು । ಗಡ ದೇವರ ವರದಿನೆಂದು ಮೂಢರ್ ನುಡಿವರ್ ॥

ಮಲ್ಹಣ, ಕೇಶಿರಾಜ, ಹಲಾಯುಧ, ಉದ್ಭಟ, ಭಲ್ಲಟ, ಶಿವ ಇವರುಗಳಲ್ಲಿ ಕೇಶಿರಾಜನು ಕೊಂಡಗೂಳಿ ಕೇಶಿರಾಜನೇ ಆಗಿರಬೇಕು.[1] ಶಿವನು ಸಿರಸಿಗೆಯ ಶಿವಯೋಗಿದೇವನಾಗಿರಬಹುದು.[2] ಉಳಿದವರು ಕನ್ನಡದಲ್ಲಿ ಗ್ರಂಥಗಳನ್ನು ಬರೆದಿದ್ದಾರೆಯೋ ಇಲ್ಲವೋ ತಿಳಿಯದು. ಇವರುಗಳಲ್ಲಿ ಮಲ್ಹಣ, ಉದ್ಭಟ, ಹಲಾಯುಧ ಇವರುಗಳ ಚರಿತ್ರಗಳು ಬಸವಪುರಾಣವೇ ಮೊದಲಾದ ಗ್ರಂಥಗಳಲ್ಲಿ ದೊರೆಯುತ್ತವೆ. ಮಲ್ಹಣ, ಉದ್ಭಟ ಇವರಿಬ್ಬರ ಹೆಸರುಗಳನ್ನು **ಬ್ರಹ್ಮಶಿವನು** ಹೇಳಿರುವುದರಿಂದ ಇವರು 1125 ಕ್ಕೆ ಹಿಂದೆ ಇದ್ದಿರಬೇಕು. ಇವರುಗಳ ವಿಷಯವಾಗಿಯೂ ಹಲಾಯುಧನ ವಿಷಯವಾಗಿಯೂ ವೀರಶೈವಗ್ರಂಥಗಳಿಂದ ಈ ಯಂಶಗಳು ತಿಳಿಯಬರುತ್ತವೆ.

## ಮಲ್ಹಣ.

ಈತನು ಕಾಶ್ಮೀರದೇಶದಲ್ಲಿ ಭಾರತೀಪೀಠವೆಂಬ ಗ್ರಾಮದಲ್ಲಿ ಸುವರ್ಣಭಟ್ಟನೆಂಬ ಬ್ರಾಹ್ಮಣನ ಮನೆಯಲ್ಲಿ ಹುಟ್ಟಿ ಪದ್ಮಾವತಿಯೆಂಬವಳ ಉಪದೇಶದಿಂದ ಶಿವಧ್ಯಾನಮಾಡುತ್ತ ಮಹಾಯೋಗಿಯಾಗಿ ಶಿವಲೋಕವನ್ನೈದಿದನು. ಈತನು ಸಂಸ್ಕೃತದಲ್ಲಿ ಮಲ್ಹಣಸ್ತವವೆಂಬ ಶಿವಸ್ತೋತ್ರರೂಪವಾದ ಒಂದು ಗ್ರಂಥವನ್ನು ಬರೆದಿದ್ದಾನೆ.

## ಉದ್ಭಟ.

ಇವನು ತನ್ನ ಹೆಂಡತಿಯ ಸಂಗಡ ಶಿವನ ಧ್ಯಾನದಲ್ಲಿದ್ದು ಪೂಜೆಗಳನ್ನು ಮಾಡಲು ಶಿವನು ಪ್ರತ್ಯಕ್ಷವಾಗಿ ತನ್ನ ಗಣಕೂಟದಲ್ಲಿ ಇವರಿಬ್ಬರನ್ನೂ ಸೇರಿಸಿಕೊಂಡನು. ಈತನು ಹರಲೀಲೆಯೆಂಬ ಸಾವಿರ ವೃತ್ತವುಳ್ಳ ಒಂದು ಕಾವ್ಯವನ್ನು ಬರೆದುದಾಗಿ **ಬ್ರಹ್ಮಶಿವನ ಸಮಯಪರೀಕ್ಷೆಯಿಂದ** ತಿಳಿಯುತ್ತದೆ. ಈತನ ವಿಷಯವಾಗಿ **ಉದ್ಭಟಕಾವ್ಯ**, **ಉದ್ಭಟದೇವಚರಿತ್ರೆ** ಮೊದಲಾದ ಗ್ರಂಥಗಳು ಹುಟ್ಟಿವೆ.

---

1. ಪುಟ 185. 2. ಪುಟ 199

ಒಬ್ಬ ಉದ್ಭಟನು ಸುಮಾರು 9 ನೆಯ ಶತಮಾನದಲ್ಲಿ ಅಲಂಕಾರಗ್ರಂಥಗಳನ್ನೂ ಕುಮಾರಸಂಭವವೆಂಬ ಕಾವ್ಯವನ್ನೂ ಸಂಸ್ಕೃತದಲ್ಲಿ ಬರೆದಿರುವಂತೆ ತಿಳಿಯುಬರುತ್ತದೆ. ವೀರಶೈವರು ಸ್ತುತಿಸುವ ಉದ್ಭಟನು ಇವನೇಯೋ ಅಲ್ಲವೋ ತಿಳಿಯದು.

## ಹಲಾಯುಧ.

ಇವನು ಉತ್ತರದೇಶದಲ್ಲಿ ನವಗ್ರಾಮವೆಂಬ ಊರಿನಲ್ಲಿ ಇದ್ದ ಸಮಸ್ತ ಶಿವಭಕ್ತರನ್ನೂ ತನ್ನ ಶಿವಭಕ್ತಿಮಹಿಮೆಯಿಂದ ಶಿವಲೋಕಕ್ಕೆ ಕಳುಹಿ ತಾನೂ ಕೈಲಾಸಕ್ಕೆ ಹೋದನು.

ಸುಮಾರು 10 ನೆಯ ಶತಮಾನದಲ್ಲಿ ಒಬ್ಬ ಹಲಾಯುಧನು ಅಭಿಧಾನರತ್ನಮಾಲೆಯೆಂಬ ಕೋಶವನ್ನೂ ಕವಿರಹಸ್ಯವನ್ನೂ ಸಂಸ್ಕೃತದಲ್ಲಿ ಬರೆದಂತೆ ತಿಳಿಯುತ್ತದೆ. ವೀರಶೈವರು ಹೇಳುವ ಹಲಾಯುಧನು ಇವನೇಯೋ ಏನೋ ತಿಳಿಯದು.

## ಭಲ್ಲಟ.

ಸುಮಾರು 9 ನೆಯ ಶತಮಾನದಲ್ಲಿದ್ದ ಒಬ್ಬ ಭಲ್ಲಟಕವಿ ಭಲ್ಲಟಶತಕವೆಂಬ ಒಂದು ನೀತಿಗ್ರಂಥವನ್ನು ಸಂಸ್ಕೃತದಲ್ಲಿ ಬರೆದಿದ್ದಾನೆ. ವೀರಶೈವರು ಹೊಗಳುವ ಭಲ್ಲಟಕವಿ ಇವನೇ ಆಗಿರಬಹುದೋ ಏನೋ ತಿಳಿಯದು.

---

## ಹರೀಶ್ವರ. ಸು. 1165.

ಈತನು ಗಿರಿಜಾಕಲ್ಯಾಣ, ಪಂಪಾಶತಕ, ಶಿವಗಣದ ರಗಳೆಗಳು, ಮುಡಿಗೆಯ ಅಷ್ಟಕ ಎಂಬ ಗ್ರಂಥಗಳನ್ನು ಬರೆದಿದ್ದಾನೆ. ಅಲ್ಲದೆ ರಕ್ಷಾಶತಕ, ಶಿವಾಕ್ಷರಮಾಲೆ ಎಂಬ ಗ್ರಂಥಗಳನ್ನೂ ರಚಿಸಿರುವಂತೆ ತಿಳಿಯುಬರುತ್ತದೆ. ಇವು ನಮಗೆ ದೊರೆತಿಲ್ಲ.

ಇವನು ವೀರಶೈವಕವಿ; ನರಸಿಂಹಬಲ್ಲಾಳನ (1141–1173) ಆಳಿಕೆಯಲ್ಲಿ ಹಳೆಯಬೀಡಿನಲ್ಲಿ 'ಕರಣಿಕರ ಕುಲತಿಲಕ'ನಾಗಿದ್ದನು. ಈತನ ಗುರು ಹಂಪೆಯ ಮಾಯಿದೇವ; ಇವನ ಸೋದರದಳಿಯ ರಾಘವಾಂಕ. ಈತನ ಕಾಲದಲ್ಲಿ ಕೆರೆಯ ಪದ್ಮರಸನು ನರಸಿಂಹಬಲ್ಲಾಳನಲ್ಲಿ ಮಂತ್ರಿಯಾಗಿದ್ದನು; ಈ ದೊರೆಯ ಮಗನಾದ ಬಿಟ್ಟಬಲ್ಲಾಳನು ಯುವರಾಜನಾಗಿದ್ದನು. ನರಸಿಂಹಬಲ್ಲಾಳನು ತನ್ನ ಕರಣಿಕನಾದ ಈತನನ್ನು ಲೆಕ್ಕವನ್ನು ಕೇಳಿದಾಗ, ಈತನು ಕಡಿತವನ್ನು ಬಿಟ್ಟು ಕೈಗಳನ್ನು ಒರಸಲು, ದೊರೆ ಅದೇನೆಂದು ಕೇಳಲಾಗಿ— ಪಂಪಾವಿರೂಪಾಕ್ಷನಾಲಯದಲ್ಲಿ ಆರತಿಯನ್ನು ಎತ್ತಿದಾಗ ಅದರ ಸೆಕೆಹತ್ತಿ

ಮೇಲ್ಕಟ್ಟಿನ ಬಟ್ಟೆ ಭುಗಿಲೆಂದು ಉರಿವುದನ್ನು ಕಂಡು ಕೈಯಿಂದ ಒರಸಿ ಆರಿಸಿದೆನು—ಎಂದು ಹೇಳಿದಂತೆಯೂ ದೊರೆ ಆ ಮಾತನ್ನು ನಂಬದೆ ವಿರೂಪಾಕ್ಷ ನಾಲಯಕ್ಕೆ ಒಬ್ಬ ದೂತನನ್ನು ಕಳುಹಿ ಹರೀಶ್ವರನು ಹೇಳಿದುದು ನಿಜವೆಂದು ತಿಳಿದು ಆಶ್ಚರ್ಯಪಟ್ಟು ಈತನನ್ನು ವಿರೂಪಾಕ್ಷಾಲಯದಲ್ಲಿ ಬರೆದುಕೊಂಡಿಹು ದೆಂದು ಕಳುಹಿದಂತೆಯೂ ಪದ್ಮರಸನು ಕಾಶಿಗೆ ಹೋಗುವಾಗ ಪಂಪೆಗೆ ಬಂದು ಈತನನ್ನು ನೋಡಿ—'ಉಮಾವರಂ ನಿಮ್ಮನಿಂದಿಗೆಂಟನೆಯ ದಿನಕೆ ತನ್ನೊಳ್ ನೆರಪಲಿರ್ದಪಂ, ಅಂತಱಿಂ ನೀವೀಗಳೊರೆವ ಮಹಾಕಾವ್ಯಮಂ[1] ಅನಿತಱೊಳ್ ಪಾರವೆಯ್ದಿಪುದು' ಎಂದು ಹೇಳಿ ಹೋದಂತೆಯೂ ತನ್ನ ಸೋದರದಳಿಯ ನಾದ ರಾಘವನು ಗತಿಸಿದ ಎಂಟು ದಿನಕ್ಕೆ ಈತನು ಪಂಪಾವಿರೂಪಾಕ್ಷಲಿಂಗ ದೊಳಗೆ ಅಡಗಿದಂತೆಯೂ ಚೆನ್ನಬಸವಪುರಾಣ ಪದ್ಮರಾಜಪುರಾಣಗಳಿಂದ ತಿಳಿಯಬರುತ್ತದೆ. ಭೈರವೇಶ್ವರಕಾವ್ಯದ ಕಥಾಸೂತ್ರರತ್ನಾಕರದಲ್ಲಿ ಈತನ ವಿಷಯವಾಗಿ ಹೀಗೆ ಬರೆದಿದೆ:—

ಪಂಪಾಕ್ಷೇತ್ರದಲ್ಲಿ ಒಪ್ಪುವ ಹಂಪೆಯ ಶಂಕರಾಚಾರ್ಯರ ಮಗ ಮಾದರಸನು; ಅವನ ಮಗ ಹಂಪೆಯ ಹರೀಶ್ವರನು. ಈತನ ಗುರು ಮಾಯಿದೇವಾಚಾರ್ಯನು. ದೋರಸಮುದ್ರದ ಅರಸು ನೃಸಿಂಹಬಲ್ಲಾಳನು ಪದ್ಮರಸರೆಂಬ ಆರಾಧ್ಯಪುಂಗವರ್ಗೆ ಪ್ರಧಾನಿಪಟ್ಟವಂ ಕಟ್ಟಿ ಹಂಪೆಯ ಹರೀಶ್ವರದೇವರ್ಗೆ ರಹಸ್ಯವ ಬರೆವ ಕರಣಿಕರಿಗಲ್ಲಾ ಹಿರಿಯತನವಂ ಕೊಟ್ಟು ಮಡಗಿಕೊಂಡಿರಲು, ಹರಿಯಣ್ಣಪಂಡಿತನು—ವಿಷ್ಣು ಮೊದಲಾದ ಅನ್ಯದೈವಕ್ಕೆ ಪೊಡಮಡಲೊಲ್ಲೆನು, ಗುಡಿಯ ಪೂಗಲೊಲ್ಲೆನು—ಎಂದು ನೇಮವಂ ಮಾಡಿಕೊಂಡಿದ್ದನು. ಹರಿಹರೇಶ್ವರನ ಗುಡಿಯಲ್ಲಿ ಬ್ರಹ್ಮರಾಕ್ಷಸನನ್ನು ಓಡಿಸಿದನು. 'ಸರಸ ಮೃದು ಮಧುರೋಪಮೆಗಳಿಂದ ವಸ್ತುಕವರ್ಣಕದಿಂದ ಶಿವನಂ ಶಿವಗಣಂಗಳನು ರಗಳೆಗಳಿಂದ ನುತಿಸಿ ವಚನದ ರಚನೆ ಹೆಚ್ಚುವಂತೆ ಗಿರಿಜೆಯಕಲ್ಯಾಣವಂ ರಚಿಸಿದನು. ಶತಕಾಷ್ಟಕಾಕ್ಷರ ಮಾಲಾಗದ್ಯ ಮೊದಲಾದುವಱಿಂದ ಶಿವನಂ ನುತಿಸಿದನು.

ಈತನಿಗೆ ಹರಿದೇವ, ಹರಿಹರ, ಹರಿಗ, ಹರಿ, ಹರಿಯಣ್ಣಪಂಡಿತ, ಹಂಪೆಯ ಹರೀಶ್ವರ ಎಂಬ ಹೆಸರುಗಳುಂಟು. 'ಪರಮಾನಂದಾಬ್ಧಿ ಪಂಪಾಪುರದರಸ ವಿರೂಪಾಕ್ಷಸಾಕ್ಷಾತ್ಸುಪುತ್ರಂ' ಎಂದು ಹೇಳಿಕೊಂಡಿದ್ದಾನೆ. ಹಂಪೆಯ ವಿರೂ ಪಾಕ್ಷನನ್ನೇ ತನ್ನ ಗ್ರಂಥಗಳಲ್ಲಿ ವಿಶೇಷವಾಗಿ ಕೊಂಡಾಡಿದ್ದಾನೆ.

ಈತನನ್ನು ಪ್ರಾಯಶಃ ಎಲ್ಲಾ ವೀರಶೈವಕವಿಗಳೂ ಸ್ತುತಿಸಿದ್ದಾರೆ. ಅವರಲ್ಲಿ ಇವನೇ ಪ್ರಬಲನಾದ ಪೂರ್ವಕವಿಯೆನ್ನಬಹುದು. ಈತನನ್ನು ಭೀಮಕವಿ (1369) ತನ್ನ ಬಸವಪುರಾಣದಲ್ಲಿ—

---

1. ಈ ಮಹಾಕಾವ್ಯವು ಗಿರಿಜಾಕಲ್ಯಾಣವೇ ಆಗಿರಬಹುದು.

ಗರಸಮೃದುಮಧುರೋಪಮೆಗಳಂ | ಕುರಿಸೆ ವಸ್ತುಕವರ್ಣಕಂಗಳ |
ನೆರಪಿ ಹರನಂ ಹರಗಣಂಗಳನ್ನೆದೆ ಕೀರ್ತಿಸಿದ |
ಧರೆಗುಭಯಕವಿಶರಭಭೇರುಂ | ಡರಸು ಕವಿ ಹರಿಬುಧವರನು ||

ಎಂದೂ, **ಪದ್ಮಣಾಂಕನು** (ಸು. 1385) ತನ್ನ ಪದ್ಮರಾಜಪುರಾಣದಲ್ಲಿ—

ಚದುರಿಂಪು ಸೊಂಪಲಂಕೃತಿ ಚಮತ್ಕೃತಿ ರೀತಿ |
ಮೃದುಮಧುರಸರಸೋಪಮಾದ್ಯಖಿಳಲಕ್ಷಣಾ |
ಭ್ಯುದಿತವಸ್ತುಕವರ್ಣಕಂಗಳಿಂ ಶಿವನಂ ಶಿವೈಕ್ಯರಂ ನುತಿಸುತಿರ್ದ ||
ಶಿವಕವೀಂದ್ರಂ

ಎಂದೂ, **ನೀಲಕಂಠಾಚಾರ್ಯನು** (ಸು. 1485) ತನ್ನ ಆರಾಧ್ಯಚಾರಿತ್ರದಲ್ಲಿ—

ಕಂಪಮರ್ದ ಚಂದನದ ಪಂಕದೊಳ್ ಪರಿಮಳಂ |
ಪೆಂಪುವಡೆದಂತೆ ರಸಭರಿತಪ್ರಬಂಧದೊಳ್ |
ಸೊಂಪುದೋಱುವ ಶಬ್ದಸಂದರ್ಭಮೊಪ್ಪುತಿರೆ ಪೊಸತಪ್ಪ ಯುಕ್ತಿಯಿಂದಂ ||
ಇಂಪಾಗಿ ಶಿವಗಣಪ್ರಕರಮುಂ ಕೊಂಡಾಡಿ |
ಪಂಪೆಯೊಳು ಪಂಪಾವಿರೂಪಾಕ್ಷನೊಳಗವಿದ |
ಸಂಪೆಯ ಹರೀಶ್ವರಂ |

ಎಂದೂ, ಸ್ತುತಿಸಿದ್ದಾರೆ. ಹೀಗೆಯೇ ಇನ್ನೂ ಅನೇಕ ವೀರಶೈವಕವಿಗಳು ಹೊಗಳಿದ್ದಾರೆ.

ಈತನು ಸ್ತುತಿಸುವ ಪೂರ್ವಕವಿಗಳನ್ನು ಹಿಂದೆಯೇ ಹೇಳಿದ್ದೇವೆ.[1]

ತನ್ನ ಕವಿತಾಚಾತುರಿಯನ್ನೂ ಗುಣಗಳನ್ನೂ ಈ ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ:—

ಪ್ರಿಯವಚದಂತೆ ಪುಣ್ಯತತಿಯಂತೆ ಸುಧಾಕರನಂತೆ ಕೂರ್ತ ಮು |
ಗ್ಧೆಯ ಕಡುನೇಹದಂತಮೃತದಂತೆ ವಸಂತಕನಂತೆ ಪುಷ್ಪಮಾ ||
ಲೆಯ ಪೊಸಕಂಪಿನಂತೆ ಮಲಯಾನಿಲನಂತೆ ಮರಾಳನಂತೆ ಹಂ |
ಪೆಯ ಹರಿದೇವನುನ್ನತಕೃತಿಪ್ರಸರಂ ಭುವನೈಕಪೂಜಿತಂ ||
ಜಾಣಂ ರಸಿಕಂ ಸುಜನ | ಪ್ರಾಣಂ ಕವಿತಾನಿಧಾನನಧಿಕಂ ಪುಣ್ಯ |
ಕ್ಷೋಣಂ ವರಗಿರಿಜಾಕ | ಲ್ಯಾಣಮನೊರೆದಂ ವಿವೇಕಿ ಹರಿಹರದೇವಂ ||

ಈ ಪದ್ಯಗಳಲ್ಲಿ ದುಷ್ಕವಿಗಳನ್ನು ದೂಷಿಸಿದ್ದಾನೆ:—

ಒಳಗಱಿಯದೆ ಸತ್ಕಾವ್ಯದ | ಕಳೆಯಱಿಯದೆ ಲಘುತರತ್ವದಿಂ ನಾಲ್ಕೆರಡಾ |
ಯ್ಕುಳಿಮಾತನಾಡಿ ನೆಱೆ ಹೆ | ಕ್ಕಳಮಿಕ್ಕಿದೊಡೊಲ್ವರೇ ಕವೀಂದ್ರಾಭರಣರ್ ||

1. ಪುಟ 222.

ಹಱುಗವಿಗಳ ಕಬ್ಬಂಗಳ । ಹೊಱಗೞಿಯಕ್ಕರದ ಹೊಲ್ಗೆಬಿರ್ದೊಡೆಲ್ಲಂ ।
ಬಱು ತಾಱುಗ ಬೀಱುಗವೆ। ತ್ತಱು ತತ್ತಱುವೆಕ್ಕಸಕ್ಕಮಸ್ತವ್ಯಸ್ತಂ ॥[1]
ಪೆೞವನ ಕಣ್ಗಳಂಧಕನ ಕಾಲ್ಗಳಿವಿಂತೊಡಗೂಡಿ ಗಾವುದಂ ।
ದಳದೊರ್ಡೆ ಬಲ್ಲಿದಂ ನಡೆದ ಮಾೞ್ಕೆಯೆನಿಪ್ಪುದೆ ಬೇಡ ಮಾಣಲೇ ॥
ಅೞಿಗವಿ ನಿನ್ನ ತನ್ನೆರವಿನೋದಿನ ಕಬ್ಬಮನೋದದಿರ್ ಸುಧಾ ।
ನಿಳಯದ ಮುಂದೆ ಸತ್ಕೃತಿಯ ಮುಂದೆ ಸುಖಾಬ್ಧಿಯ ಮುಂದದೊರ್ಮೆ
ಯುಂ ॥

ಇವನ ಗ್ರಂಥಗಳಲ್ಲಿ—

## 1. ಗಿರಿಜಾಕಲ್ಯಾಣ.

ಇದರಲ್ಲಿ ಶಿವನಿಗೂ ಪಾರ್ವತಿಗೂ ನಡೆದ ವಿವಾಹವು ವರ್ಣಿಸಿದೆ. ಇದು ಚಂಪೂರೂಪವಾಗಿದೆ; 10 ಆಶ್ವಾಸಗಳಾಗಿ ಭಾಗಿಸಲ್ಪಟ್ಟಿದೆ. ಇದರಲ್ಲಿ ಕಂದ ವೃತ್ತ ಸಹ 1102 ಇವೆ. ಗ್ರಂಥದ ಉತ್ಕೃಷ್ಟತೆಯನ್ನು ಕವಿ ಈ ಪದ್ಯಗಳಲ್ಲಿ ಹೇಳಿದ್ದಾನೆ :—

ಸುರತರುವಿನಂತೆ ಸುಜನರ। ಸಿರಿಯಂತೆ ಸರೋಜದಂತೆ ಸುಧೆಯಂತೆ ಸುಧಾ।
ಕರಕಿರಣದಂತೆ ಹಂಪೆಯ। ಹರಿದೇವನ ಕಾವ್ಯಮಖಿಲಸೇವ್ಯಂ ಸವ್ಯಂ ॥
ಓದಿಸೊಡೆ ಕಲ್ಲ ಮಾಳೆಯ। ನಾದಂ ಕರ್ಬುನದ ಕಡಲೆ ಮಾದಿಸೆ ರಸಮಂ।
ಸೋದಿಸೆಯುರ್ಕಿನಪುಡಿಯೆನಿ। ಪಾದುಷ್ಕವಿತೆಗಳನೆಣಿಸಲೇಕೆ ಕೃತಿಯೊಳ್ ॥
ಕಂದಂಗಳಮೃತಲತಿಕಾ। ಕಂದಂಗಳನೂನವಾಕ್ಯಫಲವಿಲಸನ್ಮಾ।
ಕಂದಂಗಳ್ ತನಿರಸದು। ಕ್ಕಂದಂಗಳ್ ಸೊಗಯಿಸಿರ್ಪುವೀನುತಕೃತಿಯೊಳ್ ॥

ಗ್ರಂಥಾವತಾರದಲ್ಲಿ ಕವಿ ಪಂಪಾವಿರೂಪಾಕ್ಷನನ್ನು ಸ್ತುತಿಸಿದ್ದಾನೆ. ಬಳಿಕ ಪಾರ್ವತಿ, ಗಣೇಶ, ಷಣ್ಮುಖ, ಶಿವಭಕ್ತರು, ಸರಸ್ವತಿ ಇವರುಗಳನ್ನು ಕ್ರಮವಾಗಿ ನುತಿಸಿ ಕಥೆಯನ್ನು ಆರಂಭಿಸಿದ್ದಾನೆ.

ಆಶ್ವಾಸಗಳ ಕೊನೆಯಲ್ಲಿ ಈ ಗದ್ಯವಿದೆ :—

ಇದು ಸಮಸ್ತಸುರಾಸುರನಿಕರಮಕುಟಖಚಿತ ದಿನಕರಕರಾಧಿಕ್ಯಮಾಣಿಕ್ಯಪ್ರಭಾಪುಂಜರಂಜಿತಸಂಪಚ್ಚರಣನೆನಿಪ ಪಂಪಾವಿರೂಪಾಕ್ಷ ಶ್ರೀಪಾದಕಮಲಮಕರಂದಮಧುಕರಾಯಮಾನ ಸತ್ಕವೀಶ್ವರ ಹಂಪೆಯ ಹರಿಹರದೇವವಿರಚಿತಮಪ್ಪ ಶ್ರೀಗಿರಿಜಾಕಲ್ಯಾಣ ಮಹಾಪ್ರಬಂಧದೊಳ್.

1. ಈ ಪದ್ಯವು ನಾಗವರ್ಮನ ಛಂದೋಂಬುಧಿಯಲ್ಲಿಯೂ ದೊರೆಯುತ್ತದೆ.

ಈತನು ಪ್ರಾಸವಿಷಯದಲ್ಲಿ ಱಳಕುಳಕ್ಷಳವಿಚಾರವು ಆವಶ್ಯಕವಿಲ್ಲವೆಂಬಭಿಪ್ರಾಯವನ್ನು—

ನೋಡುವೊಡೊಂದಕ್ಕರಮದು । ಮಾಡುವೊಡುಚ್ಚರಣೆಗರಿದು ಮೂಱುಂತೆಱನಂ ।
ಕೂಡೆ ಕವಿತತಿ ವಿಚಾರಿಸ । ಬೇಡದಱಿಂ ಱಳಕುಳಕ್ಷಳಂಗಳನಿದಱೊಳ್ ॥

ಎಂಬ ಪದ್ಯದಲ್ಲಿ ಹೇಳಿದ್ದಾನೆ. ಇದರಿಂದ ಹರೀಶ್ವರನ ಕಾಲದಲ್ಲಿಯೇ ಱಳಕುಳಕ್ಷಳಗಳ ಪ್ರಾಸವಿಷಯದಲ್ಲಿ ಅವ್ಯವಸ್ಥೆ ಉಂಟಾದಂತೆ ತೋರುತ್ತದೆ. ಈ ಅವ್ಯವಸ್ಥೆಯನ್ನು ನಿವಾರಣೆ ಮಾಡುವುದಕ್ಕಾಗಿಯೇ **ಕೇಶಿರಾಜನು** (ಸು. 1260) ಶಬ್ದಮಣಿದರ್ಪಣದಲ್ಲಿ ಱಳಕುಳಕ್ಷಳಗಳ ವಿಷಯವಾಗಿ ಬಹಳ ವಿಚಾರ ಮಾಡಿ ಇವುಗಳ ಪ್ರಾಸನಿಯಮವನ್ನು ವಿಧಿಸಿದ್ದಾನೆ. ಕೇಶಿರಾಜನಿಗೆ ಹಿಂದೆ ಇದ್ದ ಜೈನಕವಿಗಳು ಪ್ರಾಯಿಕವಾಗಿ ಱಳಕುಳಕ್ಷಳಭೇದಸೂಚಕವಾದ ನಿಯಮಗಳನ್ನು ಅನುಸರಿಸಿಯೇ ಗ್ರಂಥಗಳನ್ನು ಬರೆದಿದ್ದಾರೆ. ಈ ನಿಯಮಗಳು ಆವಶ್ಯಕವಿಲ್ಲವೆಂದು ಕಂಠೋಕ್ತವಾಗಿ ಹೇಳಿರುವ ಕವಿಗಳಲ್ಲಿ ಹರೀಶ್ವರನೇ ಮೊದಲನೆಯವನು.

ಈತನ ಬಂಧವು ಜೈನಶೈಲಿಯನ್ನು ಅನುಸರಿಸಿ ಲಲಿತವಾಗಿಯೂ ಮೃದುಮಧುರಗಂಭೀರವಾಗಿಯೂ ಇದೆ.

ಈ ಗ್ರಂಥದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ :—

ಚಂದ್ರ.

ಕರಮೆಸೆದತ್ತು ಕೌಮುದಿಯ ಬಿತ್ತು ಚಕೋರಿಯ ತುತ್ತು ನೀರಜೋ ।
ತ್ಕರದ ವಿಪತ್ತು ತಾರೆಗಳ ತೊತ್ತು ಸುಧಾಂಬುಧಿಯೊತ್ತು ಮತ್ತಮಂ ॥
ಬರದ ಪುಳಿಂದಿ ತಾಳ್ದಿಸೆವ ಮೂಗಿನ ಮುತ್ತು ಮಗುಳ್ದು ನೋಡಲ ।
ಚ್ಚರಿಯೆನಿಸಿತ್ತು ಮೂಡಡೆಸೆಯಿಂದೊಗೆತರ್ಪ ಹಿಮಾಂಶುಮಂಡಳಂ ॥ 500 ॥

ವರ್ಷಾಕಾಲ.

ತರದಿಂ ಶಿಖಿ ಚಾದಗೆ ಮಧು । ಕರಮುಂಚಿ ಪಯೋಧರಂಗಳನುನಯದಿಂದಂ ।
ಕರೆದುವು ನೆರೆದುವು ಮೊರೆದುವು । ಪರೆದುವು ತೊರೆದುವು ನಿರಂತರಂ ಕಾರ್ಮುಗದೊಳ್ ॥ 501 ॥

ಗ್ರೀಷ್ಮ.

ಎಲೆ ಎಲೆ ನೋಡು ನೋಡು ಕೆಲನುಂ ಬಲನುಂ ನೆಲನುಂ ದವಾಗ್ನಿ ಸು ।
ಟ್ಟೊಲೆಯವೊಲಾಗೆ ಮೆಟ್ಟಿದಡಿಯೆತ್ತಿದ ಕಾಲುಱಿ ಸೀಯೆ ನಿಂದಿರಲ್ ॥

ಚಲಿಯಿಸಲಾಱದಾತಪದೆ ಹಸ್ತಮನೆತ್ತಿ ಬೞಲ್ದು ಘೀಳಿಡು ।
ತ್ತೊಲೆದುದು ಚೇಷ್ಟೆಗುಂದಿದುದು ಜೋಲ್ದುದು ಬೀೞ್ದುದು ಬೆಂದುದೊಂದಿಭಂ ॥ 502 ॥

**ಸೂರ್ಯಕಿರಣ.**

ಇಳೆಯ ಮುಸುಂಕಂ ಮೆಲ್ಲನೆ । ಕಳೆಯುತ್ತೆೞ್ಚಱಿಸುತುಂ ರಥಾಂಗಮನಬ್ಜಂ ।
ಗಳನೆವೆದೆಱೆಯಿಸುತುಂ ದೆಸೆ । ಗಳನೆೞ್ಚಱಿಸುತೆೞ್ದುವಾಗಳಿನನ ಕರಂಗಳ್ ॥ 503 ॥

**ಗಿಳಿ.**

ಬಿಗಿಯುಪ್ಪಿ ಮೊಗಮನಿಟ್ಟಾ । ಲಿಗಳಂ ನಸುಮುಚ್ಚಿ ಪಕ್ಕಯುಗಮೆೞಲೆ ರಸಂ ।
ವೆಗೆವ ದನಿ ನಿಮಿರೆ ನಾಲಗೆ । ಚಿಗುರುತ್ತಿರೆ ಸವಿದುದೊಂದು ಗಿಳಿ ತನಿವಣ್ಣಂ ॥ 504 ॥

**ಪಾರಿವ.**

ನಲಿದು ಕೊರಲೆತ್ತಿ ಕುಕಿಲಿಱ । ದುಲಿದುಱಿಸುೞಿದೆಳಸಿ ಬಳಸಿಬೞಿಸಂದು ಪಳಂ ।
ಚಲಿದೊಱೆದು ಪಕ್ಕಮುಂ ಬಿ । ಚ್ಚಿ ಲಲ್ಲೆಗೆಯ್ವುತ್ತು ಪಾರಿವಂ ಪಾರಿವದೊಳ್ ॥ 505 ॥

**ಚಾತಕ.**

ನೆಗೆದುದು ಸಾರ್ದು ಪೊರ್ದಿತಮುರ್ದತ್ತು ತುಳುಂಕಿತು ಪೆಂಗ ನೀರಧಾ ।
ರೆಗಳುಱಿ ನಾಂಟಲೀಂಟಿದುದು ನೇಹದ ನೋಡಿತುದಂಚಚಂಚುವಿಂ ॥
ದುಗಿದುದು ಪಕ್ಕದಿಂ ಪೊಡೆದುದಂಘ್ರಿಗಳಿಂದೊದೆದತ್ತು ನೆತ್ತಿಯಿಂ ।
ನೆಗಪಿದುದಪ್ಪಿ ತಳ್ಪಿಱಿದುದಂಬುಕಣಂಗಳನೊಂದು ಚಾತಕಂ ॥ 506 ॥

**ಕಪಿ.**

ಪಱಿದಲೆಯುಟ್ಟು ಪಲ್ಗಿರಿದು ಹರ್ರ್ಯನುತುಬ್ಬುತೆ ಪುರ್ಬನೇಱಿಸು ।
ತ್ತುಱುಗಿಸಿ ನೋಡಿ ದಾಂಟಲನುಗೆಯ್ವುತೆ ತೂಗುತೆ ಝುಂಕಿಸುತ್ತೆ ಬಾ ॥
ಯ್ಪುಱಿದೊಱೆಯುತ್ತೆ ಕೆಯ್ನಗಪಿ ಜಾಗಿಸಿ ಕುರ್ಗುತುಮೋಡಿಸುತ್ತೆ ತಾಂ ।
ನೆಱೆ ನಗಿಸಿತ್ತು ತಾಪಸಕುಮಾರರನಲ್ಲಿಯದೊಂದು ಮರ್ಕಟಂ ॥ 507 ॥

**ಜಿಂಕೆ.**

ತಿರುಗುವ ತನು ಬೆರ್ಚುವ ಕಣ್ । ಪರಿವ ಮನಂ ನಟ್ಟ ಕಿವಿಯುಡುಂಗುವ ಸುಯ್ಲಂ ।
ಸರಳಂ ಮೀಱುತೆ ಹರಿಣಂ । ಸರಳಿಸಿತಯ್ದಾಱನೇೞನೆಂಟೊಂಬತ್ತಂ ॥ 508 ॥

**ಪಾರ್ವತಿ.**

ಬರೆದರೊ ಬಯ್ತರೊ ಪೊಲ್ದರೊ । ಪೊರೆದರೊ ಬೆಚ್ಚರೊ ಮರಳ್ಚಿ ಕರುವಿಟ್ಟರೊ ಕಂ ।
ಡರಿಸಿದರೊ ಕಡೆದರೋ ಎನೆ । ಗಿರಿರಾಜತನೂಜೆ ಪೂಜೆಯೊಳ್ ರಾಜಿಸುವಳ್ ॥ 509 ॥

## ಶಬರಿ.

ಎಣ್ಣೆಯೊಳರನೇಱಲ ತನಿ । ವಣ್ಣಂ ನುಣ್ಣಿಸಿದನಬ್ಜಭವನೆನಿಸುವ ಮು ।
ಯ್ವಣ್ಣದ ಶಬರಿ ತಮಾಲದ । ತಣ್ಣೆೞಲೊಳ್ ಕಣ್ಣಬೆಳಗೆ ಬೆಳಗಾಗಿರ್ದಳ್ ॥ 510 ॥

## ಶಾಲಿ.

ಸೊಂಪಾಗುತ್ತಂಕುರಿಸು । ತ್ತುಂ ಪಸುರೇಱುತ್ತೆ ಕವಲೆೞ್ದು ಪೊಡೆಯೊತ್ತು ।
ತ್ತುಂ ಪಾಲೇಱುತ್ತುಂ ನೆಱೆ । ದಿಂಪಿಂ ನಳನಳಿಸಿ ಶಾಲಿವನಮೆಸೆದಿರ್ಕುಂ ॥ 511 ॥

## ಮಾವು.

ಅರಳೆಲೆ ಮೇಲಾಡುತ್ತಿರೆ । ಭರದಿಂ ಮಾಂಗಾಯ್ಗಳೊಲೆಯೆ ಕೆಂಬಲದೊಳ್ ನಿಂ ।
ದರಗಿಳಿಯ ತೊದಳ್ನುಡಿ ಬಿ । ತ್ತರಿಸೆ ವಸಂತನ ಕುಮಾರನೆನಿಸಿತ್ತಾಮ್ರಂ ॥ 512 ॥

## ದೇಶ.

ಬಳಸಿದುವೊಪ್ಪಿದುವು ಜಿನುಗಿ । ಗೞಿಪಿ ಕುಳಿರ್ಕೊಂಡಿ ಕತ್ತಲಿಸಿ ಮಱೆದುದ್ದಂ ।
ದಳೆದು ಫಳಮಾಗಿ ಪರಿವಡೆ । ದೞ್ಗಿಳಿ ಮಡು ಗಿಡು ಕರಿ ಗಿರಿ ಚೂತಂ ಗೀತಂ ॥ 513 ॥

## ಫಾಲನೇತ್ರಾಗ್ನಿ.

ಪೊಗೆದುದು ಪೊತ್ತಿದತ್ತು ಕಿಡಿಯುಟ್ಟಿದು ಸಾಲ್ವೆಸೆದೋಱಿದತ್ತು ಬಾ ।
ನ್ಗೊಗೆದುದು ನಿಂದು ಪೊಂಬೆಳಗುಮಂ ಪರೆಪುತ್ತದು ದಂಧಗಿಲ್ಭಗಿ ॥
ಲ್ಭಗಿಲೆನುತಟ್ಟಿತಟ್ಟಿದುದು ಮುಟ್ಟಿತು ಮುಟ್ಟಿತು ತಿಂದು ತೇಂಗಿದ ।
ತ್ತಗಿಯದೆ ನಿಂದ ಪೂಗಣೆಯನಂ ಪಣೆಗಣ್ಣುರಿ ಪಂಪೆಯಾಳ್ದನಾ ॥ 514 ॥

## ವಿರಹ.

ವಿರಹದೊಳೀಕೆಗಕ್ಕ ಬಿಸಜಂ ವಿಷಜಂ ಹಿಮರೋಚಿ ಸೂಚಿ ಪಾ ।
ವರಿ ದರಿ ಮಾವು ಪಾವು ಕುಮುದಂ ಕುಮುದಂ ತನಿಗರ್ಬು ಮರ್ಬು ಕ ॥
ತ್ತುರಿಯುರಿ ಗಾಳಿ ದಾೞಿ ಕುಸುಮಂ ವಿಷಮಂ ಪೊಸ ಬಾೞೆ ಬಾಳ್ ವನೋ ।
ತ್ಕರಿ ಪುರಿ ಹಂಸೆ ಹಿಂಸೆ ಮೊರೆವಾಱಡಿಯಾರಡಿ ತಿಂಗಳಿಂಗಳಂ ॥ 515 ॥

## ಶಬರನ ಪ್ರಲಾಪ.

ಪಾಸಿನಮೇಲೆ ಪಟ್ಟಿರಿಸಿ ಪಾಲೆಱೆದೆನ್ನೊಡಗೂಡಿ ಬಾಲಕಾ ।
ಭ್ಯಾಸದಿನೆತ್ತಿ ಸತ್ತಿಗೆಯ ತಣ್ಣೆೞಲೊಳ್ ಬಳೆವಂತೆ ಮಾಡಿಯು ॥
ಚ್ಚಾಸನದಲ್ಲಿ ತಂದಿರಿಸಿಯೋವಿದ ಕುನ್ನಿಯನೀವರಾಹನೀ ।
ಸಾಸಿಗನೀಕಠೋರಮನನೆನ್ನಯ ಮುಂದೆ ಸಮಂತು ಕೊಲ್ವುದೇ ॥ 516 ॥

## 2. ಪಂಪಾಶತಕ.

ಇದು ಪಂಪಾವಿರೂಪಾಕ್ಷಸ್ತುತಿರೂಪವಾಗಿದೆ; ಇದರಲ್ಲಿ ನೂರು ವೃತ್ತಗಳಿವೆ. ಈ ಶತಕದ ಉತ್ಕೃಷ್ಟತೆಯನ್ನು ಕವಿ

ಜಯ ಜಯ ಪುಣ್ಯಮಾರ್ಗಮಿದು ಸಾತ್ತ್ವಿಕಲಕ್ಷಣಮಿಂತಿದಾದ್ಯರ ।
ನ್ವಯಮಿದನೂನಭಕ್ತಿರಸಪೂರಮಿದುತ್ತಮಶೀಲಭಕ್ತರಾ ॥
ಶ್ರಯಮಿದು ತಪ್ಪದೆಂದು ಶರಣರ್ ಮಿಗೆ ಬಣ್ಣಿಸೆ ಪೇೞ್ದನಾಹ ಹಂ ।
ಪೆಯ ಹರಿದೇವನೀಶತಕಮಂ ಸಕಲೇಷ್ಟಫಲಪ್ರದಾತೃವಂ ॥

ಎಂಬ ಕೊನೆಯ ಪದ್ಯದಲ್ಲಿ ಹೇಳಿದ್ದಾನೆ. ಇದರಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

ತೆರೆ ಮಸಗಲ್ ಸುಖಾಶ್ರುವಿದಿರೇೞುತಿರಲ್. ಪುಳಕಂ ಬೆಮರ್ ಕರಂ ।
ಪರಿಯಿಡೆ ಗದ್ಗದಂ ಸುೞಿಗೊಳುತ್ತಿರೆ ಕಂಪನಮುರ್ಕಿ ಲೀಲೆಯೊ ॥
ತ್ತರಿಸುತಿರಲ್ ಮದೀಶನಿಜಭಕ್ತಿತರಂಗಿಣಿ ಮಾಱುತುಬ್ಬರಂ ।
ಬರಿಯುತುಮುನ್ನಮೇೞೆ ಮಡುಗಟ್ಟುವುದೆಂದೆಲೆ ಹಂಪೆಯಾಳ್ದನೇ ॥ 517 ॥

ಸತಿಪುತ್ರರ್ ಮಿತ್ರರಾಪ್ತರ್ ತನುಧನಮನಮೆಂಬಿಂತಿವಂ ನಿತ್ಯಮೆಂದು ।
ಚ್ಚತರವ್ಯಾಸಂಗದಿಂ ಮಯ್ಯಱಿಯದೆ ಮರುಳಾಗಿರ್ದನೆನ್ನಂ ದುರಾಶಾ ॥
ವ್ರತನಂ ದುರ್ಮೋಹಿಯಂ ದುಸ್ತರತರವಿಷಯವ್ಯಾಪ್ತನಂ ದುರ್ಧರ್ಮ್ಯನೋ ।
ಹತನಂ ದುರ್ಬೋಧನಂ ರಕ್ಷಿಪುದೆಲೆ ಕೃಪೆಯಿಂದಂ ವಿರೂಪಾಕ್ಷಲಿಂಗಾ ॥ 518 ॥

ಹರಣಂಗಳ್ ಕಳೆಯೇಱೆ ಲೋಚನಯುಗಂ ನೀರೇಱೆ ಮೆಯ್ಯೆಲ್ಲಮಂ ।
ಕುರುಮೇೞಲ್ ನುಡಿ ಕಂಪಮೇಱೆ ಕರಣಂಗಳ್ ಲೀಲೆಯೇಱಲ್ ಮೊಗಂ ॥
ಸಿರಿಯೇೞಲ್ ತಲೆಗೇಱೆದುತ್ಸವದೆ ನಿನ್ನಂ ಪೂಜಿಸುತ್ತಾನುಮಾ ।
ದರದಿಂದೀಕ್ಷಿಸುತಾಡುತಿರ್ಪುದೆನಗಿನ್ನೆಂದೋ ವಿರೂಪಾಕ್ಷನೇ ॥ 519 ॥

ಪೋಗನೆ ಪೋಪ ಬಾರೆಲವೊ ಬಾರೆಸೆ ಜೀಯ ಹಸಾದಮೆಂದು ಬೆ ।
ಳ್ಕಾಗುತೆ ಬರ್ಪ ಮಾಣೆಲವೊ ಸುಮ್ಮನಿರೆಂದೊಡೆ ಸುಮ್ಮನಿರ್ಪ ಮ ॥
ತ್ತಾಗಳೆ ಬಗ್ಗಿಸಲ್ ನಡುಗಿ ಬೀೞುವ ಸೇವಿಸ ಕಷ್ಟವೃತ್ತಿಯಿಂ ।
ಸೀಗಿದೆನಿಂದು ನಿಮ್ಮ ದಯೆಯಿಂ ಕರುಣಾಕರ ಹಂಪೆಯಾಳ್ದನೇ ॥ 520 ॥

ಮನುಜರ ಮೇಲೆ ಸಾವವರ ಮೇಲೆ ಕನಿಷ್ಠರ ಮೇಲೆ ಪದ್ಯಮಂ ।
ತನತನಗಿಂದ್ರಚಂದ್ರರವಿಕರ್ಣದಧೀಚಿಬಲೀಂದ್ರನೆಂದು ತಾ ॥
ನನವರತಂ ಪೊಗೞ್ದು ಕೆಡಬೇಡೆಲೆ ಮಾನವ ನೀನಹರ್ನಿಶಂ ।
ನೆನೆ ಪೊಗೞರ್ಚಿಸೆಮ್ಮ ಕಡುಸೊಂಪಿನ ಪೆಂಪಿನ ಪಂಪೆಯಾಳ್ದನಂ ॥ 521 ॥

ಮನೆ ನೆಟ್ಟಿಲಾಗೆ ಪೆಂಡಿರಿನಿದಾಗೆ ಸುತರ್ ಪಿರಿದಾಗೆಯರ್ಥದಾ।
ರ್ಜನೆ ಘನಮಾಗೆ ಯೌವನಮುದಾಗೆ ಬಟ್ಟಿಕ್ಕದನೇನನೆಂದಪೆಂ॥
ತನತನಗುಬ್ಬುರ್ತಂಕುರಿಸುತುಂ ನೆಱೆ ಪಲ್ಲವಿಸುತ್ತೆ ಪರ್ವುತುಂ।
ನನೆಕೊನೆವೋಗಿ ಮಾಯೆ ಕೊಱಚಾಡದೆ ಮಾಣ್ಬಳೆ ಹಂಪೆಯಾಳ್ದನೇ ॥522॥

## 3. ಶಿವಗಣದ ರಗಳೆಗಳು.

ಈ ಗ್ರಂಥವು ಪ್ರಾಯಿಕವಾಗಿ ರಘಟಾರೂಪವಾಗಿದೆ; ಅಲ್ಲಲ್ಲಿ ಗದ್ಯಕಂದ ವೃತ್ತಗಳೂ ದೊರೆಯುತ್ತವೆ. ಇದರಲ್ಲಿಯ ರಗಳೆಗಳ ಸಂಖ್ಯೆ ಇಷ್ಟೇ ಎಂದು ನಿರ್ಧರಿಸಲಾಗುವುದಿಲ್ಲ; ಕೆಲವರು ನೂರೊಂದು ರಗಳೆಗಳೆಂದೂ ಕೆಲವರು ನೂರಿಪ್ಪತ್ತು ರಗಳೆಗಳೆಂದೂ ಹೇಳುತ್ತಾರೆ. ನಮಗೆ ಸಂಪೂರ್ಣವಾದ ಪ್ರತಿ ದೊರೆತಿಲ್ಲ. ಈ ಗ್ರಂಥದಲ್ಲಿ—ತಮಿಳುಭಾಷೆಯಲ್ಲಿ ಬರೆದಿರುವ ಪೆರಿಯಪುರಾಣ ವೆಂಬ ಗ್ರಂಥದಲ್ಲಿ ವರ್ಣಿತರಾದ ಅರವತ್ತುಮೂವರೆಂಬ ಶಿವಭಕ್ತರಮೇಲೆಯೂ ಇತರ ಶಿವಭಕ್ತರ ಮೇಲೆಯೂ ರಗಳೆಗಳು ದೊರೆಯುತ್ತವೆ. ಒಂದು ಪ್ರತಿಯ ಅಂತ್ಯದಲ್ಲಿ ಈ ಪದ್ಯವಿದೆ:—

ಹಂಪೆಯ ಶಂಕರದೇವರ। ಹಂಪೆಯ ಗುರು ಮಾದಿರಾಜದೇವರ ಮತ್ರಂ।
ಹಂಪೆಯ ಮಾದರಸರ ದಯೆ। ಯಿಂ ಪೊಗೞ್ದಂ ರಸಿಕಚಕ್ರಿ ಹರಿಹರದೇವಂ॥

**ಹರೀಶ್ವರನು** ಈ ಗ್ರಂಥವನ್ನು ರಘಟಾರೂಪವಾಗಿ ಬರೆದುದರಿಂದ ಜನರು 'ರಗಳೆಯ ಕವಿ' ಎಂದು ಈತನನ್ನು ಪರಿಹಾಸಮಾಡಿದಂತೆಯೂ ಈ ಅಪವಾದ ವನ್ನು ನೀಗುವುದಕ್ಕಾಗಿ ಈತನು ಗಿರಿಜಾಕಲ್ಯಾಣವೆಂಬ ಮಹಾಕಾವ್ಯವನ್ನು ಬರೆದು ತನ್ನ ಪ್ರೌಢಿಮೆಯನ್ನು ತೋರಿಸಿದಂತೆಯೂ ಪ್ರತೀತಿಯಿದೆ.[1]

ಈ ಗ್ರಂಥದಿಂದ ಸ್ವಲ್ಪಭಾಗವನ್ನು ಉದ್ಧರಿಸಿ ಬರೆಯುತ್ತೇವೆ:—

### ಕಾಶ್ಮೀರವರ್ಣನೆ (ರಗಳೆ)

ಶ್ರೀವಸುಮತೀವದನಮುಕುರಮೆಂದೆನಿಸಿರ್ಪ। ಪಾವನಂ ಸಕಲದೇಶಕ್ಕೆ ತಾನೆನಿಸಿರ್ಪ।
ಶಾರದಾದೇವಿ ಪ್ರಸನ್ನೆಯಾಗಿರುತಿರ್ಪ। ಚಾರುತರನೂತನಕಳಾವಿದರುಮಿರುತಿರ್ಪ।
ಊರೂರ್ಗೆ ತೀವಿದ ತಟಾಕನಿಕರಂಗಳಿಂ। ಊರೂರ್ಗೆ ಕಿಕ್ಕಿಱಿದ ಕೊರ್ವಿದ ವನಂಗಳಿಂ।
ವನದೊಳಗೆ ಸುಳಿವ ಕಸ್ತೂರಿಯ ಮೃಗಂಗಳಿಂ। ವಿನಯದಿಂದೆಯ್ತರ್ಪ ಚಮರೀಮೃಗಂಗಳಿಂ।
ನಗರಿನಗರಿಯೊಳೆಸೆವ ದೇವಾಲಯಂಗಳಿಂ। ಮುಗಿಲನಳ್ಕಿಱಿವ ಘನನಾಟಕೂಟಂಗಳಿಂ।
ವಸೆವ ಕಾಶ್ಮೀರದೇಶಂ ರಂಜಿಸುವುದಿಳೆಗೆ। ಪೊಸಪೊಸ ಬನಂ ಪಟ್ಟಣಂಗಳಿಂದುರ್ವರೆಗೆ।

---

1. ಸಿದ್ಧನಂಜೇಶನ (ಸು 1650) ರಾಘವಾಂಕಚಾರಿತ್ರದ 14 ನೆಯ ಸಂಧಿಯಲ್ಲಿಯೂ ಈ ವಿಷಯವು ಸೂಚಿತವಾಗಿದೆ.

ಬಂಧನಂ ಪೂಮಾಲೆಯೊಳಗಲ್ಲದಲ್ಲಿಲ್ಲ । ಅಂಧತ್ವಮಾಕೞ್ತಲೆಯೊಳಲ್ಲದಲ್ಲಿಲ್ಲ ।
ಕೊಯ್ವ ನುಡಿ ಕೆಯ್ಗಳೊಳ್ ಮಾನಿನಿಯರಳಕದೊಳ್ । ಬಯ್ವ ನುಡಿ ಗಿಳಿಗಳೊಳ್ ನಲ್ಲರೊಳ್ಜಗಳದೊಳ್ ।
ಬಡತನಂ ಲತೆಗಳೊಳ್ ಲಲನೆಯರ ನಡುವಿನೊಳ್ । ಕಿಡಿಸುವುದು ವಂಶಮಂ ಮೇದರೊಳ್ ವೃಷಭನೊಳ್ ।
ಅವನಿಗತಿಕಂಟಕಂ ಕೇತಕೀವೃಂದದೊಳ್ । ಭುವನಕಂಟಕಮೆಂಬುದಂಬುಜದ ನಾಳದೊಳ್ ।
ಇಂತಿವಱೊಳಲ್ಲದಿಲ್ಲಾನಾಡೊಳೆಲ್ಲಿಯುಂ । ಸಂತತಂ ಸುಖಮಯಂ ದೇಶದೊಳಗೆಲ್ಲಿಯುಂ ॥ 523 ॥

## ನಂಬಿಯಣ್ಣನ ಬಾಲ್ಯ (ಗದ್ಯ).

ಇಂತು ನಂಬಿಯಣ್ಣಂ ಶಿಶುವೇಷದೊಳ್ ನಳನಳಿಸಿ ತೊಳತೊಳಗಿ ಕಂಡವರ ಕಣ್ಮಣಿ ಎತ್ತಿದರ ಹಸ್ತದಮೃತಫಲಂ ಮುಟ್ಟಿದರ ಮೆಯ್ಯ ಪುಳಕಂ ಅಪ್ಪಿದರೊಪ್ಪಂ ಸಾಗಿಪರ್ ಸೋಗಿಲ ಧನಂ ಕೆಯ್ಕೊಳ್ವವರ ಕಡವರಂ ಎನಿಸಿ, ಪರವೆನಾಚಿ ಸಂಕಿಲೆನಾಚಿಯರನಪ್ಪುವ ತೋಳಿವೆಂಬಂ ತೋಳಾಡಿಸುತ್ತುಂ, ಮುಂದೆ ಶಿವನೊಡನಾಡುವ ಹುಸಿಜಗಳಮೆಂಬುದಂ ಸೂಚಿಸುವಂತೆ ತೊದಳ್ನುಡಿಯಂ ನುಡಿಯುತ್ತುಂ, ದೇವನಂ ತನಗೆ ಕುಂಟಣಿಯಂ ಮಾಡಿ ನಡೆಯಿಸುವುದೀಪರಿಯೆಂದು ತೋರ್ಪಂತೆ ಮೆಲ್ಲಮೆಲ್ಲನೆ ದಟ್ಟಡಿಯಿಡುತ್ತುಂ, ಪುಟ್ಟಿಸಿದರ್ ತಾಮೆಂದು ಬಗೆದು ಮುದ್ದಾಡಿಸುವ ತಾಯ್ತಂದೆಗಳ ಮೊಗಮಂ ನೋಡಿ ನಗುವಂತೆ ಮುಗುಳ್ನಗೆನಗುತ್ತುಂ, ದೇವಾ ! ಸಂಸಾರಂಬುಗದ ಮುನ್ನಂ ಬೇಗಮೆಂದು ಬಂದು ಎನ್ನಂ ತೊೞ್ತುಗೊಂಬೆಯೆಂದುಮ್ಮ್ರೀಕೆಯಿಂದೊರ್ಮೊರ್ಮೆ ಬೆರ್ಚಿ ಬೆರ್ಚಿಯೞ್ತುಂ. ಈತೆಱದೊಳ್ ಒಂದೆರಡುನಾಲ್ಕಯ್ದು ವತ್ಸರಂ ಬರಂ ನೆಱೆದುವು.

ಕರ್ಪಿನ ಕಾಂತಿಯಿಂ ಕುರುಳ್ಗೊಂಡು ದಟ್ಟೈಸಿ ಕವಲೆಱ್ದ ಕುಂತಳಂ ಗಂಗಾಧರನೊಳ್ ಪುರುಡಿಸಿ ತೆರೆಮುಸಗಿದ ಕಾಳಿಂದೀನದಿಯಂ ಶಿರೋಗ್ರದೊಳ್ ಧರಿಸಿದಂತಿರ್ದಪುದು. ಭಾಳಸ್ಥಳದೊಳ್ ಭರಿತಮಾಗಿ ಬೆಳಗುವ ಭಸಿತವಳಯಂ ಮೃಡಂ ಮುಡಿಯಲ್ಲಿ ಧರಿಸಿದೊಡೆ ತಾಂ ಸಸಿಕಳೆಯಂ ನೊಸಲೊಳಿಟ್ಟಂತಿರ್ದಪುದು. ಕರ್ಣದೊಳ್ ಕೆಯ್ಗೊಳಿಸಿ ಮೊತ್ತದೊಳೆೞ್ದು ಬಿತ್ತರಿಸುವ ಉತ್ತಮದ ಮುತ್ತಿನ ಕಡುಕುಗಳ್ ಮುಂದೆ ನೀಂ ಭೋಗಿಸುವ ಸಕಲಸೌಭಾಗ್ಯಕ್ಕೆ ಬೀಜಭೂಮಿಯಾಗಿರಲ್ಕೆ ಚಂದ್ರಧರನೆಮ್ಮಂ ಕಱಿಪಿದನೆಂದೇಕಾಂತಂಬೇೞ್ವ ಪುಣ್ಯದುರುಳಿಗಳಂತಿರ್ದಪುವು. ಮೃದುಪದತಳಂಗಳ್ ಲಾವಣ್ಯಕ್ಕೆ ನಗೆ ತನಗೆನುತ್ತೆ ನಟ್ಟುನೋಡುವ ನಾಯಕಿಯರ ದಿಟ್ಟಿಗಳಿಂ ಚರಣತಳಂ ಕಣ್ವೆತ್ತಂತಿರ್ದಪುದು. ಏಱುವ ಜವ್ವನಂ ಶಿವಪೂಜೆಗೆಂದರಳಲಿರ್ದ ಪರಿಮಳದ ಮೊಗ್ಗೆಯಂತಿರ್ದಪುದು. ಇಂತೀಕುಮಾರಂ ಮರ್ತ್ಯನಲ್ಲ, ಏನಾನುಮೊಂದು ಕಾರಣದಿಂ ಬಂದ ಗಣೇಶ್ವರನಾಗವೇೞ್ಕುಂ ॥ 524 ॥

## 4. ಮುಡಿಗೆಯ ಅಷ್ಟಕ.

**ಹರೀಶ್ವರನು** ಒಂದಾನೊಂದು ಕಾಲದಲ್ಲಿ ತಲೆಬಾಗಿ ಈಶ್ವರದರ್ಶನ ಮಾಡುತ್ತಿರುವಾಗ ಅವನ "ಮಂಡೆಯೊಳ್ ತಳೆದ ರುದ್ರಾಕ್ಷವಿತತಿಪ್ರಸುಮದ ಟೊಪ್ಪಿಗೆ" ಕೆಳಕ್ಕೆ ಬೀಳಲು ಬ್ರಾಹ್ಮಣರು ಹಸಿತಮುಖರಾಗಿ "ಹರಿಯರಸನು ಮುಡಿಗೆಯ ನೇತಕಿಕ್ಕಿದನೋ" ಎನ್ನಲು, ಹರೀಶ್ವರನು ಅದನ್ನೇ ಮುಡಿಗೆಮಾಡಿ ಶಿವಸ್ತುತಿ ರೂಪವಾದ ಈ ಅಷ್ಟಕವನ್ನು ಹೇಳಿದಾಗ ಅದನ್ನು ಯಾರೂ ತೆಗೆಯಲಾರದೆ ಹೋಗಲು ಚಂಡೇಶನು ಆ ಟೊಪ್ಪಿಗೆಯನ್ನು ತೆಗೆದು ಹರೀಶ್ವರನ ತಲೆಯ ಮೇಲಿಟ್ಟು ಅಂತರ್ಧಾನವಾದನು—ಎಂಬುದಾಗಿ ರಾಘವಾಂಕಚಾರಿತ್ರದಿಂದ ತಿಳಿಯುತ್ತದೆ.

ಈ ಗ್ರಂಥದಲ್ಲಿ 8 ವೃತ್ತಗಳಿವೆ; ಎಲ್ಲವೂ ಕ್ಷಕಾರಪ್ರಾಸದಲ್ಲಿವೆ; ಒಂದೊಂದೂ "ಮುಡಿಗಿಕ್ಕಿದೆನಿಕ್ಕಿದೆನಾವನೆತ್ತುವಂ" ಎಂದು ಮುಗಿಯುತ್ತದೆ. ಎರಡು ಪದ್ಯಗಳನ್ನು ತೆಗೆದು ಬರೆಯುತ್ತೇವೆ:—

ಕುಕ್ಷಿಯೊಳಿಟ್ಟು ಭಕ್ತಕುಲಮಂ ಪರಿರಕ್ಷಿಪ ದೇವದೇವನ ।
ಬ್ಜಾಕ್ಷವಿರಿಂಚಿಗಳ್ ತುದಿಮೊದಲ್ಪರೆಗಾಣದ ದೇವದೇವನಾ ॥
ವಕ್ಷದೊಳಾಲ್ದು ಬೊಬ್ಬಿಱಿವ ದೇವಕರೋಟಿಯ ದೇವನೀವಿರೂ ।
ಪಾಕ್ಷನೆ ದೇವನೆಂದು ಮುಡಿಗಿಕ್ಕಿದೆನಿಕ್ಕಿದೆನಾವನೆತ್ತುವಂ ॥ 525 ॥

ತ್ರ್ಯಕ್ಷನೆ ದೇವನಕ್ಷಿಶಿಖಿಗಂಗಜನಾಹುತಿಯಾಗ ಬೇಳ್ದ ಭಾ ।
ಳಾಕ್ಷನೆ ದೇವನಬ್ಜಜನ ನೆತ್ತಿಯ ಪಾತ್ರೆಯನೆತ್ತಿದಾಮಹಾ ॥
ಭಿಕ್ಷುವೆ ದೇವನಂತಕನನೀಡಿಱಿದೆತ್ತಿ ಪೊರಳ್ಚಿದಾವಿರೂ ।
ಪಾಕ್ಷನೆ ದೇವನೆಂದು ಮುಡಿಗಿಕ್ಕಿದೆನಿಕ್ಕಿದೆನಾವನೆತ್ತುವಂ ॥ 526 ॥

**ರಾಘವಾಂಕನ** (ಸು. 1165) ಹರಿಶ್ಚಂದ್ರಕಾವ್ಯದ ಒಂದು ಪ್ರತಿಯ ಆದಿಭಾಗದಲ್ಲಿ ದೊರೆವ ಗದ್ಯದಲ್ಲಿ [1] ಹರೀಶ್ವರನನ್ನು ಸರಸಕವಿಸಾರ್ವಭೌಮ, ಚತುರಕವಿಚತುರ್ಮುಖ, ಭಾವಕವಿಭಾಳಲೋಚನ, ವರ್ಣಕಕವಿಕರ್ಣಾವತಂಸ, ವಸ್ತುಕಕವಿಮಸ್ತಕನ್ಯಸ್ತಹಸ್ತ, ಅದಟಕವಿಮಾನಮರ್ದನ, ಗರ್ವಿತಕವಿಗಿರಿವಜ್ರದಂಡ, ಉಭಯಕವಿಶರಭಭೇರುಂಡ, ವರ್ತಮಾನಕವಿ ವೇಶ್ಯಾಭುಜಂಗ, ಕರ್ಣಾಟಕಾವ್ಯಲಕ್ಷಣ ದೀಕ್ಷಾಚಾರ್ಯ, ಶಿವಯೋಗಚಕ್ರೇಶ್ವರ, ಲೋಕಾರಾಧ್ಯ, ಸಾಕಾರಸುಧರ್ಮ, ಮರ್ತ್ಯಲೋಕದ ಮಹಾದೇವ ಎಂದು ವಿಶೇಷಿಸಿ ಹೇಳಿದೆ.

---

1. ಪುಟ 238.

## ರಾಘವಾಂಕ. ಸು. 1165.

ಈತನು **ಹರಿಶ್ಚಂದ್ರಕಾವ್ಯ, ಸೋಮನಾಥಚರಿತೆ, ಸಿದ್ಧರಾಮಪುರಾಣ, ವೀರೇಶ್ವರಚರಿತೆ, ಶರಭಚಾರಿತ್ರ, ಹರಿಹರಮಹತ್ತ್ವ** ಎಂಬ ಗ್ರಂಥಗಳನ್ನು ಬರೆದಿದ್ದಾನೆ. ಇವುಗಳಲ್ಲಿ ಮೊದಲು ಮೂರು ಗ್ರಂಥಗಳು ನಮಗೆ ದೊರೆತಿವೆ; ಉಳಿದ ಮೂರು ದೊರೆತಿಲ್ಲ, ಆದರೂ ಇವು **ರಾಘವಾಂಕ**ಕೃತವೆಂದು **ಸಿದ್ಧನಂಜೇಶನ** (ಸು. 1650) **ರಾಘವಾಂಕಚಾರಿತ್ರ**ದಿಂದ ತಿಳಿಯಬರುತ್ತದೆ. ಅಲ್ಲದೆ, ಈತನು ಹರಿಶ್ಚಂದ್ರಕಾವ್ಯವನ್ನುರಚಿಸಿ ನರಸ್ತುತಿಮಾಡಿದುದರಿಂದ ಈತನ ಸೋದರದಮಾವನೂ ಗುರುವೂ ಆದ ಹರೀಶ್ವರನು ಕೋಪಗೊಂಡು ಇವನ ಐದು ಹಲ್ಲುಗಳನ್ನು ಮುರಿದು ಕಳೆದು ಇವನಿಂದ ಐದು ಶೈವಕೃತಿಗಳನ್ನು ಮಾಡಿಸಿ ಮರಳಿ ಹಲ್ಲುಗಳನ್ನು ಕೊಟ್ಟನೆಂದು **ಪದ್ಮರಾಜಪುರಾಣ**ದಲ್ಲಿಯ (ಸು. 1385)

ಅಂತಾಗೆ ತಮ್ಮ ಗ್ರಜೆಯ ಸುತಂ ಕುಕವಿಹೃ ।
ತ್ಕಂತಂ ಸುಕವಿವನವಸಂತಂ ದಲುಭಯಕವಿ ।
ಸಂತಾನಶರಭಭೇರುಂಡ ರಾಘವನೊರೆದ ನರನುತಿಗೆ ಮುಳಿದು ಕಳೆದು ॥
ದಂತವ್ರದಂ ಮಗುಳ್ದಿ ಶೈವಕೃತಿಪಂಚಕವ ।
ನಂತವನಿನುಸಿರಿಸಿಯುವಂ ಕೊಟ್ಟು ಪರವಾದ ॥
ವಂ ತಡೆಯುದಾತನಿಂ ವಾದಮುಖದಿಂ ಗೆಲಿದನವನ ಕವಿತಾಪ್ರಾಜದಿಂ ॥

ಎಂಬ ಪದ್ಯದಿಂದ ತಿಳಿವುದರಿಂದ ಈತನು **ಹರಿಶ್ಚಂದ್ರಕಾವ್ಯ**ವಲ್ಲದೆ ಐದು ಕೃತಿಗಳನ್ನು ಬರೆದನೆಂಬುದು ವ್ಯಕ್ತವಾಗುತ್ತದೆ. **ಭೈರವೇಶ್ವರಕಾವ್ಯ**ದ **ಕಥಾಸೂತ್ರರತ್ನಾಕರ**ದಲ್ಲಿಯೂ "ರಾಘವಾಂಕನು ಶರಣರ ಚಾರಿತ್ರ ಪಂಚಕಾವ್ಯವಂ ಪೇಳಿದನು" ಎಂದು ಇದೇ ವಿಷಯವು ಹೇಳಲ್ಪಟ್ಟಿದೆ.

ಈತನ ವಿಷಯವಾಗಿ **ಸಿದ್ಧನಂಜೇಶನ** ರಾಘವಾಂಕಚಾರಿತ್ರದಿಂದ ಈ ಯಂಶಗಳು ತಿಳಿಯುತ್ತವೆ:—

ಈತನು ಕುಂತಳದೇಶದಲ್ಲಿ ತುಂಗಭದ್ರಾತೀರದಲ್ಲಿರುವ ಪಂಪಾಪುರದಲ್ಲಿ ಹುಟ್ಟಿದನು. ಇವನ ತಂದೆ ಮಹಾದೇವಭಟ್ಟ; ತಾಯಿ ರುದ್ರಾಣಿ; ಸೋದರದ ಮಾವ ಮತ್ತು ಗುರು ಹಂಪೆಯ ಹರೀಶ್ವರ. ಈತನು ತನಗೆ ಕವಿತಾಶಕ್ತಿಯುಂಟಾದ ಮೇಲೆ ಪಂಪಾಪುರದ ರಾಜನಾದ ದೇವರಾಜನ ಸಭೆಯಲ್ಲಿ ವಿದ್ವಾಂಸರೆಲ್ಲರೂ ಮೆಚ್ಚುವಂತೆ ಹರಿಶ್ಚಂದ್ರಕಾವ್ಯವನ್ನು ರಚಿಸಿ ಓದಿದನು. ಹೀಗೆ ನರಸ್ತುತಿಮಾಡಿದ ತಪ್ಪಿತಕ್ಕೆ ಹರೀಶ್ವರನು ಹಲ್ಲುಗಳನ್ನು ಮುರಿಯಲು ಹರೀಶ್ವರನ ಇಷ್ಟಾನುಸಾರ ಸೋಮನಾಥಚರಿತೆಯೇ ಮುಂತಾದ ಗ್ರಂಥಗಳನ್ನು ಬರೆದು ಹಲ್ಲುಗಳನ್ನು ಮರಳಿ ಪಡೆದನು. ತರುವಾಯ ನರಸಿಂಹಬಲ್ಲಾಳನ ಮಂತ್ರಿಯಾದ ಕೆರೆಯ ಪದ್ಮರಸನನ್ನು ನೋಡುವುದಕ್ಕಾಗಿ ಹೊಯ್ಸಳನಗರಕ್ಕೆ ಹೋದನು.

ಅಲ್ಲಿಂದ ಮರಳಿ ಹಂಪೆಗೆ ಬಂದು ಓರುಗಲ್ಲಿನ ರಾಜನಾದ ರುದ್ರಪ್ರತಾಪನ ಸಭೆಯಲ್ಲಿ ಏಕದ್ವಿತ್ರಿಸಂಧಾಗ್ರಾಹಿಗಳೆಂಬ ಕುಕವಿಗಳಿದ್ದಾರೆಂದು ಕೇಳಿ ಅಲ್ಲಿಗೆ ಹೋಗಿ ಷಟ್ಪದೀ ರೂಪವಾದ ವೀರೇಶ್ವರಚರಿತೆಯೆಂಬ ಗ್ರಂಥವನ್ನು ಬರೆದು ರಾಜನ ಸಭೆಯಲ್ಲಿ ಓದಿ ಕುಕವಿ ಪರವಾದಿಗಳನ್ನು ಜಯಿಸಿ ಹಂಪೆಗೆ ಬಂದು ಹರೀಶ್ವರನ ಆಜ್ಞಾನುಸಾರವಾಗಿ ಬೇಲೂರಿಗೆ ಹೋಗಿ ಅಲ್ಲಿ ಬಯಲಾದನು. ಈತನಿಗೆ ಹಿಂದೆ ಷಟ್ಪದಿಗಳಲ್ಲಿ ಆರೂ ಗ್ರಂಥವನ್ನು ಬರೆದಿರಲಿಲ್ಲ; ಈತನೇ ಅವುಗಳನ್ನು ನಿರ್ಮಿಸಿದವನು.

ಚೆನ್ನಬಸವಪುರಾಣದಲ್ಲಿ (1584) ಇವನ ವಿಷಯವಾಗಿ ಈ ಪದ್ಯವಿದೆ:—

ವರಹರೀಶ್ವರನ ಸೋದರದಳಿಯನುಭಯಕವಿ |
ಶರಭಭೇರುಂಡನೆಂದೆಂಬ ನಾನಾಪರಿಯ |
ಬಿರುದಾಂಕ ಕವಿರಾಘವಾಂಕನಿರಲೋರುಗಲ್ಲೆಂಬ ಪಟ್ಟಣಕೆ ಪೋಗಿ ||
ಪರವಾದಿಗಳನಲ್ಲಿ ಗೆಲಿದು ವೀರೇಶನಿಂ |
ದರಿದೆನಿಪ ಪದಕವುಂ ಪಡೆದು ವೇಲಾಪುರಿಗೆ |
ಮರಳಿ ಬಂದಲ್ಲಿ ದೇಹವನುಜಿಾದು ವರಸಮಾಧಿಯೊಳಿರದೆ ಬಯಲಪ್ಪನು ||

ಭೈರವೇಶ್ವರಕಾವ್ಯದ ಕಥಾಸೂತ್ರರತ್ನಾಕರದಲ್ಲಿ ಇವನ ವಿಷಯವಾಗಿ ಈ ಯಂಶಗಳು ಹೇಳಿವೆ:—

ಪ್ರತಾಪರುದ್ರನ ಸಭೆಯಲ್ಲಿ ಏಕದಂಡಿ ದ್ವಿದಂಡಿ ತ್ರಿದಂಡಿಯೆಂಬ ಮೂವರು ವೈಷ್ಣವಕವಿಗಳು ಸಕಲವಿದ್ವಾಂಸರು ಮಾಡಿದ ಪದ್ಯಮಂ ಮೂಱುವೇಳೆ ಓದಿಸಿ ಆ ಪದ್ಯವ ಪಾಠಮಾಡಿ ನನ್ನ ಪದ್ಯವ ನೀನೆಲ್ಲಿ ಕಲಿತೆ ಎಂದು ಕವಿಗಳನ್ನು ರಾಜನ ಸಭೆಯಲ್ಲಿ ಮನ್ನಣೆ ಯಿಲ್ಲದಂತೆ ಸೋಲಿಸುತ್ತಿರಲು, ರಾಘವಾಂಕನು ಆ ವಾರ್ತೆಯಂ ಕೇಳಿ ಕವಿಮುಖ ಕವಾಟವೆಂಬ ಪದ್ಯಶಾಸ್ತ್ರವಂ ರಚಿಸಿ ಓರುಗಲ್ಲಿಗೆ ಹೋಗಿ ಆ ಏಕದ್ವಿತ್ರಿದಂಡಿಗಳನ್ನು ಸೋಲಿಸಿ ರಾಜನಿಂದ ಮನ್ನಣೆಯನ್ನು ಹೊಂದಿದನು. ಉಭಯಕವಿಶರಭಭೇರುಂಡ ರಾಘವಾಂಕಪಂಡಿತ ಎಂಬ ಶಿವಕವೀಶ್ವರನ ಕವಿತ್ವದಲ್ಲಿ ತಪ್ಪಿಲ್ಲವೆಂದು ಸಮಸ್ತಸಮಯದ ಕವಿಗಳೆಲ್ಲಾ ಕೀರ್ತಿಸಿದರು.

ಗುರುರಾಜಚಾರಿತ್ರದಿಂದ (ಸು. 1650) ಈ ವಿಷಯಗಳು ತಿಳಿಯುತ್ತವೆ:—

ಕವಿಕಮಲಮಾರ್ತಂಡ ರಾಘವಾಂಕಂ ಪಂಪಾವಿರೂಪಾಕ್ಷನನು ಸ್ತುತಿಸಿ ಕಂಕಣ ಕಿರೀಟಾದಿಗಳನನುನಯದಿ ಪಡೆದು ಉಭಯಕವಿಶರಭಭೇರುಂಡನೆಂಬ ಪೆಂಡೆಯವ ಧರಿಸಿ ಹರಿಶ್ಚಂದ್ರನ ಕಾವ್ಯವ ಮುಱಿದು ಸೋಮನಾಥನ ಕಾವ್ಯವ ಪೇೞ್ ಕುಮಾರವ್ಯಾಸನ ಗೆಲಿದು ಓರುಂಗಲ್ಲಿಗೈದುತ್ತ ಸುಮನಸನ ಲೀಲೆಯಿಂ ಗಂಧರ್ವಲೋಕಕ್ಕೆ ಕಳುಹಿ ವೀರೇಶ ನಾಲಯಕೆ ಹೋಗಿ ದೇಗುಲದ ಹಿಂದೆ ಕುಳಿತು ಭಕ್ತಿಯಿಂದ ವಿಾಸಲುಗವಿತೆಯೆಂಬ

ಪ್ರಬಂಧಮಂ ರಾಗದಿಂದೊರೆದು ದೇಗುಲವನಭಿಮುಖಗೈದು ವೀರಭದ್ರನಂ ರಂಗಸ್ಥಳಕೆ ಬರಿಸಿ ರುದ್ರಪ್ರತಾಪನಿಂ ಪೂಜೆವಡೆದನು.

ಈತನು ತನ್ನ ಗುರುಪರಂಪರೆಯನ್ನು ಈ ಅನುಪೂರ್ವಿಯಲ್ಲಿ ಹೇಳಿದ್ದಾನೆ:– ಹಂಪೆಯ ಶಂಕರಪ್ರಭು, ಸುಕವಿ ಹಂಪೆಯ ಮಾದಿರಾಜ, ಹಂಪೆಯ ಮಹಾದೇವ ಗುರು, ಹಂಪೆಯ ಹರೀಶ್ವರ.

ಈತನಿಗೆ ಉಭಯಕವಿಶರಭಭೇರುಂಡ, ಉಭಯಕವಿಕಮಲರವಿ, ಅದಟ ಕವಿನಿಕರಚೌದಂತ ಎಂಬ ಬಿರುದುಗಳಿದ್ದಂತೆ ತಿಳಿಯುತ್ತದೆ. ಪಂಪಾಪುರದ ದೇವರಾಜನು ಇವನ ಪಾಂಡಿತ್ಯಕ್ಕೆ ಮೆಚ್ಚಿ ಕವಿಶರಭಭೇರುಂಡನೆಂಬ ಪಾದದ ಪೆಂಡೆಯವನ್ನು ಕೊಟ್ಟಂತೆ ರಾಘವಾಂಕಚಾರಿತ್ರದಲ್ಲಿ ಹೇಳಿದೆ.

ಈ ಕವಿ ತಾನು "ಹರೀಶ್ವರನ ವರಸುತಂ" ಎಂದು ಹೇಳಿಕೊಂಡಿದ್ದಾನೆ. ಬಸವಪುರಾಣದಲ್ಲಿಯೂ (1369) "ಹರಿದೇವಸುತ ರಾಘವ" ಎಂದು ಹೇಳಿದೆ. ಹರೀಶ್ವರನ ಶಿಷ್ಯನಾದುದರಿಂದ ಹೀಗೆ ಹೇಳಿಕೊಂಡಿರಬೇಕು.

ಈತನನ್ನು ಪ್ರಾಯಃ ವೀರಶೈವಕವಿಗಳೆಲ್ಲಾ ಸ್ತುತಿಸಿದ್ದಾರೆ. ಇವನು ಸ್ತುತಿಸುವ ಪೂರ್ವಕವಿಗಳನ್ನು[1] ಹಿಂದೆಯೇ ಹೇಳಿದ್ದೇವೆ.

ತನ್ನ ಕವಿತಾಚಾತುರಿಯನ್ನೂ ಗುಣಗಳನ್ನೂ ಈ ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ:—

ಮುಂತೆ ಸರಿಯಿಲ್ಲೆಂದು ಪೊಗಳ್ದವರು ಪೊಜಮುಟ್ಟ ।
ಪಿಂತವನ ಕವಿತೆಯೇನೆಂದು ನಿಂದಿಸಿ ತಮ್ಮ ।
ತೂಂತುಗವಿತೆಯ ತೂಬನುರ್ಚಿ ನೆಱೆ ದೂಱುಗರ ನಡುವೆ ನಿಜನಿಳಯದೊಳಗೆ ॥
ಮಂತಣಂಗೊಂಡು ಕಾಳ್ಗೆಡೆದೊಳ್ದ ಕವಿಯೆದೆಯ ।
ಕೊಂತ ಮೂಗಿನ ಕತ್ತಿಯದಟಕವಿನಿಕರಚೌ ।
ದಂತ ಹಂಪೆಯ ರಾಘವಾಂಕಪಂಡಿತನುಭಯಕವಿಶರಭಭೇರುಂಡನು ॥
ಕೆಳೆತನದ ಬಂಧುವಿಷಯದ ನಂಟುವೆರಗುಗಳ ।
ಬಲದೊಳಾಂ ಕವಿಯೆಂದು ಕವಿರಾಯನೆಂದು ವೆ ।
ಗ್ಗಳಿಸಿ ಕಾಳ್ಗೆಡೆದೊಡಾಂ ಸೈರಿಸುವೆನಲ್ಲದಾನಂಟನೀಡಾಡಿ ಮಲೆತು ॥
ಬಳಿಕವಾಂ ಕವಿಯೆಂದು ಕವಿರಾಯನೆಂದು ವೆ ।
ಗ್ಗಳಿಸಿ ಕಾಳ್ಗೆಡೆದ ದುಷ್ಕವಿಯ ಗರ್ಬದ ಮೂಗ ।
ನಿಱುಹದಿರನುಭಯಕವಿಶರಭಭೇರುಂಡ ಹಂಪೆಯರಾಘವಂ ಸಭೆಯೊಳು ॥
ಪೆಜರೊಡವೆಯಂ ಕೊಂಡು ಕೃತಿಯ ಪೇೞದ ಭಾಷೆ ।

1. ಪುಟ 222.

ಪೆಱರ ಕಾವ್ಯಾರ್ಥಂಗಳಂ ಛಿದ್ರಿಸದ ಭಾಷೆ ।
ಪೆಱರ ದೈವವ ನುತಿಸದಿಪ ಭಾಷೆ ಪೆಱರ ಖೇದವ ನಿರೀಕ್ಷಿಸದ ಭಾಷೆ ॥
ಪೆಱರ ನಿಂದಿಸಿ ತನ್ನ ಹೊಗೞ್ಕೊಳ್ಳದ ಭಾಷೆ ।
ಪೆಱರ ವಧುವಂ ಕಂಡು ಮನವೆಳಸದಿಹ ಭಾಷೆ ।
ಪೆಱರ ವಸ್ತುವ ತೃಣಕೆ ಸರಿಯೆಂಬ ಭಾಷೆಯಿದು ರಾಘವಾಂಕಗೆ ಸಂದುದು ॥

ಇವನ ವಿಷಯವಾಗಿ ರಾಘವಾಂಕಚಾರಿತ್ರವೆಂಬ ಗ್ರಂಥವು ಹುಟ್ಟಿದೆ.

ಇವನ ಗ್ರಂಥಗಳಲ್ಲಿ

## 1. ಹರಿಶ್ಚಂದ್ರಕಾವ್ಯ.

ಇದರಲ್ಲಿ ಹರಿಶ್ಚಂದ್ರರಾಜನ ಚರಿತ್ರವು ವರ್ಣಿತವಾಗಿದೆ; ಗ್ರಂಥವು 14 ಸ್ಥಲಗಳಾಗಿ ಭಾಗಿಸಲ್ಪಟ್ಟಿದೆ. ಇದರಲ್ಲಿ 775 ವಾರ್ಧಕಷಟ್ಪದಿಗಳೂ ಒಂದು ರಗಳೆಯೂ ಇವೆ. ಇದರ "ಕಥಾಬೀಜ" ವನ್ನು ಕವಿ ಈ ಪದ್ಯದಲ್ಲಿ ಹೇಳಿದ್ದಾನೆ:—

ವಸುಧಾಧಿಪತಿ ಹರಿಶ್ಚಂದ್ರ ಘನಸತ್ಯನೆಂ ।
ದೊಸೆದು ವಾಸಿಷ್ಠನಿಂದ್ರಂಗೆನಲು ಕೌಶಿಕಂ ।
ಹುಸಿಮಾೞ್ಪೆನೆಂದು ಭಾಷೆಯನಿತ್ತು ಧರೆಗೆ ಬಂದವನಿಪನ ಸತ್ಯೋತ್ತರನು ॥
ಅಸುವಂತ್ಯವೆನೆ ನಿಗ್ರಹಂಮಾಡಿಯೊಪ್ಪದಿರೆ ।
ಶಶಿಮೌಳಿ ಶ್ರೀವಿಶ್ವನಾಥ ಭೂಪಂಗೆ ಕರು ।
ಣಿಸಿ ಸಕಲಸಾಮ್ರಾಜ್ಯವಿತ್ತಾತನಂ ಮೆಱೆದ ಕೃತಿ ಪುಣ್ಯದಾಕೃತಿಯಿದು ॥

ಗ್ರಂಥಾವತಾರದಲ್ಲಿ ಕವಿ ಹಂಪಾವಿರೂಪಾಕ್ಷನನ್ನು ಸ್ತುತಿಸಿದ್ದಾನೆ. ಬಳಿಕ ಪಂಪಾಂಬಿಕೆಯನ್ನು ಸ್ತುತಿಸಿ ತನ್ನ ಗುರುಪರಂಪರೆಯನ್ನು ಹೇಳಿ ಕಥೆಯನ್ನು ಆರಂಭಿಸಿದ್ದಾನೆ.

ಈ ಗ್ರಂಥದ ಒಂದು ಪ್ರತಿಯ ಆದಿಭಾಗದಲ್ಲಿ ಈ ಗದ್ಯವು ಬರೆದಿದೆ:—

ಇದು ಸಮಸ್ತಕಳಾಧರಕ್ರಮನಿಷ್ಠಸಂಕ್ರಂದನಾದಿಸುರನಿಕರಮಣಿಮುಕುಟಮಯೂಖಮಾಲಾಪುಂಜರಂಜಿತಚರಣಕಿಂಜಲ್ಕಮಂಜರೀ [ ಪಿಂಜರಿತ ] ದಿಶಾವಲಯಂ ಸಕಲದೈವದೀಕ್ಷಾಕರ್ತೃ ನಿಖಿಲದೈವರಕ್ಷಾದಕ್ಷ ದೈನ್ಯದೈವಶರಣಾಗತವಜ್ರಪಂಜರ ದರ್ಪಿಷ್ಠದೈವಸರ್ಪಮಯೂರ ಗರ್ವಿತಗರ್ವಶಾಪಹರಣ ಸಮಸ್ತದೈವಸಾರ್ವಭೌಮನೆನಿಪ ಪಂಪಾಧೀಶ್ವರವಿರೂಪಾಕ್ಷವರ್ಣನವಾಗೆ ಸರಸಕವಿಸಾರ್ವಭೌಮಂ ಚತುರಕವಿಚತುರ್ಮುಖಂ ಭಾವಕವಿಭಾಳಲೋಚನಂ ವರ್ಣಕಕವಿಕರ್ಣಾವತಂಸಂ ವಸ್ತುಕಕವಿಮಸ್ತಕನ್ಯಸ್ತಹಸ್ತಂ ಅದಟಕವಿಮಾನಮರ್ದನಂ ಗರ್ವಿತಕವಿಗಿರಿವಜ್ರದಂಡಂ ಉಭಯಕವಿಶರಭಭೇರುಂಡಂ ವರ್ತಮಾನಕವಿವೇಶ್ಯಾಭುಜಂಗಂ ಕರ್ಣಾಟಕಾವ್ಯಲಕ್ಷಣದೀಕ್ಷಾಚಾರ್ಯ ಶಿವಯೋಗಚಕ್ರೇಶ್ವರ

ಲೋಕಾರಾಧ್ಯ ಸಾಕಾರಸುಧರ್ಮ ಮರ್ತ್ಯಲೋಕದ ಮಹಾದೇವನೆನಿಪ ಹಂಪೆಯ ಹರಿಹರದೇವರ ಕುಮಾರನೆನಿಪ ಉಭಯಕವಿಕಮಲಾದಿತ್ಯ ಹಂಪೆಯ ರಾಘವಾಂಕ ವರ್ಣನವಪ್ಪ ಹರಿಶ್ಚಂದ್ರಪ್ರಬಂಧಂ.

ಮತ್ತೊಂದು ಪ್ರತಿಯಲ್ಲಿ ಗ್ರಂಥಾಂತ್ಯದಲ್ಲಿ ಈ ಗದ್ಯವಿದೆ:—

ಇಂತೀ ಪಂಪಾಪುರದರಸ ವಿರೂಪಾಕ್ಷಲಿಂಗದಾ ಚರಣನೀರಜಗಂಧಸಿಂದೂರಪಾವನಭ್ರಮರನೆನಿಪ ಅದಟಕವಿಚೌದಂತ ಹಂಪೆಯ ರಾಘವಾಂಕವಿರಚಿತಮಪ್ಪ ಹರಿಶ್ಚಂದ್ರಚಾರಿತ್ರದೊಳ್.

ಇವನ ಬಂಧವು ಪ್ರೌಢವಾಗಿಯೂ ಅರ್ಥಗಾಂಭೀರ್ಯವುಳ್ಳುದಾಗಿಯೂ ದೇಶ್ಯಪದಭೂಯಿಷ್ಠವಾಗಿಯೂ ಇದೆ. ಷಟ್ಪದೀಗ್ರಂಥಗಳನ್ನು ಬರೆವುದಕ್ಕೆ ಈತನೇ ಆದಿಕವಿಯೆಂದು ವೀರಶೈವರ ಗ್ರಂಥಗಳಲ್ಲಿ ಹೇಳಿದೆ. ಇದು ಚರ್ಚಾಸ್ಪದವಾದ ವಿಷಯವು. ಈತನ ಗ್ರಂಥಗಳಲ್ಲಿ, ಶಬ್ದಮಣಿದರ್ಪಣಾದಿವ್ಯಾಕರಣಪ್ರಕ್ರಿಯೆಗಳಿಗೆ ವಿರೋಧವಾದ, ಆಗ್ಗೆ ವ್ಯವಹಾರದಲ್ಲಿದ್ದಿರಬಹುದಾದ ಹಲವು ಪ್ರಯೋಗಗಳು ದೊರೆಯುತ್ತವೆ.

ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

### ಚಂದ್ರೋದಯ.

ಕುಸುಮಶರನುಂ ಮದನ ಮಸೆವ ಸಳಿಕೆನದೊಂದು ।
ಹೊಸಸಾಣೆಯೋ ಗಗನವನಿತೆಯೆಂಚಾಡಲ್ಕೆ ।
ಪಸರಿಸಿದ ನಕ್ಷತ್ರಗವಡಿಕೆಯೊಳಿಟ್ಟಿಹಿಟ್ಟದೊಂದು ಬೆಳ್ಳಿಯ ಹಲ್ಲೆಯೋ ॥
ಒಸೆದು ರತಿ ಸಿಟ್ಟಿಸುವ ಕನ್ನಡಿಯೊ ಮನುಮಗನ ।
ಹೊಸಚತ್ರವೋ ತಿಳಿದ ಬೆಳುದಿಂಗಳಂ ಖಚರ ।
ರೊಸೆದು ವಸುಧೆಗೆ ಸುರಿವ ಹೊಸಭಾಂಡವೋ ಎನಿಸಿ ಮೂಡಿತ್ತು ಶಶಿಬಿಂಬವು ॥527॥

### ಕೊಳ.

ಬಸವಟ್ಟದ ನೆಯ್ದಿಲಂ ಕಂಡು ನಗುವಂತರಳ್ದ ।
ಹೊಸಕಮಲಕುಟ್ಮಲದ ಕರ್ಣಿಕೆಯ ಕೆಲದ ಕಿಱು ।
ಯೆಸಳಿಡುಕುಱಂ ಬಗಿದು ಕೇಸರದ ಕುತ್ತುಱೊಳು ನುಸುಳಿನುಸುಳಿಪರಾಗದ ॥
ಮಿಸುಪ ರಜದೊಳು ಹೊರಳಿ ಬಳಿದ ಬಂಡೆಂಬ ಕೋ ।
ಟಿಕ್ಕಿಸಱನೊಳು ಸಿಲ್ಕಿ ಜನುಗುವ ಮಱಗೆ ಸೌರಭ್ಯ ।
ರಸದ ಕುಟುಕಿತ್ತು ಸಾಗಿಸುವ ಬಾಣತಿದುಂಬಿ ಮೆಱೆದುವಂತಾಕೊಳದೊಳು ॥528॥

### ಉಪವನ.

ಗಿಳಿಗಳರಗಿಳಿ ನವಿಲು ಸೋಗೆನವಿಲಾಕೊಳಂ ।
ತಿಳಿಗೊಳಂ ತುಂಬಿ ಮಱಿದುಂಬಿ ಮಾವಿಮ್ಮಾವು ।
ಪುಳಿನ ಶೀತಳಪುಳಿನ ತೆಂಗು ಚೆಂದೆಂಗು ಕೇದಗೆಯೆಲ್ಲ ಹೊಂಗೇದಗೆ ॥
ಸುೞಿವೆಲರು ತೆಂಬೆಲರು ಕೋಕಿಳಂ ಮತ್ತಕೋ ।
ಕಿಳ ಪಲಸು ಬಕ್ಕೆವಲಸೀಳೆ ಕಿತ್ತೀಳೆಯು ।
ತ್ಪಳವೆಲ್ಲ ನೀಲೋತ್ಪಳಂ ಹಂಸೆ ರಾಜಹಂಸೆಯೆನೆ ಮೆಱೆದುವು ವನದಲಿ ॥ 529 ॥

### ಕೇದಗೆ.

ವಿರಹಿಗಳ ಚಿತ್ತಮಂ ಸೀಳ್ವ ಕಾಮನ ಕೈಯ ।
ಕರಗಸದ ಕಕ್ಕುಗಳೊ ಕಂತು ಹೊಡೆದೊಡೆ ಮುನೀ ।
ಶ್ವರಕಠಿನಮನಕಾಂತು ಧಾರೆಗಳು ಮುಱಿದಲಗುಗಳ ಮುಕ್ಕುಗಳ ಬಳಗವೋ ॥
ಪರಿಮಳದ ಮುಳುವೇಲಿಯೋ ಎನಿಸಿ ಕಂಟಕೋ ।
ತ್ಕರಭರಿತ ಕೇತಕಿಗಳೊಪ್ಪಿದುವು ಹೊಱಗೆ ಶಂ ।
ಕರವಿರೋಧಿಯನು ನಡುವಿರಿಸಲಣ್ಮದೆ ಬನಂ ಪೊಱಮಡಿಸಿತೆಂಬಂತಿರ ॥ 530 ॥

### ವಿಶ್ವಾಮಿತ್ರನ ಕೋಪ.

ವಡಬಾಗ್ನಿ ಜಡೆವೊತ್ತುದೋ ಸಿಡಿಲು ಸಲೆ ಭಸಿತ ।
ವಿಡಕಲಿತುದೋ ಕಾಡ ಕಿಚ್ಚು ಹರಿಣಾಜಿನವ ।
ನುಡಕಲಿತುದೋ ಪ್ರಳಯವಹ್ನಿ ತಪವೆತ್ತುದೋ ಭಾಳಲೋಚನನ ಕೋಪ ॥
ಕಡೆಗೆ ಮುನಿಯಾಯ್ತೊ ಹೇೞೆನೆ ಕಣ್ಣ ಕಡೆ ತೋರ ।
ಗಿಡಿಗೆದಱೆ ಮೀಸೆಗೂದಲು ಹೊತ್ತಿ ಹೊಗೆಯೆ ಬಿಱು ।
ನುಡಿಗಳುರಿಯುಗುೞೆ ವಿಶ್ವಾಮಿತ್ರನುರವಣಿಸಿ ಬಂದನವನೀಶನೆದೆಗೆ ॥ 531 ॥

### ಚಂದ್ರಮತಿಯ ಪ್ರಲಾಪ.

ಹಡೆದೊಡಲು ಹುಡಿಯಾಯ್ತು ಮಗನೆ ನೀನುಂಟೆಂದು ।
ಕಡೆಗೆ ಹೆಚ್ಚಿದ ಮನಂ ಹೊತ್ತಿ ಹೊಗೆಯಿತ್ತು ಬಿಡ ।
ದಡರಿ ನಿಟ್ಟಿಸಿ ನಲಿವ ದಿಟ್ಟಿ ಕೆಟ್ಟುವು ಸೋಂಕಿ ಪುಳಕಿಸುವ ಕರಣಂಗಳು ॥
ಕಡಿವಡೆದುವೊಸೆದು ಹೆಸರ್ಗೊಳುತಿಪ್ಪ ನಾಲಗೆಯು ।
ಕುಡಿ ಮುರುಟಿತಡಿಗಡಿಗೆ ನುಡಿಯನಾಲಿಪ ಕಿವಿಯು ।
ಹಡಿಗೆತ್ತುವೆಲೆ ಕಂದ ಎಂದೆನುತ್ತಿಂದುಮುಖಿ ಮಱುಗಿ ಬಾಯ್ವಿಟ್ಟಳಂದು ॥ 532 ॥

## 2. ಸೋಮನಾಥಚರಿತೆ.

ಈ ಗ್ರಂಥವು ಪುಲಿಗೆರೆಯ ಸೋಮಯ್ಯನ ಚರಿತ್ರರೂಪವಾಗಿದೆ; ವಾರ್ಧಕ ಷಟ್ಪದಿಯಲ್ಲಿ ಬರೆದಿದೆ; ಆಶ್ವಾಸ 5, ಪದ್ಯ 500.

ಇದರ 'ಕಥಾಗರ್ಭ' ವನ್ನು ಕವಿ ಈ ಪದ್ಯದಲ್ಲಿ ಹೇಳಿದ್ದಾನೆ:—

ನಾರದನ ಕೈಯಿಂದ ಕಲಿಕಾಲದನುವ ಮದ ।
ನಾರಿ ಚಿತ್ತೈಸಿ ಗಣನಾಥನಂ ಕಳುಪಿದೊಡೆ ।
ಸೌರಾಷ್ಟ್ರದೊಳಗಾತನಾದಯ್ಯವೆಸರಿಂದ ಜನಿಸಿ ಹುಲಿಗೆಱೆಗೆ ಬಂದು ॥
ವೈರಿಗಳ ಮೂದಲೆಗೆ ಹಿರಿಯ ಬಸದಿಯೊಳೆಸಸಿ ।
ಧಾರಿಸೋಮಯ್ಯನಂ ನಿಲಿಸಿ ತನ್ನಂ ಮುತ್ತಿ ।
ದಾರುಹತರಂ ಗೆಲ್ವನೆಂಬುದು ಕಥಾಗರ್ಭವಿದ ಬೆಳಸಿ ಕೃತಿಯೆನಿವೆನು ॥

ಇದೇ ವಿಷಯವು ಚೆನ್ನಬಸವಪುರಾಣದಲ್ಲಿಯು—

ಸುರಹೊನ್ನೆಯೆಂಬ ಬಸದಿಗೆ ಬೇಗ ಹುಲಿಗೆಱೆಯ ।
ಪುರದ ಸೋಮಯ್ಯನಂ ಕರೆದು ತಂದಾದಯ್ಯ ।
ನಿರದೆ ಜೈನರ ಹತಿಸಿದಂ * * * ॥

ಎಂಬ ಪದ್ಯಭಾಗದಲ್ಲಿಯೂ ಹೇಳಿದೆ.

ಈ ಗ್ರಂಥದಲ್ಲಿ ಹರಿಶ್ಚಂದ್ರಕಾವ್ಯವನ್ನು ಬರೆದುದಾಗಿ ಹೇಳುವುದರಿಂದ ಆ ಕಾವ್ಯವನ್ನು ಬರೆದ ಮೇಲೆ ಇದನ್ನು ಬರೆದಿರಬೇಕು.

ಕವಿ ಗ್ರಂಥಾವತಾರದಲ್ಲಿ ಹುಲಿಗೆರೆಯ ಸೋಮನಾಥನನ್ನು ಸ್ತುತಿಸಿದ್ದಾನೆ. ಬಳಿಕ ತನ್ನ ಗುರುಪರಂಪರೆಯನ್ನು ಹರಿಶ್ಚಂದ್ರಕಾವ್ಯದಲ್ಲಿರುವಂತೆಯೇ ಹೇಳಿ ಗ್ರಂಥವನ್ನು ಆರಂಭಿಸಿದ್ದಾನೆ.

ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

### ಚೆಂದೆಂಗು.

ಹಂಗ ಮುಗುಚುವೆನೆಂದು ಭೂಮಿ ಕೈನೀಡಿ ಮೇ ।
ಘಂಗಳಿಗೆ ಕೊಡುವಮೃತಕಳಶಸಂಕುಳವೊ ಗಗ ।
ನಾಂಗಣದೊಳುಱೆ ಸುೞಿವ ವಿದ್ಯಾಧರಾಳಿಗೆ ವಸಂತನಿಟ್ಟಱವಟಿಗೆಯೊ ॥
ಜಂಗುಳಿಯೊ ಕಡಲ ಕಡೆವಂದು ಹುಟ್ಟಿದ ಪದಾ ।
ರ್ಥಂಗಳಂ ತಮತಮಗೆ ಕೊಂಡೊಯ್ಯುತಿರೆ ಭೂಲ ।
ತಾಂಗಿ ತೆಗೆದೆತ್ತಿಟ್ಟ ರಸರತ್ನವೋ ಎನಿಸಿ ಪಣ್ತು ಚೆಂದೆಂಗೆಸೆದುವು ॥ 533 ॥

### ಬಾಳೆ.

ಹೃದಯದೆ ಕಲಂಕಿಲ್ಲದೋರಂತೆ ಸಾರನು ।
ಟ್ಟುದಕಮಂ ಕುಡಿಕುಡಿದು ಮೞೆಗಾಳಿಬಿಸಿಲಿಗ ।
ಳ್ಕದೆ ವನದೊಳೊಂದೆಡೆಯೊಳಿರ್ದು ಕೊಂಬಾಸೆಯಿಲ್ಲದೆ ನೆಲಕೆ ಹೊಱೆಯಾಗದೆ ॥
ಬದುಕಿ ತಲೆವಾಗಿ ಬೆಳೆದೊಂದೆಡೆಯೊಳಿರ್ದೆ ನಾ ।
ನುದಿತರಸಫಲವನಾಂತಿರೆ ಕೈಯ ಮೇಗೆ ತಾ ।
ಳಿದೆನೆನ್ನ ನೋಡಿ ಮುನಿಕುಲವೆಂದು ಬುದ್ಧಿವೇೞ್ವಂತೆ ಕದಳಿಗಳೆಸೆದುವು ॥ 534 ॥

### ನಕ್ಷತ್ರಗಳು.

ಕಡಲ ಸಿಡಿವನಿಯೊ ಮೇಘಾವಳಿಯ ತತ್ತಿಗಳೊ ।
ಪೊಡವಿಯಿಡೆಯನು ನೋೞ್ಪ ಗಗನರಂಧ್ರವೊ ಅಲುಗ ।
ಗುಡದಂತೆ ಕೀಲಿಸಿದ ವಜ್ರವೊಳೆಗಳೊ ನಭದ ಲತೆ ಹಬ್ಬಿಯೊಗೆದ ನನೆಯೋ ॥
ಕಡುಹಸಿದುವೆಂದು ಶಶಿಯೆಲ್ಲಾ ಚಕೋರಕ್ಕೆ ।
ಕೊಡುವ ಸವಿದುತ್ತುಗಳೊ ಸಿಡಿವ ಸೀಮುರ್ಗತ್ತುಗಳೊ ।
ತಡೆಯದೆ ವಿಚಾರಿಸೆನೆ ತಾರಾಳಿಯೆಸೆದುವಾಜಗದ ಜನ ನಲಿಯುತಿರಲು ॥ 535 ॥

### ನಾರದ.

ಮುಂತುಗೊಂಡೆಲ್ಲಿ ಜಗಳವ ಹತ್ತಿಸುವೆನೆಂದು ।
ಚಿಂತಿಸುವ ಮನ ಕೊಂಡೆಯುಕ್ಕೆಂದು ಘುಡುಘುಡನೆ ।
ತೀಂತೆ ಮಸಗುವ ಬಾಯಿ ಪರರ ಕಾಳೆಗದ ಲಗ್ಗೆಯ ಕೇಳಲೆಳಸುವ ಕಿವಿ ॥
ಸಂತಸುಖಮಿರ್ಪವರು ಕಾದಬೇಕೆಂದು ಕಿಸು ।
ಱಾಂತುಗುರುಮಸೆವ ಕೈ ತಲೆಯೊತ್ತಿ ಕುತ್ತಿ ಪಲ ।
ರಂ ತಱಿವ ಸಮರಮುಂ ನೋಡಲೆಳಸುವ ಕಣ್ಣ ಸಿಂಗರಂ ನಾರದಂಗ ॥ 536 ॥

### ಕಾಡು.

ಮಿಕ್ಕ ಸರುವಿಂಗೆ ದರುವಿಂಗೆ ಹಳ್ಳಕ್ಕೆ ಕೊ ।
ಳ್ಳಕ್ಕೆ ಗಿಡುವಿಂಗೆ ಮಡುವಿಂಗೆ ಬೆಟ್ಟಕ್ಕೆ ಘ ।
ಟ್ಟಕ್ಕೆ ಕುತ್ತಱಿ ಕೋಣೆಗಿಡುಕುಱಂದಿಡಿದ ಮೆಳೆನಡುವಿಂಗೆ ನಾನಲಿಂಗೆ ॥
ತಕ್ಕೆಗತ್ತಲೆಗೆ ತರತರದ ನಾನಾಮೃಗಕು ।
ಲಕ್ಕೆ ನಾನಾಧ್ವನಿಗೆ ನಾನಾಭಯಂಕರ ।
ಕ್ಕಕ್ಕೆವನೆಯಾನೆಂದು ಬೊಬ್ಬಿಟ್ಟು ಪೇೞ್ವಂತೆ ಘೀಳಿಡುತ್ತಿಹುದಡವಿಯು ॥ 537 ॥

### ಸೂರ್ಯಾಸ್ತ.

ನಡೆಯುಡುಗಿ ಮುಪ್ಪಾಗಿ ಕಾಂತಿ ಮಸುಳಿಸಿ ತೇಜ ।
ವಡಗಿ ಹುಟ್ಟಿದ ಠಾವನಗಲಿ ಕೆಲಕೊಂ ಡೆಯು ।
ಕಡೆಯ ಸಾರ್ವಂತಾದುದೀಗ ಹಿಂದೆನ್ನ ಹೆಸರೆಂದೊಡೋಡುವ ಕತ್ತಲೆ ॥
ಹೊಡಕರಿಸಿ ಬರುತಿದೆನ್ನಾಳಿಕೆಗೆ ಸಸಿಯು ಮುಂ ।
ಗುಡಿ ದಾಟಿ ಬರುತಿದೆಯಿವಂ ಕಂಡು ಜೀವಿಪೆ ।
ನ್ನೊಡಲಾಸೆಯೇಕೆಂದು ಲಜ್ಜೆಯಿಂದಿಳಿವಂತೆ ಬಿದ್ದನಿನನಬ್ಧಿಯೊಳಗೆ ॥538॥

## 3. ಸಿದ್ಧರಾಮಪುರಾಣ.

ಇದರಲ್ಲಿ ಸೊನ್ನಲಾಪುರದ ಸಿದ್ಧರಾಮನ ಚರಿತವು ಹೇಳಿದೆ. ಇದೂ ವಾರ್ಧಕಷಟ್ಪದಿಯಲ್ಲಿ ಬರೆದಿದೆ; ಸಂಧಿ 9, ಪದ್ಯ 549.

ಸಿದ್ಧರಾಮನು ಸೊನ್ನಲಿಗೆಯಲ್ಲಿ ಅರುವತ್ತು ವಯಸ್ಸಾಗಿದ್ದ ಸುಗ್ಗವ್ವೆಗೂ ಮುದ್ದಗೌಡನಿಗೂ ಮಗನಾಗಿ ಹುಟ್ಟಿದನು. ಇವನ ಕಾಲದಲ್ಲಿ ಸೊನ್ನಲಿಗೆಯಲ್ಲಿ ನನ್ನಪ್ಪನೆಂಬವನು ರಾಜನಾಗಿಯೂ ಚಾಮಲದೇವಿಯೆಂಬವಳು ರಾಜಮಹಿಷಿಯಾಗಿಯೂ ಇದ್ದರು. ಸಿದ್ಧರಾಮನು ಸೊನ್ನಲಿಗೆಯಲ್ಲಿ ಒಂದು ಕೆರೆಯನ್ನು ಕಟ್ಟಿಸಿ, ಅನೇಕ ಲಿಂಗಗಳನ್ನು ಪ್ರತಿಷ್ಠೆಮಾಡಿ, ವಿದ್ಯಾಸಮುದ್ರನೆಂಬ ಬಿರುದನ್ನು ವಹಿಸಿದ್ದ ಕರ್ಪರನೆಂಬ ಜೋಗಿಯನ್ನು ಸೋಲಿಸಿ, ತಾನು ಕಟ್ಟಿಸಿದ ಕೆರೆಯ ಮಧ್ಯದಲ್ಲಿ ಸಮಾಧಿಯನ್ನು ಮಾಡಿಸಿ, ಅಲ್ಲಿಯೇ ಬಯಲಾದನು—ಎಂಬುದೇ ಈ ಗ್ರಂಥದ ಕಥಾಸಾರವು.

ಈ ಗ್ರಂಥವನ್ನು ಕವಿ "ನೆರೆದ ಸೊಗಸಿನ ಸುಗ್ಗಿರಸದ ಮಡು ಪುಣ್ಯದಾಗರಂ" ಎಂದು ಶ್ಲಾಘಿಸಿದ್ದಾನೆ.

ಗ್ರಂಥಾವತಾರದಲ್ಲಿ ಸಿದ್ಧರಾಮನ ಸ್ತುತಿಯಿದೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

### ವಸಂತ.

ಪೊಸಮಾಗೆ ಮದವಾಱೆ ಮಾವಂಕುರಂದೋಱೆ ।
ಯಸುಕೆ ತಳಿರಂ ಬೀಱೆ ಲತೆ ನನೆಗಳಂ ಪೇಱೆ ।
ಕುಸುಮ ರಜವಂ ತೂಱೆ ತುಂಬಿ ಸುತ್ತಂ ಪಾಱೆ ತೆಂಗಾಳಿ ತಂಪ ಬೀಱೆ ॥
ಸಸಿಗೆ ಕಳೆಯೇಱೆ ಕೋಕಿಲರವಂ ಮಿಾಱೆ ಕಾ ।

ಮಸರಂಗಳೂಱ ವಿರಹಿಗಳ ಬಾಯೂಱ ಮಾ |
ಮಸಕದಿಂ ಬಂದನು ವಸಂತನು ವಿಯೋಗಿಹೃತ್ಕುಂತನು ಸುಖಾಶ್ರಾಂತನು || 539 ||

## ವರ್ಷಾಕಾಲ.

ಇನನೋಡೆ ನವಿಲಾಡೆ ವಿರಹಿಗಳು ಕೂಡೆ ಭೂ |
ಜನ ಹಾಡೆ ತೃಣ ಮೂಡೆ ಹಂಸೆಗಳು ಬಾಡೆ ಕಡ |
ವಿನ ಸೊವಡು ತೀಡೆ ಚಾದಗೆ ನೋಡೆ ಘನ ನಾಡೆ ಧರೆಗಂಬುನೀಡೆ ಸಿಡಿಲು ||
ದನಿಮಾಡೆ ಧರೆ ಕೂಡೆ ಬೆಳೆಗಳಂ ಸೂಡೆ ನೆಲೆ |
ಯನು ನದಿಗಳೀಡಾಡೆ ಬರ್ಪ ಕಾರ್ಗಾಲವೊ |
ಯ್ವನೆ ಮೊಳೆತು ದನಿದೋಱ ಮೀಱ ಮೊಳಗಂ ಹೇಱ ತೋಱತ್ತು ದುರ್ದಿನ ವನು[1] || 540 ||

ಈ ಕವಿಯ **ವೀರೇಶಚರಿತೆ, ಶರಭಚಾರಿತ್ರ, ಹರಿಹರಮಹತ್ವ** ಎಂಬ ಮೂರು ಗ್ರಂಥಗಳೂ ನಮಗೆ ದೊರೆತಿಲ್ಲವೆಂದು ಹಿಂದೆಯೇ ತಿಳಿಸಿದೆ. ಆದರೆ **ಸಿದ್ಧನಂಜೇಶನ** ರಾಘವಾಂಕಚಾರಿತ್ರದಿಂದ—ವಿರೇಶಚರಿತೆಯಲ್ಲಿ ವೀರಭದ್ರನು ದಕ್ಷಾಧ್ವರವನ್ನು ನಾಶಮಾಡಿದ ಕಥೆಯೂ, ಶರಭಚಾರಿತ್ರದಲ್ಲಿ ಹಿರಣ್ಯಕಶಿಪುವಿನ ರಕ್ತಪಾನದಿಂದ ಮತ್ತನಾದ ನರಸಿಂಹನನ್ನು ವೀರಭದ್ರನು ಶರಭಾಕಾರದಿಂದ ಶಿಕ್ಷಿಸಿದ ಕಥೆಯೂ, ಹರಿಹರಮಹತ್ವದಲ್ಲಿ ಹಂಪೆಯ ಹರೀಶ್ವರನ ಮಾಹಾತ್ಮ್ಯವೂ ವರ್ಣಿತವಾಗಿರುವಂತೆ ತಿಳಿಯಬರುತ್ತದೆ. ಈ ವೀರೇಶಚರಿತೆಯ ವಿಷಯವಾಗಿ **ರಾಘವಾಂಕಚಾರಿತ್ರ**ದಲ್ಲಿ ಈ ಪದ್ಯವಿದೆ :—

ಭೂಸುರಕವಿಪ್ರವರ ರಾಘವಾಂಕಂ ಮುದದಿ |
ಸೀಶಾಲಯದ ಬೆಂಗಡೆಯೊಳೊಲ್ದು ಕುಳಿತು ಮು |
ನ್ನೀಷಟ್ಪದಿಯೊಳಾರು ಪೊಗಳ್ದುದಿಲ್ಲೆನ್ನಿಂದ ನಿರ್ಮಿತಮುಮುದುಕಾರಣಂ ||
ಮೀಸಲ ಕವಿತ್ವವೆಂದೆಂಬ ಪೆಸರೀಕೃತಿಗೆ |
ಭೂಷಣವಲಾ ಎಂದು ನಿಶ್ಚೈಸಿ ಪೆಸರಿಟ್ಟು |
ಶಾಸನಂಗೆಯ್ವನಿಳೆ ಮೊಳಗೆ ವೀರೇಶಸತ್ಕಥೆಯ . . . . . . ||

ಅನುಭವಶಿಖಾಮಣಿಯನ್ನು ಬರೆದ **ನಾರಸಿಂಹನು** (1768) ತನ್ನ ಗ್ರಂಥವನ್ನು ರಾಘವಾಂಕನ ಶರಷಟ್ಪದೀರೂಪವಾದ ಗ್ರಂಥದ ಆಧಾರದಮೇಲೆ

1. **ಸೋಮನಾಥಚರಿತೆ**, ಸಿದ್ಧರಾಮಪುರಾಣ ಇವುಗಳಿಂದ ಇಲ್ಲಿ ಉದಾಹೃತವಾದ ಪದ್ಯಗಳಲ್ಲಿ ಒಂದೆರಡು ಹೊರತು ಉಳಿದುವು ಹರಿಶ್ಚಂದ್ರಕಾವ್ಯದಲ್ಲಿಯೂ ದೊರೆಯುತ್ತವೆ.

ಬರೆದುದಾಗಿ ಹೇಳುತ್ತಾನೆ. ಇದು ರಾಘವಾಂಕನ ಆವ ಗ್ರಂಥಕ್ಕೆ ಅನ್ವಯಿಸುತ್ತದೆಯೋ ತಿಳಿಯದು.

---

## ಕೆರೆಯ ಪದ್ಮರಸ. ಸು. 1165.

ಈತನು **ದೀಕ್ಷಾಬೋಧೆ**ಯೆಂಬ ಗ್ರಂಥವನ್ನು ಬರೆದಿದ್ದಾನೆ. ಇವನು ವೀರಶೈವ ಕವಿ; ಇವನವಿಷಯವಾಗಿ **ಪದ್ಮಣಾಂಕನು** (ಸು. 1385) ಬರೆದಿರುವ **ಪದ್ಮರಾಜಪುರಾಣ**ದಿಂದ ಈಯಂಶಗಳು ತಿಳಿಯುತ್ತವೆ:—

ಈತನ ಮುತ್ತಜ್ಜನಾದ ಶಿವಯೋಗಿಮಲ್ಲಿಕಾರ್ಜುನಪಂಡಿತನು ಅಥವಾ ಮಲ್ಲರಸನು ಕರ್ಣಾಟಕದೇಶದಲ್ಲಿರುವ ಕಲ್ಲಕುರಿಕೆಯಲ್ಲಿ ದೊರೆಯಾಗಿದ್ದು ವಿರಕ್ತನಾಗಿ ಶ್ರೀಶೈಲಕ್ಕೆ ಹೋದನು. ಈ ಮಲ್ಲರಸನ ಮಗನಾದ ಸಕಲೇಶಮಾದರಸನು ಕೆಲವುಕಾಲ ಕಲ್ಲಕುರಿಕೆಯಲ್ಲಿ ಆಳುತ್ತಿದ್ದು, ವಿರಕ್ತನಾಗಿ ಶ್ರೀಶೈಲಕ್ಕೆ ಹೊರಟು, ದಾರಿಯಲ್ಲಿ ಶಿಷ್ಯರಿಂದ ಪ್ರಾರ್ಥಿತನಾಗಿ ಅಂಬೆಯೆಂಬ ಊರಲ್ಲಿ ಕೆಲವು ಕಾಲ ನಿಂತು, ಬಳಿಕ ಶ್ರೀಶೈಲಕ್ಕೆ ಹೋಗಿ ತಂದೆಯಾದ ಮಲ್ಲರಸನನ್ನು ಕಾಣಲು, ಅವನು—ನೀನು ಇನ್ನೂ ಐವತ್ತು ವರ್ಷ ಭೂಲೋಕದಲ್ಲಿದ್ದು ಕಲ್ಯಾಣದಲ್ಲಿ ಧರ್ಮಸ್ಥಾಪನಾರ್ಥವಾಗಿ ಹುಟ್ಟುವ ಬಸವನೊಡನೆ ಕಾಲವನ್ನು ಕಳೆಯಬೇಕು—ಎಂದು ಮರಳಿ ಕಳುಹಿಸಿದನು. ಇವನ ಮಗ ಮಾಯಿದೇವನು ಅಂಬೆಯಲ್ಲಿದ್ದನು. ಇವನಿಗೆ ನರಸಿಂಹಬಲ್ಲಾಳನ ದಂಡನಾಯಕನಾದ ಕಮ್ಮೆಕುಲವಲ್ಲಭ ಗೌರಪನ ಅಕ್ಕ ಮಂಗಲೆಯನ್ನು ಕೊಟ್ಟು ಮದುವೆಮಾಡಿದ್ದರು. ಇವರ ಮಗನೇ ಕೆರೆಯ ಪದ್ಮರಸನು. ಇವನ ಹೆಂಡತಿ ದಂಡನಾಯಕ ಗೌರಪನ ಮಗಳಾದ ಮಾದೇವಿ. ಗೌರಪನ ಕಾಲಾನಂತರ ನರಸಿಂಹಬಲ್ಲಾಳನು ಪದ್ಮರಸನಿಗೆ ದಂಡೇಶಪದವಿಯನ್ನು ಕೊಟ್ಟು ಮಂತ್ರಿಯನ್ನು ಮಾಡಿಕೊಂಡನು.

ಪದ್ಮರಸನು ಗುರುಪರಂಪರೆಗೆ ಸೇರಿದವನು; ಚತುಶ್ಶಾಸ್ತ್ರಪಂಡಿತನು. ಈತನು ಬೇಲೂರಲ್ಲಿ ಒಂದು ಕೆರೆಯನ್ನು ಕಟ್ಟಿಸುವುದಕ್ಕಾಗಿ ದೊರೆಯ ಭಂಡಾರದಿಂದ 12,000 ಹೊನ್ನುಗಳನ್ನು ತೆಗೆದುಕೊಂಡು ಶಿವರೂಪಿಯಾದ ಒಬ್ಬ ಜಂಗಮಭುಜಂಗನಿಗೆ ಕೊಟ್ಟುಬಿಡಲು, ಜನರು ಈ ಸಂಗತಿಯನ್ನು ದೊರೆಗೆ ಹೇಳಿದಾಗ, ಅವನು ಪದ್ಮರಸನನ್ನು ಕರೆಯಿಸಿ ಕೇಳಲು, ಗರ್ದೆತೋಂಟಗಳೊಡನೆ ಕೆರೆ ಸಿದ್ಧವಾಗಿದೆ; ಬಂದು ನೋಡಬಹುದು—ಎಂದು ಹೇಳಿ ದೊರೆಯೊಡನೆ ಬೇಲೂರಿಗೆ ಹೋಗಿ ಅಲ್ಲಿ ಪವಾಡವನ್ನು ಮಾಡಿ ಕೆರೆಯನ್ನು ತೋರಿಸಿ, ಎಲ್ಲರಿಗೂ ಆಶ್ಚರ್ಯವನ್ನುಂಟುಮಾಡಿದನು. ಇವನ ಧ್ಯಾನಬಲದಿಂದ ಗಂಗೆಯೇ ಅಂದು ಬಂದು, ಆಕಾಶದಿಂದ ಬಿದ್ದಿತು. "ಅಸಮಾಕ್ಷನಿಂದ ಬಿಟ್ಟಿಗೆ ಕಟ್ಟಿಸಿದ ಕೆತದಿ" ಈ ಕೆರೆಗೆ ಬಿಟ್ಟಿಸಮುದ್ರವೆಂದು ಹೆಸರು. ಇದನ್ನು ಕಟ್ಟಿಸಿದುದರಿಂದಲೇ ಈತನಿಗೆ ಕೆರೆಯ ಪದ್ಮರಸನೆಂಬ ಹೆಸರು ಬಂದಿತು.

ಬಳಿಕ ಪದ್ಮರಸನು ಮಂತ್ರಿಪದವನ್ನು ಬಿಟ್ಟು ಬೇಲೂರಲ್ಲಿಯೇ ಇರುತಿರಲು, ತ್ರಿಭುವನತಾತನೆಂಬ ಒಬ್ಬ ಆಂಧ್ರದೇಶದ ಬ್ರಾಹ್ಮಣನು ವಿಷ್ಣುವೇ ಪರದೈವವೆಂದು ಸ್ಥಾಪಿಸುತ್ತ ವಾದಿಗಳನ್ನು ಜಯಿಸಿಕೊಂಡು ದೋರಸಮುದ್ರಕ್ಕೆ ಬಂದು ಬಲ್ಲಾಳರಾಜನನ್ನು ಕಾಣಿಸಿಕೊಳ್ಳಲು, ದೊರೆ ಪದ್ಮರಸನನ್ನು ಕರೆಯಿಸಲು, ತ್ರಿಭುವನತಾತನಿಗೂ ಪದ್ಮರಸನಿಗೂ ವಾದವಾಗಿ ತ್ರಿಭುವನತಾತನು ಸೋತು, ಹಿಂದೆ ಮಾಡಿಕೊಂಡಿದ್ದ ಒಡಂಬಡಿಕೆಯ ಪ್ರಕಾರ ವೀರಶೈವದೀಕ್ಷೆಯನ್ನು ಹೊಂದಿ ಪದ್ಮರಸನಿಗೆ ಶಿಷ್ಯನಾದನು.

ತರುವಾಯ ಪದ್ಮರಸನು ಮಗನಾದ ಕುಮಾರಪದ್ಮರಸನಿಗೆ ಜ್ಞಾನೋಪದೇಶವನ್ನು ಮಾಡಿ, ಕಾಶಿಗೆ ಹೊರಡುವವನಾಗಿ ದಾರಿಯಲ್ಲಿ ಹಂಪೆಗೆ ಬಂದು, ಹರಿದೇವನನ್ನು ನೋಡಿ "ಉಮಾವರಂ ನಿಮ್ಮಿಂದಿಂಗೆಂಟನೆಯ ದಿನಕೆ ತನ್ನೊಳ್ ನೆರಪಲಿರ್ದಪಂ ; ಅಂತಱಂ ನೀವೀಗಳೊರೆವೀಮಹಾಕಾವ್ಯಮಂ[1] ತಡೆಯದನಿತಱೊಳ್ ಪಾರವೈದಿಪುದು" ಎಂದು ಹೇಳಿ ಕಾಶಿಗೆ ಹೋಗಿ ವಿಶ್ವನಾಥನಲ್ಲಿ ಐಕ್ಯವಾದನು.[2]

ಕೆರೆಯಪದ್ಮರಸನು ತ್ರಿಭುವನತಾತನೊಡನೆ ವಾದಮಾಡುವುದಕ್ಕಾಗಿ ಬೇಲೂರಿಂದ ದೋರಸಮುದ್ರದ ನರಸಿಂಹಬಲ್ಲಾಳನ ಸಭೆಗೆ ಹೋದಾಗ ಅವನ ಜತೆಯಲ್ಲಿ, ದೋರಾಂಬುಧಿಯ **ರಾಮಣ್ಣ,** ಉಭಯಕವಿಶರಭಭೇರುಂಡನೆನಿಪ ಕವೀಂದ್ರ **ರಾಘವ,** ಹುಲಿಗೆರೆಯ **ಮಾಯಿದೇವ** ಪುರಾಣಭಟ್ಟ, ಗುರುಭಕ್ತ ಕಾಮಣ್ಣ, ವಿಶ್ವಣ್ಣ, ಉದ್ಧತಶಾಸ್ತ್ರನಿಕರಭಂಜನ ನಾಗನಾಥಾರ್ಯ, ಅತಿರಸಿಕ **ಕರ್ಣಾಭರಣ** ಬುಧವರ, ಪದವಾಕ್ಯಪ್ರಮಾಣಜ್ಞ **ದೇವರಸ** ಪಂಡಿತ, ಅನೇಕಕಲಾವಿದ ಹಂಪೆಯ **ರಾಮಿತಂದೆ,** ಜಗದಾರಾಧ **ನಾಗಿದೇವ,** ಅಷ್ಟಭಾಷಾಕವೀಶ್ವರ **ಶಿವದಾಸ,** ಶೈವವಿರುದ್ಧಮತದಾವದಾವ **ದಾವರಸ, ಶರಣಕವಿ** ಮೊದಲಾದ ಪಂಡಿತರು ಹೋದರು.[3]

ಪದ್ಮರಸನು ನರಸಿಂಹಬಲ್ಲಾಳನ[4] ಸಭೆಯಲ್ಲಿ ಶಿವಾದ್ವೈತಸಾಕಾರಸಿದ್ಧಾಂತಸಾನಂದಚರಿತ್ರವೆಂಬ ಸಂಸ್ಕೃತಗ್ರಂಥವನ್ನು ರಚಿಸಿ ತ್ರಿಭುವನತಾತನನ್ನು ವಾದದಲ್ಲಿ ಜಯಿಸಲು ಸಭೆಯಲ್ಲಿದ್ದ ಸಕಲವಿದ್ವಾಂಸರೂ ಈ ರೀತಿಯಾಗಿ ಈತನನ್ನು ಶ್ಲಾಘಿಸಿದಂತೆ ತಿಳಿಯಬರುತ್ತದೆ:—

1. ಇದೇ ಗಿರಿಜಾಕಲ್ಯಾಣವಾಗಿರಬೇಕು.
2. ಇಲ್ಲಿ ಹೇಳಿರುವುದಕ್ಕೂ ಚೆನ್ನಬಸವಪುರಾಣದಲ್ಲಿ ಹೇಳಿರುವುದಕ್ಕೂ ಸ್ವಲ್ಪ ವ್ಯತ್ಯಾಸವಿದೆ.
3. ಪದ್ಮರಸನ ಜತೆಯಲ್ಲಿ ಹೋದ ಜನರು ಉದ್ಭಟಸ್ತುತಿ, ಬಸವಗೀತೆ, ಹರೀಶಾದಿಗಳ ಗದ್ಯಪದ್ಯ ಪ್ರಬಂಧಗಳು ಇವುಗಳನ್ನು ಪಠಿಸುತ್ತ ಹೋದಂತೆಯೂ ಹೇಳಿದೆ.
4. ತರೀಕೆರೆಯ 17 ನೆಯ ಶಾಸನದಲ್ಲಿ ಈ ರಾಜನನ್ನು "ಮಾಹೇಶ್ವರಸಮಯಪ್ರತಿಪಾಳಕ" ಎಂದೂ, ಬೇಲೂರು 177 ನೆಯ ಶಾಸನದಲ್ಲಿ "ಗಮಕಿಜನಜನಿತಶಾಸ್ತ್ರಾರ್ಥ...... ಸಮೂಹ ಸಂಪಾದಿತ ಮಹಾವಾದವಿಚಾರಾಚಾರ್ಯಂ" ಎಂದೂ ವಿಶೇಷಿಸಿ ಬರೆದಿದೆ.

ದೋರಸಮುದ್ರವೆಂಬ ಪೆಸರಿಂ ಕರವೊಪ್ಪುವ ರಾಜಧಾನಿಯೊಳ್ ।
ಧೀರನೃಸಿಂಹಭೂವರನಹೋ ಮಹಿಯಂ ಪರಿಪಾಲಿಸುತ್ತಿರ ॥
ಲ್ಕಾರಸೆಯಾಙ್ಮನೋಲಗಕೆ ಬಂದನಗುರ್ವಿಸುತಾಂಧ್ರದೇಶದಿಂ ।
ಶೌರಿಯ ಭೃತ್ಯನೋವೊ ಭುವನತ್ರಯತಾತನೆನಿಪ್ಪನೊರ್ವನಂ ॥
ಶಿವನಿಲ್ಲಾ ಶಿವಭಕ್ತಿಯಿಲ್ಲ ಶಿವಸಿದ್ಧಾಂತಂ ದಲಿಲ್ಲಾಮತಂ ।
ಸುವಿಚಾರಸ್ಥಿತಿಗಿಲ್ಲ ನಾಡೆ ವನಜಾಕ್ಷಂ ದೈವಮ್ಮಾವೈಷ್ಣವಂ ॥
ಸುವಿಶಾಲಂ ನಿಜಭಕ್ತಿಗೆಂದೆನುತೆ ಪತ್ರಾಲಂಬನಂಗೆಯ್ಯೆ ತ ।
ದ್ಭವಿಯಂ ಪದ್ಮರಸಾರ್ಯರೋಡಿಸಿದರೀಸಾನಂದಚಾರಿತ್ರದಿಂ ॥
ಪಿಂದೆ ಸಮಸ್ತನೀಲಪಟಸಾಂಖ್ಯರ ಬೌದ್ಧರ ಜೈನಭೇದದೊಳ್ ।
ಸಂದರ ಭಾಟ್ಟತಾರ್ಕಿಕರ ಕೂಡತಿವಾದಿಸಿ ಸೊರ್ಕೆ ಸೂಕ್ತಿಯು ॥
ಙ್ಲೊಂದದಬದ್ಧವಾದಿಯೆನಿಪುದ್ಧತವೈಷ್ಣವನಂ ವಿಭಾಡಿಸು ।
ತ್ತಿಂದುಧರಪ್ರತಿಷ್ಠೆಯನೆ ಪದ್ಮರಸರ್ ನೆಗಳ್ದರ್ ಧರಿತ್ರಿಯೊಳ್ ॥

ಇದೂ ಅಲ್ಲದೆ ಮೇಲೆ ಹೇಳಿದ ಪಂಡಿತರು ಒಬ್ಬೊಬ್ಬರೂ ಪದ್ಮರಸನನ್ನು ಶ್ಲಾಘಿಸಿ ಸಂಸ್ಕೃತದಲ್ಲಿಯೂ ಕನ್ನಡದಲ್ಲಿಯೂ ಪದ್ಯಗಳನ್ನು ಹೇಳಿದಂತೆ ತಿಳಿಯುತ್ತದೆ. ಈ ಪಂಡಿತರಲ್ಲಿ ಕನ್ನಡದಲ್ಲಿ ಬರೆದಿರುವವರ ಪದ್ಯಗಳನ್ನು ಅವರವರ ಚರಿತದಲ್ಲಿ ಬರೆದಿದ್ದೇವೆ.[1]

ಈ ಕವಿಗೆ ಸಕಲಶಾಬ್ದಿಕಸಾರ್ವಭೌಮ, ಉದ್ಧತವಾದಿಸಿಕರವೇಶ್ಯಾಭುಜಂಗ, ತಾರ್ಕಿಕಚಕ್ರವರ್ತಿ, ಶಿವಾದ್ವೈತಸಾಕಾರಸಿದ್ಧಾಂತಪ್ರತಿಷ್ಠಾಪನಾಚಾರ್ಯ, ಶರಣಕವಿ, ಭವಿದೂರ ಎಂಬ ಬಿರುದುಗಳಿದ್ದಂತೆ ತಿಳಿಯುತ್ತದೆ.

ಇವನ ಗ್ರಂಥ

## ದೀಕ್ಷಾಬೋಧೆ.

ಇದು ಪ್ರಾಯಶಃ ರಗಳೆಯ ರೂಪವಾಗಿದೆ; ಅಲ್ಲಲ್ಲಿ ಕಂದವೃತ್ತಗಳೂ ಇವೆ; ಸ್ಥಲ 3, ಗ್ರಂಥ 360, ವೃತ್ತ ಕಂದ ಉಭಯ 385. ಇವರಲ್ಲಿ ವೀರಶೈವ ದೀಕ್ಷೆಯನ್ನು ಕೈಕೊಳ್ಳುವುದಕ್ಕೆ ಬೇಕಾದ ವಿಷಯಗಳು ಗುರುಶಿಷ್ಯಸಂವಾದ ರೂಪವಾಗಿ ವಿವರಿಸಲ್ಪಟ್ಟಿವೆ. ಅಲ್ಲಲ್ಲಿ ಸಂಸ್ಕೃತಶ್ಲೋಕಗಳು ಪ್ರಮಾಣತ್ವೇನ ಅನುವಾದಮಾಡಲ್ಪಟ್ಟಿವೆ. ಈ ವಿಷಯವನ್ನೇ ಪದ್ಮಣಾಂಕನು (ಸು. 1385) ಈ ಪದ್ಯಭಾಗದಲ್ಲಿ ಸಂಗ್ರಹವಾಗಿ ತಿಳಿಸಿದ್ದಾನೆ:—

ಓಪ ಶಿಷ್ಯನ ಬೋಧಿಸಿದ ರೀತಿಯಿಂದೆ ರಘು ।
ಟಾಪದ್ಧತಿಯೊಳುಜಿ ಸಸಾಕ್ಷಿಕಂ ವೀರಶೈ ।
ವೋಪಕಾರಾರ್ಥವಿಂಪಮರೆ ದೀಕ್ಷಾಬೋಧವೆಂಬ ಕೃತಿಯಂ ರಚಿಸಿದಂ ॥

1. ಪುಟ 250.

ಈ ಗ್ರಂಥದಲ್ಲಿ ಲಲಿತರಗಳೆಯೂ ಮಂದಾನಿಲರಗಳೆಯೂ ದೊರೆಯುತ್ತವೆ. ಆರಂಭದಲ್ಲಿ ವಿಶ್ವನಾಥಸ್ತುತಿ ಇದೆ. ಇದರಿಂದ ಕೆಲವು ಭಾಗಗಳನ್ನು ಉದ್ಧರಿಸಿ ಬರೆಯುತ್ತೇವೆ:—

### ಶಿವಭಕ್ತನ ನಡತೆ.

ಉಚಾಹಶಿವಭಕ್ತಿಯುಚ್ಚಟಿಯದಿರಬೇಕು । ನಿಚ್ಚಟದ ನಿಷ್ಠೆ ದೃಢ ಕೆಚ್ಚುಗೊಂಡಿರಬೇಕು ।
ನಿಯತವಪ್ಪಾಚಾರಸಮಯ ತಾನಿರಬೇಕು । ನಯದ ವಾಕ್ಯಂ ದಯವು ದಾಕ್ಷಿಣ್ಯವಿರಬೇಕು ।
ದಂಭಮಾತ್ಸರ್ಯಕ್ಕೆಯಿಂಬುಗುಡದಿರಬೇಕು । ಶಂಭುಪದಭಕ್ತಿ ನಂಬುಗೆಯ ಹಂಬಲುಬೇಕು ।
ಪದಪಾಣಿಗುದಗುಹ್ಯಕರ್ಮೇಂದ್ರಿಯಗಳಲ್ಲಿ । ಬಿದಜದವ ಧಟ್ಟಿಸುವ ಅದಟುಬೇಕವಲ್ಲಿ ।
ಸೂಸಲೀಯದೆ ಮನವನೀಶನಾಸದೊಳಿರಿಸಿ । ಬೀಸರಾಗದ ಚಿತ್ತಮಂ ವಿಾಸಲಾಗಿರಿಸಿ ।
ಹೀನದೀನತ್ವದುಮ್ಮಾನಮಂ ಬಿಡಬೇಕು । ಜ್ಞಾನಗುರುಭಕ್ತಿತದ್ಧ್ಯಾನನಾಗಿರಬೇಕು ॥ 541 ॥

### ಚಿತ್ತಚಾಪಲ್ಯ.

ಒಂದು ಹೊತ್ತಿಂಗೊಂದು ಪರಿಯುಹುದು ಈಮನಂ । ಬೆಂದ ವಿಷಯಂಗಳಂ ಬಿಟ್ಟು ಬಿಡದೀಮನಂ ।
ಒಚ್ಚಿ ಹೊತ್ತಿಗೆ ಭಕ್ತಿಯಿಚ್ಚೆಯುಹುದೀಮನಂ । ಬೆಚ್ಚಿ ಮತ್ತೊಬ್ಬೆನೆಂದಚ್ಚಟಿವುದೀಮನಂ ।
ಒಡಲೊಡವೆಮಡದಿಯುರ ತೊಡರಿರ್ಪುದೀಮನಂ । ಕಡೆಗೆ ಮೃಡಭಕ್ತಿದೃಢವಿಡಿಯದಿಹುದೀಮನಂ ॥ 542 ॥

### ಕುಲಮದನಿರಸನ.

ಕುಲಮಂ ವಿಚಾರಿಪೊಡೆ ಸಲವಿಲ್ಲ ಫಲವಿಲ್ಲ । ನೆಲೆಯನಜಿಪೊಡೆ ಶುದ್ಧಹೊಲೆಯ್ಯಿಸೆ ಕುಲವಲ್ಲ ।
ಕಾಯಕ್ಕೆ ಕುಲವೊ ಜೀವಕ್ಕೆ ಕುಲವೋ ಪೇಟು । ಈ ಯೆರಡಜೊಳಗೆ ಇನ್ನಾವುದಕೆ ಕುಲ ಪೇಟು ।
ಕಾಯವಾದೊಡೆ ಶುದ್ಧಹೊಲೆಯಾಗಿ ಕುಲವಿಲ್ಲ । ವಾಯುವಹ ಜೀವ ನಿರವಯವಾಗಿ ಕುಲವಿಲ್ಲ ।
ತಂದೆತಾಯಿಗಳುಭಯಬಿಂದುಸಂಪುಟದಿಂದ । ಬಂದನೆಂಬೊಂದು ಮದವ್ಯಿಸೆ ನೀ ನುಡಿವಂದ ॥

ಅಕ್ಕಟೀ ಕುಲವಿಡಿದು ಸತ್ಕುಲಕೆ ಹೋರುವರೆ । ದಕ್ಕಿದೊಡೆ ಶುದ್ಧಹೊಲೆಗಿಕ್ಕಿ ಮಾತಾಡುವರೆ ॥ 543 ॥

## ಮಮಕಾರನಿರಸನ.

ಒಡವೆಯಾರದು ಒಡೆಯರಾರೆಂಬುದನು ಅಱಿಯೆ । ಕಡುಲೋಭಿಜಡನೆಯಕಟಱಿಯಲಾ ನರಗುಱಿಯೆ ।
ಕಟ್ಟೊಡೆಯತನವ ಬಲಿದಿಂತು ಹೋರುವೆ ನೀನು । ಹುಟ್ಟುವಾಗಲೆ ಧನವ ಕಟ್ಟಿ ತಂದೆಯೊ ನೀನು ।
ನೀ ತಾರದೊಡೆ ನಿನ್ನ ತಾತ ತಂದನೊ ಇದಂ । ಏತಱಿಂದಾಯ್ತು ನಿನಗೊಡೆತನಂ ಪೇೞಿದಂ ।
ಬರುತ ತಾರದೊಡೇನು ಆಯ್ತು ನಿನಗೆಂದೊಡಂ । ಹರಣದೊಡನೊಯ್ಯಬೇಡಾವೊಡೆಯನಾದೊಡಂ ।
ಹುಟ್ಟುವಲಿ ತಾರೆ ಹೊಂದುವಲೊಯ್ಯೆ ಕಂಡಿದಕೆ । ನಟ್ಟನಡುವೆಹಗಾಯ್ತು ಒಡೆತನಂ ಪೇೞಿದಕೆ ।
ನಿನದಾದೊಡೆ ನಿನ್ನ ವ್ಯಯಕೆ ಸಲುತಿರದೇಕೆ । ಕನ್ನದಿಂ ನೃಪದಾಯರಿಂದ ಸರಿಯಲವೇಕೆ ।
ಹೋಗುತ್ತ ತನ್ನಳತೆಯಲಿ ತಾನೆ ಹೋದುದೇ । ಬೇಗೆಯಿಂ ನಿನ್ನ ಹರಣವನೊಯ್ಯದಾದುದೇ ।
ಇದುಕಾರಣಂ ನಿನ್ನ ಸೊಮ್ಮಲ್ಲ ಎಲೆಮರುಳೆ । ಕುದಿದು ಕೋಟಲೆಗೊಂಡೊಡಂ ಇಲ್ಲ ಎಲೆಮರುಳೆ ॥ 544 ॥

## ಪರತತ್ವಸ್ವರೂಪ.

ಸಕಲತತ್ವಂಗಳಿಗೆ ಯುಕುತಿಗೊಳಗಾಗದದು । ಅಖಿಳನಿಗಮಾಗಮವು ಮುಖವಿಡಲು ಬಾರದದು ।
ಹರಿಯಜಸುರಾಸುರರು ಪರಿಕಿಸಲು ಬಾರದದು । ಬೆರಸಿ ನೀರಕ್ಷೀರದಿರವಿದ್ದು ಇಲ್ಲದುದು ।
ದೂರವೆನಬಾರದದು ಸಾರೆಯೆನಬಾರದದು । ಆರಿಗಳವಡುವುದು ವಿಚಾರಕೊಳಗಾಗದದು ।
ಸಕಲವೆಂಬುದು ತಾನು ನಿಃಕಲವೆನಲು ತಾನು । ಸಕಲನಿಃಕಲವೆನಿಸಿಯೆನಿಸದಿಪ್ಪುದು ತಾನು ।
ಒಳಗೆಂದೊಡಂ ತಾನು ಹೊಱಗೆಂದೊಡಂ ತಾನು । ಒಳಗುಹೊಱಗೞಿದ ಬಱು ಬೆಳಗಿನ ಬೆಳಗು ತಾನು ।
ಸಕಲಭೂತಂಗಳಂತರ್ಯಾಮಿಯೆನಿಸಿಪ್ಪ । ಭಕುತರಿಗೆ ಸುಲಭನುೞಿದರಿಗಸಾಧ್ಯನುಮಪ್ಪ ।
ಅಂತು ಸರ್ವಾಂಗಮಯಮಾದ ಮಹಲಿಂಗಮುಂ । ಅಂತುವಂ ತಿಳಿ ನಿನ್ನೊಳಿಹ ಭಾವಸಂಗಮುಂ ॥ 545 ॥

## ಕೆರೆಯಪದ್ಮರಸನನ್ನು ಸ್ತುತಿಸಿದ ಕನ್ನಡ ಕವಿಗಳು.

ಕೆರೆಯಪದ್ಮರಸನು ನರಸಿಂಹಬಲ್ಲಾಳನ ಸಭೆಯಲ್ಲಿ ತ್ರಿಭುವನತಾತನನ್ನು ವಾದದಲ್ಲಿ ಜಯಿಸಿದಾಗ ಅವನನ್ನು ಕನ್ನಡ ಪದ್ಯಗಳಿಂದ ಶ್ಲಾಘಿಸಿದ ಕವಿಗಳ ಹೆಸರುಗಳನ್ನೂ ಅವರು ಮಾಡಿದ ಪದ್ಯಗಳನ್ನೂ[1] ಇಲ್ಲಿ ಬರೆಯುತ್ತೇವೆ. ಇವರೆಲ್ಲರೂ ವೀರಶೈವಕವಿಗಳು. ಇವರಲ್ಲಿ ರಾಘವ ಎಂಬವನಿಗೆ ಹೇಳಿರುವ ಬಿರುದಿನಿಂದ ಅವನು ರಾಘವಾಂಕನೇ ಎಂಬುದರಲ್ಲಿ ಸಂದೇಹವಿಲ್ಲ. ಉಳಿದವರ ವಿಷಯವಾಗಿ ನಮಗೆ ಇನ್ನೇನೂ ತಿಳಿಯದು. ಈ ಪದ್ಯಗಳನ್ನು ನೋಡಿದರೆ ಎಲ್ಲರೂ ಒಳ್ಳೆಯ ಕವಿಗಳಾಗಿದ್ದಂತೆ ತೋರುತ್ತದೆ; ಆವ ಗ್ರಂಥಗಳನ್ನು ಬರೆದಿರಬಹುದೋ ತಿಳಿಯದು.

### ದೋರಾಂಬುಧಿಯ ರಾಮಣ್ಣ. ಸು. 1165.

ದೋರಾಂಬುಧಿ ಅಥವಾ ದೋರಸಮುದ್ರ ಎಂದು ಹಳೆಯಬೀಡಿಗೆ ಹೆಸರು.

ಪ್ರಭುತೆಯ ಪೆರ್ಮೆಗಮಾಮಾ । ತ್ರಿಭುವನತಾತಾಖ್ಯೆಯಾಂತ ವೈಷ್ಣವನುದ್ಯ ।
ದ್ವಿಭುಪದ್ಮಣಾರ್ಯರೊಳ್ ಸೋ । ಲ್ತುಭಯಮನೆರೆದಂಘ್ರಿಗೆಱಗಿದಂ ನೃಪಸಭೆ
ಯೊಳ್ ॥ 546 ॥

### ಉಭಯಕವಿಶರಭಭೇರುಂಡ ರಾಘವ.[2] ಸು. 1165.

ಮಿಹಿರಂಗೆ ತಿಮಿರಮಿದಿರೇ । ಸಹಜಕ್ಕೆ ಠಮಾಳಮಿದಿರೆ ಪದ್ಮರಸಾರ್ಯಂ ।
ಗಹಹಾ ತ್ರಿಭುವನತಾತಂ । ಬಹುವಿಧದಿಂ ಬಗೆಯಲಿದಿರೆ ತಾನೇ ಕೆಟ್ಟಂ ॥ 547 ॥

### ಹುಲಿಗೆರೆಯ ಮಾಯಿದೇವ ಪುರಾಣಭಟ್ಟ. ಸು. 1165.

ತನುವೆಂಟುಂ ಶಿವನವು ತ । ತ್ತನುವಿನೊಳಮರ್ದಿರ್ದು ಬೇಱಿದ್ವಂ ಸಮಯಂ ।
ತನಗೆಂಬ ತಲೆಗಳನೆ ತಱ । ದೆನಗಂ ಚೆಂಡಾಡಲಾಯ್ತು ಮನಮುಶ್ರಾಂತಂ ॥ 548 ॥

### ಅತಿರಸಿಕ ಕರ್ಣಾಭರಣ ಬುಧವರ. ಸು. 1165.

ಪರಸಮಯಾಂಧಕಾರಘನಚಂಡಕರಂ ಹರಿಯೆಂದು ಸಾಱ ಧಿ ।
ಕ್ಕರಿಸುವ ವಾದಿಯಂ ಸಕಲವೇದಪುರಾಣಪುರಾತನೋಕ್ತಿಯಿಂ ॥
ದೊರಸುವೊಡುರ್ವರಾತಳದೊಳೊರ್ವನೆ ಶೈವತಟಾಕಪ ।
ದ್ಮರಸನನಂತಶಾಸ್ತ್ರಸರಸಂ ಚಿರಸಂ ಪರದೈವಜೀವರಂ ॥ 549 ॥

---

1 ಈ ಪದ್ಯಗಳು ಕೆರೆಯಪದ್ಮರಸನ ಮಗನಾದ ಕುಮಾರಪದ್ಮರಸನ ಸಾನಂದಚರಿತ್ರದ ಉಪೋದ್ಘಾತದಲ್ಲಿ ದೊರೆಯುತ್ತವೆ.

2. ಪುಟ 235.

ಲತೆಯುಂ ಖಗಮುಂ ಮೃಗಮುಂ । ಸತಿಯುರುಮುಂ ಪೊಗೞ್ದು ಕವಿತೆಯಂ ನೀಗದೆ ಪಾ ।
ರ್ವತಿಯುರಸನನೇ ಪೊಗೞ್ದಂ । ಕ್ಷಿತಿಯೊಳ್ ಪದ್ಮರಸಶರಣಕವಿ ಭವಿದೂರಂ ॥ 550 ॥

ಸುಕವಿಕರ್ಣಾಭರಣ ಎಂದು ಮುಗಿವ ಕೆಲವು ನೀತಿಬೋಧಕವಾದ ಪದ್ಯಗಳು ದೊರೆಯುತ್ತವೆ. ಇವು ಈ ಕವಿಯಿಂದ ರಚಿತವಾಗಿರಬಹುದೋ ಏನೋ ತಿಳಿಯದು. ಒಂದು ಪದ್ಯವನ್ನು ಉದಾಹರಿಸುತ್ತೇವೆ:—

## ಪಾತಿವ್ರತ್ಯ.

ಬೇಲಿತಳಿಗೋಂಟೆಮುದಿಲುಗ । ಳೋಲೈಸುವ ಕಾಪಿನಾಳು ಮೆಯ್ಗಾಪಿನವರ್ ।
ಬಾಲೆಯರಂ ಕಾವರೆ ನಿಜ । ಶೀಲಮೆ ಕಾದಪುದು ಸುಕವಿಕರ್ಣಾಭರಣಾ ॥ 551 ॥

## ಪದವಾಕ್ಯಪ್ರಮಾಣಜ್ಞ ದೇವರಸಪಂಡಿತ. ಸು. 1165.

ಏಕೆ ಬಿಡು ಮತ್ತೆ ಗೞಪದಿ । ರೇಕೋರುದ್ರೋ ದಲೆಂಬ ಸುತಿವಿಡಿದೆಲ್ಲಾ ।
ಕಾಕುಮತಂಗಳನಲೆದು ನಿ । ರಾಕರಿಸಿದ ಸತ್ವಶರಣಕವಿಗಿದಿರುಂಟೇ ॥ 552 ॥

## ಹಂಪೆಯ ರಾಮಣ್ಣ ಅಥವಾ ರಾಮಿತಂದೆ. ಸು. 1165.

ಇವನಿಗೆ "ಅನೇಕ ಕಲಾವಿದ" ಎಂಬ ವಿಶೇಷಣವು ಹೇಳಿದೆ.

ಗುರುವಂ ಹರನಂ ಪಂಚಾ । ಕ್ಷರಿಯಂ ರುದ್ರಾಕ್ಷಿಯಂ ವಿಭೂತಿಯನೊಲ್ವಾ ।
ದರಿಪರ್ ಶರಣಕವಿಯ ಪ । ದ್ಮರಸರ ಸಾನಂದಚರಿತೆಯೋದುಗೆ ಶರಣರ್ ॥ 553 ॥

## ಜಗದಾರಾಧ್ಯ ನಾಗಿದೇವ. ಸು. 1165.

ಪರವಾದಿಧ್ವಾಂತಸೂರ್ಯಂ ಕೆರೆಯಪದುಮರಾಜಂ ಸ್ವಗುರ್ವಾಜ್ಞೆಯಿಂದೀ ।
ಶ್ವರಭಕ್ತರ್ ಮುಕ್ತಿಯಾಹಾ ವಿರಚಿಸಿದ ಶಿವಾದ್ವೈತಸಾಕಾರಸಿದ್ಧಾಂ ॥
ತರಸಂ ಸಾನಂದಚಾರಿತ್ರಮನೆ ಪಸರಿಸುತ್ತಿರ್ಪುದೀಕ್ಷೋಣಿಗೆಂದಂ ।
ಗುರುಭಕ್ತಂ ಕಾರಣಾತ್ಮಂ ವರಗುಣಿ ಜಗದಾರಾಧ್ಯನಾನಾಗಿದೇವಂ ॥ 554 ॥

ಸಂದ ಪುರಾಣದಾಗಮದ ವೇದದ ಶೈವಕಥಾವಿತಾನದೊಳ್ ।
ಕುಂದಿನಿತಿಲ್ಲ ಸೇರುವೆ ಚಮತ್ಕೃತಿಯಾದುದು ಮಾಮಝಯ್ಯ ಲೇ ॥
ಸೆಂದು ಸಮಸ್ತಸತ್ಕವಿಜನಂ ಪೊಗೞುತ್ತಿರೆ ಪೇೞ್ದನೆಯ್ದೆ ಸಾ ।
ನಂದಚರಿತ್ರಮಂ ಕೆರೆಯಪದ್ಮರಸಂ ಬಹುಶಾಸ್ತ್ರಕೋವಿದಂ ॥ 555 ॥

ಛಂದದ ಪೌರಾಣಾಗಮ । ವೃಂದದ ಹೃದಯಮದು ಶೈವಪದಮೆಂದೆನೆ ಸಾ ।
ನಂದಚರಿತ್ರಮನೊರೆದಂ । ಸಂದಿಸಿ ಪದ್ಮರಸಶರಣಕವಿ ಭವಿದೂರಂ ॥ 556 ॥

ಹರನ ಸಮಗ್ರಭಕ್ತಿ ನೆಲೆಗೊಂಡ ಪುರಾತನಕೇಶಿರಾಜಬಾ ।
ಚರಸರ ಚೊಕ್ಕನಾಯರ ದಧೀಚಿಯ ಶಂಕರದಾಸಿಮಯ್ಯನೆಂ ॥

ಬರ ವರತೇಜದಂತೆ ಮಱೆವಸ್ಯಮತಾಂಧರನೊಕ್ಕಲಿಕ್ಕುವಂ ।
ಶರಣಕವೀಶ್ವರಂ ಕೆರೆಯ ಪದ್ಮರಸಂ ಪ್ರತಿವಾದಿಭಂಜನಂ ॥ 557 ॥

ತರುಗಿರಿಲತೆನಾರಿಯರಂ । ಮುರಹರನಂ ಪೊಗಟ್ಟಿ ಕಥೆಯ ನಾಲಿಪರಲ್ಲದೆ ।
ಪುರಹರನ ಕಥೆಯನೊಲ್ಲರ್ । ಹರಹರ ಕರಮರಿದು ಶರಣಕವಿ ಭವಿದೂರಂ ॥ 558 ॥

## ಅಷ್ಟಭಾಷಾಕವೀಶ್ವರ ಶಿವದಾಸ. ಸು. 1165.

ಮೃಡಭಕ್ತಿಪಥದ ಸಾರಂ । ಮೃಡನೊಡನೆಣೆಗಾಣ್ಬನೊಡಲ ಸುಡುವತಿಧೀರಂ ।
ಜಡರಜ್ಞಾನನಿವಾರಂ । ಕಡುಗಲಿ ಪದ್ಮರಸಶರಣಕವಿ ಭವಿದೂರಂ ॥ 559 ॥

## ದಾವರಸ. ಸು. 1165.

ಇವನಿಗೆ "ಶೈವವಿರುದ್ಧಮತದಾವದಾವ" ಎಂಬ ವಿಶೇಷಣವು ಉಪಯೋಗಿಸಿದೆ.

ಏಕೈಕವೀರನೊರ್ವನೆ। ಏಕೋರುದ್ರನ ಲಲಾಟನೇತ್ರದೊಳೊಗೆದಂ।
ದೇಕೆ ಶಿವನೆಂಬ ದಕ್ಷಂ। ಗಾಕುಱುದಲೆಯಿತ್ತನವನ ಪಡಿ ಪದ್ಮರಸಂ ॥ 560 ॥

## ಶರಣಕವಿ. ಸು. 1165.

ಒಳ್ಳಿಗಳುಂ ಗರಳದ ಕರಿ। ಗೊಳ್ಳಿಗಳುಂ ಕೈಪಸೊರೆಯ ಬಳ್ಳಿಗಳುಂ ಚೀ।
ಟೊಳ್ಳಿಗಳುಂ ದ್ವಿವಾಖ್ಯಕೆ। ಕಳ್ಳರ್ ಗುರುರೂಪವಿಶ್ವನಾಥಂಗೆಣೆಯೇ ॥ 561 ॥

ಅಬ್ಬಲೂರಲ್ಲಿರುವ ಒಂದು ಶಾಸನವನ್ನು [1] ಕೇಶವರಾಜಚಮೂಪನು ರಚಿಸಿದಂತೆಯೂ ಸರಣನೆಂಬ ಕವಿ ತಿದ್ದಿ ಬರೆದಂತೆಯೂ ಆ ಶಾಸನದ ಅಂತ್ಯದಲ್ಲಿರುವ

ಕೇಶವರಾಜಚಮೂಪಂ। ಶಾಸನಮಂ ಪೇಳ್ದನಂತದಂ ತಿರ್ದಿ ನಿರಾ।
ಯಾಸದೆ ಬರೆದವನೀಶನ। ದಾಸಂ ಶಿವಚರಣಕಮಲಶರಣಂ ಸರಣಂ॥

ಎಂಬ ಪದ್ಯದಿಂದ ತಿಳಿಯುತ್ತದೆ. ಈ ಶಾಸನವು ಸುಮಾರು 1195 ರಲ್ಲಿ ಬರೆದುದು. ಮೇಲೆ ಹೇಳಿದ ಶರಣಕವಿ ಈ ಸರಣನೇ ಆಗಿರಬಹುದೋ ಏನೋ ತಿಳಿಯದು.

---

## ತಿಪ್ಪಣೋಜ. 1169.

ಬಾಂಬೆ ಬ್ರಾಂಚ್ ರಾಯಲ್ ಏಷ್ಯಾಟಿಕ್ ಸೊಸೈಟಿ ಜರ್ನಲೊಳಗೆ [2] ಅಚ್ಚಾಗಿರುವ ಒಂದು ಕನ್ನಡ ಶಾಸನದ ಕೊನೆಯಲ್ಲಿರುವ

ಭರತಾಗಮಶಾಸ್ತ್ರಕಳಾ। ಪರಿಣತಿಯೊಳ್ ವರ್ಣಕವಿತೆಯೊಳ್ ದಾನಗುಣೋ।
ತ್ಕರದೊಳ್ ಸರಿಯಾರ್ ವಂಕೇ। ಶ್ವರದೇವರ ತಿಪ್ಪಣೋಜನೊಳ್ ಭೂತಲದೊಳ್ ।

---

1. *Epi. Ind.*, V, 245. 2. Vol. IX, 294.

ಎಂಬ ಪದ್ಯದಿಂದ ಈತನು ಕವಿಯಾಗಿದ್ದಂತೆ ತಿಳಿಯುತ್ತದೆ. ಈ ಶಾಸನದಲ್ಲಿ— ಗೋಪಕ (Goa) ಪಟ್ಟಣದಲ್ಲಿ ಆಳುತ್ತಿದ್ದ ಕದಂಬರಾಜರಲ್ಲಿ ಪೆರ್ಮಾಡಿ ಅಥವಾ ಶಿವಚಿತ್ತ ಎಂಬ ರಾಜನ ಹೆಂಡತಿಯಾದ ಕಮಲಾದೇವಿ ಒಂದು ದೇವಸ್ಥಾನವನ್ನು ಕಟ್ಟಿಸಿದಂತೆ ಹೇಳಿದೆ. ಈ ಶಿವಚಿತ್ತನು 1169 ರಲ್ಲಿ ಆಳುತ್ತಿದ್ದಂತೆ ಇದೇ ಜರ್ನಲೊಳಗಿರುವ ಇತರ ಶಾಸನಗಳಿಂದ ತಿಳಿವುದರಿಂದ ಈ ತಿಪ್ಪಣೋಜನು ಆ ಕಾಲದವನಾಗಿರಬೇಕು.

---

## ಬಾಲಚಂದ್ರ. ಸು. 1170.

ಈತನು ಜಿನಸ್ತುತಿಯನ್ನು ಬರೆದಿದ್ದಾನೆ. ಇದಲ್ಲದೆ ಪ್ರಾಭೃತಕತ್ರಯ, ತತ್ತ್ವಾರ್ಥ, ಪರಮಾತ್ಮಪ್ರಕಾಶಿಕೆ ಮೊದಲಾದ ಗ್ರಂಥಗಳಿಗೆ ಕನ್ನಡ ವ್ಯಾಖ್ಯಾನಗಳನ್ನೂ ಬರೆದಿದ್ದಾನೆ.

ಇವನು ಜೈನಕವಿ: ಮೂಲಸಂಘದ ದೇಶೀಯಗಣದ ಪುಸ್ತಕಗಚ್ಛದ ಕುಂದಕುಂದಾನ್ವಯಕ್ಕೆ ಸೇರಿದವನು. ಇವನ ಗುರು 1176 ರಲ್ಲಿ ಗತಿಸಿದ ನಯಕೀರ್ತಿ[1]; ಅಣ್ಣ ದಾಮನಂದಿ[2]. ಇವನಿಗೆ ಅಧ್ಯಾತ್ಮಿ ಬಾಳಚಂದ್ರನೆಂದು ಹೆಸರು. ಈತನು 1181 ರಲ್ಲಿ ಬದುಕಿದ್ದಂತೆಯೂ[3] **ಸುಜನೋತ್ತಂಸ**ನೆಂಬ ಬಿರುದುಳ್ಳ **ಬೊಪ್ಪಣಪಂಡಿತ**ನಿಂದ ಗೊಮ್ಮಟಸ್ತುತಿಯನ್ನು ಬರೆಯಿಸಿದಂತೆಯೂ[4] ತಿಳಿಯಬರುತ್ತದೆ. ಈತನನ್ನು ಸ್ತುತಿಸುವ ಪದ್ಯಗಳು ಶಾಸನಗಳಲ್ಲಿ ಅನೇಕವಿವೆ. ಬೊಪ್ಪಣಪಂಡಿತನು ಈತನನ್ನು ಈ ರೀತಿಯಾಗಿ ಸ್ತುತಿಸಿದ್ದಾನೆ:—

ವರಸೈದ್ಧಾಂತಿಕಚಕ್ರೇ। ಶ್ವರನಯಕೀರ್ತಿವ್ರತೀಂದ್ರಶಿಷ್ಯಂ ನಿಜಚಿ।
ತ್ಪರಿಣತನಧ್ಯಾತ್ಮಕಳಾ। ಧರನುಜ್ವಳಕೀರ್ತಿ ಬಾಲಚಂದ್ರಮುನೀಂದ್ರಂ ॥

**ಸಮಯಸಾರ ಪ್ರಾಭೃತ ವ್ಯಾಖ್ಯಾನದ ಕೊನೆಯಲ್ಲಿರುವ**

ಇದು ಸಮಸ್ತಸೈದ್ಧಾಂತಿಕಚಕ್ರವರ್ತಿ ಶ್ರೀನಯಕೀರ್ತಿದೇವನಂದನ ವಿನಯಜನಾನಂದನ ನಿಜರುಚಿಸಾಗರನಂದಿಪರಮಾತ್ಮದೇವಸೇವಾಸಾದಿತಾತ್ಮಸ್ವಭಾವ ನಿತ್ಯಾನಂದ ಬಾಳಚಂದ್ರದೇವವಿರಚಿತ ಸಮಯಸಾರಪ್ರಾಭೃತಸೂತ್ರಾನುಗತ ತಾತ್ಪರ್ಯವೃತ್ತಿ

---

1. ಶ್ರ. ಬೆ. ಶಾ. 66. 2. ನಾಗಮಂಗಲ 70 (1178).
3 ಶ್ರ. ಬೆ. ಶಾ. 327. 4. ಶ್ರ. ಬೆ. ಶಾ. 234.

ಎಂಬ ಗದ್ಯದಿಂದ ಈತನು ನಯಕೀರ್ತಿಯ ಮಗನಲ್ಲಿ ಓದಿದವನೆಂದು ತಿಳಿಯುತ್ತದೆ. ಇವನು **ನಾಗಚಂದ್ರನ** ಗುರುವಲ್ಲವೆಂಬಂಶವನ್ನು ಹಿಂದೆಯೇ ಚರ್ಚಿಸಿದ್ದೇವೆ.[1]

ಇವನ ಗ್ರಂಥಗಳಲ್ಲಿ—

## 1. ಜಿನಸ್ತುತಿ.

ಈ ಗ್ರಂಥದಲ್ಲಿ ಸುಮಾರು 20 ಪದ್ಯಗಳಿವೆ. ಇದರ ಉತ್ಕೃಷ್ಟತೆಯನ್ನು ಕವಿ

ಆದುದು ಬಾಳಚಂದ್ರಮುನಿನಾಕ್ಕದೊಳಾಗಮದೋಜೆಯಿಂದಮಾ ।
ದ್ವಾದಶಭೇದದಿಂ ಜಿನಗುಣಸ್ತವನಂ . . ನಾತ್ಮತತ್ತ್ವಸಂ ॥
ಪಾದನಹೇತುವಪ್ಪುದಿದನೋದಿಸುತೋದುವ ಕೇಳುತಿರ್ಪವ ।
ರ್ಗಾದರದಿಂದೆ ಮಾಡುವುದು ಮುಕ್ತಿಯನಕ್ಷಯಮಂ ಜಿನೇಶ್ವರಾ ॥

ಎಂಬ ಕೊನೆಯ ಪದ್ಯದಲ್ಲಿ ಹೇಳಿದ್ದಾನೆ.

ಇದರಿಂದ ಎರಡು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

ಬೇಡಿದ ಭಂಗಿಯಿಂ ನೆಱಪಿದೆನ್ನ ಧನಂ ನವರತ್ನಸಂಚಯಂ ।
ನಾಡೆ ಮನಕ್ಕೆ ವರ್ಪ ವನಿತಾನಿಕರಂ ಕಮನೀಯಯುವ್ವನಂ ॥
ನೋಡೊಡಲೆಂಬಿವಾವ ತೆಱದಿಂ ಕಿಡುಗುಂ ಕಿಡದೊಪ್ಪುವಾತ್ಮನೊಳ್ ।
ಕೂಡುವ ಚಿತ್ತಮಂ ಗುಣಗಣೋತ್ತಮಮಂ [ದಯೆಗೆಯ್] ಜಿನೇಶ್ವರಾ ॥ 562 ॥

ಏವುದು ರಕ್ತದಲ್ಲಿ ಸುಕುಲಂ ದೊರೆಕೊಂಡೊಡೆ ಬಂದು ಪುಟ್ಟುಗುಂ ।
ಜೀವಮಶುದ್ಧದೇಹದೊಳಗಾಯ್ತದು ಭಾವಿಸೆ ಮಾಂಸಪಿಂಡಮೆಂ ॥
ಬೀವಿಧದಿಂ ವಿಚಾರಿಸಿ ನಿಜಾತ್ಮನೊಳಾದುದು ಶುದ್ಧಮೆಂಬುದಂ ।
ಭಾವಿಸುವಂದಮಂ ಭುವನವಂದಿತಮಂ ದಯೆಗೆಯ್ ಜಿನೇಶ್ವರಾ ॥ ॥ 563 ॥

## 2. ವ್ಯಾಖ್ಯಾನಗಳು.

ಈತನ **ಪಂಚಾಸ್ತಿಕಾಯ** ಪ್ರಾಭೃತವೃತ್ತಿಯ ಆದಿಯಲ್ಲಿ ವರ್ಧಮಾನಸ್ತುತಿ ಇದೆ. ಆಮೇಲೆ ಈ ಪದ್ಯವೂ ಗದ್ಯವೂ ಇವೆ:—

ಸುಖಕರರತ್ನತ್ರಯಸಾ । ಧಕ ನಿತ್ಯಾನಂದ ಕುಂದಕುಂದಾಚಾರ್ಯ ।
ಪ್ರಕಟೀಕೃತ ಸತ್ಪ್ರಾಭೃತ । ಕೆ ಕರಂ ಕರ್ಣಾಟವೃತ್ತಿಯಂ ವಿರಚಿಸುವೆಂ ॥

ಶ್ರೀಕುಮಾರನಂದಿಸಿದ್ಧಾಂತದೇವಶಿಷ್ಯರುಂ ಪದ್ಮನಂದ್ಯಾದ್ಯಪರನಾಮಧೇಯರುಮಪ್ಪ ನಿತ್ಯಾನಂದ ಶ್ರೀಕುಂದಕುಂದಾಚಾರ್ಯದೇವರಿಂ ಶಿವಕುಮಾರ[2] ಮಹಾರಾಜಾದಿ

1. ಪುಟ 102

2. ಪಾಠಕರು—ಈತನು ಶ್ರೀ ವಿಜಯ ಶಿವಮೃಗೇಶ ಮಹಾರಾಜ ಎಂಬ ಕದಂಬರಾಜನು ಎಂದು ಹೇಳುತ್ತಾರೆ *Ind. Ant.*, XIV, 15.

ಸಂಕ್ಷೇಪರುಚಿಶಿಷ್ಯಪ್ರತಿಬೋಧನಾರ್ಥಂ ವಿರಚಿತಮಪ್ಪ ಪಂಚಾಸ್ತಿಕಾಯ ಪ್ರಾಭೃತಶಾಸ್ತ್ರ ತಾತ್ಪರ್ಯಾರ್ಥವೃತ್ತಿಯುಂ ವಿರಚಿಸುವೆಂ.

ಅಂತ್ಯದಲ್ಲಿ ಈ ಪದ್ಯಗಳಿವೆ:—

ಪರಮಾಗಮವಾರಿಧಿಹಿಮ । ಕಿರಣಂ ರಾದ್ಧಾಂತಚಕ್ರಿ ನಯಕೀರ್ತಿಯಮೀ ।
ಶ್ವರಶಿಷ್ಯನಮಳನಿಜಚಿ । ತ್ತರಿಣತನಧ್ಯಾತ್ಮಿ ಬಾಳಚಂದ್ರಮುನೀಂದ್ರಂ ॥
ಧೃತರತ್ನತ್ರಿತಯಂ ಪ್ರಾ । ಭೃತಸೂತ್ರಾನುಗತವೃತ್ತಿಯುಂ ಪಲರ್ಗಂ ಪ್ರಾ ।
ಕೃತಕರ್ಣಾಟಕವಾಕ್ಯಾ । ರ್ಥತತ್ವನಿಶ್ಚಿತ್ತಿಯಾಗೆ ನಿರ್ವರ್ಣಿಸಿದಂ ॥

ಪ್ರವಚನಸಾರ ಪ್ರಾಭೃತತಾತ್ಪರ್ಯವೃತ್ತಿಯ ಆದಿಯಲ್ಲಿ—

ಭುವನಾರಾಧ್ಯತಪಶ್ರೀ । ಧವನಿರ್ಮದಪದ್ಮನಂದಿಮುನಿರಾಜಕೃತ ।
ಪ್ರವಚನಸಾರದ ತಾತ್ಪ । ರ್ಯವೃತ್ತಿಯುಂ ಚಿನ್ಮಯಮಪ್ಪುದಿಂ ವಿರಚಿಸುವೆಂ ॥

ಎಂಬ ಪದ್ಯವಿದೆ. ಇವನ ತತ್ವಾರ್ಥತಾತ್ಪರ್ಯವೃತ್ತಿಗೆ **ತತ್ವರತ್ನಪ್ರದೀಪಿಕಾ** ಎಂದು ಹೆಸರು. ಇದನ್ನು "ಕುಮುದಚಂದ್ರ ಭಟ್ಟಾರಕಪ್ರತಿಬೋಧನಾರ್ಥಂ" ರಚಿಸಿದಂತೆ ಹೇಳುತ್ತಾನೆ.

---

## ನೇಮಿಚಂದ್ರ. ಸು. 1170.

ಈತನು **ಲೀಲಾವತಿ, ನೇಮಿನಾಥಪುರಾಣ** ಎಂಬ ಗ್ರಂಥಗಳನ್ನು ಬರೆದಿದ್ದಾನೆ.

ಇವನು ಲೀಲಾವತಿಯ ಕೊನೆಯಲ್ಲಿ "ಅಂಬುಧಿವೇಷ್ಟಿತಾವನಿಗೆ ಲಕ್ಷ್ಮಣದೇವನೆ ರಾಜನೆಂದು ಲೋ । ಕಾಂಬಿಕೆಯಪ್ಪ ಪುಣ್ಯಸತಿ ಚಂದಲದೇವಿಯೆ ದೇವಿಯೆಂದು ಸೇ । ವ್ಯಂ ಬುಧನೇಮಿಚಂದ್ರನೆ ಕವೀಶ್ವರನೆಂದು" ಎಂದೂ, "ಧರೆಯುಂ ರಕ್ಷಿಸುತಿರ್ಕೆ ಲಕ್ಷ್ಮಬರಿಸಂ ಲಕ್ಷ್ಮೀಧರೋರ್ವೀಶ್ವರಂ । ಸಿರಿಯುಂತಾತನ ತೋಳೊಳಿರ್ಕೆ ಸತತಂ ಶ್ರೀಚಂದ್ರಿಕಾದೇವಿ" ಎಂದೂ ಹೇಳಿದ್ದಾನೆ. ಇದೇ ಲಕ್ಷ್ಮಣರಾಜನನ್ನು **ಕರ್ಣಪಾರ್ಯನು** (ಸು. 1140) ತನ್ನ ನೇಮಿನಾಥಪುರಾಣದಲ್ಲಿ ಹೇಳಿದ್ದಾನೆ.[1] ಆದರೆ ಕರ್ಣಪಾರ್ಯನ ಕಾಲದಲ್ಲಿ ಲಕ್ಷ್ಮಣನು ರಾಜ್ಯಭಾರಮಾಡುತ್ತಿರಲಿಲ್ಲ; ಅವನ ತಂದೆಯೋ ಅಥವಾ ಅಣ್ಣನಾದ ವಿಜಯಾದಿತ್ಯನೋ ಆಳುತ್ತಿದ್ದಂತೆ ತಿಳಿಯಬರುತ್ತದೆ. ನೇಮಿಚಂದ್ರನ ಕಾಲದಲ್ಲಿ ಲಕ್ಷ್ಮಣನೇ ಆಳುತ್ತಿದ್ದಂತೆ ಮೇಲಣ ಪದ್ಯಭಾಗಗಳಿಂದ ವ್ಯಕ್ತವಾಗುತ್ತದೆ. ಇದರಿಂದ ನೇಮಿಚಂದ್ರನು ಸುಮಾರು 1140 ರಲ್ಲಿದ್ದ ಕರ್ಣಪಾರ್ಯನಿಗಿಂತ ಒಂದು ತಲೆ ಈಚೆಯವನೆಂದು ಹೇಳಬಹುದು.

---

1. ಪುಟ 140.

ಅಲ್ಲದೆ ಇವನು ತನ್ನ ನೇಮಿನಾಥಪುರಾಣವನ್ನು ವೀರಬಲ್ಲಾಳನ ಪ್ರಧಾನನಾದ ಸೆಜ್ಜೆವಳ್ಳ ಪದ್ಮನಾಭನಿಗಾಗಿ ಬರೆದಂತೆ ಹೇಳುತ್ತಾನೆ.[1] ವೀರಬಲ್ಲಾಳನು 1173 ರಿಂದ 1220 ರ ವರೆಗೆ ಆಳಿದಂತೆ ತಿಳಿಯುತ್ತದೆ.

ಆದುದರಿಂದ ಈ ಕವಿ ಸುಮಾರು 1170 ರಲ್ಲಿ ಇದ್ದಿರಬಹುದು. ಈತನು ಲೀಲಾವತಿಯನ್ನು ಬರೆದು ಆಮೇಲೆ ನೇಮಿನಾಥ ಪುರಾಣವನ್ನು ಬರೆದಿರಬೇಕು.

ಇವನು ಜೈನಕವಿ; ಮೇಲೆ ಹೇಳಿದ ಲಕ್ಷ್ಮಣರಾಜ, ವೀರಬಲ್ಲಾಳ ಈ ಇಬ್ಬರು ರಾಜರ ಆಸ್ಥಾನದಲ್ಲಿಯೂ ಪ್ರಸಿದ್ಧನಾಗಿದ್ದಂತೆ ತೋರುತ್ತದೆ.

ಈತನಿಗೆ ಅಂಗಿಕನೇಮಿ ಎಂಬ ಹೆಸರೂ, ಕಲಾಕಾಂತ, ಕವಿರಾಜಮಲ್ಲ, ಕವಿಧವಳ, ಶೃಂಗಾರಕಾರಾಗೃಹ, ಕವಿರಾಜಕುಂಜರ, ಸಾಹಿತ್ಯವಿದ್ಯಾಧರ, ವಿದ್ಯಾವಧೂವಲ್ಲಭ, ಸುಕವಿಕಂಠಾಭರಣ, ವಿಶ್ವವಿದ್ಯಾವಿನೋದ, ಭಾರತೀಚಿತ್ತಚೋರ, ಚತುರ್ಭಾಷಾಕವಿಚಕ್ರವರ್ತಿ, ಸುಕರಕವಿಶೇಖರ, ಕೃತಿಕುಲದೀಪ, ವಾಗ್ವಲ್ಲಕೀವೈಣಿಕ ಮೊದಲಾದ ಬಿರುದುಗಳೂ, ಇದ್ದಂತೆ ತಿಳಿಯುಬರುತ್ತದೆ.

ಇವನು ಪೂರ್ವಕವಿಗಳಲ್ಲಿ ಸಮಂತಭದ್ರ, ಅಕಳಂಕ, ಪೂಜ್ಯಪಾದ ಇವರನ್ನು ಮಾತ್ರ ಸ್ತುತಿಸಿದ್ದಾನೆ; ಆವ ಕನ್ನಡಕವಿಯ ಹೆಸರನ್ನೂ ಹೇಳಿಲ್ಲ.

ಈತನನ್ನು **ಜನ್ನ** (1209), **ಪಾರ್ಶ್ವ** (1205), **ಕಮಲಭವ** (ಸು. 1235), **ಮಧುರ** (ಸು. 1385), **ಮಂಗರಸ** (1508), **ಬಾಹುಬಲಿ** (ಸು. 1560) ಮೊದಲಾದ ಕವಿಗಳು ಸ್ತುತಿಸಿದ್ದಾರೆ.

ಸುಮನೋಧರ್ಮಗುಣಂಗಳೊ। ಳಮರ್ದಮರ್ದಂ ಕಱ್ತವ ನೇಮಿಚಂದ್ರನ ಬಾಣಂ।
ಭ್ರಮರಹಿತಂ ಮೃದು ಹೃದಯಂ। ಗಮನಿಪುದಿದಾವ ಕೌತುಕಂ ಬುಧಜನದಾ॥

**ಪಾರ್ಶ್ವ.**

ಏಮಾತೊ ನವ್ಯಕಾವ್ಯಕ। ಲಾಮಹಿಯೊಳ್ ಬಿಡದೆ ಬೀದಿವರಿವೊಡೆ ಮೊದಲೊಳ್।
ನೇಮಿಯ ನೆಮ್ಮುಗೆಯಿಲ್ಲದೊ। ಡೀಮತ್ತಿನ ಕವಿಮನೋರಥಂ ನಡೆದಪುದೇ॥
ಸರ್ವರ ಸಮ್ಮತಮೆನಗಿದು। ಗರ್ವದ ಮಾತಲ್ಲ ಶಾಸ್ತ್ರಲೌಕಿಕಕಲೆಯೊಳ್।
ಚೇರ್ವರಿದ ನೇಮಿಜನ್ನಮ। ರಿರ್ವರೆ ಕರ್ಣಾಟಕೃತಿಗೆ ಸೀಮಾಪುರುಷರ್॥

**ಮಧುರ.**

ಶೃಂಗಾರಕಾವ್ಯ ಲೀಲಾವತಿಯನು ಪೇ। ೞ್ದಾಂಗಿಕನೇಮಿಯ ನೆನೆವೆ॥

**ಮಂಗರಸ.**

---

1. ಈ ವಿಷಯವನ್ನು ದೇವಚಂದ್ರನು ರಾಜಾವಳೀಕಥೆಯಲ್ಲಿ— ಬಲ್ಲಾಳನ ಸಾಮಂತರಾದ ಪದ್ಮನಾಭಾದಿಗಳು ಪುರಾಣಂಗಳಂ ಮಾಡಿಸಿದರು—ಎಂಬಲ್ಲಿ ಹೇಳುವಂತೆ ತೋರುತ್ತದೆ.

ತನ್ನ ಕವಿತಾಚಾತುರಿಯನ್ನೂ ಗುಣಗಳನ್ನೂ ಈ ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ:—

ರುಚಿರಕಳಾಧರನಿಂ ನೇ । ಮಿಚಂದ್ರನಿಂ ಸತ್ಕವೀಶಚೂಡಾಮಣಿಯಿಂ ।
ಶುಚಿಪದಶಶಿಕಾಂತೋಪಲ । ನಿಚಯಂ ರಸವೊಸರುತಿರ್ಪುದೇನಚ್ಚರಿಯೇ ॥
ನವರಸಪೂರ್ಣದೊಳ್ ಲಲಿತಬಿಂಬಿತಸರ್ವಪದಾರ್ಥದೊಳ್ ಮಹಾ ।
ಕವಿಕುಳಸೇವ್ಯದೊಳ್ ಲಸದಲಂಕೃತಿಕಂಜನಿವಾಸದೊಳ್ ಜನೋ ॥
ತ್ಸವಕರದೊಳ್ ಸರಸ್ವತಿ ಮನೋಮುದದಿಂ ಜಲಕೇಳಿಯಾಡುವಳ್ ।
ಪ್ರವಿಮಳನವ್ಯಕಾವ್ಯಕಮಲಾಕರದೊಳ್ ಕವಿರಾಜಮಲ್ಲನಾ ॥
ಧರೆ ಬೇಸೆಂಬಾಸೆಗಾಱಂ ಪರಪುರುಷಗುಣಾನ್ವೇಷದೊಳ್ ಸ್ವೈಪುಗಾಱಂ ।
ಸಿರಿಯೊಳ್ ಕಟ್ಟಣ್ಮುಕಾಱಂ ವಿತತವಿತರಣೋತ್ಸಾಹದೊಳ್ ಗಲ್ಲಕಾಱಂ ॥
ಪರವಾದಿವ್ರಾತದೊಳ್ ಬಿತ್ತರಿಪ ತುರಿಪಕಾಱಂ ಮಹಾಧರ್ಮದೊಳ್ ಮ ।
ಚ್ಚರಕಾಱಂ ಭಾವಕೋತ್ಪಾದಕರಸಿಕಕವಿಸ್ತೋಮದೊಳ್ ನೇಮಿಚಂದ್ರಂ ॥
(ಇದನಱಿದು) ನೇಮಿಚಂದ್ರಂ । ವಿದಗ್ಧವಿದ್ಯಾಧರೇಂದ್ರನಖಿಳಕಳಾಕೋ ।
ವಿದನುಚಿತಶಬ್ದವಿದ್ಯಾ । ಸದನಂ ಕವಿಚಕ್ರವರ್ತಿ ಭುವನಾಭರಣಂ ॥
ಸುಕರಕವಿಶೇಖರಂ ತಾ । ರ್ಕಿಕತಿಲಕಂ ಮಾನಮೇರು ಜಿನಶಾಸನದೀ ।
ಪಕನಕಳಂಕಂ ಭಾವಕ । ಮುಕುರಂ ಕವಿರಾಜಮಲ್ಲನಪ್ರತಿಮಲ್ಲಂ ॥
ಸಾತಿಶಯಾರ್ಥಮುಮಂ ಮೆ । ಲ್ಪಾತುಮನೊಪ್ಪಿಸಿ ಪರೊಸೆದು ತಮಗಿಲ್ಲದುದಂ ।
ಖ್ಯಾತಂಗೆ ಸುಕವಿನೇಮಿಗೆ । ಭೂತಭವದ್ಭಾವಿಕವಿಗಳೇನೊಳ್ಳಿದರೋ ॥
ಯುವತಿ ಸರಸತಿ ಪುರಾತನ । ಕವಿವಿರಹಮನಱಿದಕಿಲ್ಲ ನಿರ್ಮಲದಶನ ।
ಚ್ಛವಿಕುಸುಮಿತರಸನಾಪ । ಲ್ಲವತಳ್ಪದೊಳಿರ್ದ ಸುಕರಕವಿಶೇಖರನಾ ॥

ಕವಿತಾಮಾರ್ಗವನ್ನೂ ಸತ್ಕವಿಗಳ ಅಸಾಧಾರಣಶಕ್ತಿಯನ್ನೂ ಈ ಪದ್ಯಗಳಲ್ಲಿ ಹೇಳಿದ್ದಾನೆ:—

ದಿಟ್ಟಿಗೆ ಬಂದ ಕೋಮಳಗುಣಂ ಗೆಡೆಗೊಂಡಿರೆ ಪೂವಿನಂತಿರಾ ।
ಯ್ದಿಟ್ಟ ಪದಂ ಬೆಡಂಗೆನಿಸೆ ಬಣ್ಣಸರಂ ಪೊಸತಾಗೆ ನುಣ್ಪೊಡಂ ॥
ಬಟ್ಟಿರೆ ಬಂಧವೊಂದೆ ಚತುರಾಳಿ ಕರಂ ಬಸಮಾಗೆ ಬಾಸಿಗಂ ।
ಗಟ್ಟುವನಂತೆ ಕಟ್ಟುವುದು ಕಬ್ಬಮನುಬ್ಬಣಮಾಗೆ ಕಬ್ಬಿಗಂ ॥
ಕಟ್ಟುಗೆ ಕಟ್ಟದಿರ್ಕೆ ಕಡಲಂ ಕಪಿಸಂತತಿ ವಾಮನಕ್ರಮಂ ।
ಮುಟ್ಟುಗೆ ಮುಟ್ಟದಿರ್ಕೆ ಮುಗಿಲಂ ಹರನಂ ನರನೊತ್ತಿ ಗಂಟಲಂ ॥
ಮೆಟ್ಟುಗೆ ಮೆಟ್ಟದಿರ್ಕೆ ಕವಿಗಳ್ ಕೃತಿಬಂಧದೊಳಲ್ತೆ ಕಟ್ಟಿದರ್ ।
ಮುಟ್ಟಿದರೊತ್ತಿ ಮೆಟ್ಟಿದರದೇನಳವಗ್ಗಳವೋ ಕವೀಂದ್ರರಾ ॥

ಮರನೀಗುಂ ಮಣಿಯಾಗುವೊಂದು ಪಶುವೀಗುಂ ಕಾಳಿಮಂದೋಳಿಯೊಳ್ ।
ಪುರುಡಂ ಪುಟ್ಟಿಸಿ ಕಾಸ್ರಮಂ ಕೊನರಿಸರ್ ಕಲ್ಲಲ್ಲಿ ನಾರತ್ತುವರ್ ॥
ಮರುಳಂ ಪೋ ಪುರುಳಾಗಿಪರ್ ಕಿವಿಗಳೊಳ್ ಪೀಯೂಷಮಂ ಪಿಂಡಲು ।
ರ್ವರೆಯೊಳ್ ಸಂದ ಕವಿಪ್ರವೇಕರೆ ವಲಂ ಬಲ್ಲರ್ ಪೆಱರ್ ಬಲ್ಲರೇ ॥

**ಕುಕವಿಗಳನ್ನು ಈ ಪದ್ಯಗಳಲ್ಲಿ ನಿಂದಿಸುತ್ತಾನೆ:—**

ಬಗೆಗೊಂಡೋದದೆ ಕೇಳದೆಲ್ಲಕಳೆಯುಂ ಕಾವ್ಯಜ್ಞರಿಂ ಕಲ್ಲದ ।
ಚ್ಚಿಗದಿಂ ಕಟ್ಟಿದ ಕೆಟ್ಟ ಕನ್ನಡದ ಕಾಬ್ಬಿಗಬ್ಬಂಗಳಂ ಬಟ್ಟಸಾ ॥
ಮಿಗಳಂ ಕೇಳಿಸಿ ತಾಮೆ ತಮ್ಮ ಮನದೊಳ್ ಸರ್ವಜ್ಞರೆಂದಿರ್ಪ ಕ ।
ಬ್ಬಿಗರುಂ ಕಬ್ಬಿಗರೆಂಬ ಲೆಕ್ಕದೊಳಗೇಂ ಭೂಭೃತ್ಸಭಾಭೂಷಣಾ ॥
ಮಿಗೆ ಪದಮಿಡಲಱಿಯದ ನಾ । ಲಗೆವೆಟವರ್ ಸಲೆ ಸದರ್ಥಮಂ ಕಾಣದ ವೋ ।
ಬಗೆಗುರುಡರ್ ಬಗೆವೊಡೆ ಕ । ಬ್ಬಿಗರಕ್ಕುಮೆ ಓದುಗೇಳದಕ್ಕರಗಿವುಡರ್ ॥
ಎಂದುದನೆನುತಿರ್ಪರ್ ಗಿರಿ । ಯಂದದಿನತಿನಿಶಿತಸುಕವಿವಾಕ್ಕುಲಿಶಂ ಬೀ ।
ೞ್ತಿಂದೊಡಮೆರ್ದೆಯುಂ ಸೀಳ್ದೊಡ । ವೊಂದಕ್ಕರಮಿಲ್ಲೆನಿಪ್ಪ ಕಲ್ದೆರ್ದೆಗವಿಗಳ್ ॥
ತಲೆಯುಂ ತೂಗುವನೊರ್ವನುರ್ಬಿ ಕೆಲದೊಳ್ ಕಾಬ್ಬಿಗಬ್ಬಮಂ ಕಟ್ಟಿ ಕೋ ।
ಟಲೆಗೊಂಡೂಳ್ವನೊರ್ವನೊಲ್ದವನ ಚಾತುರ್ಯಕ್ಕೆ ಕೈವಾರಮಂ ॥
ಪೊಲಗೆಟ್ಟೀವವನೊರ್ವನಿಂತಕಟ ಯುಕ್ತೋ ಯಾದೃಶಸ್ತಾದೃಶೋ ।
ಬಲಿಯೆಂಬುಕ್ತಿಗೆ ದುರ್ವಿದಗ್ಧರೆ ವಲಂ ನೋಂತರ್ ಪೆಱರ್ ನೋಂತರೇ ॥

**ಇವನ ಗ್ರಂಥಗಳಲ್ಲಿ—**

## 1. ಲೀಲಾವತಿ.

ಇದು ಚಂಪೂಗ್ರಂಥ; 14 ಆಶ್ವಾಸಗಳಾಗಿ ಭಾಗಿಸಲ್ಪಟ್ಟಿದೆ ಈ ಗ್ರಂಥವನ್ನು **ಮಂಗರಸನು** ಶೃಂಗಾರಕಾವ್ಯವೆಂದು ಹೇಳುತ್ತಾನೆ. ಕವಿಯೂ ಇದೇ ಅರ್ಥವನ್ನು "ಮತ್ಕಾವ್ಯವಮಾ ಗಂಗೆಯ ಪೊನಲವೊಲೆಂದಿಲ್ಲಿ ಶೃಂಗಾರತೃಷ್ಣಾವಿಧುರಂ ಸಾರಜ್ಞದಿಕ್ಕುಂಜರನಿಕರನುಲಂಪಿಂದಮೋಲಾಡುಗೆಂದುಂ; ಶೃಂಗಾರಮುಂ ಕಾವ್ಯಬಂಧನದೊಳ್ ತಾಂ ಸೆಱೆಗೆಯ್ವ ವ್ಯೈಮೆ" ಎಂಬ ಭಾಗಗಳಲ್ಲಿ ಹೇಳಿದ್ದಾನೆ. ಈ ಕಾವ್ಯವನ್ನು ಒಂದು ವರ್ಷದಲ್ಲಿ ಪೂರೈಸಿದಂತೆ

ಒಂದೆ ಗಡ ಬರಿಸಕ್ಕೆ ಬರೆದಂ । ಬಗೆದಿದನೇಂ ನಿಶಿತಮತಿಯೊ ಕೃತಿಕುಲದೀಪಂ ।

ಎಂಬ ಪದ್ಯಭಾಗದಿಂದ ತಿಳಿಯುತ್ತದೆ. ಇದರ ಕಥಾಸಾರವು ಕೆಳಗೆ ಸಂಗ್ರಹಿಸಿ ಬರೆದಿದೆ:—

ಕದಂಬರಾಜರ ರಾಜಧಾನಿಯಾದ ಜಯಂತೀಪುರ ಅಥವಾ ಬನವಾಸಿ ಎಂಬ ಪಟ್ಟಣದಲ್ಲಿ ಚೂಡಾಮಣಿ ಎಂಬ ರಾಜನಿದ್ದನು. ಈತನ ಮಹಿಷಿ ಪದ್ಮಾವತಿ. ಇವರ ಮಗ

ಕಂದರ್ಪದೇವ. ಗುಣಗಂಧನೆಂಬ ಮಂತ್ರಿಯ ಮಗನಾದ ಮಕರಂದನು ಇವನ ಪ್ರಿಯ ಮಿತ್ರನು. ಕಂದರ್ಪನು ಯುವರಾಜಪಟ್ಟವನ್ನು ಹೊಂದಿ, ಒಂದು ದಿನ ರಾತ್ರಿ ಕನಸಿನಲ್ಲಿ ಒಬ್ಬ ಸ್ತ್ರೀಯನ್ನು ಕಂಡು, ಮರುದಿವಸ ಆ ಸ್ತ್ರೀಯಿರುವ ದಿಕ್ಕಿಗೆ ಮಕರಂದನೊಡನೆ ಪ್ರಯಾಣಮಾಡುತ್ತಾನೆ. ಕುಸುಮಪುರವೆಂಬ ಪಟ್ಟಣದ ದೊರೆಯಾದ ಶೃಂಗಾರಶೇಖರನ ಮಗಳಾದ ಲೀಲಾವತಿಯನ್ನೇ ಈತನು ಸ್ವಪ್ನದಲ್ಲಿ ಕಂಡುದು. ಆಕೆಯೂ ಇವನನ್ನು ಸ್ವಪ್ನದಲ್ಲಿ ಕಂಡು ಇವನನ್ನು ಹುಡುಕಲು ಜನರನ್ನು ಕಳುಹಿಸುತ್ತಾಳೆ. ಬಳಿಕ ಇವರಿಬ್ಬರಿಗೂ ವಿವಾಹವಾಗಿ, ಕಂದರ್ಪನು ಲೀಲಾವತಿಯನ್ನು ಕರೆದುಕೊಂಡು ಜಯಂತೀಪುರಕ್ಕೆ ಬಂದು ಸುಖವಾಗಿ ರಾಜ್ಯಭಾರಮಾಡುತ್ತಾನೆ.

ಈ ಕಥೆಯನ್ನು ನೋಡಿದರೆ ಈ ಗ್ರಂಥವು ಸುಬಂಧುವಿನ ವಾಸವದತ್ತೆಯನ್ನು ಅನುಸರಿಸಿರುವಂತೆ ತೋರುತ್ತದೆ.

ಈ ಗ್ರಂಥದ ಉತ್ಕೃಷ್ಟತೆಯನ್ನು ಕವಿ ಈ ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ :—

ಜತಿಗಳವಟ್ಟ ಬಣ್ಣದಿನಮರ್ಚಿ ತೊಡರ್ಚಿದ ಛಂದದಿಂದಳಂ ।
ಕೃತಿಗೆಳಸಿರ್ದ ಮಾರ್ಗದಿನಿದಿರ್ಚಿದ ರೀತಿಯನಾಳ್ವ ಧಾತುವಿಂ ॥
ಶ್ರುತಿಗೊಳಗಾದ ಮಾತಿನ ತೆರಳ್ಕೆಗಳಿಂ ರಸಗೇಯದಂತಿರೀ ।
ಕೃತಿ ಪೊಸದೇಸಿಯಿಂದೆಸೆದು ಸೋಲಿಪುದಚ್ಚರಿಯೇ ರಸಜ್ಞರಂ ॥
ಈ ಬಹಳರತ್ನರಂಜದ । ಕೂಬಾರಾವೃತಧರಿತ್ರಿಯಾಕೃತಿರತ್ನ ।
ಕ್ಕೇಬೆಲೆಯೆನಿಸಿದುದೆನೆ ಕವಿ । ತಾಬಳವಾರಳವು ಸುಕರಕವಿಶೇಖರನಾ ॥

ಕಾದಂಬರಿಯನ್ನು ಸುಡಿಸಿ ಇವನ ಲೀಲಾವತಿಗೆ ಕಪ್ಪಸಿಡಿಸಿದಂತೆ ಒಂದು ಇತಿಹಾಸವುಂಟು. ಈ ವಿಷಯವನ್ನು **ಬಾಹುಬಲಿ** (ಸು. 1560) ತನ್ನ **ನಾಗಕುಮಾರಚರಿತೆಯಲ್ಲಿಯ**

ಸುಡಿಸಿ ಕಾದಂಬರಿಯನು ಲೀಲಾವತಿ । ಗಿಡಿಸಿ ಕಪ್ಪನು ಕೀರ್ತಿ ಜಗವ ।
ಎಡೆಗೊಂಡ ನೇಮಿಚಂದ್ರನ ಚಮತ್ಕೃತಿ ಬಂ । ದಡೆಗೊಳ್ವುದೆನ್ನ ಚಿತ್ತದೊಳು ॥

ಎಂಬ ಪದ್ಯದಲ್ಲಿ ಹೇಳಿದ್ದಾನೆ. **ದೇವಚಂದ್ರನು** (1838) ತನ್ನ **ರಾಜಾವಳೀಕಥೆಯಲ್ಲಿ** ಈ ವಿಷಯವಾಗಿ ಹೀಗೆ ಬರೆದಿದ್ದಾನೆ :—

ಕಾದಂಬರಿಯೆಂಬ ಶೃಂಗಾರಕಾವ್ಯವಂ ಮಾಡಿ ದೊರೆಯುಂ ಮೆಚ್ಚಿಸಿ ಆನೆಯ ಮೇಲೇಱಿಸಿ ಬರ್ಪಲ್ಲಿ ನೇಮಿಚಂದ್ರಕವಿ ತಡೆದು ಶೃಂಗಾರಮಪ್ಪ ಲೀಲಾವತಿಯ ರಚಿಸಿ ಸಭೆಯೊಳೋದಿಸೆ * * * ಮೆಚ್ಚಿ ಕಾದಂಬರೀಕಾವ್ಯಪುಸ್ತಕಮುಂ ಸುಟ್ಟು ಲೀಲಾವತಿಗ ಕಪ್ಪನಿಡುವಲ್ಲಿ, ಕೇಳಿಕೊಂಡು ಮೊದಲೊಂದು ಓಲೆಯುಂ ಸುಡಿಸಿ ಲೀಲಾವತಿಗೆ ಕಪ್ಪನಿಡಿಸಿದರ್.

ದೇವಚಂದ್ರನು ಹೇಳುವುದನ್ನು ನೋಡಿದರೆ ನೇಮಿಚಂದ್ರನ ಕಾಲದಲ್ಲಿ ಕಾದಂಬರಿಯೆಂಬ ಗ್ರಂಥವು ಹುಟ್ಟಿದಂತೆ ತಿಳಿಯುತ್ತದೆ. ಆದರೆ ಕನ್ನಡಕಾದಂಬರಿ ಹುಟ್ಟಿ ಆ ವೇಳೆಗೆ ಸುಮಾರು 200 ವರ್ಷಗಳಾಗಿದ್ದುವು. ಆದುದರಿಂದ ಈತನು ಹೇಳುವುದು ಅಸಂಭಾವ್ಯವಾಗಿ ತೋರುತ್ತದೆ.

**ದೊಡ್ಡಯ್ಯನು** (ಸು. 1550) ತನ್ನ **ಚಂದ್ರಪ್ರಭಚರಿತದಲ್ಲಿ**—

ಬಾಣ ಪೇಳ್ದ ಕಾದಂಬರಿಕಾವ್ಯವ | ಕ್ಷೋಣಿಯುಱಿಕೆಯೊಳು ನುಡಿಸಿ |
ಮಾಣದೆ ಲೀಲಾವತಿಗೆ ಕಪ್ಪಿಡಿಸಿದ | ಜಾಣನೇಮಿಯ ಬಲಗೊಂಬೆ ||

ಎಂದು ಹೇಳುವುದರಿಂದ ಸಂಸ್ಕೃತಕಾದಂಬರಿಯನ್ನು ನುಡಿಸಿದಂತೆ ತಿಳಿಯುತ್ತದೆ. ಬಾಹುಬಲಿಯೂ ಸಂಸ್ಕೃತಕಾದಂಬರಿಯನ್ನೇ ಹೇಳಿರಬಹುದು. ಯದ್ಯಪಿ ಹೀಗೆ 16 ನೆಯ ಶತಮಾನದಲ್ಲಿ ಪ್ರತೀತಿಯಿದ್ದರೂ ಇದು ಲೀಲಾವತೀಗ್ರಂಥದ ಉತ್ಕೃಷ್ಟತೆಯನ್ನು ಹೇಳುವುದಕ್ಕಾಗಿ ಹುಟ್ಟಿರಬಹುದು.

ಗ್ರಂಥಾವತಾರದಲ್ಲಿ ಕವಿ ನೇಮಿಜಿನೇಂದ್ರನನ್ನು ಸ್ತುತಿಸಿದ್ದಾನೆ. ಬಳಿಕ ಶಾಂತಿಜಿನನನ್ನೂ ಸಿದ್ಧರನ್ನೂ ಸರಸ್ವತಿಯನ್ನೂ ಸಮಂತಭದ್ರಾಕಳಂಕಪೂಜ್ಯಪಾದರನ್ನೂ ಕವಿಗಳನ್ನೂ ಸ್ತುತಿಸಿ ಆಮೇಲೆ "ಮನೋಜನಂ ಪೊಗೞ್ವೆಂ" ಎಂದು ಕಥೆಯನ್ನು ಆರಂಭಿಸಿದ್ದಾನೆ. ಆಶ್ವಾಸಗಳ ಕೊನೆಯಲ್ಲಿ ಈ ಗದ್ಯವಿದೆ:—

ಇದು ವಿದಿತವಿವಿಧಪ್ರಬಂಧವನವಿಹಾರಪರಿಣತ ಪರಮಜಿನಚರಣರಮ್ಯಹರ್ಮ್ಯಾಚಲೋಚ್ಚಲಿತಸುಖಮಯೂಖಮಂದಾಕಿನೀಮಜ್ಜನಾಸಕ್ತ ಸಂತತೋತ್ಸಿಕ್ತದಾನಾನಂದಮುದಿತ ಬುಧಮಧುಕರಪ್ರಕರ ಕವಿರಾಜಕುಂಜರವಿರಚಿತಮಪ್ಪ ಲೀಲಾವತೀಪ್ರಬಂಧದೊಳ್.

ಈತನ ಬಂಧವು ಗಂಭೀರವಾಗಿಯೂ ಶೃಂಗಾರರಸಭರಿತವಾಗಿಯೂ ಹೃದಯಂಗಮವಾಗಿಯೂ ಇದೆ. ಇವನ ಪ್ರತಿಭೆಯೂ ಶಬ್ದಸಾಮಗ್ರಿಯೂ ವಾಗ್ಧೋರಣಿಯೂ ಅನ್ಯಾದೃಶವಾಗಿವೆ.

ಇವನ ಗ್ರಂಥಗಳಲ್ಲಿ ಸಂಸ್ಕೃತಪ್ರಾಕೃತಶ್ಲೋಕಗಳೂ ಇವೆ.

ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

ಸಿಂಹ.

ಕೆದಱಿದ ಕೇಸರಂ ಕುಸಿದ ಪಿಂದೊಗೆದೊಡ್ಡಿದ ಕಂದಮುೞ್ಕಿ ಕ|
ಟ್ಟಿದ ಬಸಿಱ್ತೆತ್ತಿದೇಕಚರಣಂ ತೆಱೆದಾನನಮಾಱ್ಕೆ ಸುತ್ತಿ ಪ ||
ತ್ತಿದ ಕುಡಿವಾಲವೊಪ್ಪೆ ಕಿವಿಗಳ್ ಕಿಱಿಸುತ್ತಿರೆ ಪಾಯ್ದು ದೇವಕೂ|
ಟದ ಕರುವಿಟ್ಟ ಕೇಸರಿವೊಲಿರ್ದುದು ಕೇಸರಿ ಕುಂಭಿಕುಂಭದೊಳ್ || 564 ||

## ಗೂಳಿ.

ಅಡೆಯುಂ ಕೋದೆತ್ತುತುಂ ಮಾರ್ದನಿಗೆ ಮುಸಗುತುಂ ದರ್ಪದಿಂ ಛಾಯೆಯೊಳ್
ಕೋ |
ಡಿಡುತುಂ ಮುನ್ನಾದ ಪುಣ್ಬಿಂತಿಣಿಗೆಱಗೆ ನೊಳಂ ತೀರ್ಣಶೃಂಗಾಗ್ರದಿಂ ಮಾ ॥
ದೊರ್ಡೆಯುತ್ತುಂ ಪಾಯ್ದು ಪಿಂಡಂ ಕಲಕಿ ಕೆಲೆಯುತುಂ ಬೆರ್ಚೆ ಬಲ್ಗೂಳಿಗ
ಳ್ ಬೆಂ |
ಗುಡೆ ಗಂಡಂ ಸೂಸುತುಂ ಬಂದುದು ಮದವಿದಳತ್ತಿಂಗಳಾಕ್ಷಂ ಮಹೋಕ್ಷಂ
॥ 565 ॥

## ಈದ ಹಸು.

ಕಱು ಪೆಱಗುೞಿದಿರೆ ಹೂಂಕೊಂ | ಡಱುಚುತ್ತುಂ ಮುಗುಱ್ದು ಮೂಸುತುಂ
ಪೊಲಸಂ ಮಾ |
ಸೊಱೆಯುತಿರೆ ಪಿಂತೆ ಕೆಚ್ಚಲ | ನಿಱುಂಕಿ ನಡೆತಂದುವೀಂದ ಪಯುಗಳ್ ಪಲ
ವುಂ॥ 566 ॥

## ಹುಲ್ಲೆ.

ನಿಮಿರ್ದ ಕೊರಲ್ ಮರಲ್ದು ಮಡಿದೂಱಿದ ಮುಂದಣ ಕಾಲ್ಗಳೆೞ್ದ ಸ |
ಶ್ಚಿಮತನು ಜೋಲ್ದರಂ ಪೆಱಗನಪ್ಪಿದ ಕೊಂಬುಗಳಾಲಿಸುತ್ತೆ ವಿ॥
ಶ್ರಮಿಸುವ ಕರ್ಣಮುಂ ಮುಗುಳ್ದ ಕಣ್ ಮಿಡುಕೋಡುವ ಕಂಠನಾಳಮುಂ |
ಪಮರ್ದಿರೆ ನೀರನುಣ್ಬರಲೆಯುಂ ಬರಲೊಲ್ಲದೆ ನೋಡಿದಂ ನೃಪಂ ॥ 567 ॥

## ನವಿಲು.

ಕಡುಬಡವಾಗಿ ಮುಂಬಯಕೆಯಿಂ ಬಿಸಿಲಟ್ಟೆ ಕರಂ ಬೞಲ್ದು ಮ |
ಲ್ಗಡುಕುಗೊಳಲ್ಕಮೊಲ್ಲದಿರೆ ಮೆಲ್ಲನೆ ತಂದು ಪೊದೞ್ದ ಪೀಲಿಯುಂ ॥
ಸಿಡಿದು ಮೊಗಕ್ಕೆ ನೀಡಿ ಕೊರಲಂ ತಿಳಿನೀರ್ಗಳನೀಂಟಿಕೊಂಡು ಬಾ |
ಯ್ವಿಡುವ ಮಯೂರಿಗೇಂ ಮುಱಿದು ನೀಡುತುಮಿರ್ದುದೊ ಸೋಗೆ ಬೇಗದಿಂ
॥ 568 ॥

## ಸಾರಿಕೆಯ ವಿರಹ.

ಗೂಡಿನ ಸುತ್ತಲುಂ ಸುೞಿಗುಮಾಲಿಸುಗುಂ ಸಱಿ ಬರ್ಪ ಬಟ್ಟೆಯಂ |
ನೋಡುಗುಮುೞ್ಗಿಮೇೞ್ಗೆಮೊಳಗಂ ಪುಗುಗುಂ ತಳಿರೊಳ್ ಪೊರಳ್ಗುಮಿ ॥
ಪೊರ್ಗೀಡಿರೆ ಬಿಟ್ಟ ಚಂಚು ಬಿಸುಸುಯ್ದಳಮಾವಿನ ಪಲ್ಲವಂಗಳಂ |
ಬಾಡಿಸುಗುಂ ಮನಂಮಱುಗಿ ಸಾರಿಕೆ ಬಾರದೊಡಾತ್ಮವಲ್ಲಭಂ ॥ 569 ॥

### ಕಲಸುಗೂಳು.

ಬಗಿದಗುೞಿಯಿಂದದಂತೆ ತೆಗೆದಾಱಿಸಿದೋಗರದೊಳ್ ಪೊದಱ್ಸಿ ಕ।
ಮ್ಮಗೆ ಕೆನೆಗೊಂಡ ಗೆಡ್ಡೆಮೊಸರಂ ಸುರಿದೇಲೆಯ ಚೂರ್ಣವಿಕ್ಕಿ ಪೊ॥
ಯ್ದೊಗುವಿಗೆ ಬೇಳೆಗೆಯ್ದು ಮೆಱಿಸಂ ತಳಿದಲ್ಲದ ಚಿಲ್ಲಿಯಂ ಪವ।
ಣ್ಬಗೆ ಕಲಸಿರ್ದ ತಣ್ಗಲಸುಗೂೞನಿಳಾಪತಿಗಿತ್ತನಱ್ತಿಯಿಂ ॥ 570 ॥

### ಸೂರ್ಯಾಸ್ತ.

ಪೂಡುವ ಕುದುರೆ ಬೆಸಂ ಕೊಂ । ಡೋಡುವ ತೇಗರ್ೊಂದೆ ಗಾಲಿ ಪೊಡೆವಂ ಪೇೞವಂ ।
ಕೇಡಿಂಗಲಸಿದೊಡಕ್ಕುಮೆ । ನೋಡಿರೆ ರವಿ ಕೆಡೆದನಸ್ತಗಿರಿಮಸ್ತಕದೊಳ್ ॥ 571 ॥

### ಗೊಲ್ಲರು.

ಪಿರಿದುಂ ಬಾಯ್ವಿಣ್ಣೆಗಿಣ್ಣೊಳ್ ತಳರಡಿಬನದೊಳ್ ಮುದ್ದುಗೋವೃಂದದೊಳ್ ಬಂ।
ಧುರಪಾಂಸುಕ್ರೀಡೆ ವತ್ಸಂಗಳೊಳನವರತಂ ಸ್ತನ್ಯಪಾನಂ ಸುಧೀನೂ॥
ತ್ಕರದೊಳ್ ತಾನಾಗೆ ಗೋವ್ಯೂಹದ ಬೞಿವೞಿಯಂ ಮುಚ್ಚಿ ಬರ್ಪಂದದಿಂದಂ।
ಬರುತಿರ್ದರ್ ವೊತ್ತದಿಂ ವಲ್ಲವರಳಕಲಲತ್ಪಲ್ಲವರ್ ಲೀಲೆಯಿಂದಂ ॥ 572 ॥

### ಸದ್ಗುಣ.

ಕಣಿಯೊಳಮೊಕ್ಕು ತಾರದೆ ಪರೀಕ್ಷೆಗೆ ಪಾರದೆ ತೂಗಿಕೊಂಡು ಕೇ।
ವಣಿಸದೆ ವೆಜ್ಜಮಂ ಕಳೆದು ಕೋಯದೆ ತಾಂ ಮುಱಿಮೆಯ್ಗೆವರ್ಪ ಸ॥
ದ್ಗುಣಮಣಿಯೆಂಬ ಭೂಷಣದಿಸಾವನಲಂಕೃತನಾ ಮಹಾತ್ಮನಂ।
ಗುಣಕೞಿಗೊಂಡು ಕೊಂಡುಕೊನೆದಾರ್ ಗಳ ಕೀರ್ತಿಸರೀಧರಿತ್ರಿಯೊಳ್ ॥ 573 ॥

## 2. ನೇಮಿನಾಥ ಪುರಾಣ.

ಇದು 22 ನೆಯ ತೀರ್ಥಕರನಾದ ನೇಮಿನಾಥನ ಚರಿತವು. ಇದನ್ನು ವೀರಬಲ್ಲಾಳನ (1173—1220) ಪ್ರಧಾನನಾದ ಸಜ್ಜೆವಳ್ಳ ಪದ್ಮನಾಭನು ಮಾಡಿಸಿದನೆಂದು "ಆ ಪದ್ಮನಾಭದೇವಂ। ಶ್ರೀಪತಿ ಪುಣ್ಯಪ್ರಭಾವದಿಂ ನೇಮಿಯ ವಿ। ದ್ಯಾಪೃಥುಳಜಲಧಿಭವಕೃತಿ । ರೂಪದ ಕೌಸ್ತುಭಕೆ ಸುಭಗವಲ್ಲಭನಾದಂ" ಎಂಬುದರಿಂದಲೂ ಆಶ್ವಾಸಾಂತ್ಯಗದ್ಯದಿಂದಲೂ ತಿಳಿಯುತ್ತದೆ. ಗ್ರಂಥದ ಆದಿ ಭಾಗದಲ್ಲಿ ಕವಿ "ಜಿನಕಥೆಯೊಳ್। ಸಂದಿಸಿ ವಸುದೇವಾಚ್ಯುತ। ಕಂದರ್ಪರ ಕಥೆಗಳನಿತುಮಂ ವಿರಚಿಸುವೆಂ" ಎಂದು ಪ್ರತಿಜ್ಞೆಮಾಡಿ ಎಂಟನೆಯ ಆಶ್ವಾಸದ ಕೊನೆಯಲ್ಲಿ ಕಂಸವಧೆಯನ್ನು ಮಾತ್ರ ಹೇಳಿ ನಿಲ್ಲಿಸಿ, ಪ್ರತಿಜ್ಞಾನುಸಾರವಾಗಿ

ಗ್ರಂಥವನ್ನು ಪೂರ್ತಿಮಾಡದೆ ಇರುವುದನ್ನು ನೋಡಿದರೆ ಅರ್ಧಗ್ರಂಥವನ್ನು ಬರೆದು ಮೃತನಾದಂತೆ ತೋರುತ್ತದೆ. ಈ ಕಾರಣದಿಂದಲೇ ಇದಕ್ಕೆ **ಅರ್ಧನೇಮಿ** ಎಂಬ ಹೆಸರು ಬಂದಿರಬಹುದು.

ಈ ಗ್ರಂಥದ ಉತ್ಕೃಷ್ಟತೆಯನ್ನು ಕವಿ ಈ ಪದ್ಯದಲ್ಲಿ ಹೇಳಿದ್ದಾನೆ:—

ರಸವೊ ರಸಾಯನವೋ ಕೃತಿ । ವಸಂತವೋ ಕಿವಿಗಳಮೃತವೋ ನೇಮಿಯ ವಾ ।
ಕ್ಪ್ರಸರಮುದಜ್ಞಿಸಕದಿಂ ನಿ । ಪ್ಪೊಗತಾದುದು ಜಗಕೆ ನೇಮಿನಾಥಪುರಾಣಂ ॥

ಹಣಕ್ಕಾಗಿ ಕೃತಿಗಳನ್ನು ಮಾಡಿ ಮಾರುವವರನ್ನು ಈ ಪದ್ಯದಲ್ಲಿ ನಿಂದಿಸಿದ್ದಾನೆ:—

ಎಣಿಸದೆ ಗುಣಮಂ ಕಾಚಿನ । ಮಣಿಯುಂ ಮಾಱುವವೊಲಹಹ ನಿನಗಂ ತನಗಂ ।
ಪಣಕೆ ಕೃತಿಯೆಂಬ ಚಿಂತಾ । ಮಣಿಯಂ ಮಾಱುವನ ಬುದ್ಧಿಗಾಂ ಬೆಱಗಾದೆಂ ॥

ಹಣದಿಂದ ಕಾವ್ಯವಾಗುವುದಿಲ್ಲವೆಂಬಂಶವನ್ನು ಈ ಪದ್ಯದಲ್ಲಿ ಹೇಳಿದ್ದಾನೆ:—

ಬೆಲೆಯಿಂದಕ್ಕುಮೆ ಕೃತಿ ಗಾ । ವಿಲ ಭುವನದ ಭಾಗ್ಯದಿಂದಮಕ್ಕುಂ ನೋಲ್ಪಂ ।
ಬೆಲೆಗೊಟ್ಟು ತಾರ ಮಧುವಂ । ಮಲಯಾನಿಲನಂ ಮನೋಜನಂ ಕೌಮುದಿಯಂ ॥

ಗ್ರಂಥಾವತಾರದಲ್ಲಿ ಕವಿ ನೇಮಿನಾಥನನ್ನು ಸ್ತುತಿಸಿದ್ದಾನೆ. ಬಳಿಕ ಸಿದ್ಧಾದಿಗಳನ್ನೂ ಯಕ್ಷಯಕ್ಷಿಯರನ್ನೂ ಗಣಧರರನ್ನೂ ಸ್ತುತಿಸಿ, ತರುವಾಯ ಗೃಧ್ರಪಿಂಛನಿಂದ ಪೂಜ್ಯಪಾದನವರೆಗೆ[1] ಗುರುಗಳನ್ನು ಹೊಗಳಿದ್ದಾನೆ. ಅನಂತರ ತನ್ನ ಸ್ವಾಮಿಯಾದ ಸಜ್ಜೆವಳ್ಳ ಪದ್ಮನಾಭನನ್ನು ಸ್ತುತಿಸಿ "ಭಕ್ತಿಯಿಂದಂ ಹರಿವಂಶಕ್ಷತ್ರಚೂಡಾಮಣಿಯ ಚರಿತಮಂ ಪೇೞಲುದ್ಯುಕ್ತನಾದೆಂ" ಎಂದು ಕಥೆಯನ್ನು ಆರಂಭಿಸಿದ್ದಾನೆ.

ಆಶ್ವಾಸಗಳ ಅಂತ್ಯದಲ್ಲಿ ಈ ಗದ್ಯವಿದೆ:—

ಇದು ಮೃದುಪದಬಂಧಬಂಧುರಸರಸ್ವತೀಸೌಭಾಗ್ಯವ್ಯಂಗ್ಯಭಂಗೀನಿಧಾನದೀಪವರ್ತಿ ಚತುರ್ಭಾಷಾಕವಿಚಕ್ರವರ್ತಿ ನೇಮಿಚಂದ್ರಕೃತಮುಂ ಶ್ರೀಮತ್ಪ್ರತಾಪಚಕ್ರವರ್ತಿ ಶ್ರೀವೀರಬಲ್ಲಾಳದೇವಪ್ರಸಾದಾಸಾದಿತಮಹಾಪ್ರಧಾನಪದವೀವಿರಾಜಿತ ಸಜ್ಜೆವಳ್ಳಪದ್ಮನಾಭದೇವಕಾರಿತಮುಮಪ್ಪ ನೇಮಿನಾಥಪುರಾಣದೊಳ್.

ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

### ತ್ರಿವಿಕ್ರಮಾವತಾರ.

ಅದೆ ಪೊಸಪೊನ್ನ ಸತ್ತಿಗೆಯದಲ್ಲದು ರತ್ನಹಟತ್ಕಿರೀಟಮ ।
ಲ್ಲದು ವರವಜ್ರಕುಂಡಲಮದಲ್ಲದು ಕೌಸ್ತುಭರತ್ನಮಂತದ ॥

---

1 ಗೃಧ್ರಪಿಂಛ, ಕುಂಡಕುಂದ, ಕವಿಪರಮೇಶ್ವರ, ಜಿನಸೇನ, ವೀರಸೇನ, ಗುಣಭದ್ರ, ಪುಷ್ಪದಂತ ಮಲಧಾರಿ, ಸಮಂತಭದ್ರ, ಅಕಳಂಕ, ಪೂಜ್ಯಪಾದ.

ಲ್ಲದು ಕರಚಕ್ರಮಲ್ಲದದು ನಾಭಿಸರೋಜಮೆನಲ್ ದಿನೇಶಬಿಂ ।
ಬದ ನೆಲೆ ತಟ್ಟಿ ತರ್ಪಿನಮನುಕ್ರಮದಿಂ ಬಳೆದಂ ತ್ರಿವಿಕ್ರಮಂ ॥ 574 ॥

ಇದು ಲೀಲಾಧೃತಭೂಕರೇಣುಕರಮಲ್ತಭ್ರೋತ್ಪಟೀಕೇತುವ ।
ಲ್ತಿದು ಸೂರ್ಯಾಂಬುಜನಾಳಮಲ್ತು ಶಶಿಲೋಕಾದೀಪಿಕಾಸ್ತಂಭಮ ॥
ಲ್ತಿದು ತಾರಾಕುಸುಮಾವಳೀವಿಟಪಮಲ್ತಭ್ರಾವನೀಶೇಷನ ।
ಲ್ತಿದೆನಲ್ ತಾಂ ಬಳೆದತ್ತನುಕ್ರಮದಿನಾಪಾದಂ ಪಯೋಜಾಕ್ಷನಾ ॥ 575 ॥

ತರುವಿಂದತ್ತತ್ತ ನೀಳ್ದಂ ಘನಪಟಳದಿನತ್ತತ್ತ ಮಿಕ್ಕಂ ಹಿಮೋರ್ವೀ ।
ಧರದಿಂದತ್ತತ್ತ ಪೋದಂ ರವಿಯ ರಥದಿನತ್ತತ್ತ ಮೆಯ್ವೆರ್ಚಿದಂ ಸು ।
ಟ್ಟುರೆಯಿಂದತ್ತತ್ತ ಮತ್ತಂ ನಿಮಿರದಿರನಿದೇನೆಂದು ಜಾತಾದ್ಭುತಂ ನೋ ।
ಟ್ಪರ ಕಣ್ಣಂ ಚೇತಮುಂ ಕಾಲ್ಗಿಡೆ ಕಡುಜವದಿಂ ವಿಷ್ಣು ವರ್ಧಿಷ್ಣುವಾದಂ ॥ 576 ॥

ಮರನಂ ಮುಟ್ಟಿದನಿಲ್ಲ ಮೇಘಘಟೆಯೊಳ್ ಕಾಲ್ಗೋದನಿಲ್ಲಿಲ್ಲ ಭೂ ।
ಧರಮಂ ದಾಂಟಿದನಿಲ್ಲ ಬಾಂದೊಜೆಯೊಳಿಟ್ಟಂ ಕಾಲನಿಲ್ಲಿಲ್ಲ ಭಾ ॥
ಸ್ಕರನಂ ಮಾಯದ ಮಾಣಿ ಸೆಂಡೊಪೆದನಿಲ್ಲಿಲ್ಲೆಂಬಿನಂ ಸೀಡಿದಂ ।
ತರದಿಂ ಪಾದಮನುರ್ವಿ ಕೊರ್ವಿ ಬಲಿಯುಂ ಗೆಲ್ವಾಮನಂ ವಾಮನಂ ॥ 577 ॥

## ಗೋವರ್ಧನೋದ್ಧಾರ.

ಪರಲಂ ಬಾರ್ತೆಗೆ ಮಾಂಟುವಂತೆ ಚರಣಾಂಗುಷ್ಠಾಗ್ರದಿಂ ಮಾಂಟಿ ಝು ।
ಲ್ಲರಿವೊಲ್ ಘಲ್ಲನೆ ಸೂಸಿ ನಿರ್ಝರಜಲಂ ಬೀಟ್ತಿರ್ಪಿನಂ ಕಾವಿನಂ ॥
ತಿರೆ ಕೊಂಡೆತ್ತಿದ ಕೆಯ್ ಮುರಾರಿ ಕೊಡೆಯುಂ ಕ್ರೀಡಾರಸಕ್ಕೆತ್ತುವಂ ।
ತಿರೆ ಕಿಟ್ತೆತ್ತಿದನೊಂದೆ ಕೆಯ್ಯೊಳೆ ಮಹಾಗೋವರ್ಧನಾದ್ರೀಂದ್ರಮಂ ॥ 578 ॥

## ಬೇಸಗೆ.

ಪಿಡಿಗಿಕ್ಕಿತ್ತು ಮೃಣಾಳಮಂ ವನಗಜಂ ಪೊಕ್ಕತ್ತು ತುಂಡಾಗ್ರದಿಂ ।
ದೊಡೆದಂಭೋಜದ ಮೊಗ್ಗೆಯಂ ಮಧುಕರಂ ಧಾರಾಗೃಹಕ್ಕಾಗಿ ಸ ॥
ಯ್ತಡಿಯೆತ್ತಿತ್ತು ನವಿಲ್ ಮರಾಳಿ ಪರಿಕಾಲೊಳ್ ಕಾಲನಿಟ್ಟತ್ತು ನೀ ।
ರ್ಗುಡಿಯಲ್ಬೇಡಿದುದಂದು ಪಂಜರಶುಕಂ ಶುಷ್ಕೀಭವತ್ತಾಳುಕಂ ॥ 579 ॥

## ಸರಸ್ಸು.

ಗಂಗೆಯ ಗೋತ್ರಮೋ ಸೊದೆಯ ಸಾರಮೊ ಬೆಳ್ಪಗೆಯೊಂದು ಬಿಟ್ತಿರ್ತ್ತಮ ।
ತ್ತಿಂಗಡಲಿರ್ದ ಬೇರೊ ಪೊಸಮುತ್ತಿನ ಪುಟ್ಟುವ ನೀರೊ ತೋರ್ಪ ಬೆ ॥
ಳ್ದಿಂಗಳ ಬಯ್ಕೆಯೋ ಬನದ ಧೀವರೆಯರ್ಕಳ ಕಣ್ಣ ಬೆಳ್ಪ ಬೆ ।
ಳ್ಪಂಗೆಡೆದತ್ತೊ ಪೇಟೆಮೆನೆ ನಿರ್ಮಲವಾದುದು ನೀರಜಾಕರಂ ॥ 580 ॥

### ವೈಶ್ಯಪುತ್ರನ ಪಾಂಡಿತ್ಯ.

ಶ್ರುತವಘು ಕೊರ್ತುರ್ ಕೊಟ್ಟು ತೆಱದಿಂದೆಸೆದಿರ್ಪುದು ನಾಟಕಪ್ರವೀ |
ಣತೆ ಕೃತಿಭಾವಕೋವಿದತೆ ಶಬ್ದಸಮಗ್ರತೆ ತರ್ಕರೀತ್ಯಭಿ ||
ಜ್ಞತೆ ನಯವಾಗ್ವಿಚಕ್ಷಣತೆ ನಾದ್ಯವಿದಗ್ಧತೆ ನರ್ತನಪ್ರಗ |
ಲ್ಭತೆ ರಸಗಾನಮುಗ್ಧತೆ ವಿಳಾಸರಸಜ್ಞತೆ ವೈಶ್ಯಪುತ್ರನಾ || 581 ||

---

## ಉರಿಲಿಂಗದೇವ. ಸು. 1170.

ಈತನು ವಚನಗಳನ್ನು ಬರೆದಿದ್ದಾನೆ. ಇವನು ವೀರಶೈವ ಕವಿ; **ಶಿವಲೆಂಕಮಂಚಣ್ಣನ**[1] (ಸು. 1160) ಮಗನೆಂದು **ನೀಲಕಂಠಾಚಾರ್ಯನ** (ಸು. 1485) ಆರಾಧ್ಯಚಾರಿತ್ರದಲ್ಲಿ ಹೇಳಿದೆ. ಈತನು ನಲ್ಲೂರಿ ಮಠದಲ್ಲಿ ಅಯ್ಯನಾಗಿದ್ದಂತೆ ತಿಳಿಯುತ್ತದೆ.

### ವಚನಗಳು.

ಇವನ ವಚನಗಳ ಸಂಖ್ಯೆ 29. ಇವುಗಳಲ್ಲಿ ಇವನ ಹೆಸರು ವ್ಯಕ್ತವಾಗಿ ಹೇಳಿದೆ. ಕೆಲವು ವಚನಗಳನ್ನು ತೆಗೆದು ಬರೆಯುತ್ತೇವೆ:—

(1) ನಲ್ಲನೊಲ್ಲೆನೆಂದು ಮುನಿದು ನಾನಡಗಲು, ಅಡಗುವೆಡೆಯೆಲ್ಲಾ ತಾನೆ ನೋಡೆಲಗವ್ವಾ. ನಲ್ಲ ನೀನಿಲ್ಲದೆಡೆಯಿಲ್ಲ ; ಅಡಗಲಿಕ್ಕಿಂಬಿಲ್ಲ. ಮುನಿದು ನಾನೇಗುವೆನು ? ಶರಣುಗತಿ ಹೊಗುವೆನು ಉರಿಲಿಂಗದೇವನ || 582 ||

(2) ಇಂಬಿನ ಚುಂಬನವಮೃತಾಹಾರ ; ಆಲಿಂಗನವೆ ಆಭರಣ ; ಸೋಂಕೆ ಸುವಸ್ತ್ರ ; ನೋಟವೆ ಕೂಟ ; ಒಡನಾಟವೆ ಅಷ್ಟಭೋಗ ; ಎನಗೆ ಉರಿಲಿಂಗದೇವನ ಕೂಟ ಪರಾತ್ಪರ ವಾಙ್ಮನೋತೀತ ಪರಮಸುಖವು || 583 ||

(3) ನಮ್ಮ ನಲ್ಲನ ಕೂಡಿದ ಕೂಟವ ಇದಿರಿಗೆ ಹೇಳಬಾರದವ್ವಾ. ನೀವೆಲ್ಲಾ ನಿಮ್ಮ ನಲ್ಲರ ಕೂಡಿದ ಸುಖವ ಬಲ್ಲಂತೆ ಹೇಳಿ. ಉರಿಲಿಂಗದೇವ ಬಂದು ನಿಱಿಗೆಯ ಸೆಱಗ ಸಡಿಲಿಸಲೊಡನೆ ನಾನೋ ತಾನೋ ಏನೆಂದಱಿಯೆನು || 584 ||

---

## ಬಿಜ್ಜಯನಾಯಕ. 1172.

ಬಿಜಾಪುರದ ಜಿಲ್ಲಾ ಮಾಡಗಿಹಾಳಿನಲ್ಲಿರುವ ಒಂದು ಶಾಸನದಲ್ಲಿ[2] ಮಾಳಿಗೆಯ ಪ್ರಭು ಬಿಜ್ಜಯನಾಯಕನನ್ನು "ವರ್ಣಕವಿತಾಪ್ರವೀಣ, ಕನ್ನಡಜಾಣ,

---

1. ಪುಟ 212. 2. *Epi. Ind.*, XV, 315.

ಸಾಹಿತ್ಯವಿದ್ಯಾಧರ" ಎಂದು ವಿಶೇಷಿಸಿ ಹೇಳಿರುವುದರಿಂದ ಈತನು ಕವಿಯಾಗಿದ್ದಿರಬೇಕು. ಆವ ಗ್ರಂಥಗಳನ್ನು ಬರೆದಿದ್ದಾನೆಯೋ ತಿಳಿಯದು. ಇವನ ಪರಂಪರೆ ಹೀಗೆ ಹೇಳಿದೆ: ಮಲ್ಲಗೌಂಡ; ಮಗ ಬಲ್ಲಗೌಂಡ; ಮಗ ಮಲ್ಲಗೌಂಡ; ಹೆಂಡತಿ ಮುದ್ದಿಯಕ್ಕ; ಮಗ ಬಿಜ್ಜಯನಾಯಕ, ಹೆಂಡತಿ ಸಾವಿತ್ರೀದೇವಿ. ಇವನು ಕಳಚುರ್ಯರಾಜನಾದ ರಾಯಮುರಾರಿ ಸೋಯಿದೇವನ ಆಳಿಕೆಯಲ್ಲಿ 1172 ರಲ್ಲಿ ಎರಡು ಶಿವಾಲಯಗಳನ್ನು ಕಟ್ಟಿಸಿ ದತ್ತಿಯನ್ನು ಬಿಟ್ಟಂತೆ ಹೇಳಿದೆ. ಈ ಶಾಸನದಿಂದ ಇವನ ಸ್ತುತಿರೂಪವಾದ ಒಂದೆರಡು ಪದ್ಯಗಳನ್ನು ತೆಗೆದು ಬರೆಯುತ್ತೇವೆ:—

ವಿದಿತಾಶಾಗಜಮಾಲೆಯಂತಿರೆ ಸಪದ್ಮಂ ಚಂದ್ರನಂತುತ್ಕಲಾ ।
ಪದಳಂ ವಾಸುಗಿಯಂತೆ ಭಾಸುರಭುಜಂಗಾಧಾರನಂಭೋಧಿಯಂ ॥
ತುದಿತಸ್ತುತ್ಯಸರಸ್ವತೀಗಣಯುತಂ ಸಾಹಿತ್ಯವಿದ್ಯಾಧರಂ ।
ವಿದಿತಂ ಬಿಜ್ಜಯನಾಯಕಂ ವಿತರಣವ್ಯಾಪಾರಕೇಳೀವಿದಂ ॥ 585 ॥

ಧನಮಂ ಸಂವರಿಪಲ್ಲಿ ಚಿಂತೆ ರಿಪುವರ್ಗಂ ತನ್ನನಾಂತಲ್ಲಿ ಭೀ ।
ತಿ ಸಿತಾಂತಂ ಸಕಲಾರ್ಥಿ ಬೇಡಿದೆಡೆಯೊಳ್ ಲೋಭಂ ದಿಟಂ ತನ್ನೊಳಿ ॥
ಲ್ಲಿನೆ ನಿಶ್ಚಿಂತತೆ ವೀರವೃತ್ತಿ ವಿಪುಲೋದಾರತ್ವಮುಂಬೀಗುಣ ।
ಕ್ಕೆನಸುಂ ಬಿಜ್ಜಯನಾಯಕಂ ಗುರುವೆನಿಪ್ಪಂ ಭೂರಿಭೂಭಾಗದೊಳ್ ॥ 586 ॥

---

## ಬೂಚಿರಾಜ. 1173.

ಶಕವರ್ಷ 1095 ರಲ್ಲಿ—ಎಂದರೆ 1173 ರಲ್ಲಿ—ಬರೆದ ಹಾಸನದ 119 ನೆಯ ಶಾಸನದಲ್ಲಿ ಈತನು ಕನ್ನಡದಲ್ಲಿಯೂ ಸಂಸ್ಕೃತದಲ್ಲಿಯೂ ಪೊನ್ನನಿಗೆ ಸಮಾನನಾದ ಪ್ರೌಢಕವಿಯಾಗಿದ್ದನೆಂದು ಹೇಳಿದೆ. ಇವನು ಜೈನಕವಿ; ವೀರಬಲ್ಲಾಳನಿಗೆ ಮಂತ್ರಿಯಾಗಿದ್ದನು; ಶ್ರೀಪಾಳತ್ರೈವಿದ್ಯನಿಂದ ಶಾಸ್ತ್ರಗಳನ್ನು ಕಲಿತನು. ಇವನ ತಾಯಿ ಸುಗ್ಗವ್ವೆ; ಹೆಂಡತಿ ಶಾಂತಲೆ. ಈತನು ತನ್ನ ಐಶ್ವರ್ಯವನ್ನು ಜಿನಪೂಜೆಗೂ ಆಹಾರಾದಿದಾನಕ್ಕೂ ವಿಶೇಷವಾಗಿ ವ್ಯಯಮಾಡಿದಂತೆ ಹೇಳಿದೆ. ಇವನನ್ನು "ಚತುರ್ವಿಧಪಾಂಡಿತ್ಯಮಂಡಿತಂ" ಎಂದೂ, "ವಾಚಕವಾಚಸ್ಪತಿ ಕವಿ। ತಾಚಾರ್ಯಂ ಶ್ರವ್ಯಕಾವ್ಯಪದ್ಯಪದಾರ್ಥಾ। ಲೋಚನಚಕ್ಷುಪರಾರ್ಥ.... ಪ್ರಿಯಹಿತಾರ್ಥವಾಚಂ ಬೂಚಂ" ಎಂದೂ ಸ್ತುತಿಸಿದೆ. ಈತನು ಆವ ಗ್ರಂಥಗಳನ್ನು ಬರೆದಿದ್ದಾನೆಯೋ ತಿಳಿಯದು.

---

## ದೇವಪಾರ್ಯ. 1174.

ಈತನು ಅರಸಿಯಕೆರೆಯ 71 ನೆಯ ಶಾಸನವನ್ನು ಬರೆದುದಾಗಿ ಆ ಶಾಸನದ ಕೊನೆಯಲ್ಲಿರುವ

ಭುವನನುತವಾಜಿವಂಶೋ । ದ್ಭವಕರವಿಭುಸೋಮನಾಥಪುತ್ರಂ ಪೇೞ್ದಂ ।
ಕವಿರಾಜಂ ಕಾಶ್ಯಪಗೋ । ತ್ರವರ್ಧನಂ ದೇವಪಾರ್ಯನೀಶಾಸನಮಂ ॥

ಎಂಬ ಪದ್ಯದಿಂದ ತಿಳಿಯುತ್ತದೆ. ಈ ಪದ್ಯದಿಂದ ಈತನು ಕಾಶ್ಯಪಗೋತ್ರದವನು, ವಾಜಿವಂಶದವನು, ಸೋಮನಾಥನ ಮಗನು ಎಂಬಂಶಗಳು ತಿಳಿಯುತ್ತವೆ. ಮೇಲಣ ಶಾಸನವು ಶಕ 1096 ರಲ್ಲಿ—ಎಂದರೆ 1174 ರಲ್ಲಿ—ಬರೆದುದು. ಇದರಲ್ಲಿ ವೀರಬಲ್ಲಾಳನ ಪ್ರಧಾನನಾದ ಹರಿಹರನು ಅರಸಿಯಕೆರೆಯಲ್ಲಿ ಕಟ್ಟಿಸಿದ ಕೇಶವದೇವಸ್ಥಾನಕ್ಕೆ ಮಹಾಪ್ರಧಾನನು ದತ್ತಿಯನ್ನು ಬಿಟ್ಟಂತೆ ಹೇಳಿದೆ.

ಇದರಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

### ಕೇಶವದೇವರು.

ಶ್ರೀಪಾದಾಂಬುಜಯುಗ್ಮಮತ್ಯಮಲಗಂಗಾಸೂತಿಕಾಗೇಹಮಾ ।
ಯ್ತಾಪಂಕೇರುಹಪೀಠನುದ್ಭವಗೃಹಂ ಶ್ರೀನಾಭಿಯಾಯ್ತೂರ್ಜಿತ ॥
ಶ್ರೀಪತ್ನೀಪ್ರಥಮಾಸ್ಪದಂ ವಿಪುಳವಕ್ಷಂ ತಾನದಾಯ್ತೆಂದೊಡಿ ।
ನ್ನಾಪೂರ್ಣೋನ್ನತಕೇಶವಪ್ರಭುತೆಯಂ ಬಣ್ಣಿಪ್ಪನೇವಣ್ಣಿಪಂ ॥ 587 ॥

### ನರಸಿಂಹನೃಪ.

ತತ್ತನಯಂ ನರಸಿಂಹನೃ । ಪೋತ್ತಮನುದ್ವೃತ್ತಪ್ರತಾಪನಹಿತನೃಪಾಳಿಯೋ ।
ನ್ಮತ್ತೇಭಕುಂಭಿದಳನಾ । ಯತ್ತಾಯತಖಡ್ಗಕಳಿತನಿಜದೋರ್ದಂಡಂ ॥ 588 ॥

### ವೀರಬಲ್ಲಾಳ.

ಕರಿನಕ್ರಾಭೀಳಹೇಷಾರವಯುತಹಯುಸಂದೋಹವೀಚೀಪದಾತಿ ।
ಸ್ಫುರದುತ್ಪಾಲೀನಕೋಳಾಹಳಸಮರಮಹಾಂಭೋಧಿಯೊಳ್ ತನ್ನದೋರ್ಮ್ಮಂ ॥
ದರದಿಂದಂ ಮಂಥನಾರಂಭಮನೊದವಿಸಿ ವೈರಿಕ್ಷ್ಮಾಪಾಳಲಕ್ಷ್ಮೀ ।
ಕರಿಜಾತ್ಯಶ್ವಂಗಳಂ ಕೊಂಡತುಳಬಳಯುತಂ ವೀರಬಲ್ಲಾಳಭೂಪಂ ॥ 589 ॥

ಸುರರಾಜೇಭಂ ಮದಾಂಧಂ ಮಧುಪಕುಳಯುತಂ ಪುಂಡರೀಕಂ ಸದಾಸೀ ।
ಚರತಂ ಗಂಗಾಪ್ರದಂ ಚಂದ್ರನ ರುಚಿ ಸಲೆ ದೋಷಾವಿಳಂ ತಾನೆನಲ್ ಪೇೞಲ್ ॥
ದೊರೆಯೇ ಬಲ್ಲಾಳಭೂಪಾಳನ ವಿಶದಯಶೋಲಕ್ಷ್ಮಿಯೊಳ್ ವರ್ಣಸಾಮ್ಯಂ ।
ಪಿರಿದುಂ ತಾನಾದೊಡಂ ನಿರ್ಮಳಗುಣದಿನವಂ ಪೋಲಿಸಲ್ ಬಲ್ಲನಾವಂ ॥ 590 ॥

---

## ಶಾರದಿನಾಥಪಂಡಿತ. 1174.

ಈತನು ಅರಸಿಯಕೆರೆಯ 112 ನೆಯ ಶಾಸನವನ್ನು ಬರೆದುದಾಗಿ ಆ ಶಾಸನದ ಕೊನೆಯಲ್ಲಿರುವ "ಚಬ್ಬರಾಜನ ಪುತ್ರ ಶಾರದಿನಾಥಪಂಡಿತರು ಹೇೞ್ದ ಸಾಸನ" ಎಂಬ ವಾಕ್ಯದಿಂದ ತಿಳಿಯುತ್ತದೆ. ಈ ಶಾಸನವು ಶಕ 1096 ರಲ್ಲಿ—ಎಂದರೆ 1174 ರಲ್ಲಿ—ಬರೆದುದು. ಇದರಲ್ಲಿ ಕೆಲ್ಲಂಗೆರೆಯ ಚೆನ್ನಕೇಶವದೇವರಿಗೆ ಶ್ರೀಕರಣದ ಹೆಗ್ಗಡೆ ಕೇತಯಣ್ಣನು ದತ್ತಿಯನ್ನು ಬಿಟ್ಟಂತೆ ಹೇಳಿದೆ. ಈ ಶಾಸನವು ಬಹಳ ಮಟ್ಟಿಗೆ ಲುಪ್ತವಾಗಿ ಹೋಗಿರುವುದರಿಂದ ಪದ್ಯಗಳನ್ನು ಉದ್ಧರಿಸಿ ಬರೆಯಲಾಗಲಿಲ್ಲ.

---

## ರೇಚಣಮಂತ್ರಿ. 1174.

ಅರಸಿಯಕೆರೆಯ 69 ನೆಯ ಶಾಸನದಲ್ಲಿ (ಶಕ 1096) ಈತನಿಗೆ 'ಸಾಹಿತ್ಯವಿದ್ಯಾಧರ' ಎಂಬ ಬಿರುದು ಹೇಳಿದೆ. ಬೆಂಗಳೂರಲ್ಲಿ ಅಚ್ಚಾಗಿರುವ 'ನೀತಿಸಾರ' ಎಂಬ ಗ್ರಂಥದಲ್ಲಿ ಒಂದು ಪದ್ಯದಲ್ಲಿ[1] **ದುರ್ಗಸಿಂಹ, ರುದ್ರಭಟ್ಟ, ಅಗ್ಗಳ** ಮೊದಲಾದ ಕವಿಗಳ ಗೋಷ್ಠಿಯಲ್ಲಿ **ರೇಚುಗ** ಎಂಬ ಒಬ್ಬ ಕವಿಯ ಹೆಸರು ಹೇಳಿದೆ. ಇವನೇ ಆಗಿರಬಹುದೋ ಏನೋ ತಿಳಿಯದು. ಮೇಲಣ ಶಾಸನದಿಂದ ಈ ರೇಚಣಮಂತ್ರಿಯ ಸ್ತುತಿರೂಪವಾದ ಈ ಪದ್ಯವನ್ನು ತೆಗೆದು ಬರೆಯುತ್ತೇವೆ :—

ಕುಲವುಂ ಪೇೞ್ದೊಡೆ ವಾಜಿವಂಶತಿಲಕಂ ಸನ್ಮಂತ್ರಮಂತ್ರಿತ್ವದೊಳ್ ।
ಪಲರುಂ ಜೀಯೆನೆ ದೇವಮಂತ್ರಿಯೊಲವಂ ಸಲ್ಲೀಲೆಯಿಂ ತೋಱುವಂ ॥
ಚಲದಿಂದಾಂತರನಿಕ್ಕಿ ಮೆಟ್ಟಿ ಪಡೆವಂ ಸತ್ಕೀರ್ತಿಯಂ ಧಾತ್ರಿಯೊಳ್ ।
ನಲವಿಂ ರೇಚಣಮಂತ್ರಿಯಾರ್ಗಮಧಿಕಂ ಸಾಹಿತ್ಯವಿದ್ಯಾಧರಂ ॥

---

## ಕೇಶವರಾಜ ಮತ್ತು ಚಾವಣ. ಸು. 1180.

ಈ ಕವಿಗಳಿಬ್ಬರೂ ಸೇರಿ ವರ್ಧಮಾನಪುರಾಣವೆಂಬ ಗ್ರಂಥವನ್ನು ಉಪಕ್ರಮಿಸಿದಂತೆಯೂ ಈ ಕೇಶವರಾಜನ ಮಗನಾದ ವಾಣೀವಲ್ಲಭನೆಂಬ ಬಿರುದುಳ್ಳ **ಆಚಣ್ಣನು**[2] ಆ ಗ್ರಂಥವನ್ನು ವಿಸ್ತರಿಸಿ ಪೂರ್ತಿಮಾಡಿದಂತೆಯೂ ತಿಳಿಯು

---

1 ಪುಟ 150.

2 ಆಚಣ್ಣನ ಚರಿತೆಯನ್ನು ನೋಡಿ.

ಬರುತ್ತದೆ. ಇವರು ಮತ್ತಾವ ಗ್ರಂಥಗಳನ್ನು ಬರೆದಿದ್ದಾರೆಯೋ ತಿಳಿಯದು. ಈ ಕೇಶವರಾಜನು ವಸುಧೈಕಬಾಂಧವ ರೇಚಣಚಮೂಪತಿಯ ಇಷ್ಟಾನುಸಾರವಾಗಿ ವರ್ಧಮಾನಪುರಾಣವನ್ನು ಬರೆಯಲುಪಕ್ರಮಿಸಿದಂತೆ ಈ ಗ್ರಂಥದಿಂದಲೇ ತಿಳಿಯುತ್ತದೆ.

---

## ರುದ್ರಭಟ್ಟ. ಸು. 1180.

ಈತನು ಜಗನ್ನಾಥವಿಜಯವನ್ನು ಬರೆದಿದ್ದಾನೆ. ರಸಕಲಿಕೆಯೆಂಬ ಒಂದು ಗ್ರಂಥವನ್ನು ಈತನು ಬರೆದಿರುವಂತೆ **ಸಾಳ್ವನು** (ಸು. 1550) ತನ್ನ ರಸರತ್ನಾಕರದಲ್ಲಿ ಹೇಳುತ್ತಾನೆ. ಈ ರಸಕಲಿಕೆ ನಮಗೆ ದೊರೆತಿಲ್ಲ.

ರುದ್ರಭಟ್ಟನು, ರಾಜಶೇಖರವಿಳಾಸವೇ ಮೊದಲಾದ ಗ್ರಂಥಗಳನ್ನು ಬರೆದು ಪ್ರಸಿದ್ಧನಾಗಿದ್ದ ಷಡಕ್ಷರಿಯನ್ನು ತನ್ನ ಕವಿತಾಚಾತುರಿಯಿಂದ ಮೀರಬೇಕೆಂದುದ್ದೇಶಿಸಿ 1689 ರಲ್ಲಿ ಜಗನ್ನಾಥವಿಜಯವನ್ನು ಬರೆದಂತೆಯೂ, ವಿದ್ವಾಂಸರೆಲ್ಲರೂ ಇವನ ಗ್ರಂಥವನ್ನು ನೋಡಿ ರಾಜಶೇಖರವಿಳಾಸಕ್ಕೆ ಇದು ಸಮಾನವಾಗಲಾರದೆಂದು ಹೇಳಲು ಪರಿಭವಕ್ಕೆ ಗುರಿಯಾದಂತೆಯೂ, ಷಡಕ್ಷರಿ ತಾನು ಕಿತ್ತುಕೊಂಡಿದ್ದ ಈತನ ಬಿರುದುಗಳನ್ನು ಪುನಃ ದಯೆಯಿಂದ ಕೊಟ್ಟು ಮನ್ನಿಸಿದಂತೆಯೂ, ಬಳಿಕ ರುದ್ರಭಟ್ಟನ ಸ್ನೇಹಿತನಾದ ಲಕ್ಷ್ಮೀಶನು ಬ್ರಾಹ್ಮಣರಿಗುಂಟಾದ ಅಸಮಾನವನ್ನು ಹೋಗಲಾಡಿಸಬೇಕೆಂಬ ಅಭಿಪ್ರಾಯದಿಂದ 1691 ರಲ್ಲಿ ಜೈಮಿನಿಭಾರತವನ್ನು ಬರೆದು ವಿದ್ವಾಂಸರಿಂದ 'ಕವಿಚೂತಚೈತ್ರ' ನೆಂಬ ಬಿರುದನ್ನು ಪಡೆದಂತೆಯೂ, ಒಂದು ಇತಿಹಾಸವುಂಟು. ಈ ವಿಷಯವನ್ನು ಹೇಳುವ ಈ ಪದ್ಯಗಳು ಮಿ॥ ರೈಸ್ ಮುದ್ರಿಸಿರುವ ಭಾಷಾಭೂಷಣದ ಪೀಠಿಕೆಯಲ್ಲಿ (32 ನೆಯ ಪುಟ.) ಕೊಟ್ಟವೆ :—

ಶಿವಕಲಾಬ್ಧಶಕಶುಕ್ಲವರ್ಷಮಾ । ಧವಸಿತಾರ್ಕದಿನಜೀವವಾರದೊಳ್ ।
ಭುವಿಗೆಲ್ಲ ವರರುದ್ರಭಟ್ಟನೇ । ಕವಿಯೆನಲ್ಬೊರೆದನೊಂದು ಕಾವ್ಯಮಂ ॥
ಅಜಸಲ್ ಜಗನ್ನಾಥವಿಜಯಮನಿಪಾಕಬ್ಬ ।
ಮುರುದೋಷಪೂಗಪರಿಚಿತವಾಗೆ ಲಾಕ್ಷಣಿಕ ।
ವರರದಂ ರಾಜಶೇಖರವಿಳಾಸಕೆ ಪಡಿಯನೊರೆಯದಿರೆ ರುದ್ರಭಟ್ಟಂ ॥
ಪರಿಭವಕೆ ಗುರಿಯಾದನೆಂದು ಸಭಿಕರ್ ಪೇಳ್ವ ।
ಪರಿಯರಿತು ಕರುಣದಿಂದಾಷಡಕ್ಷರಿದೇವ ।
ಬಿರುದುಗಳ ಕೊಂಡು ಮಗುಳಿತ್ತು ಮನ್ನಿಸೆ ಪೊರೆದನದ ಕೇಳಿ ಲಕ್ಷ್ಮೀಶನು ॥
ಹರಿಚರಿತದಿಂ ಕೂಡಿ ಹರಿಮೇಧಪರ್ವಕಥೆ ।
ಯೊರೆದ ವಾರ್ಧಕಷಟ್ಪದಿಗಳಿಂದ ಜೈಮಿನಿಯ ।
ವರಸೂಕ್ತಿತಾತ್ಪರ್ಯಭರಗರ್ಭಿತಮದಾಗೆ ರಸಿಕರ್ಕಳನುಮೋದಿಸಲ್ ॥

ಪರಿಪರಿಯಲಂಕಾರರಸಭಾವಪುಷ್ಟಿಯಿಂ ।
ಮೆಱೆದುದು ಗುಣೇಂದುಕಲೆಪರಿಮಿತಾಬ್ದದ ಶಕದಿ ।
ಹರಿವಾರಕಾರ್ತಿಕದ ಸಿತಪಂಚಮಿಪ್ರಜಾಪತಿಶರದಿ ಸಾಂಗಮೆನಲು ॥
ಕನ್ನಡಗಬ್ಬಿಗರಾತನ । ಮನ್ನಿಸಿ ಲಕ್ಷ್ಮೀಶನೊರ್ವನೇ ಕವಿರತ್ನಂ ।
ಸನ್ನುತನೆಂದುರುಬಿರುದಂ । ಚೆನ್ನದಿ ಕವಿಚೂತಚೈತ್ರನೆನೆ ಬರೆದಿತ್ತರ್ ॥

1604 ರಲ್ಲಿ ರಚಿತವಾದ ಭಟ್ಟಾಕಳಂಕನ ಶಬ್ದಾನುಶಾಸನದಲ್ಲಿ ಜಗನ್ನಾಥ ವಿಜಯದ ಪದ್ಯಗಳು ಉದಾಹೃತವಾಗಿರುವುದರಿಂದ ಮೆ॥ ರೈಸ್ ಮೇಲಣ ಇತಿಹಾಸ ವನ್ನು ನಂಬದೆ ಶಬ್ದಾನುಶಾಸನದ ಅವತರಣಿಕೆಯಲ್ಲಿ (ಪುಟ 43) ರುದ್ರಭಟ್ಟನ ಕಾಲ ವನ್ನು ಹೇಳದೆ ಅವನ ಹೆಸರನ್ನು ಭಟ್ಟಾಕಳಂಕನ ಹೆಸರಿಗೆ ಹಿಂದೆ ಹಾಕಿದ್ದಾರೆ.

ಈ ಕವಿ ಸುಮಾರು 1180 ರಲ್ಲಿ ಇದ್ದಿರಬೇಕೆಂದು ಊಹಿಸುವುದಕ್ಕೆ ಪ್ರಬಲ ವಾದ ಕಾರಣಗಳು ದೊರೆತಿವೆ.

ಮಲ್ಲಿಕಾರ್ಜುನನು (ಸು. 1245) ತನ್ನ ಸೂಕ್ತಿಸುಧಾರ್ಣವದಲ್ಲಿ ಜಗನ್ನಾಥ ವಿಜಯದಿಂದ ಅನೇಕಪದ್ಯಗಳನ್ನು ಉದ್ಧರಿಸಿ ಬರೆದಿರುವುದರಿಂದ ಈ ಕವಿ 1245 ಕ್ಕೆ ಹಿಂದೆ ಇದ್ದನೆಂಬುದು ವ್ಯಕ್ತವಾಗುತ್ತದೆ. ಅಲ್ಲದೆ, ದೇವಕವಿ (ಸು. 1200) ತನ್ನ ಕುಸುಮಾವಳಿಯಲ್ಲಿ ರುದ್ರಭಟ್ಟನನ್ನೂ ಪೂರ್ವಕವಿಗಳ ಗೋಷ್ಠಿಯಲ್ಲಿ ಸೇರಿಸಿ ಸ್ತುತಿಸು ವುದರಿಂದ ಈತನು 1200 ಕ್ಕೆ ಹಿಂದೆ ಇದ್ದಿರಬೇಕು. ಇವನು ಕರ್ಣಪಾರ್ಯನನ್ನು (ಸು. 1140) ಸ್ತುತಿಸುವುದರಿಂದ 1140 ಕ್ಕೆ ಈಚೆ ಇದ್ದಿರಬೇಕು. ಆದುದರಿಂದ ಈ ಕವಿ 1140 ಕ್ಕೆ ಈಚೆಯೂ 1200 ಕ್ಕೆ ಹಿಂದೆಯೂ ಇದ್ದಿರಬೇಕೆಂಬುದು ಸ್ಪಷ್ಟವಾಗು ತ್ತದೆ. ಇವನು 1173 ರಿಂದ 1220ರ ವರೆಗೆ ರಾಜ್ಯಭಾರಮಾಡಿದ ವೀರಬಲ್ಲಾಳನ ಕಾಲ ದಲ್ಲಿ ಈ ಗ್ರಂಥವನ್ನು ಬರೆದನೆಂದು ಅವನ ಗ್ರಂಥದಿಂದಲೇ ತಿಳಿಯುತ್ತದೆ.

(1) "ಚಂದ್ರಮೌಳಿಪ್ರಮುಖನಿಖಿಲವಿದ್ವಜ್ಜನಂ ಮೆಚ್ಚೆ ಪೇೞ್ವೆಂ"

ಎಂಬುದರಿಂದ ಈ ಗ್ರಂಥರಚನಾಕಾಲದಲ್ಲಿ ಪ್ರಸಿದ್ಧನಾದ ಚಂದ್ರಮೌಳಿಯೆಂಬ ಒಬ್ಬ ವಿದ್ವಾಂಸನು ಇದ್ದಂತೆ ತಿಳಿಯುತ್ತದೆ. ಚಂದ್ರಮೌಳಿಯೆಂಬ ಹೆಸರುಳ್ಳ ವಿದ್ವಾಂಸನಾದ ಒಬ್ಬ ಬ್ರಾಹ್ಮಣನು ವೀರಬಲ್ಲಾಳನ ಮಂತ್ರಿಯಾಗಿದ್ದಂತೆ 1181 ರಲ್ಲಿ ಬರೆದ ಶ್ರ. ಬೆ. 327 ನೆಯ ಶಾಸನದಲ್ಲಿಯು

ವರತರ್ಕಾಂಬುಜಭಾಸ್ಕರಂ ಭರತಶಾಸ್ತ್ರಾಂಭೋಧಿಚಂದ್ರಂ ಸಮು ।
ದ್ಧುರಸಾಹಿತ್ಯಲತಾಲವಾಲನೆಸೆದಂ ನಾನಾಕಳಾಕೋವಿದಂ ॥
ಸ್ಥಿರಮಂತ್ರಂ ದ್ವಿಜವಂಶಶೋಭಿತನಶೇಷಸ್ತುತ್ಯನುದ್ಯದ್ಯಶಂ ।
ಧರೆಯೊಳ್ ವಿಶ್ರುತಚಂದ್ರಮೌಳಿಸಚಿವಂ ಸೌಜನ್ಯಜನ್ಮಾಲಯಂ ॥

ಪತಿಭಕ್ತಂ ವರಮಂತ್ರಶಕ್ತಿಯುತನಿಂದ್ರಂಗೆಂತು ಭಾಸ್ವದ್ಬೃಹ ।
ಸ್ಪತಿ ಮಂತ್ರೀಶ್ವರನಾದನಂತೆ ವಿಳಸದ್ಬಲ್ಲಾಳದೇವಾವನೀ ॥
ಪತಿಗೀವಿಶ್ರುತಚಂದ್ರಮೌಳಿವಿಬುಧೇಶಂ ಮಂತ್ರಿಯಾದಂ ಸಮು ।
ನ್ನತತೇಜೋನಿಲಯಂ ವಿರೋಧಿಸಚಿವೋನ್ಮತ್ತೇಭಪಂಚಾನನಂ ॥

ಎಂಬ ಪದ್ಯಗಳಿಂದ ತಿಳಿಯುತ್ತದೆ.

(2) ಈತನು ಬ್ರಹ್ಮರುದ್ರಸೂರ್ಯರನ್ನು ಸ್ತುತಿಸುವ ಆದಿಪದ್ಯಗಳಲ್ಲಿ ಆದಿಪಂಪರನ್ನರಂತೆಯೇ ಶ್ಲೇಷೆಯಿಂದ ತನ್ನ ಸ್ವಾಮಿಯನ್ನೂ ಕೂಡ ಸ್ತುತಿಸುವಂತೆ ತೋರುತ್ತದೆ. ಮೂರನೆಯ ಪದ್ಯದಲ್ಲಿ ರುದ್ರನಿಗೂ ತನ್ನ ರಾಜನಿಗೂ ಹೊಂದುವಂತೆ 'ಅರಿಕಾಮಧ್ವಂಸಿ' 'ರಾಜರಾಜಪ್ರತಿಷ್ಠಾನಿರತಂ' 'ಉಮಾಕಾಮಿನೀಜೀವಿತೇಶಂ' ಎಂಬ ವಿಶೇಷಣಗಳನ್ನು ಪ್ರಯೋಗಿಸಿದ್ದಾನೆ. ವೀರಬಲ್ಲಾಳನು ಉಚ್ಚಂಗಿಕೋಟೆಯನ್ನು ಸ್ವಾಧೀನಪಡಿಸಿಕೊಂಡು ಅಲ್ಲಿಯ ರಾಜನಾದ ಕಾಮನನ್ನು ಸೆರೆಹಿಡಿದಂತೆ ಮೇಲೆ ಹೇಳಿದ ಶಾಸನದ—

ಚಿರಕಾಲಂ ರಿಪುಗಳ್ಗಸಾಧ್ಯಮೆನಿಸಿರ್ದುಚ್ಚಂಗಿಯಂ ಮುತ್ತಿ ದು ।
ರ್ಧರತೇಜೋನಿಧಿ ಮೂಳಿಗೋಂಟೆಯನೆ ಕೊಂಡಾಕಾಮದೇವಾವನೀ ॥
ಶ್ವರನಂ ಸಂದೊಡೆಯಕ್ಕಿತೀಶ್ವರನನಾಭಂಡಾರಮಂ ಸ್ತ್ರೀಯರಂ ।
ತುರಗವ್ರಾತಮುಮಂ ಸಮಂತು ಪಿಡಿದಂ ಬಲ್ಲಾಳಭೂಪಾಳಕಂ ॥

ಎಂಬ ಪದ್ಯದಿಂದ ಗೊತ್ತಾಗುತ್ತದೆ.

ಹೊಯ್ಸಳರಾಜರಿಗೆ 'ಚೋಳರಾಜಪ್ರತಿಷ್ಠಾಚಾರ್ಯ' ಎಂಬ ಬಿರುದು ಅನೇಕ ಶಾಸನಗಳಲ್ಲಿ ದೊರೆಯುತ್ತದೆ. ರಾಜರಾಜ ಎಂಬ ಹೆಸರುಳ್ಳ ಮೂವರು ಚೋಳರಾಜರಿದ್ದರು. ಇವರಲ್ಲಿ 3 ನೆಯವನು ಹೊಯ್ಸಳರಾಜರ ಸಹಾಯದಿಂದ ಕಳೆದುಕೊಂಡಿದ್ದ ಸಿಂಹಾಸನವನ್ನು ಪುನಃ ಪಡೆದನು.

ವೀರಬಲ್ಲಾಳನಿಗೆ ಉಮಾದೇವಿಯೆಂಬವಳು ಮಹಿಷಿಯಾಗಿದ್ದಂತೆ ಅನೇಕ ಶಾಸನಗಳಿಂದ[1] ತಿಳಿಯಬರುತ್ತದೆ.

ಆದುದರಿಂದ ಈ ವಿಶೇಷಣಗಳು ವೀರಬಲ್ಲಾಳನಿಗೆಯೇ ಅನ್ವಯಿಸುತ್ತವೆ. ಈ ಕಾರಣದಿಂದ ಕವಿ ಹೇಳುವ ಚಂದ್ರಮೌಳಿ ಈ ದೊರೆಯ ಮಂತ್ರಿಯಾದ ಚಂದ್ರಮೌಳಿಯೇ ಎಂಬುದರಲ್ಲಿ ಸಂಶಯವಿಲ್ಲ.

**ಈ ಕಾರಣಗಳಿಂದ ರುದ್ರಭಟ್ಟನು ವೀರಬಲ್ಲಾಳನ ಕಾಲದಲ್ಲಿ ಸುಮಾರು 1180 ರಲ್ಲಿ ಇದ್ದಿರಬೇಕು.**

---

1. ಅರಸೀಯಕೆರೆ— 40, 77, 85, 90, 93; ಚನ್ನರಾಯಪಟ್ಟಣ— 172.

ಈತನು ಬ್ರಾಹ್ಮಣ ಕವಿ; ಇವನಿಗೆ ಕೃತಿಶಾರದಾಭ್ರಚಂದ್ರಾತಪ, ಕವಿರಾಜ ಎಂಬ ಬಿರುದುಗಳಿದ್ದಂತೆ ತೋರುತ್ತದೆ.

ತನಗೆ ಹಿಂದೆ ಇದ್ದ ಸಂಸ್ಕೃತಕವಿಗಳಲ್ಲಿ ವಾಲ್ಮೀಕಿ. ವ್ಯಾಸ, ಹರ್ಷ, ಬಾಣ, ಮಾಘ, ಕಾಳಿದಾಸ ಇವರುಗಳನ್ನು ಸ್ತುತಿಸಿ ಬಳಿಕ ಕನ್ನಡಕವಿಗಳನ್ನು ಈ ಪದ್ಯದಲ್ಲಿ ಹೇಳಿದ್ದಾನೆ:—

ಇನಿತುಮುವಿರ್ಕೆ ಮತ್ಕೃತಿಯೊಳೀಧರ ಬಣ್ಣಿಸೆ ಸಂದ ಶಂಖವ |
ರ್ಮನ ಬಗೆ ಶಾಂತಿವರ್ಮನ ನಯಂ ಗುಣವರ್ಮನ[1] ಬಂಧಗೌರವಂ ||
ಮನಸಿಜನೋಜೆ ಕಣ್ಣಪನ ಜಾಣ್ನುಡಿ ಪಂಪನ ರೀತಿ ಚಂದ್ರಭ |
ಟ್ಟನ ಜತಿ ಪೊನ್ನಮಯ್ಯನ ಚೆಡಂಗು ಗಜಾಂಕುಶನುಳ್ಳ ಬಿನ್ನಣಂ ||

ಈತನನ್ನು **ಚೌಂಡರಸ** (ಸು. 1300), **ಸಾಳ್ವ** (ಸು. 1550), **ಚಿಕ್ಕುಪಾಧ್ಯಾಯ** (1672) ಮೊದಲಾದ ಕವಿಗಳು ಸ್ಮರಿಸಿದ್ದಾರೆ.

ತನ್ನ ಕವಿತಾಚಾತುರಿಯನ್ನು ಈ ಪದ್ಯದಲ್ಲಿ ಹೇಳಿಕೊಂಡಿದ್ದಾನೆ:—

ಇನಿಯಳ ಸೋಂಕಿನಂತೆ ಪೊಸಮಾವಿನ ಪೂವಿನ ಜೊಂಪದಂತೆ ಚಂ |
ದನರಸದಣ್ಪಿನಂತೆ ನನೆಯೇಱದ ಮಲ್ಲಿಗೆಯಂತೆ ಪೂರ್ಣಚಂ ||
ದ್ರನ ಸಿರಿಯಂತೆ ಬಂದೆಸಪ ತೆಂಕಣ ತಂಬೆಲರಂತೆ ರುದ್ರಭ |
ಟ್ಟನ ಕವಿತಾರಸಂ ಮನಮನಿರ್ಕುಳಿಗೊಳ್ಳುದು ಸಜ್ಜನರ್ಕಳಾ ||

ಇವನ ಗ್ರಂಥ

## ಜಗನ್ನಾಥವಿಜಯ.

ಇದು ಚಂಪೂರೂಪವಾಗಿದೆ; 18 ಆಶ್ವಾಸಗಳಾಗಿ ಭಾಗಿಸಲ್ಪಟ್ಟಿದೆ. ಇದರಲ್ಲಿ ಕೃಷ್ಣನ ಜನನ ಮೊದಲುಗೊಂಡು ಬಾಣಾಸುರಯುದ್ಧದವರೆಗೆ ವಿಷ್ಣುಪುರಾಣದ ಕಥೆ ಹೇಳಿದೆ.

ಕವಿ, ತನ್ನ ಗ್ರಂಥವು "ಅನವದ್ಯಂ ರೀತಿಚೋದ್ಯಂ ಸಕಲವಿಬುಧಹೃದ್ಯಂ" ಎಂದು ಹೇಳಿಕೊಂಡಿದ್ದಾನೆ.

ಗ್ರಂಥಾವತಾರದಲ್ಲಿ ಕೃಷ್ಣನನ್ನು ಸ್ತುತಿಸಿದ್ದಾನೆ. ಬಳಿಕ ಬ್ರಹ್ಮ, ರುದ್ರ, ಸೂರ್ಯ, ಗಣಪತಿ, ಸರಸ್ವತಿ ಇವರುಗಳನ್ನು ಸ್ತುತಿಸಿ, ಆಮೇಲೆ ಸಂಸ್ಕೃತ ಕರ್ಣಾಟಕ ಕವಿಗಳನ್ನು ಹೊಗಳಿ, ಗ್ರಂಥವನ್ನು ಆರಂಭಿಸಿದ್ದಾನೆ. ಆಶ್ವಾಸಗಳ ಕೊನೆಯಲ್ಲಿ ಈ ಗದ್ಯವಿದೆ:—

1. ಗುಣನಂದಿಯ ಎಂದು ಪಾಠಾಂತರ.

ಇದು ಸಮಸ್ತಕಮಳಭವಾಂಡಮಾಲಾಘಟೀಘಟಿತಾರಘಟ್ಟಘಟನಾಸ್ವತಂತ್ರ ನಿಜಸ್ವರೂಪನಿರೂಪಣಚಕಿತಸಕಳಾಮ್ನಾಯತಂತ್ರ ಲಕ್ಷ್ಮೀಕಾಂತಶ್ರೀಪಾದಭಕ್ತಿಯುಕ್ತ ಸುಕವೀಂದ್ರ ರುದ್ರಪ್ರಣೀತ ಶ್ರೀಜಗನ್ನಾಥವಿಜಯಮಹಾಪ್ರಬಂಧದೊಳ್.

ಈ ಕವಿಯ ಬಂಧವು ಪ್ರೌಢವಾಗಿಯೂ ಬಹಳಮಟ್ಟಿಗೆ ಜೈನಸರಣಿಯನ್ನು ಅನುಸರಿಸಿಯೂ ಇದೆ. ಇವನ **ಗ್ರಂಥದಿಂದ** **ಮಲ್ಲಿಕಾರ್ಜುನ** (ಸು. 1245), **ಅಭಿನವವಾದಿವಿದ್ಯಾನಂದ** (1533), **ಭಟ್ಟಾಕಳಂಕ** (1604) ಮೊದಲಾದವರು ಪದ್ಯಗಳನ್ನು ಅನುವಾದಮಾಡಿದ್ದಾರೆ.

ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ :—

### ವರ್ಷಾಕಾಲ.

ಮನದನುರಾಗದಿಂ ನೆಗೆದು ನೀಡಿದ ಕಂಠಮುರಲ್ದು ತುಪ್ಪುೞಿ ।
ರ್ಬನಿಮಿಷಮಾದ ಕಣ್ ತೆಱೆದ ಚಂಚು ವಿಜೃಂಭಿಪೆಱಂಕೆ ರಂಜಿಸಿ ॥
ತ್ತೆನೆ ನಲವೇಱಿ ತೋರವನಿ ತಣ್ಬನಿ ಮುಂಬನಿಯೆಂಬ ಕಾಮುರ್ಗಿ ।
ಳ್ಪನಿಯನಲಂಪಿನಿಂದಮಿದಿರ್ಗೊಂಡು ಕರ್ದುಂಕಿದುದುದ್ಧ ಚಾತಕಂ ॥ 591 ॥

### ಹೇಮಂತ.

ತಳರ್ದು ಕುಲಾಯದಿಂ ಬಿದಿರ್ದೆಱಂಕೆಯ ನೀರ್ವನಿಯುಂ ತೆರಳ್ಚು ತು ।
ಪ್ಪುೞಿನೊನೆದಂಟಿ ಚಂಚುಪುಟದಿಂ ಬಿಸಿಲತ್ತಿದಿರಾಗಿ ನಿಂದು ಕ ॥
ಣ್ಗಳನರೆಮುಚ್ಚಿ ತೋದಗಱಿಯುಂ ನಸು ಜೋಲಿಸಿ ಪಕ್ಕಿಗಳ್ ಮರಂ ।
ಗಳ ತುದಿಗೋಡ ಮೇಲೆ ದನಿಗೆಯ್ಯುತುಮಿರ್ದುವು ಮುಂಬಗಲ್ವರಂ ॥ 592 ॥

### ವಸಂತ.

ಕಲಿಕಾಸಂವೀತಚೂತಂ ಮುಕುಳಿತವಕುಳಂ ಪಲ್ಲವೋಲ್ಲಾಸಿಕಂಕೆ।
ಲ್ಲಿ ಲತಾಂತಾಕ್ರಾಂತವಾಸಂತಿಕಮೆಸೆದುದು ಯೋಗಿವ್ರಜಸ್ವಾಂತಕುಂತಂ ॥
ವಿಲಸನ್ಮಲ್ಲೀಲತಾಂತಂ ಲಸದಳಿಪಟಲಕ್ರಾಂತಮಿಂದುಪ್ರಭಾಸಂ।
ಕುಲಭಾಭಾಸ್ವದ್ದಿಗಂತಂ ಜಿತಸಕಲಜಗತ್ಕಾಂತುಕಾಂತಂ ವಸಂತಂ ॥ 593 ॥

### ಗ್ರೀಷ್ಮ.

ಉರಿವರಿವ ಬಿಸಿಲ ಬೆಂಕೆಯು। ಭರದೆ ಮುಳಲ್ವಿಂಟೆ ಕಾಯ್ದು ಸಿಡಿಯುತ್ತಿರೆ ಪಂ।
ಕರುಹಭವಾಂಡದ ಹಂಚಿನ।ಹುರಿಗಡಲೆವೊಲೊಡೆದು ಪಾಱಿದುವು ಬೆಟ್ಟಂಗಳ್ ॥594॥

### ಮಾವು.

ತೀವಿದ ನುಣ್ಗೊನರ್ ಕಿಱುಗೊನರ್ ನಸುಬಲ್ಗೊನರೆಂಬಿವೇೞ್ಗವೆ।
ತ್ತಾವಗಮೊಳ್ಪಳಿರ್ ಪೊಸದಳಿರ್ ನಸುಕೆಂದಳಿರಾಗಿ ತಳ್ತ ಸಾ॥

ನಾವಿಧದಳ್ಳಿಗೊಂಬುಸೆಳೆಗೊಂಬೆಳಗೊಂಬುಗಳಿಂದವೊಪ್ಪುವಿ ।
ಮ್ರಾವಿನ ಬಳ್ಳಿವಾವಿನೆಳವಾವಿನ ಸೊಂಪೆಸೆಗುಂ ವನಾಂತದೊಳ್ ॥595॥

## ಮಲ್ಲಿಗೆ.

ಅನುನಯದಿಂದೆ ಮೂಡಿದ ಪಸುರ್ಗನೆ ಬೆಳ್ಸನೆಯುಪ್ಪ ಪೊಂಗಿ ಬೆ।
ಳ್ಸನೆ ಮುಗುಳಪ್ಪ ಬೀಗಿ ಮುಗುಳೊಯ್ಯನೆ ಬಲ್ಮುಗುಳಪ್ಪನುಕ್ರಮಂ ॥
ತನಗೆಸೆಯಲ್ ತೊಡಂಬೆ ಕೆಱಗಾಗಿ ಸಿಡಿಲ್ದು ಮರಲ್ದರಲ್ದು ಕಂ।
ಪಿನ ಕಣಿ ತುಂಬಿಯುಂ ನೆರಪುತಿರ್ದುದು ಮಲ್ಲಿಗೆ ಚೈತ್ರಮಾಸದೊಳ್ ॥ 596 ॥

## ಗಿಳಿ.

ತಳಿರಂ ಚವುಂಟಿ ಪೂವಿಡಿ। ಗಳನಿಱಿದೆಂಜಲಿಸಿ ಕಾಯ್ಗಳಂ ಪಣ್ಣ ರಸಂ।
ಗಳನೀಂಟಿ ತಂಡತಂಡದೆ। ಗಿಳಿಗೆಡೆವರಗಿಳಿಗಳೆಸೆದುವೆಳಮಾವುಗಳೊಳ್ ॥ 597 ॥

## ಸಂಧ್ಯಾರಾಗ.

ಒಂದದ ಪಗಲಿರುಳೆರಡಱ। ಸಂದುಗಳಂ ವರುಣಶಿಲ್ಪಿ ರಕ್ತಾಂಬರದಿಂ।
ಸಂದಿಸಿ ಪೊಲ್ದುವೊಲೆಸೆದುದು।ಮುಂದ್ಕಸಿದ ಸಂಜೆಗೆಂಪು ಪಡುವಣ[1] ದೆಸೆಯೊಳ್ ॥598॥

## ತಾರಗೆ.

ಇಳೆಗೆ ಪಱಗಾಲದಂಬರ। ಮೊಳಸೋರ್ಗುಂ ಬೀೞ್ಗುಮೆಂದು ಧಾತ್ರಂ ಬಲ್ಪಿಂ।
ದಳವಡೆ ಬೆಟ್ಟಿದ ಬೆಳ್ಳಿಯು। ಮೊಳೆಗಳೆನಲ್ ತೊಳಗಿ ಬೆಳಗಿದುವು ತಾರಗೆಗಳ್ ॥599॥

## ಶಿಶುಪಾಲಕೃತ ಕೃಷ್ಣನಿಂದೆ.

ಭುವನಾಪಹಾಸ್ಯಮೆನಲ। ರ್ಣವದೊಳ್ ನೀಂ ಮತ್ಸ್ಯಮಾಗಲಾನಂದು ಸಮು ।
ದ್ಭವಿಸಿದೆನಪ್ಪೊಡದಂ ಗಾ । ಣವಿಕ್ಕಿ ಪಿಡಿದೆನ್ನ ಬಾಣಸಕ್ಕೊಪ್ಪಿಸೆನೇ ॥ 600 ॥

ನೀಂ ಪೆಸರ ಪಂದಿಯಾದಂ । ದಾಂ ಪುಟ್ಟಿದೆನಪ್ಪೊಡಂದೆ ಬೇಂಟೆಯ ನೆವದಿಂ ।
ದಂ ಪಿಡಿದು ತಂದು ಪಂದಿಗ । ಲಂಪಿಂ ಸಂಬರಮುನ[2] ರೆಯಿಸದೆ ಮಾಣ್ಬೆನೇ
॥ 601 ॥

ಕೋಗಿಲೆ ಕಾಗೆ ಮುಂ ಪೊರೆದ ಕಾರಣದಿಂ ಪರಪುಟ್ಟನಾದವೋ ।
ಲಾಗದ ಜಾತಿ ಗೋವಳಿತಿ ರಕ್ಷಿಸೆ ನೀಂ ಪರಪುಟ್ಟನಾದೆ ನೋ ॥
ಡೀಗಳಿದರ್ಕೆ ನಿನ್ನ ತನುಕಾರ್ಷ್ಣ್ಯಮೆ ಸೂಚಕಮಲ್ಲವೇ ಮಹಾ ।
ಯಾಗದೊಳಗ್ರಪೂಜೆಗೆ ವಿಜಾತಿ ಕರಾಗ್ರಮನೇಕೆ ನೀಡಿದೈ ॥ 602 ॥

---

1. ಬೈಗಿನ. 2. ನೆಱೆಯುವೇ?.

ಅದಟಲೆದದೊಂದು ಬಂಡಿಯ| ನೊದೆದೈ ಬೇರ್ ಕೊಱೆತ ಮತ್ತಿಯುಂ ನೀಂ ಕಿೞ್ತೈ!
ಕುದುರೆಯು ನೋವದೆ ಸೀಳ್ದೈ । ಮುದುಗೞ್ತೆಯುನಿಟ್ಟು ಕೆಡಪಿದೈ ಬಲ್ಲಿದನೈ
॥ 603 ॥

ಪಾವಂ ಪಿಡಿದನಿತಱಿಂದೊಳೇಂ । ಪಾವಡಿಗರ್ ಸುಭಟರಪ್ಪರೇ ಜಗುಸೆಯು ನೀ ।
ನಾರ್ಗವಂ ಪಿಡಿದನಿತಱಿಂದೊಳು । ವಿರ್ಗೀವಳಯುಂ ಸುಭಟನೆಂಗುಮೇ ಹರಿ ನಿನ್ನಂ
॥ 604 ॥

ಎಱುವವೋಲ್ ಪುತ್ತಂ ನೀ । ನೇಱ ಜರಾಸಂಧಭಯದೆ ಗಿರಿದುರ್ಗಮನಾ ।
ತೂಱಲತುದಿಯೊಳ್ ಕೇದಗೆ । ಯೇಱಿದ ಕೋಡನವೊಲಿರ್ದ ತೆಱನಂ ಮಱೆದೈ
॥ 605 ॥

---

## ಉರಿಲಿಂಗ ಪೆದ್ದಿ. ಸು. 1180.

ಈತನು ವಚನಗಳನ್ನು ಬರೆದಿದ್ದಾನೆ. ಇವನು ವೀರಶೈವಕವಿ; **ಉರಿಲಿಂಗ ದೇವನ**[1] (ಸು. 1170) ಶಿಷ್ಯನೆಂದು **ನೀಲಕಂಠಾಚಾರ್ಯನ** (ಸು. 1485) ಆರಾಧ್ಯಚಾರಿತ್ರದಿಂದ ತಿಳಿಯುತ್ತದೆ. ಈತನು ನಲ್ಲೂರಿಮಠಕ್ಕೆ ಹನ್ನೆರಡು ವರ್ಷ ಸವುದೆಹಾಕಿ ಆ ಮಠದ ಅಯ್ಯನಾದ ಉರಿಲಿಂಗದೇವನನ್ನು ಲಿಂಗಕೊಡು ವಂತೆ ಕೇಳಿಕೊಳ್ಳಲು ಆತನು ಲಿಂಗವನ್ನು ಕೊಡದೆ ಕಲ್ಲೆಸೆದಾಗ ಆ ಕಲ್ಲೇ ಲಿಂಗ ವಾಯಿತು—ಎಂದು ವೀರಶೈವಗ್ರಂಥಗಳಲ್ಲಿ ಹೇಳಿದೆ.

### ವಚನಗಳು.

ಇವನ ವಚನಗಳಲ್ಲಿ **ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರ** ಎಂಬ ಅಂಕಿತ ವಿದೆ. ಒಂದು ವಚನವನ್ನು ಉದಾಹರಿಸುತ್ತೇವೆ:—

ಜ್ಯೋತಿಯ ಸಂಗದಿಂದ ಕರ್ಪೂರವು ಜ್ಯೋತಿಯಪ್ಪಂತೆ, ಅಪ್ಪುವಿನ ಸಂಗದಿಂದ ಲವಣವು ಅಪ್ಪುವಪ್ಪಂತೆ, ಶ್ರೀಗುರುವಿನ ಸಂಗದಿಂದ ಶಿಷ್ಯನು ಶ್ರೀಗುರುವಪ್ಪುದು ತಪ್ಪದು. "ಯಥಾ ಬೀಜಸ್ತಥಾಂಕುರಃ" ಎಂಬುದು ತಪ್ಪದು ದಿಟ ದಿಟ ನೋಡಾ. ಕಲ್ಪವೃಕ್ಷದ ಬೀಜದಿಂದಾದ ಸಸಿ ಕಲ್ಪವೃಕ್ಷವಪ್ಪುದು ತಪ್ಪದು ನೋಡಾ. ಕಾಮಧೇನುವಿನ ಶಿಶು ಕಾಮಧೇನುವಪ್ಪುದು ತಪ್ಪದು ದಿಟ ದಿಟ ನೋಡಾ. ಸದ್ಗುರುವಿಂದಾದ ಶಿಷ್ಯನು ಸದ್ಗುರು ವಪ್ಪುದು ತಪ್ಪದು ದಿಟ ದಿಟ ನೋಡಾ. ಶಿವ ಬಲ್ಲನು ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರ
॥ 606 ॥

---

1. ಪುಟ 265.

## ರಾಮದೇವ. ಸು. 1180.

ಈತನು ಹೊನ್ನಾಳಿಯ 25 ನೆಯ ಮತ್ತು 50 ನೆಯ ಶಾಸನಗಳನ್ನು ಬರೆದುದಾಗಿ ಆ ಶಾಸನಗಳ ಅಂತ್ಯದಲ್ಲಿರುವ "ವಿರಚಿಸಿದನೊಪ್ಪೆ ಲಕ್ಷ್ಮೀ । ಧರತನಯಂ ರಾಮದೇವನೀಶಾಸನಮಂ" ಎಂಬ ಪದ್ಯಭಾಗದಿಂದ ತಿಳಿಯುತ್ತದೆ. ಇವನು ಲಕ್ಷ್ಮೀಧರನ ಮಗನೆಂಬ ಒಂದು ಅಂಶವು ಮಾತ್ರ ಇದರಿಂದ ಗೊತ್ತಾಗುತ್ತದೆ. ಈತನು ಬ್ರಾಹ್ಮಣಕವಿಯೆಂದು ತೋರುತ್ತದೆ. ಈ ಶಾಸನಗಳಲ್ಲಿ ಎರಡನೆಯದು ಶಕ 1102 ರಲ್ಲಿ—ಎಂದರೆ 1180 ರಲ್ಲಿಯೂ—ಮೊದಲನೆಯದು ಶಕ 1130 ರಲ್ಲಿ—ಎಂದರೆ 1208 ರಲ್ಲಿಯೂ—ಬರೆದುದು. 25 ನೆಯ ಶಾಸನದಲ್ಲಿ ನಾಳ್ಪ್ರಭು ಹತ್ತಿಯೂರ ಕೇತಗಾವುಂಡನು ರಾಮನಾಥದೇವರಿಗೆ ದತ್ತಿಯನ್ನು ಬಿಟ್ಟಂತೆಯೂ 50 ನೆಯದರಲ್ಲಿ ಮೇಲಾಳ್ಕೆಯ ಮಹಾದೇವ ದಂಡನಾಯಕನು ಸಿದ್ಧೇಶ್ವರದೇವರಿಗೆ ಭೂಮಿಯನ್ನು ಬಿಟ್ಟಂತೆಯೂ ಹೇಳಿದೆ.

ಈ ಶಾಸನಗಳ ಬಂಧದಿಂದ ಈತನು ಒಳ್ಳೆಯಕವಿಯೆಂದು ತಿಳಿಯಬರುತ್ತದೆ ಇವುಗಳಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

### ಸಮುದ್ರ.

ಪರಿಧಾವನ್ಮತ್ತಪುಚ್ಛಾಹತಮಕರಕರಾಸ್ಫಾಳನಾಭೀಳನಕ್ರ ।
ಸ್ಫುರಿತೋದ್ಯಚ್ಛಂಶುಮಾರಕ್ರಮಣಸಮುದಿತೋಚ್ಚಂಡವಾತಾಭಿಘಾತೋ ॥
ದ್ಧುರವೀಚೀಶೀಕರೌಘಸ್ಥಗಿತನಿಖಿಳದಿಙ್ಮಂಡಲಂ ರಂಜಿಕುಂ ಭಾ ।
ಸುರಜಂಬೂದ್ವೀಪಮಂ ಸುತ್ತಿಜದಖಿಳಧರಾಭೋಗಭದ್ರಂ ಸಮುದ್ರಂ ॥ 607 ॥

### ದಾಸಗವುಂಡ.

ಗುಣದ ಬಣಂಬೆ ಪೆಂಪಿನ ತವರ್ಮನೆ ಸತ್ಯದ ಬಿತ್ತು ಸರ್ವಲ ।
ಕ್ಷಣದ ನಿಧಾನಮುಣ್ಮೆ ನೆಜಿವಟ್ಟ ಭಿಮಾನದ ರಾಶಿ ಧರ್ಮದೊ ॥
ಳ್ಗಣಿ ನಯದಾಕರಂ ವಿಭವದೂರ್ಜಿತಭೂಮಿಯೆನಲ್ ಪ್ರಭುತ್ವದ ।
ಗ್ರಣಿ ಸಲೆ ಹತ್ತಿಯೂರೆಸೆವ ದಾಸಗವುಂಡನೆ ಧನ್ಯನುರ್ವಿಯೊಳ್ ॥ 608 ॥

### ಕೇತಗವುಂಡ.

ಪರವಧುಗಾಳ್ಪವಂಗೆ ಶರಣಾರ್ಥಿಗೆ ವೈರಿಗೆ ಪೇೞ್ಪವಂಗಿವಂ ।
ಸುರಸರಿದಾತ್ಮಜಂ ಗರುಡನಬ್ಧಿ ಜವಂ ರವಿಜಾತನೆಂದು ಸ ॥
ಚ್ಚರಿತನನಾಪ್ತನಂ ಸ್ಥಿರನನೊಳ್ಗಲಿಯಂ ಪಿರಿದೀವ ದಾನಿಯಂ ।
ಧರೆ ಪೊಗೞ್ಗುಂ ಮನೋಮುದನೆ ನಾಳ್ಪ್ರಭುವಂ ಸಲೆ ಕೇತಗಾಂಡನಂ ॥ 609 ॥

### ಚಟ್ಟರಸ.

ಅದಟರನಟ್ಟಿ ಮೆಟ್ಟಿ ರಿಪುವೀರರ ಬಿನ್ನಣಮುಂ ಕಡಿಲ್ಕಿ ವಿಾ ।
ಱಿದ ಸುಭಟರ್ಕಳಂ ಪರಿಯೆ ಪೊಯ್ದು ದಿರಾಂಪರನಿಕ್ಕಿ ಖಡ್ಗದಂ ॥
ಬದಿಸು ಜದಾಜಿಯೊಳ್ ವಿಜಯಲಕ್ಷ್ಮಿಗಧೀಶ್ವರನಾದುದಾತ್ತಶೌ ।
ರ್ಯದ ಕಣಿಯೆಂಬಿನಂ ಪಿರಿಯ ಚಟ್ಟರಸಂ ಪೆಸರ್ವೆತ್ತನುರ್ವಿಯೊಳ್ ॥ 610 ॥

### ಈಶ್ವರಭೂಪನ ಕೀರ್ತಿ.

ಈಂಗಡಲಂತೆ ಪೆಂಪುವಡೆದೀಶ್ವರಭೂಪನ ಕೀರ್ತಿಯುಂ ಕಳಂ ।
ಕಂಗಡೆಗೊಂಡ ಚಂದ್ರಮನದೇಂ ಗಡ ಪೋಲ್ವನೆ ವೈರಿತುಂಗಸಾ ॥
ಧಂಗಳೊಳುರ್ವಿ ಪರ್ವಿದ ಕಜುಂಕೆಗೆ ತನ್ನಯ ಲಕ್ಷ್ಮಿ ಮೆಚ್ಚುತುಂ ।
ಲಂಗಿಸಿದಾಗಳೊಂದಿನಿಸು ಪೋಲ್ವೊಡೆ ಪೋಲ್ಕೆಮ... ದೇಟ್ಟಿಗಯೊಳ್ ॥ 611 ॥

---

## ಕುಮಾರ ಪದ್ಮರಸ. ಸು. 1180.

ಈತನು **ಸಾನಂದಚರಿತ್ರವನ್ನು** ಬರೆದಿದ್ದಾನೆ. ಇವನು ವೀರಶೈವಕವಿ; ಇವನ ತಂದೆ ಕೆರೆಯ ಪದ್ಮರಸ (ಸು. 1165), ತಾಯಿ ಮಾದೇವಿ. ತಂದೆಯೇ ಈತನಿಗೆ ಗುರುವೆಂದು ತೋರುತ್ತದೆ. ಇವನಿಗೆ **ಶರಣಕವಿ** ಎಂಬ ಹೆಸರೂ ಉಂಟು.

ಇವನ ಗ್ರಂಥ

### ಸಾನಂದಚರಿತ್ರ.

ಇದು 9 ಸಂಧಿಗಳಾಗಿ ಭಾಗಿಸಲ್ಪಟ್ಟಿದೆ; ನಾನಾಷಟ್ಪದಿಗಳಲ್ಲಿ ಬರೆದಿದ್ದರೂ ಇದರಲ್ಲಿ ಕುಸುಮಷಟ್ಪದಿಗಳೇ ವಿಶೇಷವಾಗಿವೆ; ಒಟ್ಟು 791 ಷಟ್ಪದಿಗಳೂ 2 ರಗಳೆಗಳೂ ಇವೆ. ಈ ಸಾನಂದಚರಿತ್ರವು ಸ್ಕಾಂದಪುರಾಣದಲ್ಲಿ ನಂದಿ ಸನತ್ಕುಮಾರನಿಗೆ ಹೇಳಿದುದು. ಪೂರ್ಣವಿತ್ತನೆಂಬ ಋಷಿಯ ಮಗನಾದ ಸಾನಂದನು ನರಕದಲ್ಲಿ ಜನರು ನರಳುತ್ತಿದ್ದಾರೆಂದು ಕೇಳಿ ಅವರ ಸಂಕಟವನ್ನು ತವಿಸುತ್ತೇನೆಂದು ಹೊರಟು ಪಂಚಾಕ್ಷರೀಮಹಿಮೆಯಿಂದ ನಾರಕಿಗಳಿಗೆಲ್ಲಾ ಸದ್ಗತಿಯನ್ನುಂಟುಮಾಡಿದನು—ಎಂಬುದು ಇದರ ಕಥಾಗರ್ಭ.

ಈ ಗ್ರಂಥವು ಕೆರೆಯ ಪದ್ಮರಸನ ಅಜ್ಞಾನುಸಾರವಾಗಿ ಸಂಸ್ಕೃತದಿಂದ ಕನ್ನಡಿಸಲ್ಪಟ್ಟಿತೆಂಬಂಶವೂ ಗ್ರಂಥದ ವಿಷಯ, ಉತ್ಕೃಷ್ಟತೆ, ಪ್ರಯೋಜನ ಇವುಗಳೂ ಈ ಪದ್ಯಗಳಲ್ಲಿ ಹೇಳಿವೆ:—

ಪಿರಿದುಮೂರುಂ ಮುನ್ನ | ವಿರಚಿಸಿದರಿಲ್ಲೆಂದು | ಧರೆಯೊಳೊಳುಗನ್ನಡದಿ ಪಸರಿಸೆಂದು |
ಗುರುರೂಪವಿಶ್ವಪತಿ | ಕರುಣಿಸಿದ ತೆಱದಿನಾಂ | ವರಪುರಾಣಾರ್ಥಮುಂ ಕನ್ನಡಿಸಿದೆಂ ||

ಹರಚಮೂವರಪರಮು | ವಿರಚಿತಶ್ಲೋಕಬಂ | ಧುರದೇವಭಾಷೆಯುಂ ಕನ್ನಡಿಸಿದೆಂ |
ಗುರುಕೆರೆಯುಪದ್ಮರಸ | ವರಸೂನು ಪದುಮಿಗಂ | ಧರಣಿಯೊಳ್ ಸ್ತ್ರೀಬಾಲಸಾಧ್ಯಮಾಗೆ ||

ಪರವಾದಿತರುಪರಶು | ಪರಸಮಯಗಿರಿಗಶನಿ | ಪರದೈವವಿಪಿನಪಟುದಾವವಿದಿದೇ |
ಗುರುಲಿಂಗಜಂಗಮದ | ಪರವಿಲ್ಲವಿಲ್ಲೆಂದು | ಧರಣಿಯೊಳ್ ಡಂಗುರಂಬೊಯ್ವುದಿದಿದೇ ||

ಚರಿತೆ ಸಾನಂದೇಶ | ಚರಿತೆ ಜಗದಾನಂದ | ಚರಿತೆ ಪಂಚಾಕ್ಷರೀವರಮಹಿಮೆಯು |
ಚರಿತೆ ಶಿವಭಕ್ತಿಗಿದು | ಚರಿತೆ ಗುರುನಿಷ್ಠೆಗಿದು | ಚರಿತೆ ಸತ್ಪಥಕೆ ತಾನೆಂತೆಂತೆನೆ||

ಇದೇ ಅರ್ಥವು ಪದ್ಮಣಾಂಕನ (ಸು. 1385) ಪದ್ಮರಾಜಪುರಾಣದಲ್ಲಿಯ ಈ ಪದ್ಯದಲ್ಲಿಯೂ ಹೇಳಿದೆ:—

ಬಳಿಕೆ ಸಮಯಸ್ಥಾಪನಾರ್ಥಂ ಶ್ರುತಿಸ್ಮೃತಿವಿ |
ಮಳಪುರಾಣಾಗಮೋಪನಿಷತ್ಪ್ರಭೃತಿಶಾಸ್ತ್ರ |
ಕುಳದ ಸಾರಂದೆಗೆದು ದೃಷ್ಟಕೆ ಬರೆದು ಸರ್ವರಱಿಯೆ ಕರ್ಣಾಟವಾಗಿ ||
ಅಲಘುವರ್ಣಕರೀತಿಯಿಂ ರಸಂ ಮುಸುಕಿಯು |
ಜ್ವಳಿಪಂತೆ ಸಾನಂದಚರಿತಾಖ್ಯಶಾಸ್ತ್ರಮನ |
ತುಳಗುರುವರಂ ನಿಜಾತ್ಮಜನಿನೊರೆಯಿಸುತೆ ಶಿವಸುಖದೊಳಿಂತೊಪ್ಪುತಿರ್ದಂ ||

ಸಂಧಿಗಳ ಕೊನೆಯಲ್ಲಿ

ಇದು ನಂದಿನಾಥೇಶ | ಗದಿತಮಾನಂದೈಕ | ದುದಧಿ ಸಾನಂದಾಖ್ಯಚರಿತದೊಳಗೆ |
ಮುದದಿಂದೆ ಶರಣಕವಿ | ಪದೆದು ಕನ್ನಡಿಸಿದೀ | . . . . . . . . . . . . . . ಸಂಧಿ ||

ಎಂದಿದೆ.

ಇವನ ಬಂಧವು ಬಹಳ ಲಲಿತವಾಗಿದೆ. ಈ ಗ್ರಂಥದಿಂದ ಒಂದೆರಡು ಪದ್ಯಗಳನ್ನು ತೆಗೆದು ಬರೆಯುತ್ತೇವೆ:—

ಸಾನಂದನು ನರಕಕ್ಕೆ ಹೋದುದು.

ಕಟಿಕಟಿಪ ಪೆಪ್ಪಳಿಪ ಶೋಕಿಪ | ಹಳವಿಸುವ ಬಾಷ್ಪಂಗಳಲ್ಲುಗೆ |
ಯುಱುವ ನಿಜಕರ್ಮಂಗಳಂ ಬೈದಳವಳಿಪ ಸೆಡೆವ ||

ಬಟ್ಟಿಲ್ಪ ಹಾಹಾಕ್ರಂದನಂಗೆ । ಯ್ದುಟ್ಟಿಲ್ಪ ಜೀವಿಗಳೆಲ್ಲ ದುಃಖಂ ।
ಕಟ್ಟಿಲ್ಪವೋಲೀಕ್ಷಿಸಲಿಕ್ಕೆತಂದಂ ಮಹಾಕರುಣಿ ॥ 612 ॥

## ಪಂಚಾಕ್ಷರೀ ಮಹಿಮೆ.

ಕೆಡೆಮೆಟ್ಟಿ ಕರ್ಮವುಮ । ನೊದೆಮೆಟ್ಟಿ ಬೊಮ್ಮವುಮ ।
ನೆಡೆಗಲಸಿ ದಾಂಟಿ ಸಂಸೃತಿಜಲಧಿಯಂ ॥
ಹೊಡೆವುದಿಡಿದಡಸಿ ಕಡು । ಹುಡಿಗುಟ್ಟಿ ಕಡಿದುಡಿದು ।
ವುಡುಗಿ ಸುಡುವುದು ದುರಿತಗಿರಿತರುಗಳಂ ॥ 613 ॥

ಕೆಟ್ಟ ಸಂಸೃತಿಯೆಂಬ । ನಿಟ್ಟೊಡಲ ದಂತಿ ಕ ।
ಟ್ಟೊಟ್ಟೈಸಲಾರ್ಗಮರಿದೆನಿಪುದಿದನು ॥
ನಿಟ್ಟಿಸುವುದಟ್ಟುವುದು । ಕಟ್ಟುವುದು ಸರಸರನೆ ।
ಮೆಟ್ಟಿ ಸೀಳುವುದು ಪಂಚಾಸ್ಯಮಂತ್ರಂ ॥ 614 ॥

---

## ಬೊಪ್ಪಣಪಂಡಿತ. ಸು. 1180.

ಈತನು ಅಧ್ಯಾತ್ಮಿಬಾಳಚಂದ್ರನ "ನಿಯೋಗದಿಂ" ಬೆಳ್ಗೊಳದ ಗೊಮ್ಮಟೇಶ್ವರನನ್ನು 27 ಕನ್ನಡ ವೃತ್ತಗಳಿಂದ ಸ್ತುತಿಸಿದ್ದಾನೆ. ಈ ಪದ್ಯಗಳು ಸುಮಾರು 1180 ರಲ್ಲಿ ಬರೆದ ಶ್ರ. ಬೆ. 234 ನೆಯ ಶಾಸನದಲ್ಲಿವೆ. ನಿರ್ವಾಣಲಕ್ಷ್ಮೀಪತಿ ನಕ್ಷತ್ರಮಾಲಿಕೆಯೆಂಬ ಒಂದು ಸಣ್ಣಗ್ರಂಥವನ್ನೂ ಈತನು ಬರೆದಿದ್ದಾನೆ. "ಸುಜನೋತ್ತಂಸ" ಎಂಬ ಈ ಕವಿಯ ಬಿರುದಿನಿಂದ ಮುಗಿವ ನೀತಿಬೋಧಕವಾದ ಅನೇಕ ಕಂದಪದ್ಯಗಳು ದೊರೆಯುತ್ತವೆ; ಇವೂ ಏತತ್ಕೃತವೆಂದು ತೋರುತ್ತದೆ. ಈತನು ಇನ್ನಾವ ಗ್ರಂಥಗಳನ್ನು ಬರೆದಿದ್ದಾನೆಯೋ ತಿಳಿಯದು.

ಇವನು ಜೈನಕವಿ. ಇವನಿಗೆ ಸುಜನೋತ್ತಂಸ, ಕನ್ನಡಗವಿಬೊಪ್ಪ ಎಂಬ ಬಿರುದುಗಳಿದ್ದಂತೆ ತಿಳಿಯುತ್ತದೆ.

ಈತನು ಅಧ್ಯಾತ್ಮಿಬಾಳಚಂದ್ರನ[1] ನಿಯೋಗದಿಂದ ಶಾಸನಪದ್ಯಗಳನು ಬರೆದಂತೆ ತಿಳಿವುದರಿಂದ ಅವನ ಸಮಕಾಲದವನಾಗಿರಬೇಕು. ಇವನ ಪದ್ಯಗಳಿರುವ ಶಾಸನವು ಸುಮಾರು 1180 ರಲ್ಲಿ ಬರೆದುದಾದುದರಿಂದ ಇವನೂ ಸುಮಾರು ಆ ಕಾಲದವನಾಗಿರಬೇಕು.

ಈತನನ್ನು **ಆಚಣ್ಣನು** (ಸು. 1195) ತನ್ನ ವರ್ಧಮಾನಪುರಾಣದಲ್ಲಿ ಸ್ತುತಿಸಿದ್ದಾನೆ. **ಪಾರ್ಶ್ವನು** (1205) ತನ್ನ ಪಾರ್ಶ್ವನಾಥ ಪುರಾಣದಲ್ಲಿಯು

---

1. ಪುಟ 253.

ಧನಕಳೆಗೆ ಮಾಣಿಕಮನೀ | ವನತೆಱದಿಂ ಪೆಱರ್ಗೆ ಕಾವ್ಯಮಂ ಕುಡದೆ ಯಶೋ |
ಧನಕೆ ಬುಧಜನಕೆ ಕೊಟ್ಟೋ | ರ್ವನೆ ಸುಜನೋತ್ತಂಸನೆನಿಸಿದಂ ಬೊಪ್ಪಣ್ಣಂ ||

ಎಂಬ ಪದ್ಯದಲ್ಲಿ ಹೊಗಳಿದ್ದಾನೆ. ಕೇಶೀರಾಜನು (ಸು. 1260) “ಸುಜನೋತ್ತಂಸನ ಸುಮಾರ್ಗಮಿದಱೊಳೆ ಲಕ್ಷ್ಯಂ” ಎಂದು ತನ್ನ ಶಬ್ದಮಣಿದರ್ಪಣದಲ್ಲಿ ಹೇಳಿ ‘ಸುಜನೋತ್ತಂಸ’ ಎಂದು ಮುಗಿವ ಕೆಲವು ಪದ್ಯಭಾಗಗಳನ್ನು ಅಲ್ಲಲ್ಲಿ[1] ಉದಾಹರಿಸಿದ್ದಾನೆ.

ಕವಿ ತನ್ನ ಗುಣಾದಿಗಳನ್ನು ಈ ಪದ್ಯದಲ್ಲಿ ಹೇಳಿಕೊಂಡಿದ್ದಾನೆ:—

ಈಜಿನನುತಿಶಾಸನಮಂ | ಶ್ರೀಜಿನಶಾಸನವಿದಂ ವಿನಿರ್ಮಿಸಿದಂ ವಿ |
ದ್ಯಾಜಿತವೃಜಿನಂ ಸುಕವಿಸ | ಮಾಜನುತಂ ವಿಶದಕೀರ್ತಿ ಸುಜನೋತ್ತಂಸಂ ||

ಈತನ ಗ್ರಂಥಗಳಲ್ಲಿ

## 1. ಗೊಮ್ಮಟಸ್ತುತಿ.

ಇದನ್ನು

ಶ್ರೀಗೊಮ್ಮಟಜಿನನಂ ನರ | ನಾಗಾಮರದಿತಿಜಖಚರಪತಿಪೂಜಿತನಂ |
ಯೋಗಾಗ್ನಿಹತಸ್ಮರನಂ | ಯೋಗಿಧ್ಯೇಯನನಮೇಯನಂ ಸ್ತುತಿಯಿಸುವೆಂ ||

ಎಂದಾರಂಭಿಸಿ, 27 ವೃತ್ತಗಳಿಂದ ಗೊಮ್ಮಟನನ್ನು ಸ್ತುತಿಸಿ, ಬಳಿಕ ತನ್ನ ಬಿರುದಾದ ‘ಸುಜನೋತ್ತಂಸ’ ಎಂಬ ಪದಕ್ಕೆ

ಸುಜನರ್ ಭವ್ಯರೆ ತನಗವ | ರಜಸ್ರಮುತ್ತಂಸಮಪ್ಪ ಪುರುಳಿಂ ಬೊಪ್ಪಂ |
ಸುಜನೋತ್ತಂಸನೆನಿಪ್ಪಂ | ಸುಜನರ್ಗುತ್ತಂಸಮೆಂಬ ಪುರುಳಿಂದೆನಿಸಂ ||

ಎಂಬ ಪದ್ಯದಿಂದ ಅರ್ಥವನ್ನು ವಿವರಿಸಿ, ಕೊನೆಗೆ

ಪೊಡವಿಗೆ ಸಂದ ಗೊಮ್ಮಟಜಿನೇಂದ್ರಗುಣಸ್ತವಶಾಸನಕ್ಕೆ ಕ |
ನ್ನಡಗವಿಬೊಪ್ಪನೆಂದೆನಿಪ ಬೊಪ್ಪಣಪಂಡಿತನೊಲ್ದು ಪೇೞ್ದವಂ ||
ಕಡೆಯಿಸಿದಂ ವಲಂ ಕವಡಮಯ್ಯನ ದೇವಣನಱ್ತಿಯಿಂದೆ ಬಾ |
ಗಡಗೆಯ ರುದ್ರನಾದರದೆ ಮಾಡಿಸಿದಂ ವಿಲಸತ್ಪ್ರತಿಷ್ಠೆಯಂ ||

ಎಂದು ಮುಗಿಸಿದ್ದಾನೆ.

ಈತನನ್ನು ಪಾರ್ಶ್ವನೇ ಮೊದಲಾದವರು ಸ್ತುತಿಸಿರುವ ರೀತಿಯಿಂದಲೂ, ಕೇಶಿರಾಜನು ಇವನ ‘ಸುಮಾರ್ಗಂ’ ತನ್ನ ಗ್ರಂಥದಲ್ಲಿ ‘ಲಕ್ಷ್ಯಂ’ ಎಂದು ಹೇಳಿರುವುದರಿಂದಲೂ, ತಾನು ‘ಸುಕವಿಸಮಾಜನುತಂ’ ಎಂದು ಹೇಳಿಕೊಂಡಿರುವುದರಿಂದಲೂ ಈತನು ಪ್ರಸಿದ್ಧಕವಿಯಾಗಿದ್ದಿರಬೇಕು.

1. ಶಬ್ದಮಣಿದರ್ಪಣ, ಪುಟಗಳು 109, 112, 164.

ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

ಅತಿತುಂಗಾಕೃತಿಯಾದೊಡಾಗದದಱೊಳ್ ಸೌಂದರ್ಯಮೌನ್ನತ್ಯಮುಂ ।
ನುತಸೌಂದರ್ಯಮುಮಾಗೆ ಮತ್ತತಿಶಯಂ ತಾನಾಗದೌನ್ನತ್ಯಮುಂ ॥
ನುತಸೌಂದರ್ಯಮುಮೂರ್ಜಿತಾತಿಶಯಮುಂ ತನ್ನಲ್ಲಿ ನಿಂದಿರ್ದುವೇಂ ।
ಕ್ಷಿತಿಸಂಪೂಜ್ಯಮೊ ಗೊಮ್ಮಟೇಶ್ವರಜಿನಶ್ರೀರೂಪಮಾತ್ಮೋಪಮಂ ॥ 615 ॥

ನೆಲಗಟ್ಟಾನಾಗಲೋಕಂ ತಳಮವನಿ ದಿಶಾಭಿತ್ತಿ ಭಿತ್ತಿವ್ರಜಂ ಸ್ವ ।
ಸ್ಥಲಭಾಗಂ ಮುಚ್ಚಣಂ ಮೇಗಣ ಸುರರ ವಿಮಾನೋತ್ಕರಂ ಕೂಟಜಾಳಂ ॥
ವಿಲಸತ್ತಾರೌಘಮಂತರ್ವಿತತಮಣಿವಿತಾನಂ ಸಮಂತಾಗೆ ನಿತ್ಯಂ ।
ನಿಲಯಂ ಶ್ರೀಗೊಮ್ಮಟೇಶಂಗೆನಿಸಿದುದು ಜನೋಕ್ತಾವಳೋಕಂ ತ್ರಿಲೋಕಂ ॥ 616 ॥

## 2. ನಿರ್ವಾಣಲಕ್ಷ್ಮೀಪತಿ ನಕ್ಷತ್ರಮಾಲಿಕೆ.

ಇದರಲ್ಲಿ 27 ವೃತ್ತಗಳಿವೆ, ಪ್ರತಿಪದ್ಯವೂ 'ನಿರ್ವಾಣಲಕ್ಷ್ಮೀಪತಿ' ಎಂದು ಮುಗಿಯುತ್ತದೆ. ಈ ಸ್ತುತಿಯನ್ನು ಭವ್ಯರ ಪ್ರೇರಣೆಯಿಂದ ರಚಿಸಿದಂತೆ ಗ್ರಂಥಾಂತ್ಯದ ಈ ಪದ್ಯದಲ್ಲಿ ಹೇಳುತ್ತಾನೆ:—

ಭವವಿಧ್ವಂಸನವಾಸ್ತವಸ್ತವಮನೊಂದಂ ಪೇೞ ನೀನೆಂಬ ಭ ।
ವ್ಯವರಪ್ರೇರಣೆಯಿಂದಮಿಂತು ಸುಜನೋತ್ತಂಸಂ ಲಸದ್ವೃತ್ತಸು ॥
ಚ್ಛವಿಮುಕ್ತಾಗಣದಿಂದೆ ನಿರ್ಮಿಸಿದುದೀನಿರ್ವಾಣಲಕ್ಷ್ಮೀಪತಿ ।
ಸ್ತವನಂ ಭ್ರಾಜಿತಭವ್ಯಕಂಠಕಲಿತಂ ನಕ್ಷತ್ರಮಾಲೋಪಮಂ ॥

ಈ ಗ್ರಂಥದಿಂದ ಎರಡು ಪದ್ಯಗಳನ್ನು ತೆಗೆದು ಬರೆಯುತ್ತೇವೆ:—

ಪರಭಾವಂ ಪರಭಾವಮುಂ ಜನಿಯಿಕುಂ ಸ್ವಾತ್ಮಸ್ಥಭಾವಂ ನಿರಂ ।
ತರಿತಂ ಸ್ವಾತ್ಮಗತತ್ವಮುಂ ಬಗೆಯೆ ಪಾತ್ರಂ ಲೋಹದಿಂ ನಿರ್ಮಿತಂ ॥
ನಿರತಂ ಲೋಹಮಯಂ ಸುವರ್ಣರಚಿತಂ ಸೌವರ್ಣಮೆಂಬಂದದಿಂ ।
ಪರಮಲ್ತೇಂಬುದು ನಿನ್ನ ಶಾಸ್ತ್ರದ ತಿರುಳ್ ನಿರ್ವಾಣಲಕ್ಷ್ಮೀಪತೀ ॥ 617 ॥

ಸಮಯಜ್ಞಾನದೆ ಸಿದ್ಧಿಯಾಗದದಱೊಳ್ ಶ್ರದ್ಧಾನಮಿಲ್ಲಾದೊಡಾ ।
ಸಮಯಜ್ಞಾನಮುಮಲ್ಲಿ ನಂಬುಗೆಯುಮುಂಟಾಗಿರ್ದೊಡಂ ಶುದ್ಧಸಂ ॥
ಯಮಮಿಲ್ಲಾದೊಡಮಂತುಮಾಗದದಱಿಂ ರತ್ನತ್ರಯೀಸಿದ್ಧಿಯಿಂ ।
ಸಮನಿಕ್ಕುಂ ಮುನಿಗೆಂದು ನೀಂ ಬೆಸಸಿದೈ ನಿರ್ವಾಣಲಕ್ಷ್ಮೀಪತೀ ॥ 618 ॥

## 3. ನೀತಿ ಕಂದಗಳು.

ಇವುಗಳಲ್ಲಿ ಕೆಲವನ್ನು ಇಲ್ಲಿ ಬರೆಯುತ್ತೇವೆ:—

ನಡೆವುದು ನಗೆಗೆಡೆಯಾಗದೆ । ನುಡಿವುದು ನಯನೀತಿಯುಲ್ಲಿ ಸುಜನರೊಳೆಂತುಂ ।
ಬಿಡುವುದು ಕೆಡೆನುಡಿವವರಂ। ಜಡರೊಡನಾಡಲ್ಕೆ ವೇಡ ಸುಜನೋತ್ತಂಸಾ ॥ 619 ॥

ಒರ್ವರ ಸಿರಿಯೊರ್ವರ ಜಸ | ವೊರ್ವರ ಸಾಮರ್ಥ್ಯವೊರ್ವರಾಕಾರಂ ಮ |
ತ್ತೊರ್ವರ್ ಬಯಸಿದೊಡಪ್ಪುದೆ | ಪೂರ್ವಾರ್ಜಿತವಿಲ್ಲದಗ್ಗೆ ಸುಜನೋತ್ತಂಸಾ
॥ 620 ॥

ಗಿರಿಗಿರಿಯೊಳ್ ಮಾಣಿಕಮುಂ | ಕರಿಕರಿಯೊಳ್ ಮುತ್ತು ಚಂದನಂ ವನವನದೊಳ್ |
ಧರೆಧರೆಯೊಳ್ ಕಸ್ತೂರಿಯುಂ | ಪುರಪುರದೊಳ್ ನೃಪರುಮುಂಟೆ ಸುಜನೋತ್ತಂಸಾ
॥ 621 ॥

ಪ್ರೀತಿಯ ಮೊನೆಯುಱಿಯದ ಬಲ್ಪು | ಕಾತುರಿಸಿದೊಡುಂಟೆ ನಂಟು ಬತ್ತಿದಗಿಡುವಿಂ |
ಗೇತವನೆತ್ತಿದೊಡದು ತಾಂ | ಚೇತರಿಪುದೆ ಮುನ್ನಿನಂತೆ ಸುಜನೋತ್ತಂಸಾ ॥622॥

ಎಲ್ಲರನೆಲ್ಲಾ ತೆಱದಿಂ | ಬಲ್ಲಂದದೆ ತನ್ನ ಕಡೆಗೆ ಮಾಳ್ಪನೆ ಚದುರಂ |
ಪುಲ್ಲೇವುದೆನಲ್ವೇಡಂ | ಪುಲ್ಲಂ ಪಲ್ಲೆಡೆಗೆ ಬಹುದು ಸುಜನೋತ್ತಂಸಾ ॥ 623 ॥

ಮಱೆವೊಕ್ಕವರಂ ಕಾಯದೆ | ತಱಿದೊಟ್ಟದೆ ರಣದೊಳಾಂತ ರಿಪುಭೂಭುಜರಂ |
ಸೆಱೆಗೆಯ್ಯದೆ ದುರ್ಜನರಂ | ಬಱಿದೊಲ್ವಳೆ ಭಾಗ್ಯಲಕ್ಷ್ಮಿ ಸುಜನೋತ್ತಂಸಾ ॥ 624 ॥

ಆವುಂ ಮಾವುಂ ಪಾವುಂ | ಬೇವುಂ ತಾವುಂಡೊಡೊಂದು ಕಾಲಿನ ನೀರಂ |
ಭಾವಿಸೆ ಭಿನ್ನರುಚಿತ್ವಮ | ನಾವರಿಸವೆ ಧಾತ್ರಿಯೊಳಗೆ ಸುಜನೋತ್ತಂಸಾ ॥ 625 ॥

---

## ರೇವಾಕೋಟ್ಯಾಚಾರ್ಯ. ಸು. 1180.

ಈತನು ಜೈನಕವಿ. ಇವನ ಕಾಲವು ಸುಮಾರು 1180 ಆಗಿರಬಹುದು. ಈತನ ಗ್ರಂಥದಿಂದ ಇಂಡಿಯನ್ ಆಂಟಿಕ್ವೆರಿ XII ನೆಯ ಸಂಪುಟದ 96 ನೆಯ ಪುಟದಲ್ಲಿ ಕೆಳಗೆ ಬರೆದಿರುವ ಭಾಗವು ಅನುವಾದಮಾಡಲ್ಪಟ್ಟಿದೆ:—

ಪಂಡಮಾಸದ ಸೂಳೆಯರ್ ಪೆಱಗನೇಱಿ ಇಕ್ಕೆಲದೊಳಂ ಚಾಮರಂಗಳನಿಕ್ಕು ತುಂಬರೆ ಬೆಳ್ಗೊಡೆಗೆ ಪಾಲಿಕೇತನಧ್ವಜಂಗಳುಂ ಚಂದ್ರಾದಿತ್ಯರ್ಕಳುಂ ಸಿಂಹವ್ಯಾಘ್ರಮುಕರ ಮತ್ಸ್ಯಧ್ವಜಂಗಳುಂ ಮೊದಲಾಗೊಡೆಯ ರಾಜಚಿಹ್ನಂಗಳುಂ ಮುಂದೆ ಪರಿಯೆ ಪಂಚ ಮಹಾಶಬ್ದಂಗಳುಂ ಬದ್ದವಣದ ಪಱೆಗಳುಂ ಬಾಜಿಸೆ ವಂದಿಮಾಗಧಯಾಚಕಪ್ರಭೃತಿ ಜನಂಗಳ್ಗಂ ದೀನಾನಾಥರ್ಕಳ್ಗಂ ತುಷ್ಟಿದಾನಮುಂ ಕುಡುತ್ತುಂ ಪೋಗಿ ಸಹಸ್ರಕೂಟ ಚೈತ್ಯಾಲಯಮುನೆಯ್ದಿ ಪಟ್ಟವರ್ಧನದಿಂದಿೞಿದು ಬಸದಿಯಂ ತ್ರಿಪ್ರದಕ್ಷಿಣಂಗೆಯ್ದು ದೇವರಂ ಬಂದಿಸಿ........ಇಂತೆಂದಂ (ವಿದ್ಯುಚ್ಚೋರಂ) ॥ 626 ॥

---

## ಚಾಚಣ್ಣ. 1188.

ಈತನು ಬೇಲೂರು 140 ನೆಯ ಶಾಸನದಲ್ಲಿಯೂ ಅರಸಿಯಕೆರೆಯ 47 ನೆಯ ಶಾಸನದಲ್ಲಿಯೂ ಪದ್ಯಗಳನ್ನು ಬರೆದುದಾಗಿ ಹೇಳಿದೆ. ಈ ಶಾಸನಗಳಲ್ಲಿ ಮೊದಲನೆಯದು ವೀರಬಲ್ಲಾಳನ (1173–1220) ಆಳಿಕೆಯಲ್ಲಿ ಕೀಲಕವರ್ಷ ದಲ್ಲಿ–ಎಂದರೆ 1188 ರಲ್ಲಿ–ಬರೆದುದು. ಈ ಶಾಸನಗಳಲ್ಲಿ ಈ ಕವಿ ಬರೆದ ಒಂದು ಪದ್ಯವನ್ನು ಉದ್ಧರಿಸಿ ಬರೆಯುತ್ತೇವೆ:—

ಜಂಗಮಕಲ್ಪಕಲತೆ ಫಲ । ಮಂ ಗಡೆಗೊಂಡವೊಲುದಾರೆ ಮಾರವೆ ಪೆತ್ತಳ್ ।
ತುಂಗಯಶವೆಂಬ ಪೂಸವೆ । ಳ್ದಿಂಗಳ ಬಿತ್ತೆನಿಪ ಭದ್ರನಂ ನಂದನನಂ ॥ 627 ॥

---

## ತ್ರಿವಿಕ್ರಮಪಂಡಿತ. 1188.

ಈತನು ಅರಸಿಯಕೆರೆಯ 22 ನೆಯ ಮತ್ತು 90 ನೆಯ ಶಾಸನಗಳನ್ನು ಬರೆದುದಾಗಿ ಮೊದಲನೆಯ ಶಾಸನದ ಕೊನೆಯಲ್ಲಿರುವ

ಬುಧನಿಧಿ ವಿವೇಕನಿಧಿ ಗುಣ । ನಿಧಿಯಾದಿತ್ಯಾನುಜಂ ತದಂತೇವಾಸಂ ।
ಬುಧನಿಧಿ ವಿವೇಕನಿಧಿ ಗುಣ । ನಿಧಿ ಬರೆದಂ ತ್ರಿಕ್ರಮಾಂಕನೀಶಾಸನಮಂ ॥

ಎಂಬ ಪದ್ಯದಿಂದ ತಿಳಿಯುತ್ತದೆ. ಅಲ್ಲದೆ ಇವನು ಅರಸಿಯಕೆರೆಯ 118 ನೆಯ ಶಾಸನವನ್ನು ತಿದ್ದಿದುದಾಗಿ ಅದರ ಕೊನೆಯಲ್ಲಿರುವ "ತ್ರಿವಿಕ್ರಮಕವೀಶ್ವರ ನೂರ್ಜಿತವಾಣಿ ತಿರ್ದಿ ತಾಂ ಬರೆದಂ" ಎಂಬ ಪದ್ಯಭಾಗದಿಂದ ತಿಳಿಯುತ್ತದೆ. ಈ ಶಾಸನಗಳಲ್ಲಿ ಮೊದಲನೆಯದು 1188 ರಲ್ಲಿಯೂ ಎರಡನೆಯದು 1189 ರಲ್ಲಿಯೂ ಮೂರನೆಯದು 1194 ರಲ್ಲಿಯೂ ಬರೆದುದು.

ಈ ಶಾಸನಗಳ ಬಂಧವನ್ನು ನೋಡಿದರೆ ಈತನು ಒಳ್ಳೆಯ ಕವಿಯೆಂಬುದ ರಲ್ಲಿ ಆವ ಸಂಶಯವೂ ಇಲ್ಲ. ಇವುಗಳಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ:—

ವೀರಬಲ್ಲಾಳ.

ಅನುಪಮರಣನಿಸ್ತಾರಕ । ನನೂನಸತ್ತ್ವಾನ್ವಿತಂ ವಿಚಾರಕ್ಷಮನೆಂ ।
ಬ ನೆಗಟ್ಟಿಯಿಂದೆ ಬಲ್ಲಾ । ಳನೃಪಾಳಂ ಕಾರ್ತಿಕೇಯನಂತೊಪ್ಪಿರ್ಪಂ ॥ 628 ॥

ಇಳೆ ಶುದ್ಧಸ್ಫಟಿಕೋಪಳಸ್ಥಗಿತಮಾಶಾಮಂಡಳಂ ದಿಗ್ವಧೂ ।
ಕುಳವೇಣೀಕುಸುಮೋಪಹಾರರಚಿತಂ ನಾಕಂ ನಿಳಿಂಪೇಶನ ॥
ಮ್ಮಳಶುಂಡಾಳರದಪ್ರಭಾಧವಳಿತಂ ತಾರಾಪಥಂ ತಾರಕೋ ।
ಜ್ವಳಿತಂ ತಾನೆನೆ ಕೊರ್ವಿ ಪರ್ವಿತು ಜಸಂ ಬಲ್ಲಾಳಭೂಪಾಳನಾ ॥ 629 ॥

ದ್ರಾಸಿಸೆಟ್ಟಿಯ ವಾಣಿಜ್ಯ.

ಹರಿದಾಶಾಭಾಂಡಮುಂ ವಾರುಣಿಗೆ ನಡಸುವಂ ವಾರುಣೀವಸ್ತುವಂ ವಿ |
ಸ್ತರದಿಂದಿಂದ್ರಾಶೆಯೊಳ್ ಪೆರ್ಚಿಸುವನೊಸೆದು ಕೌಬೇರಿಯಿಂ ದ್ರವ್ಯಮುಂ ನೋ ||
ಡಿರೆ ಯಾಮ್ಯಾಭಾಗದೊಳ್ ಸಂದಿಸುವನೆಸೆವ ಮೌಲ್ಯಂಗಳಂ ಯಾಮ್ಯದಿಂದು |
ತ್ತರದಿಕ್ಕಿಂಗಟ್ಟುವಂ ನೋಡನುಪಮವಣಿಜಂ ದ್ರಾಸೆಯಂ ದೋಷದೂರಂ || 630 ||

ಬಾಣವೂರು.

ಬೆಳೆದೆಱಗಿದ ಕಟ್ಟವೆಗಳಿಂ | ಗಿಳಿವಿಂಡಿಂ ನಂದನಂಗಳಿಂದಳಿಕುಳದಿಂ |
ಬಳಸಿದ ಪೂರ್ಣತಟಾಕಾ | ವಳಿಯಿಂದುರ್ವರೆಗೆ ಬಾಣವೂರ್ ಸೊಗಯಿಸುಗುಂ
|| 631 ||

ಅರಸಿಯಕೆರೆ.

ಮುಳಿದಾಗಳೆ ಕೂರ್ಪವರೊಳ್ | ತಿಳಿವುದು ತಿಳಿವುದು ಗಡೆಂದು ಸಾಱುವ
ತೆಱದಿಂ |
ಗಟ್ಟಿಪುವ ಗಿಳಿವಿಂಡಿನ ಕಳ | ಕಳವರಸಿಯಕೆಱೆಯ ಬನದೊಳೊಪ್ಪುತ್ತಿ
ರ್ಕ್ಕುಂ || 632 ||

---

## ಅಗ್ಗಳ. 1189.

ಈತನು ಚಂದ್ರಪ್ರಭಪುರಾಣವನ್ನು ಬರೆದಿದ್ದಾನೆ[1]. ಇವನು ಜೈನಕವಿ; ಮೂಲಸಂಘ ದೇಶೀಯಗಣ ಪುಸ್ತಕಗಚ್ಛ ಕೊಂಡಕುಂದವಂಶದಲ್ಲಿ ಹುಟ್ಟಿದವನು. ಇವನ ತಂದೆ ಶಾಂತೀಶ; ತಾಯಿ ಪೋಚಾಂಬಿಕೆ; ಗುರು ಶ್ರುತಕೀರ್ತಿ ತ್ರೈವಿದ್ಯ. "ಸುರರಾಜಾರ್ಚಿತನಿಂಗಳೇಶ್ವರಪುರಶ್ರೀತೀರ್ಥಚಂದ್ರಪ್ರಭಂ ಪರಮೇಶಂ" ಎಂಬುದರಿಂದ ಈತನು ಇಂಗಳೇಶ್ವರವೆಂಬ ಊರಿನವನೆಂದು ಊಹಿಸಬಹುದಾಗಿದೆ. ಈತನಿಗೆ ಜೈನಜನಮನೋಹರಚರಿತ; ಕವಿಕುಳಕಳಭವ್ರಾತಯೂಥಾಧಿನಾಥ; ಕಾವ್ಯನೌಕರ್ಣಧಾರ; ಭಾರತೀಭಾಳನೇತ್ರ; ಸಾಹಿತ್ಯವಿದ್ಯಾವಿನೋದ; ಜಿನಸಮಯಸರಸ್ಸಾರಕೇಳೀಮರಾಳ; ಸುಲಲಿತಕವಿತಾನರ್ತಕೀನೃತ್ಯರಂಗ ಎಂಬ ಬಿರುದುಗಳಿದ್ದಂತೆ ಆಶ್ವಾಸಗಳ ಆದ್ಯಂತಪದ್ಯಗಳಿಂದ ತಿಳಿಯುತ್ತದೆ. "ಕಳೆಗಳೆನಿತಸಿತಱೊಳಮಗ್ಗಳಗಣ್ಣಿಂ ತೋರ್ಪನಗ್ಗಳಂ ನೃಪಸಭೆಯೊಳ್" ಎಂಬುದರಿಂದ ಈತನು ರಾಜಸಭೆಯಲ್ಲಿ ಪ್ರಸಿದ್ಧಕವಿಯಾಗಿದ್ದಂತೆ ತೋರುತ್ತದೆ. ಈ ಗ್ರಂಥವನ್ನು ಶಕ 1111 ರಲ್ಲಿ—ಎಂದರೆ 1189 ರಲ್ಲಿ—ಬರೆದಂತೆ,

1 ಅಗ್ಗಳಲೀಲಾವತಿಯೆಂದು ಒಂದು ಗ್ರಂಥವಿದೆಯೆಂದೂ ಅದು ವೈದ್ಯಶಾಸ್ತ್ರವೆಂದೂ ಕೆಲವರು ಹೇಳಿಕೊಳ್ಳುತ್ತಾರೆ. ಇದಕ್ಕೆ ಆವ ಆಧಾರವೂ ನಮಗೆ ದೊರೆತಿಲ್ಲ.

ಏಕಾದಶಶತಮುಂ ಮು । ತ್ತೇಕಾದಶಮಾಗೆ ಶಕನೃಪಾಬ್ದಂ ಸೌಮ್ಯ ।
ಪ್ರಾಕಟವರ್ಷದ ಚೈತ್ರಸಿ। ತೈಕಾದಶಿಯಂದು ನೆಗಳ್ದುದೀಕೃತಿರತ್ನಂ ॥

ಎಂಬ ಪದ್ಯದಿಂದ ತಿಳಿಯುತ್ತದೆ.

ಈತನು ಪೂರ್ವಕವಿಗಳಲ್ಲಿ **ಪಂಪ, ಪೊನ್ನ, ರನ್ನ** ಇವರುಗಳ ಹೆಸರನ್ನು ಹೇಳುತ್ತಾನೆ.

ಈ ಕವಿಯನ್ನು **ಆಚಣ್ಣ** (ಸು. 1195), **ದೇವಕವಿ** (ಸು. 1200), **ಆಂಡಯ್ಯ** (ಸು. 1235), **ಕಮಲಭವ** (ಸು. 1235), **ಬಾಹುಬಲಿ** (ಸು. 1560) ಮೊದಲಾದವರು ಹೊಗಳಿದ್ದಾರೆ. **ಪಾರ್ಶ್ವನು** (1205) ತನ್ನ ಪಾರ್ಶ್ವನಾಥಪುರಾಣದಲ್ಲಿ ಈತನನ್ನು ಹೀಗೆ ಸ್ತುತಿಸಿದ್ದಾನೆ:—

ಜಿನಚಂದ್ರಸ್ತವನದೆ ಪಾ । ವನಮೆನಿಸುವ ಸೂಕ್ತಿ ಕೀರ್ತಿದೀಪಿಕೆಗುಜ್ಜ್ವ ।
ವನಕರಮೆನೆ ಕೌತುಕಮಂ । ಜನಿಯಿಸುಗುಂ ಕವಿಗಳೊಳಗೆ ನೆಗಳ್ದಗ್ಗಳನಾ ॥
ವಾಸ್ತವಭಕ್ತಿಯುತಂ ರೂ। ಪಸ್ತವನಮಣಿಪ್ರವಾಳಮಂ ಜಿನನಾಸ್ಥಾ ।
ನಸ್ತವನಮನೊದವಿಸಿ ಭೂ । ವಿಸ್ತುತನಾದಗ್ಗಳಂಗನುಗ್ಗಳರೊಳರೇ ॥ [1]

ತನ್ನ ಕವಿತಾಚಾತುರಿಯನ್ನು ಈ ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ:—

ಕಿವಿಯಂ ಜಕ್ಕುಲಿಪಂತ ನುಣ್ಪುದರ್ವ ಶಬ್ದಂ ಶಬ್ದಸಂದರ್ಭದೊಳ್ ।
ಸವಿಯಂ ಮುಂದಿಡುವರ್ಥಮರ್ಥದೊಳೊಡಂಬಟ್ಟೊಳ್ಪನೋರಂತೆ ಬೀ ॥
ಱುವ ಭಾವಂ ಸಲೆ ಭಾವದಿಂದೊದವಿ ಚಿತ್ತಂ ಮೂಡಿ ತೇಂಕಾಡೆ ಪೊ ।
ಣ್ಮುವ ನಾನಾರಸಮೊಪ್ಪೆ ವಸ್ತುಕೃತಿಯಂ ಪೇಳ್ದಗ್ಗಳಂ ಮೆಚ್ಚಿಪಂ ॥
ಗಜಪರ್ ಪವಣಱಿಯದೆ ಜಿಸ । ಗೊಳಿಸೆಣಸಿಂ ಲೋಕದೊಳಗೆ ವರ್ತಿಪ ವಿಳಸ ।
ತ್ಕವಿಗಳೆನಿತನಿತಱೊಳಮು । ಗ್ಗಳಗಣ್ಮಂ ತೋರ್ಪನಗ್ಗಳಂ ನೃಪಸಭೆಯೊಳ್ ॥
ಅಸಹಾಯತೆಯಿಂ ಸಂಸಾ । ರಸಮುದ್ರಮನೀಸಿದಂ ಶಶಿಪ್ರಭನೆಂತಂ ।
ತಸಹಾಯತೆಯಿಂ ತಚ್ಚರಿ । ತಸಮುದ್ರಮನೀಸಿ ಜಸಮನಗ್ಗಳನಾಂತಂ ॥

ಇವನ ಗ್ರಂಥ

## ಚಂದ್ರಪ್ರಭಪುರಾಣ.

ಇದು ಎಂಟನೆಯ ತೀರ್ಥಕರನಾದ ಚಂದ್ರಪ್ರಭನ ಚರಿತವು; 16 ಆಶ್ವಾಸಗಳಾಗಿ ಭಾಗಿಸಲ್ಪಟ್ಟಿದೆ. ಈ ಗ್ರಂಥವನ್ನು ಈತನ ಗುರುವಾದ ಶ್ರುತಕೀರ್ತಿಯ ಆಜ್ಞಾನುಸಾರವಾಗಿ ಹೇಳಿದಂತೆ, ಮದರಾಸ್ ಪ್ರಾಚ್ಯಕೋಶಾಲಯದಲ್ಲಿ

---

1. ಈ ಪದ್ಯದಿಂದ ಅಗ್ಗಳನು ರೂಪಸ್ತವನಮಣಿಪ್ರವಾಳ, ಜಿನಾಸ್ಥಾನಸ್ತವನ ಎಂಬ ಗ್ರಂಥಗಳನ್ನು ಬರೆದಿರುವಂತೆ ತಿಳಿಯುತ್ತದೆ. ಇವು ಬೇರೆ ಗ್ರಂಥಗಳೋ ಅಥವಾ ಚಂದ್ರಪ್ರಭಪುರಾಣದಲ್ಲಿ ವರ್ಣಿಸಿರುವ ಭಾಗಗಳಿಗೆಯೇ ಅನ್ವಯಿಸುತ್ತವೆಯೋ ತಿಳಿಯದು.

ರುವ ಬಿಳಗಿಯ ತಾಲ್ಲೂಕಿನ ಒಂದು ಶಾಸನದಲ್ಲಿಯ (1592) ಈ ಪದ್ಯದಿಂದ ತಿಳಿಯುತ್ತದೆ :—

ಶ್ರುತಕೀರ್ತಿದೇವನತ್ಯೂ। ರ್ಜಿತಕೀರ್ತಿಕನಾತ್ಮಶಿಷ್ಯನಿಂದಗ್ಗಳನಿಂ।
ದತಿಶಯಿತಕಾವ್ಯಮಾರ್ಗದೆ। ನುತಚಂದ್ರಪ್ರಭಪುರಾಣಮಂ ಪೇೞಿಸಿದಂ॥

ತನ್ನ ಗ್ರಂಥದ ಉತ್ಕೃಷ್ಟತೆಯನ್ನು ಈ ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ:—

ನಯದಿಂ ಪಂಪನೊೞಲ್ದು ನಿರ್ಮಿಸಿದ ಪೊನ್ನಂ ಪ್ರೀತಿಯಿಂ ಪೇೞ್ದ ಭ।
ಕ್ತಿಯಿನಾರತ್ನಕವೀಶ್ವರಂ ಸಮೆದ ತತ್ಕಾವ್ಯತ್ರಯಕ್ಕಂ ಜಗ॥
ತ್ತ್ರಯಮುಂ ಮುಂ ಬೆಲೆಯಾಗಿ ಪೋಯ್ತನೆ ಬೞಿಕ್ಕಾಂ ಪೇೞ್ದ ಚಂದ್ರಪ್ರಭೋ।
ದಯವಿಸ್ತಾರಿಯೆನಿಪ್ಪ ಕಾವ್ಯಮಿದಮೂಲ್ಯತ್ವಕ್ಕೆ ಪಕ್ಕಾಗದೇ॥
ಪ್ರಮುದಿತಭವ್ಯಮಂ ಸುಕವಿಸಂಕುಲಸೇವ್ಯಮನಾಪ್ತತತ್ತ್ವವಿ।
ತ್ಸಮುದಯಭಾವ್ಯಮಂ ಸಕಲಸತ್ಕೃತಿನವ್ಯಮನೀಜಿನಾನ್ವಯ॥
ಕ್ರಮಯುತಕಾವ್ಯಮಂ ನೆಱೆಯೆ ನಿರ್ಮಿಸಿ ನಿರ್ಮಲಭಕ್ತಿಭಾವದಿಂ।
ದಮಲಿನಕೀರ್ತಿಗಂ ಸುಕೃತಪೂರ್ತಿಗಮಗ್ಗಳನಂತು ನೋಂತರಾರ್॥

ಗ್ರಂಥಾವತಾರದಲ್ಲಿ ಚಂದ್ರಪ್ರಭನನ್ನು ಸ್ತುತಿಸಿದ್ದಾನೆ. ಬಳಿಕ ಸಿದ್ಧಾದಿಗಳನ್ನೂ ಪಂಚಗುರುಗಳನ್ನೂ ಜಿನಧರ್ಮವನ್ನೂ ಯಕ್ಷಯಕ್ಷಿಯರನ್ನೂ ಸರಸ್ವತಿಯನ್ನೂ ಸ್ತುತಿಸಿ, ಅನಂತರ ಅನುಬದ್ಧಕೇವಲಿಗಳಿಂದ ಶ್ರುತಕೀರ್ತಿದೇವನವರೆಗೆ ಗುರುಗಳನ್ನು[1] ಪರಿಪಿಡಿಯಿಂದ ಸ್ತುತಿಸಿದ್ದಾನೆ.

ಆಶ್ವಾಸಗಳ ಕೊನೆಯಲ್ಲಿ

ಇದು ಪರಮಪುರುನಾಥಕುಳಕುಭೃತ್ಸಮುದ್ಭೂತಪ್ರವಚನಸರಿತ್ಸರಿನ್ನಾಥ ಶ್ರುತಕೀರ್ತಿತ್ರೈವಿದ್ಯಚಕ್ರವರ್ತಿ ಪದಪದ್ಮನಿಧಾನದೀಪವರ್ತಿ ಶ್ರೀಮದಗ್ಗಳದೇವವಿರಚಿತಮಪ್ಪ ಚಂದ್ರಪ್ರಭಪುರಾಣದೊಳ್

ಎಂಬ ಗದ್ಯವಿದೆ.

ಇವನ ಬಂಧವು ಅತಿಪ್ರೌಢವಾಗಿಯೂ ಸಂಸ್ಕೃತಪದಭೂಯಿಷ್ಠವಾಗಿಯೂ ಇದೆ.

---

1. ಅನುಬದ್ಧಕೇವಲಿಗಳು, ಶ್ರುತಕೇವಲಿಗಳು, ಕೊಂಡಕುಂದ, ಭೂತಬಲಿ, ಪುಷ್ಪದಂತ, ವೀರಸೇನ, ಜಿನಸೇನ, ಅಕಳಂಕ, ಗೃಧ್ರಪಿಂಛ, ಅರ್ಹದ್ಬಲಿ, ಸಿಂಹನಂದಿ, ಸಮಂತಭದ್ರ, ಕವಿಪರಮೇಷ್ಠಿ, ಪೂಜ್ಯಪಾದ, ಕೊಂಡಕುಂದಾನ್ವಯಕುಲಚಂದ್ರ, ಮಾಘಣಂದಿ, ಕನಕನಂದಿ, ಶ್ರುತಕೀರ್ತಿ, ಮುನಿಚಂದ್ರ, ನಯಕೀರ್ತಿ, ಉದಯಚಂದ್ರ, ವೀರಣಂದಿ, ಮಾಘಣಂದಿ, ವರ್ಧಮಾನ, ದೇವಚಂದ್ರ, ದಾಮನಂದಿ, ನೇಮಿಚಂದ್ರ, ಶ್ರುತಕೀರ್ತಿ.

ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

### ಆಲಿಕಲ್ಲು.

ಘನಸಮಯಶಬರಕರಗತ। ಕನತ್ತಟಿದ್ದಂಡಪಾತವಿಗಳನ್ನೀಲ।
ಸ್ತನಯಿತ್ನುಕುಲತಮಾಲೀ। ವನಪ್ರಸೂನಂಗಳೆನಿಸಿದುವು ಕರಕಂಗಳ್ ॥633॥

### ಬೇಸಗೆ.

ಅತಿತಪ್ತೋದ್ವೃತ್ತಧೂಳೀಪಿಹಿತಮಹಿತಳಂ ತುಂಗವಾತೂಳಿಕಾಳಿಂ।
ಗಿತರೋದೋಮಂಡಳಂ ಪ್ರೋಚ್ಛಳಿತಮರುಮರೀಚೀ....ದಿಕ್ಸಂ॥
ತತಿ ಬಂದತ್ತಂದಗುರ್ವಂ ಬಗೆಗೆ ಪಡೆದಮೋಘಂ ಸಮುದ್ಘಾತಮಾಘಂ।
ಹೃತನದ್ಯೋಘಂ ವಿಮೋಘಂ ಜನಿತಜನಮನೋಗ್ಲಾನಿದಾಘಂ ನಿದಾಘಂ ॥634॥

### ಮಾವು.

ತಳಿರ್ಗಳಿನೊರ್ಮೆ ಪೂಗುಡಿಯಿನೊರ್ಮೆ ಪಸುರ್ವಡಿಯಿಂದಮೊರ್ಮೆ ಕಾ।
ಯ್ಗಳಿನಿರದೊರ್ಮೆ ಪಣ್ಗಳಿನದೊರ್ಮೆ ಜನಕ್ಕೆ ಮನಃಪ್ರಮೋದಮಂ॥
ಬಳೆಯಿಸಿ ಮಾಣ್ದುದಲ್ತು ಸವಿಯಂ ಕಿವಿಗೋಲಗಿಸಿತ್ತು ಮತ್ತೆ ಕೋ।
ಕಿಳರವದೊರ್ಮೆ ಭೃಂಗರುತದೊರ್ಮೆ ಶುಕಸ್ವರದೊರ್ಮೆ ಮಾಮರಂ ॥635॥

### ಕಮಲ.

ನಡು ನಸುಪೊಂಗಿ ಸುತ್ತಱದು ಪತ್ತಿದೆಸೞ್ಕ್ರನೆವಿರ್ಚೆ ತಣ್ಣೆರ।
ಲ್ಗಿಡೆದೆಱೆಪಾಗೆ ಪೊಕ್ಕು ಸುೞಿಯುತ್ತಿರೆ ತಳ್ಪು ಸಡಿಲ್ಪುಗಲ್ದರ॥
ಲ್ಪಿಡಿದುಡುಗಿರ್ದ ಕೇಸರದ ನುಣ್ಮ್ರನೆ ಸೂಸೆ ಮರಲ್ಗು ಚೆಲ್ವಿನೊಳ್।
ಗಡಣಿಸಿದತ್ತು ಮುಂಬಗಲೊಳಂಬುರುಹಂ ಸರಸೀಸಮೂಹದೊಳ್ ॥636॥

### ದುಂಬಿಯ ಮರಿ.

ಕಿಱುಮುಡುಗೊಂಡ ಬಂಡಿನೊಳಗೀಸಿ ಪೊದೞ್ಪಿಡಿದಿರ್ದ ಕುತ್ತಸ।
ೞ್ಗಱುವದೊಳೆಯ್ದಿ ಮೆಯ್ಗರೆದು ಕೇಸರದೊಳ್ ನಲವಿಂ ಪೊರಳ್ದು ನೀ॥
ಳ್ಪಱಗಿದ ಕೀೞ್ಸೞ್ತ್ರಣಿಯೊಳೊಯ್ಯನೆ ಜಾಱ ಪರಾಗಪುಂಜನೊಳ್।
ಪಱವಡಿಸಿತ್ತು ಭೃಂಗಶಿಶು ನೀರಜದೊಳ್ ನಿಜಪಾಂಸುಕೇಳಿಯಂ ॥637॥

### ಚಂದ್ರಾಸ್ತ.

ಇದು ಸ ೞಿಗಾಳಿಯಿಂ ನೆಗೆದು ತೋಱುವ ಕಿಂಶುಕಶುಷ್ಕಪತ್ರಮ।
ಲ್ತಿದು ಗಗನಕ್ಕೆ ನಾಡೆ ನಲಿವಾಱದದೊಂದುಕಪೋತಮಲ್ತು ಮ॥
ತ್ತಿದು ಪರಿದಿರ್ದ ಪಾವಸೆ ಮುಗಿಲ್ಕ್ರಱಯೆಂಬಿನಮಿಂಬುಗೆಟ್ಟು ಕಂ।
ದಿದ ಪೞಿಗಂಚುಗನ್ನಡಿವೊಲೇನಿೞಿದಾದುದೊ ಚಂದ್ರಮಂಡಲಂ ॥638॥

### ಖಾತಂ.

ಯುತಕಮಲಂ ಗತಕಮಲಂ । ಚ್ಯುತಕುರವಂ ಮುಕ್ತಕುರವಮಾತ್ತಕುವಲಯಂ ।
ಪ್ರತಿಮುಕ್ತಕುವಲಯಂ ಚಿ । ತ್ರತರಂ ನೋಡುವ ನರಂಗೆ ಖಾತಮುಖಾತಂ ॥ 639 ॥

### ಹೆಣ್ಣಿಗೆ ಬುದ್ಧಿವಾದ.

ಅಕ್ಕ ನಿಜಪ್ರಿಯಂಗೆ ಮನದಂದದೆ ನೀಂ ಬೆಸಕೆಯ್ವುದಾಗಳುಂ ।
ಮಕ್ಕಳ ಮಾೞ್ಕೆಯಂತಿರದೆ ನೀನೊಡವಂದ ಜನಕ್ಕೆ ಸಂತಸಂ ॥
ಮೊಕ್ಕಳಮಾಗೆ ಮನ್ನಿಪುದು ಮಾವನ ಪೆರ್ಮೆಗಮತ್ತೆಯೊಲ್ಮೆಗಂ ।
ತಕ್ಕ ನೆಗೞ್ತೆಯಂ ನೆಗೞ್ದೀವುದು ಪೆತ್ತಮಗಂ ಪ್ರಮೋದಮಂ ॥ 640 ॥

### ಜಟ್ಟಿಗ.

ಬಿಟ್ಟ ಕುರುಳ್ ಪೊದೞ್ದ ಕಿಸುಗಣ್ ನಸುಗೆತ್ತುವ ಮಿಾಸೆ ಬಾಂಗೆ ತೂಂ ।
ಕಿಟ್ಟವೊಲಪ್ಪ ಮೆಯ್ ಮಿಳಿರ್ವ ನಾಲಗೆಯುರ್ಬಿದ ಪುರ್ಬು ಕರ್ಬುನ ॥
ಕ್ಕಿಟ್ಟಳಮಪ್ಪ ಕರ್ಕಶತೆಯೆತ್ತಿದ ಕೆಚ್ಚಿನ ಡಂಗೆ ಭೀತಿಯಂ ।
ಪುಟ್ಟಿಸೆ ಬಂದು ಕಟ್ಟಿದಿರೊಳಿರ್ದನದೊರ್ವನದುರ್ತು ಜಟ್ಟಿಗಂ ॥ 641 ॥

### ಕುಕವಿನಿಂದೆ.

ಜೀಯೆನೆ ಬಲ್ಲವರ್ ನೆಜೀಯೆ ಸತ್ಕೃತಿವೇೞದೆ ಪೇೞ್ ಘುಣಾಕ್ಷರ।
ಪ್ರಾಯದೆ ಶಬ್ದಮೊಂದೆರಡು ಮತ್ತೆ ವಿಚಾರಿಸಿ ನೋಡೆ ಕಾಕತಾ ॥
ಳೀಯದೆ ವಾಚ್ಯಮೊಂದೆರಡು ಕೂಡೆ ನಿಘರ್ಷಿಪೊಡಂಧಲಾವಕ ।
ನ್ಯಾಯದೆ ಭಾವಮೊಂದೆರಡು ಲೇಸೆನೆ ಪೇೞ್ದುಜದಿರ್ಪುದೊಪ್ಪಮೇ ॥ 642 ॥

---

## ಕುಪ್ಪಟೂರ ಚಿಮ್ಮರ ವಾಸುದೇವ; ದೊಡ್ಡರ ನಾಚಯ; ಕೇಶವದೇವ. 1189.

ಈ ಮೂವರು ಕವಿಗಳೂ ಸೇರಿ ಸೊರಬದ 179 ನೆಯ ಶಾಸನವನ್ನು ಬರೆದಂತೆ ಆ ಶಾಸನದ ಕೊನೆಯಲ್ಲಿರುವ

ಒದವಿದ ಕುಪ್ಪಟೂರ ಸುಜನಾಗ್ರಣಿ ಚಿಮ್ಮರವಾಸುದೇವನುಂ ।
ಸದುಗುಣಯುಕ್ತನಪ್ಪ ಕವಿ ದೊಡ್ಡರನಾಚಯನುಂ ಸಮಸ್ತ ಸ ॥
. . . . . . . . . . . . . ಗ್ರರ ಕೇಶವದೇವನೆಂಬಿವರ್ ।
ಮುದದೊಳೆ ಕೂಡಿ ಪೇೞ್ದಿರಿದು ಸಕ್ಷೆ ಶಶಾಂಕದಿನೇಶರುಳ್ಳಿನಂ ॥

ಎಂಬ ಪದ್ಯದಿಂದ ತಿಳಿಯುತ್ತದೆ. ಈ ಶಾಸನವು ತ್ರಿಭುವನಮಲ್ಲವೀರಸೋಮೇಶ್ವರನ (1182–1189) ಕಾಲದಲ್ಲಿ ಶಕ 1111 ರಲ್ಲಿ—ಎಂದರೆ 1189 ರಲ್ಲಿ—ಬರೆದುದು. ಇದರಲ್ಲಿ ಕಾಮರಸನು ರಾಮೇಶ್ವರದೇವರಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ಈ ಶಾಸನದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ:—

ಕಾಮರಸ.

ಮಿಗೆ ತೇಜಂ ಪೆಱಗರ್ಗೆ ಸೈರಿಸುವನೇ ಮಿತ್ರಂ ದಿಟಕ್ಕೆಂದು ಭಾ ।
ಸುಗೆ ಸೈರಿಪ್ಪನುದಾತ್ತದಾನಗುಣಮಂ ಸಂತಾನಮೆಂದಬ್ಧಿಜಂ ॥
ನೆಗೞ್ದಾ ಕಲ್ಪಕುಜಕ್ಕೆ ಸೈರಿಸುವನುತ್ತುಂಗತ್ವಮಂ ಗೋತ್ರಮಂ ।
ದಗದೊಳ್ ಸೈರಿಪನುಂತೆ ಸೈರಿಸುವನೇ ಕಾದಂಬಕಂಠೀರವಂ ॥ 643 ॥

ಮೊಱೆಯೆಂಬುದು ಬಾಂಧವರೊಳ್ । ತೊಱೆಯೆಂಬುದು ನದನದೀನಿಕಾಯದೊಳಾದಂ ।
ಸೆಱೆಯೆಂಬುದು ಜೂದುಗಳೊಳ್ । ಪೆಱತೆಡೆಯೊಳಿವಿಲ್ಲ ಕಾಮನೃಪನಾಳ್ವೆಳೆಯೊಳ್ ॥ 644 ॥

ಧರೆಗುರುಳೆ ತಮ್ಮ ತಲೆಗಳ್ । ಕರಿಶಿರಮಂ ನಿಜಕಬಂಧದೊಳ್ ಪತ್ತಿಸಿ ಬೀ ।
ರರ ತಂಡಂ ಗಣಪರವೋಲ್ । ಕರಮೆಸೆದರ್ ಕಾಮಭೂಪನಿಱಿದಾಹವದೊಳ್ ॥645॥

---

## ಮಾಳಿಯ. 1192.

ಈತನು ಷಿಕಾರಿಪುರದ 105 ನೆಯ ಶಾಸನವನ್ನು ಬರೆದುದಾಗಿ ಆ ಶಾಸನದ ಕೊನೆಯಲ್ಲಿರುವ "ಕವಿರಾಜರ ಪಂಡಿತ ಮಾಳಿಯನ ಕವಿತೆ" ಎಂಬ ವಾಕ್ಯದಿಂದ ತಿಳಿಯುತ್ತದೆ. ಈ ಶಾಸನವು ಶಕ 1114 ರಲ್ಲಿ—ಎಂದರೆ 1192 ರಲ್ಲಿ—ಬರೆದುದು. ಇದರಲ್ಲಿ ಎರಗಚಮೂಪನು ದಕ್ಷಿಣಕೇದಾರೇಶ್ವರದೇವರಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ಈ ಶಾಸನದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

ಹೊಯ್ಸಳ ನಾರಸಿಂಹ.

ಮುನಿ ಮುನಿದೀಂಟಿದಬ್ಧಿ ಮರನಲ್ಲದ ಕಲ್ಪಕುಜಂ ಸುರಾರಿಸೂ ।
ದನನದಟಿಂದಮೆತ್ತದತಿಭಂಗದೊಳೊಂದದ ಮಂದರಾದ್ರಿ ನೆ ॥

ಟ್ಟನೆ ವ್ಯಾಗರೂಪಮಂ ತಳೆದು ಪುಟ್ಟಿದ ಕೇಸರಿ ಗುಣ್ಪಿನಾರ್ಪಿನೊಳ್ ।
ವಿನುತಮೆನಿಪ್ಪ ಬಿಣ್ಪಿನ ಪರಾಕ್ರಮದೊಳ್ ನರಸಿಂಹಭೂಭುಜಂ ॥ 646 ॥

ತೆರಳದರಾತಿಭೂಭುಜರ ನಿಟ್ಟೆಲುವಂ ಸಲೆ ತೇದು ಬೊಟ್ಟನಿ ।
ಟ್ಟುರುಳ್ವ ಶಿರಂಗಳಂ ಬಲುಗರುಳ್ಗಳೊಳಾಗಳೆ ಕೋದು ಕಂಠದೊಳ್ ॥
ಧರಿಸಿ ಕಪಾಳಮಂ ಪಿಡಿದು ನೆತ್ತರನೀಂಟಿ ಮನೋನುರಾಗದಿಂ ।
ಧುರದೊಳೆ ಖಡ್ಗಕಾಳಿ ಕುಣಿದಾಡುವಳೀನರಸಿಂಹಭೂಪನಾ ॥ 647 ॥

---

## ಹರಿಹರಸೂರಿ. 1194.

ಈತನು ಅರಸಿಯಕೆರೆಯ 118ನೆಯ ಶಾಸನವನ್ನು ಬರೆದನೆಂದೂ ಸೀಗುರಿಯ ಕಾಮನ ತಮ್ಮನೆಂದೂ ಇವನ ಕೃತಿಯನ್ನು ತ್ರಿವಿಕ್ರಮಪಂಡಿತನು[1] ತಿದ್ದಿದನೆಂದೂ ಆ ಶಾಸನದ ಅಂತ್ಯದಲ್ಲಿರುವ—

ಹರಿಹರಸೂರಿ ಸೀಗುರಿಯ ಕಾಮನ ತಮ್ಮನುಮೇಶದತ್ತವಾ ।
ಗ್ವಿರಚಿಸಿದಂ ತ್ರಿವಿಕ್ರಮಕವೀಶ್ವರನೂರ್ಜಿತವಾಗೆ ತಿರ್ದಿ ತಾಂ ಬರೆಪಂ ॥

ಎಂಬ ಪದ್ಯಭಾಗದಿಂದ ತಿಳಿಯುತ್ತದೆ. ಈ ಶಾಸನವು ಶಕ 1116 ರಲ್ಲಿ—ಎಂದರೆ 1194 ರಲ್ಲಿ—ಬರೆದುದು. ಇದರಲ್ಲಿ ವೀರಬಲ್ಲಾಳನ ದಂಡನಾಯಕನಾದ ಮಾಚಿರಾಜಯ್ಯನು ಮಲ್ಲಿಕಾರ್ಜುನ ಮಧುಸೂದನದೇವರುಗಳಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ಈ ಶಾಸನದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

### ವಿಷ್ಣುವರ್ಧನ.

ಮಲೆವ ವಿರೋಧಿಮಂಡಳಿಕಮಂಡಳಿಯಂ ಮರಳೊತ್ತಿ ಕೊಳ್ವ ಕೂ ।
ರಲಗಿನ ಕೋಳೆ ಕಾಳವಿಳಯಾಹಿಯ ಕೋಳೆನೆ ಗೆಲ್ದು ನೀಳ್ದ ತೋ ॥
ಳ್ವಲದೆ ನಿವಿರ್ಚಿ ಧಾತ್ರಿಯನಪಾಕೃತಕಂಟಕವಾಗೆ ರಾಜ್ಯದ ।
ಗ್ಗಲಿಕೆಯನಾಳ್ದು ಪಾಲಿಸಿದನಪ್ರತಿಮಂ ಕಲಿ ವಿಷ್ಣುವರ್ಧನಂ ॥ 648 ॥

### ಮಾಚದಂಡನಾಥ.

ಕರಚಕ್ರಂ ಮುರವಿದ್ವಿಷಂಗೆ ಬಳವಿದ್ವಿಷ್ಟಂಗೆ ವಜ್ರಂ ಭಯಂ ।
ಕರಭಾಳಪ್ರಬಳೇಕ್ಷಣಂ ಪುರಹರಂಗಾರ್ವರ್ಗಂಗೆ ಕಾಯ್ಪುಗ್ರಕೇ ॥

---

1. ಪುಟ 283.

ಸರಿಗುಚ್ಚಂಡನಖಿಂ ಪ್ರಧಾನಮುದುಪೋಲ್ ಬಲ್ಲಾಳಭೂಪಂಗಿಳಾ ।
ಭರಣಂ ದ್ರೋಹಘರಟ್ಟ ಮಾಚಣನೆ ನಚ್ಚಿಂದುಂ ಜಯಕ್ರೀಡೆಯೊಳ್ ॥ 649 ॥

ಮಧುಸೂದನ ದಂಡನಾಥನ ಪುರ.

ತುಱುಗಿದ ನಂದನಂ ಪರಿವ ಕಾಲ್ವೆ ಕಡಲ್ಗಿವೆ ತೋಡೆನಿಪ್ಪ ಪೆ ।
ರ್ಗಱೆ ಬಳಸಿರ್ದ ಪೆರ್ವೆಳಸು ಸಂದಣಿವೆತ್ತ ಜನಂ ವಿಳಾಸದಿಂ ॥
ಮೆಱೆವಮರಾಲಯಂ ಬಹುಗೃಹಂಗಳ ಸೊಂಪಿವಱಿಂದೆ ಚೆಲ್ವು ಕ ।
ಣ್ಬೆಱೆದಪೊಲೊಪ್ಪುಗುಂ ಪುರವರಂ ಮಧುಸೂದನದಂಡನಾಥನಾ ॥ 650 ॥

---

## ಪಾಲ್ಕುರಿಕೆ ಸೋಮನಾಥ. ಸು. 1195.

ಈತನು—"ಆರಾಧ್ಯಚಾರಿತ್ರ, ಬಸವಪುರಾಣ, ಅನ್ಯವಾದಕೋಲಾಹಲ, ಬಸವಣ್ಣನ ಪಂಚಗದ್ಯ, ಸದ್ಗುರುರಗಳೆ, ಚೆನ್ನಬಸವರಗಳೆ, ಶರಣುಬಸವರಗಳೆ ಇವುಗಳನ್ನು ನಿರೂಪಿಸಿ ಸಕಲವೇದಾಗಮಪುರಾಣವಾಕ್ಯಂಗಳಿಂದ ಇಪ್ಪತ್ತೈದು ಪ್ರಕರಣಪದ್ಧತಿಯಿಂದ ಸೋಮನಾಥಭಾಷ್ಯವೆಂದು ಸಂಗ್ರಹಿಸಿ ಮೆಱೆವಣಿಗೆಮಾಡಿದನು" ಎಂದು ಭೈರವೇಶ್ವರಕಾವ್ಯದ ಕಥಾಸೂತ್ರರತ್ನಾಕರದಲ್ಲಿ ಹೇಳಿದೆ. "ಜ್ಯೋತಿರ್ಮಯಶಾಂಭವೀಜ್ಞಾನದೀಕ್ಷಾಬೋಧೆಯ ಪರಮರಹಸ್ಯಾರ್ಥವಂ ಸಂಗಯ್ಯನೆಂಬ ಶರಣನಿಗೆ 160 ವಚನಗಳಿಂದ ಸಂಗ್ರಹಿಸಿ ಉಪದೇಶಿಸಿದನು." ಇವುಗಳಲ್ಲದೆ ಈತನು ಶೀಲಸಂಪಾದನೆ, ಸೋಮೇಶ್ವರಶತಕ, ಸಹಸ್ರಗಣನಾಮ, ಪಂಚರತ್ನ ಎಂಬ ಗ್ರಂಥಗಳನ್ನೂ ಬರೆದಿದ್ದಾನೆ. ಚತುರ್ವೇದಸಾರಸಂಗ್ರಹವನ್ನೂ ಗಂಗೋದಯಕಾವ್ಯವನ್ನೂ ರಚಿಸಿದ್ದಾನೆ ಎಂದು ಹೇಳುತ್ತಾರೆ.

ಮೇಲೆ ಹೇಳಿದ ಗ್ರಂಥಗಳಲ್ಲಿ ಆರಾಧ್ಯಚಾರಿತ್ರ, ಬಸವಪುರಾಣ, ಇವೆರಡೂ ತೆಲುಗು ಭಾಷೆಯಲ್ಲಿವೆ. ಚತುರ್ವೇದಸಾರಸಂಗ್ರಹವೂ ಇದೇ ಭಾಷೆಯಲ್ಲಿರುವುದಾಗಿ ತಿಳಿಯುತ್ತದೆ. ಅನ್ಯವಾದಕೋಲಾಹಲ, ಬಸವಣ್ಣನ ಪಂಚಗದ್ಯ, ಸೋಮನಾಥಭಾಷ್ಯ, ಇವು ಸಂಸ್ಕೃತಭಾಷೆಯಲ್ಲಿವೆ. ಆದರೆ ಪಂಚಗದ್ಯಗಳ ಕೊನೆಯಲ್ಲಿ ಮಾತ್ರ ಗ್ರಂಥಕರ್ತನ ಅಂಕಿತವುಳ್ಳ ಒಂದೊಂದು ಕನ್ನಡ ಕಂದಪದ್ಯವಿದೆ. ಗಂಗೋದಯಕಾವ್ಯವೂ ಸಂಸ್ಕೃತದಲ್ಲಿ ಇರಬಹುದು. ಉಳಿದ ರಗಳೆಗಳು, ವಚನಗಳು, ಶೀಲಸಂಪಾದನೆ, ಸೋಮೇಶ್ವರಶತಕ, ಸಹಸ್ರಗಣನಾಮ, ಪಂಚರತ್ನ, ಇವು ಕನ್ನಡದಲ್ಲಿವೆ.

**ಈತನು ವೀರಶೈವಕವಿ; ಗೋದಾವರಿಜಿಲ್ಲಾವಿನಲ್ಲಿಯ ಪಾಲ್ಕುರಿಕೆಯಲ್ಲಿ ಹುಟ್ಟಿದವನು. ಈ ಕವಿಯ ಆರಾಧ್ಯಚಾರಿತ್ರದ ಸಂಸ್ಕೃತಪರಿವರ್ತನರೂಪವಾದ ಗುರುರಾಜನ ಪಂಡಿತಚರಿತ್ರದಿಂದ—ಈತನು ವೇಮನಾರಾಧ್ಯನ ಪ್ರಶಿಷ್ಯನಾದ ಗುರುಲಿಂಗಾರ್ಯನ ಶಿಷ್ಯನೆಂದೂ ಬಸವೇಶನ ಶಿಷ್ಯನಾದ ಬಸವೇಶನ ಮಗ**

ನೆಂದೂ[1] ಈ ಆರಾಧ್ಯಚಾರಿತ್ರವನ್ನು ತನ್ನ ಸ್ಯಾಲಕನಾದ ಸೂರಣಾಮಾತ್ಯನಿಗೆ ಹೇಳಿದನೆಂದೂ ತಿಳಿಯುತ್ತದೆ.[2] ಇದೂ ಅಲ್ಲದೆ ವೀರಶೈವಗ್ರಂಥಗಳಿಂದ ಈಯಂಶ ಗಳೂ ತಿಳಿಯಬರುತ್ತವೆ:—ಈತನು ಗಣಪುರದ ಅರಸನಾದ ಜಗದೇಕಮಲ್ಲನಿಂದ ಲಿಂಗಮುದ್ರೆಯ ಭೂಮಿಯನ್ನು ಪಡೆದನು; ಅರುವತ್ತುನಾಲ್ಕು ಶೀಲಗಳನ್ನು ನಡಸುತ್ತಿದ್ದನು. ಮೊಸರುಕುರಿಕೆಯ ಶಾಸ್ತ್ರಿ, ಆಜ್ಯಕುರಿಕೆಯ ಶಾಸ್ತ್ರಿ ಇವರು ಗಳೊಡನೆ ವಾದಮಾಡಿ ಜಯಿಸಿದನು. ವೈಷ್ಣವನಾದ ಚಕ್ರಪಾಣಿರಂಗನಾಥ ನನ್ನು ವಾದದಲ್ಲಿ ಸೋಲಿಸಿ ತನ್ನ ಮಗ ಚತುರ್ಮುಖದ ಬಸವೇಶನಿಂದ ದೀಕ್ಷೆ ಕೊಡಿಸಿದನು. ಪಾಲ್ಕುರಿಕೆಯಿಂದ ಕರ್ಣಾಟದೇಶದೊಳೊಪ್ಪುವ ಕಳ್ಳಿಯಕ್ಕೆ ಬಂದು ಅಲ್ಲಿ ಬಸವನನ್ನು ಗದ್ಯಪದ್ಯಗಳಿಂದ ಸ್ತುತಿಸುತ್ತಿದ್ದನು. ಈಶ್ವರನು ಕರೆದರೂ ಕೈಲಾಸಕ್ಕೆ ಹೋಗದೆ ಅಲ್ಲಿಯೇ ಇದ್ದು ಸಮಾಧಿಯಲ್ಲಿ ಕುಳಿತು ಮಣ್ಣುಮುಚ್ಚಿಸಿಕೊಂಡು ಬಯಲಾದನು.

ಈತನಿಗೆ ತತ್ವವಿದ್ಯಾಕಲಾಪ, ಕವಿತಾಸಾರ, ಅನ್ಯದೈವಕೋಲಾಹಳ, ಪ್ರತ್ಯಕ್ಷಭೃಂಗೀಶನವತಾರ—ಎಂಬ ಬಿರುದುಗಳಿದ್ದಂತೆ ತೋರುತ್ತದೆ.

ಈ ಕವಿಯನ್ನು **ಸೋಮರಾಜನು** (1222) ತನ್ನ **ಉದ್ಭಟಕಾವ್ಯ**ದಲ್ಲಿ "ಸಮುಪಂಚದ್ವ್ಯಪಭಸ್ತವಾಮರಮಹೀಜಾರಾಮನಂ ಸೋಮನಂ" ಎಂದು ಸ್ತುತಿಸಿರುವುದರಿಂದ ಈತನು 1222 ಕ್ಕೆ ಹಿಂದೆ ಇದ್ದನೆಂಬುದು ವ್ಯಕ್ತವಾಗುತ್ತದೆ. ಅಲ್ಲದೆ ಬಸವೇಶನ ಶಿಷ್ಯನ ಮಗನು ಎಂದು ಹೇಳಿಕೊಂಡಿರುವುದರಿಂದ ಬಸವ ನಿಂದ ಸುಮಾರು 30 ವರ್ಷ ಈಚೆ ಇದ್ದಿರಬಹುದು ಬಸವನು 1168 ರಲ್ಲಿ ಮೃತನಾದಂತೆ ತಿಳಿವುದರಿಂದ ಈ ಕವಿ ಸುಮಾರು 1195 ರಲ್ಲಿ ಇದ್ದಿರಬೇಕು.

ಈತನನ್ನು **ಸೋಮರಾಜ, ಗುಬ್ಬಿಯ ಮಲ್ಲಣಾರ್ಯ** (1513) ಮೊದ ಲಾದ ಅನೇಕ ವೀರಶೈವಕವಿಗಳು ಸ್ತುತಿಸಿದ್ದಾರೆ.

---

1 ಭೈರವೇಶ್ವರಕಾವ್ಯದ ಕಥಾಸೂತ್ರರತ್ನಾಕರದಲ್ಲಿ ಪಾಲ್ಕುರಿಕೆ ಸೋಮನಾಥನು ರಾಮದೇವಯ್ಯ ಮಹಾದೇವಿ—ಇವರುಗಳ ಮಗನೆಂದು ಹೇಳಿದೆ.

2. ಬಿಲ್ಲೇಶಿವೇಸೋಮನಾರಾಧ್ಯ ಪ್ರಶಿಷ್ಯಸ್ಯ ಕೃಪಾನಿಧೇಃ ।
ಗುರುಲಿಂಗಾರ್ಯಸ್ಯ ದಯಾಹಸ್ತಗರ್ಭಸಮುದ್ಭವಃ ॥
ಬಸವೇಶಸ್ಯತನಯಃ ಬಸವೇಶ್ವರಗೋತ್ರಕಃ ।
ಬಸವೇಶಭುಜಿಷ್ಯಾತ್ಮಭವೋ ಬಸವಕಿಂಕರಃ ॥
ಶ್ರೀಮತ್ಪಾಲ್ಕುರಿಕಿಸೋಮೇಶನಾಮಾಹಂ ಸರ್ಪವಿತ್ರಮ್ ।
ಪಂಡಿತಾರಾಧ್ಯಚರಿತಾಲಂಕೃತಾಂ ಕೃತಿಮಾರಭೇ ॥
ತತಶ್ಶೃಣು ನತಾಮಾತ್ಯ ಸೂರಣಾಮಾತ್ಯಶೇಖರ ।
ಮಮಾಪಿ ಸನ್ಮಿತ್ರಮಿತಿ ಮತ್ಸ್ಯಾಲಕ ಇತಿ ಪ್ರಿಯಃ ॥

ಇವನ ಗ್ರಂಥಗಳಲ್ಲಿ—

## 1. ಶೀಲಸಂಪಾದನೆ.

ಇದು ವಚನರೂಪವಾದ ಗ್ರಂಥ; ಅಲ್ಲಲ್ಲಿ ಸಂಸ್ಕೃತಶ್ಲೋಕಗಳೂ ಇವೆ. ಇದರಲ್ಲಿ ವೀರಶೈವರ 64 ಶೀಲಗಳು ಹೇಳಿವೆ. ಕವಿ–ವೀರಮಾಹೇಶ್ವರತತ್ವದಲ್ಲಿ ಸತ್ಯಾಚಾರ ಸಂಪನ್ನರಾಗಿರ್ದ ಶರಣರು ಅಜುವತ್ತಾಜು ಶೀಲಂಗಳಂ ನಡಸುವ ಪರಿಯೆಂತೆಂದೊಡೆ—ಎಂದಾರಂಭಿಸಿ ಶೀಲಗಳನ್ನು ಲೆಕ್ಕಮಾಡಿ ಹೇಳಿದ್ದಾನೆ. ಈ ಗ್ರಂಥದಿಂದ ಒಂದೆರಡು ವಾಕ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

ಅನ್ಯದೈವ ಭಜನೆಯಂ ಬಿಡುವುದು. ಜಾತಿಸೂತಕ ಜನನಸೂತಕ ರಜಸ್ಸೂತಕ ಪ್ರೇತ ಸೂತಕಂಗಳಂ ಕಳೆವುದು ‖ 651 ‖

## 2. ಸೋಮೇಶ್ವರಶತಕ.

ಈ ಶತಕಕ್ಕೆ **ಸೋಮಾರಾಧ್ಯಶತಕ** ಎಂಬ ಹೆಸರೂ ಉಂಟು. ಇದು ಬಹಳ ಅಶುದ್ಧವಾಗಿದೆ. ಇದರಲ್ಲಿ ವ್ಯಾಕರಣವಿರುದ್ಧವಾದ ಅನೇಕ ಪ್ರಯೋಗಗಳಿವೆ. ಇದನ್ನು ಸಂಸ್ಕೃತದಲ್ಲಿ ಪಂಡಿತನಾಗಿದ್ದ ಪಾಲ್ಕುರಿಕೆ ಸೋಮನಾಥನು ರಚಿಸಿದನೆಂದು ಹೇಳುವುದು ಕಷ್ಟವಾಗಿದೆ. ಅಲ್ಲದೆ ಶತಕಕಾರನ ಲಿಂಗವು ಪುಲಿಗೆರೆಯಲ್ಲಿದ್ದಂತೆ ಗ್ರಂಥದಿಂದ ತಿಳಿಯುತ್ತದೆ. ಪಾಲ್ಕುರಿಕೆ ಸೋಮನಾಥನ ಸಂಸ್ಕೃತಾಂಧ್ರಗ್ರಂಥಗಳಲ್ಲಿ 'ಪಾಲ್ಕುರಿಕೆಯ ಸೋಮ' ಎಂದೇ ತನ್ನ ಹೆಸರನ್ನು ಹೇಳಿಕೊಂಡಿದ್ದಾನೆ. ಈ ಶತಕದಲ್ಲಿ ಗ್ರಂಥಕರ್ತನ ಹೆಸರು ಸುಮ್ಮನೆ 'ಸೋಮ' ಎಂದಿದೆ ಇದೂ ಅಲ್ಲದೆ ವೀರಶೈವಗ್ರಂಥಗಳಲ್ಲಿ ಪಾಲ್ಕುರಿಕೆಸೋಮಕೃತವೆಂದು ಹೇಳಿರುವ ಗ್ರಂಥಗಳಲ್ಲಿ ಈ ಶತಕವು ಉಕ್ತವಾಗಿಲ್ಲ. ಈ ಕಾರಣಗಳಿಂದ ಶತಕಕಾರನು ಪಾಲ್ಕುರಿಕೆ ಸೋಮನೋ ಅಲ್ಲವೋ ಎಂದು ಸಂದೇಹಿಸಲು ಅವಕಾಶವುಂಟು. ಆದರೂ ಈತನೇ ಶತಕವನ್ನು ಮಾಡಿದನೆಂದು ಪ್ರತೀತಿಯಿರುವುದರಿಂದ ತದನುರೋಧೇನ ಈ ಗ್ರಂಥವು ಇಲ್ಲಿ ಸೇರಿಸಲ್ಪಟ್ಟಿದೆ.

ಇದು ನೀತಿಬೋಧಕವಾದ ಗ್ರಂಥ; ಇದರಲ್ಲಿ 107 ಮತ್ತೇಭವಿಕ್ರೀಡಿತ ವೃತ್ತಗಳಿವೆ[1]: ಪ್ರತಿಪದ್ಯವೂ "ಶ್ರೀಚೆನ್ನಸೋಮೇಶ್ವರ" ಎಂದು ಮುಗಿಯುತ್ತದೆ. 'ನೀತಿಯೆ ಸಾಧನಂ ಸಕಲಲೋಕಕ್ಕೆಲ್ಲ ಬೇಕೆಂದು ಪೇಟಿದ ಸೋಮಂ' ಎಂಬ ಪದ್ಯಭಾಗದಲ್ಲಿ ಗ್ರಂಥದ ಸ್ವರೂಪವು ಉಕ್ತವಾಗಿದೆ. ಗ್ರಂಥಾವತಾರದಲ್ಲಿ ಕವಿ ಪುಲಿಗೆರೆಯ ಸೋಮೇಶನನ್ನು ಸ್ತುತಿಸಿದ್ದಾನೆ. ಈ ಶತಕದಿಂದ ಉಂಟಾಗುವ ಪ್ರಯೋಜನವನ್ನು ಕೊನೆಯ ಈ ಪದ್ಯದಲ್ಲಿ ಹೇಳಿದ್ದಾನೆ:—

1 110 ಇವೆ ಎಂದು ಮಿ॥ ಕಿಟಲ್ ಹೇಳುತ್ತಾರೆ. ಛಂದೋಂಬುಧಿಯ ಉಪೋದ್ಘಾತ, ಪುಟ 55.

ಮತಿಯುಂ ಬುದ್ಧಿಯ ಜಾಣ್ಮೆಯುಂ ಗಮಕಮುಂ ಗಾಂಭೀರ್ಯಮುಂ ನೀತಿಯಾ।
ಮತಮುಂ ನಿಶ್ಚಲಚಿತ್ತಮುಂ ನೃಪವರಾಸ್ಥಾನೋಚಿತಾರ್ಥಂಗಳಂ॥
ಅತಿಮಾಧುರ್ಯ ಸುಭಾಷಿತಂಗಳ ಮಹಾಸತ್ಕೀರ್ತಿಯುಂ ವಾರ್ತೆಯುಂ।
ಶತಕಾರ್ಥಂ ಕೊಡದಿರ್ಪುದೇ ಹರಹರಾ ಶ್ರೀಚೆನ್ನಸೋಮೇಶ್ವರಾ॥

ಇದರಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ :—

ಚರಿಪಾರಣ್ಯದ ಪಕ್ಷಿಗೊಂದು ತರು ಗೊಡ್ಡಾಗಲ್ ಫಲಂ ತೀವಿದಾ।
ಮರಗಳ್ ಪುಟ್ಟವೆ ಪುಷ್ಪಮೊಂದುಮೊಣಗಲ್ ಭೃಂಗಕ್ಕೆ ಪೂವಿಲ್ಲವೇ॥
ನಿರತಂ ಸತ್ಕವಿಗೊರ್ವ ಗರ್ವಿ ವಿಭು ತಾನುಂ ಲೋಭಿಯಾಗಲ್ ನಿಜಂ।
ಧರೆಯೊಳ್ ದಾತರೆ ಪುಟ್ಟರೇ ಹರಹರಾ ಶ್ರೀಚೆನ್ನಸೋಮೇಶ್ವರಾ ॥ 652 ॥

ರವಿಯಾಕಾಶಕೆ ಭೂಷಣಂ ರಜನಿಗಂ ಚಂದ್ರಂ ಮಹಾಭೂಷಣಂ।
ಕುವರಂ ವಂಶಕೆ ಭೂಷಣಂ ಸರಸಿಗಂಭೋಜಾತಗಳ್ ಭೂಷಣಂ॥
ಹವಿ ಯಜ್ಞಾಳಿಗೆ ಭೂಷಣಂ ಸತಿಗೆ ಪಾತಿವ್ರತ್ಯವೇ ಭೂಷಣಂ।
ಕವಿಯಾಸ್ಥಾನಕೆ ಭೂಷಣಂ ಹರಹರಾ ಶ್ರೀಚೆನ್ನಸೋಮೇಶ್ವರಾ ॥ 653 ॥

ಅವಿನೀತಂ ಮಗನೇ ಅಶೌಚಿ ಗುಣಿಯೇ ಜೈವಾಕೆ ತಾಂ ಪತ್ನಿಯೇ।
ಸನಿಗೆಟ್ಟನ್ನವದೂಟವೇ ಕುಜನರೊಳ್ ಕೂಡಿರ್ಪವಂ ಮಾನ್ಯನೇ॥
ಬವರಕ್ಕಾಗದ ಬಂಟನೇ ಎಡರಿಗಂ ತಾನಾಗದಂ ನಂಟನೇ।
ಶಿವನಂ ಬಿಟ್ಟವ ಶಿಷ್ಯನೇ ಹರಹರಾ ಶ್ರೀಚೆನ್ನಸೋಮೇಶ್ವರಾ ॥ 654 ॥

## 3. ಸಹಸ್ರಗಣನಾಮ.

**ಮಲ್ಲಿಕಾರ್ಜುನನ** ಸಹಸ್ರಗಣನಾಮದ ಒಂದು ಪ್ರತಿಯಲ್ಲಿರುವ

ಶ್ರೀಮತ್ಪಾಲ್ಕುರಿಕೆಸೋಮನಾಥಪ್ರಭುದೇವೇಶ್ವರಭಕ್ತಪಾಲ।
ಸಹಸ್ರಗಣನಾಮವ ವಿರಚಿಸಿದ ಸತ್ಶೀಲ॥

ಎಂಬ ಭಾಗದಿಂದ ಈತನು ಈ ಗ್ರಂಥವನ್ನು ಮಾಡಿದುದು ವ್ಯಕ್ತವಾಗುತ್ತದೆ. ಇದರಲ್ಲಿ ಪ್ರಮಥಗಣ, ರುದ್ರಗಣ, ಭಕ್ತಗಣ, ಯೋಗಾಚಾರ್ಯರು, ತ್ರಿಷಷ್ಟಿಗಣ, ತೇರಸರು, ಅಮರಗಣ, ದಶಗಣ, ಇವರ ನಾಮಗಳು ಹೇಳಿವೆ.

ಆರಂಭದಲ್ಲಿಯೂ ಒಂದೊಂದುಗಣದ ಅಂತ್ಯದಲ್ಲಿಯೂ ಗ್ರಂಥಾಂತ್ಯದಲ್ಲಿಯೂ ಕೆಲವು ಪದ್ಯಗಳಿವೆ. ಸಹಸ್ರನಾಮ ಎಂಬ ಹೆಸರಿದ್ದರೂ ನಮಗೆ ದೊರೆತ ಪ್ರತಿಯಲ್ಲಿ ಒಟ್ಟು 1066 ನಾಮಗಳಿವೆ: ಪ್ರಮಥಗಣ 430, ರುದ್ರಗಣ 149, ವೃಷಭಗಣಯೋಗಾಚಾರ್ಯರು 22, ಅರುವತ್ತುಮೂವರು 67, ಷೋಡಶರು 16, ತೇರಸರು 13, ದಶಗಣಂಗಳು 10, ಅಮರಗಣ 359. ಈ ಅಮರ

ಗಣದಲ್ಲಿ ಬಸವ, ಚೆನ್ನಬಸವ ಮುಂತಾದವರ ಹೆಸರುಗಳಲ್ಲದೆ ಈ ಹೆಸರುಗಳೂ ಹೇಳಿವೆ:—ಅಮುಗಿದೇವಯ್ಯ, ಗಜೇಶಮಸಣಯ್ಯ, ಕಲಿದೇವಯ್ಯ, ಉರಿಲಿಂಗ ಪೆದ್ದಯ್ಯ, ಸತ್ಯಕ್ಕ, ವೀರಸಂಗಯ್ಯ, ಕೊಡಗೂಸು, ಗುಂಡಬ್ರಹ್ಮಯ್ಯ, ನುಲಿಯ ಚಂದಯ್ಯ, ಚಿಮ್ಮಲಿಗೆಚಂದಯ್ಯ, ವೈದುನರಾಮಯ್ಯ, ಹೇರೂರಹೆಣ್ಣು, ವೀರ ಬಲ್ಲಾಳ, ಏಕಾಂತರಾಮಯ್ಯ, ನಿಂಬಾಣದ ಗಣೇಶ್ವರ, ಅನಿಮಿಷಯ್ಯ, ಬೊಂತಲ ದೇವಿ, ಶಿವಲೆಂಕಮಂಚಣ್ಣ. ಸೂರಸಾನಿ, ಮರುಳುಶಂಕರದೇವ, ಸೂಳೆನಂಬಿ ಯಕ್ಕ, ಸೂಳೆಬೊಮ್ಮಲದೇವಿ, ಸೂಳೆಪದ್ಮಲದೇವಿ. ಸೂಳೆಕಾಮಲದೇವಿ, ಸೂಳೆ ಸಂಕಲದೇವಿ, ಭಿಲ್ಲಮರಾಯ, ಕೋಲಶಾಂತಯ್ಯ, ನನ್ನಯ್ಯ, ನೀಲಲೋಚನೆ, ಅಜಗಣ್ಣ, ನಿಜಗುಣದೇವ. ಇವರುಗಳೆಲ್ಲಾ ಕವಿಯ ಕಾಲಕ್ಕೆ ಹಿಂದೆ ಇದ್ದಿರ ಬೇಕು. ಕೆಲವರು ಮಾತ್ರ ಸಮಕಾಲದವರಾಗಿ ಕಾಣುತ್ತಾರೆ.

## 4. ಪಂಚರತ್ನ.

ಇದರಲ್ಲಿ ಬಸವಸ್ತುತಿರೂಪವಾದ 5 ವೃತ್ತಗಳಿವೆ.

ಇದರ ಅಂತ್ಯಶ್ಲೋಕದಿಂದ[1] ಇದು ಏತತ್ಕೃತವೆಂದು ತಿಳಿಯುತ್ತದೆ. ಒಂದು ಪದ್ಯವನ್ನು ತೆಗೆದು ಬರೆಯುತ್ತೇವೆ:—

ನರಸುರವರಧೀರಾ ನಂದಿಕೇಶಾವತಾರ।
ವಿಷಮವಿಷಯದೂರಾ ವಿಶ್ವಲೋಕೈಕಸಾರ॥
ಗತಕಲಿಮಲಸಂಗಾ ಖ್ಯಾತಿಗೋಷ್ಠೀಪ್ರಸಂಗ।
ಶರಣ ಬಸವಲಿಂಗಾ ಸಜ್ಜನಾಂಭೋಜಭೃಂಗ ॥ 655 ॥

## 5. ಸದ್ಗುರು ರಗಳೆ.

ಇದರಲ್ಲಿ ಪ್ರತಿವಾಕ್ಯವೂ "ಸದ್ಗುರುವೆ" ಎಂದು ಮುಗಿಯುತ್ತದೆ. ಎರಡನ್ನು ಉದಾಹರಿಸುತ್ತೇವೆ:—

ಭವತಿಮಿರಹರದೀಪಿಕಾವರ್ತಿ ಸದ್ಗುರುವೆ।
ಶ್ರೀಷಡಕ್ಷರಜಮನುಜಾಲಮುಖಿ ಸದ್ಗುರುವೆ ॥ 656 ॥

## 6. ಚೆನ್ನಬಸವಸ್ತೋತ್ರದ ರಗಳೆ.

ಇದರಲ್ಲಿ ಪ್ರತಿವಾಕ್ಯವೂ "ಚೆನ್ನಬಸವ" ಎಂದು ಮುಗಿಯುತ್ತದೆ. ಎರಡನ್ನು ತೆಗೆದು ಬರೆಯುತ್ತೇವೆ:—

ಬಸವಗುರುವಚೋಮೃತಗತವೃಜಿನಪಂಕ ಚೆನ್ನಬಸವ।
ಬಸವಪಾದಕಮಲಕರ್ಣಿಕಾನಿವಾಸ ಚೆನ್ನಬಸವ ॥ 657 ॥

---

1. ಶ್ರೀಮತೇ ವೃಷಭೇಂದ್ರಾಯ ಸೋಮನಾಥೇನ ಧೀಮತಾ।
ಪಂಚರತ್ನಮಿದಂ ದತ್ತಂ ಜ್ಞಾನವೈರಾಗ್ಯಭಕ್ತಿದಂ॥

## 7. ಶರಣುಬಸವ ರಗಳೆ.

ಇದರಲ್ಲಿ 108 ವಾಕ್ಯಗಳಿವೆ; ಒಂದೊಂದೂ "ಶರಣುಬಸವ" ಎಂದು ಮುಗಿಯುತ್ತದೆ. ಅಂತ್ಯದಲ್ಲಿ ಈ ಕಂದವಿದೆ:—

ಶರಣಸ್ತವಕಲ್ಪಕುಜಾಂ। ಕುರಪದಶಾಖಾಭಿಜಾತನವಕುಸುಮಾಷ್ಟೋ।
ತ್ತರಶತನಾಮಂಗಳ ಬಸ। ವರಸಂಗರ್ಪಿಸಿದೆ ಪಾಲ್ಕುರಿಕೆ ಸೋಮಾಂಕಂ॥

ಎರಡು ವಾಕ್ಯಗಳನ್ನು ಉದಾಹರಿಸುತ್ತೇವೆ :—

ಅಚಲಶೈವಧರ್ಮನಿರ್ಣಯಾವತಾರ ಶರಣುಬಸವ।
ವಿಕಟಭವಸಮಿತ್ಸಮೂಹವೀತಿಹೋತ್ರ ಶರಣುಬಸವ ॥ 658 ॥

ಇವನ ವಚನಗಳು ನಮಗೆ ದೊರೆತಿಲ್ಲ.

---

## ಚಕ್ರಪಾಣಿರಂಗನಾಥ. ಸು. 1195.

ಈತನು ಮೊದಲು ವೈಷ್ಣವನಾಗಿದ್ದು ಪಾಲ್ಕುರಿಕೆ ಸೋಮನಾಥನೊಡನೆ ವಾದಮಾಡಿ ಸೋತು[1] ಶಿವದೀಕ್ಷೆಪಡೆದಂತೆ ವೀರಶೈವಗ್ರಂಥಗಳಿಂದ ತಿಳಿಯ ಬರುತ್ತದೆ. ಇವನು ವೀರಶೈವಮತವನ್ನು ಅವಲಂಬಿಸಿದ ಬಳಿಕ ಕೆಳಗೆ ಹೇಳುವ ಗ್ರಂಥಗಳನ್ನು ಬರೆದುದಾಗಿ ಗುರುರಾಜಚಾರಿತ್ರದ (ಸು. 1650) ಈ ಭಾಗ ಗಳಿಂದ ತಿಳಿಯುತ್ತದೆ:—

ಚಕ್ರಪಾಣಿರಂಗನಾಥನು ವೀರಭದ್ರವಿಜಯವ ಹೇಳಿದ; ಶರಭಲೀಲೆಯನೊರೆದ; ಶ್ರೀಗಿರಿನಾಥವಿಕ್ರಮವನಾಂಧ್ರಭಾಷೆಯೊಳೊರೆದ, ಸಂಸ್ಕೃತದಲ್ಲಿಯೂ ಕೀರ್ತಿಸಿದ.

ಶ್ರೀಶೈಲಭರ್ತನಕು ಸೀಸಂಬುಲೈನೂಱು।
ಲೇಸಪ್ಪ ಪದ್ಯಂಗಳೆಂಟುಸಾವಿರಗಳುಂ।
ಭಾಸುರದ ದಂಡಕಂ ಸಾಹಸ್ರ ತಾರಾವಳಿಯು ನಾಲ್ಕು ಲಯಗ್ರಾಹಿಯು॥
ಆಶತಕವೃತ್ತಗಳು ದೋಧಕಂ ಸಾವಿರವು।
ಭಾಸುರದ ತೋಟಕಂ ನೂಱು ರಗಳೆಗಳೇೞು।
ಭಾಷಿಸಿದ ಮತ್ತಕೋಕಿಲಮೂಱುಸಾಸಿರಂ ಗೀತಿಯುಂತಾಱುನೂಱು॥
ಸರಸಮಂಜರವೆಂಟು ಕಂದಂಗಳೈನೂಱು।
ವಿರಚಿಸಿದ ಕೃತಿಯು ಮೂವತ್ತಾಱು ಗದ್ಯಗಳು।
ಸಿರುತ ಮೂವತ್ತಾಱುವುಭಯಶತಕಂ ವೊಪ್ಪ ಮಿಗಿಲು ಸರ್ವೇಶ ನಿಮಗೆ॥

---

1. ಪುಟ 292.

ನೆಱೆ ಸಮರ್ಪಿಸಿದೆನೆಂದು ಚೀಟಂ ಬರೆದು ತುಲೆಯಲ್ಲಿ ಮಡಗಿ ತೂಗಲು ಸಾಲದೆ ಹೋಯಿತು ; ಬಳಿಕ ನಾಲ್ಕು ವೃತ್ತವ ಬರೆದು ಮಡಗೆ ತುಲೆ ಸರಿಗಂಡಿತು.

ಇವನ ಗ್ರಂಥಗಳಾವುವೂ ನಮಗೆ ದೊರೆತಿಲ್ಲ.

---

## ಕೇಶವರಾಜ ಚಮೂಪ. ಸು. 1195.

ಈತನು ಅಬ್ಬಲೂರಲ್ಲಿರುವ ಒಂದು ಶಾಸನವನ್ನು[1] ಬರೆದುದಾಗಿ ಆ ಶಾಸನದ ಅಂತ್ಯದಲ್ಲಿರುವ—

ಕೇಶವರಾಜಚಮೂಪಂ । ಶಾಸನಮಂ ಪೇೞ್ದನಂತದಂ ತಿರ್ದಿ ನಿರಾ ।
ಯಾಸದೆ ಬರೆದವನೀಶನ । ದಾಸಂ ಶಿವಚರಣಕಮಲಶರಣಂ ಸರಣಂ ॥

ಎಂಬ ಪದ್ಯದಿಂದ ತಿಳಿಯುತ್ತದೆ.

ಈ ಶಾಸನವು ಸುಮಾರು 1195 ರಲ್ಲಿ ಬರೆದುದು. ಇದರಲ್ಲಿ ವೀರಶೈವರಲ್ಲಿ ಪ್ರಸಿದ್ಧಗುರುವಾದ ಏಕಾಂತದ ರಾಮಯ್ಯನ ಚರಿತ್ರವು ಈ ರೀತಿಯಾಗಿ ಹೇಳಿದೆ:—

ಈ ರಾಮಯ್ಯನು ಕುಂತಲದೇಶದ ಅಲಂದೆ ಎಂಬ ಗ್ರಾಮದಲ್ಲಿ ಶ್ರೀವತ್ಸಗೋತ್ರೋದ್ಭವನಾದ ಪುರುಷೋತ್ತಮನೆಂಬ ಬ್ರಾಹ್ಮಣನಿಗೂ ತತ್ಪತ್ನಿ ಪದ್ಮಾಂಬಿಕೆಗೂ ವೀರಭದ್ರನ ಅಂಶದಿಂದ ಮಗನಾಗಿ ಜನಿಸಿದನು. ಇವನು ಏಕಾಗ್ರಭಕ್ತಿಯೋಗದಿಂದ ಶಿವನನ್ನು ಏಕಾಂತದಲ್ಲಿ ಆರಾಧಿಸುತ್ತಿದ್ದುದರಿಂದ ಏಕಾಂತದ ರಾಮಯ್ಯನೆಂಬ ಹೆಸರನ್ನು ಪಡೆದನು. ಇವನು ಶಿವಕ್ಷೇತ್ರಗಳಿಗೆ ಯಾತ್ರೆಹೊರಟು, ಪುಲಿಗೆರೆಗೆ ಬಂದು, ಸೋಮನಾಥನನ್ನು ಪೂಜಿಸಿ, ತದಾಜ್ಞಾನುಸಾರವಾಗಿ ಜೈನಮತನಿರಸನಕ್ಕೋಸ್ಕರ ಜೈನಭೂಯಿಷ್ಠವಾದ ಅಬ್ಬಲೂರಿಗೆ ಹೋಗಿ, ಬ್ರಹ್ಮೇಶ್ವರ ದೇವಸ್ಥಾನದಲ್ಲಿರುತ್ತಿದ್ದನು. ಹೀಗಿರಲು ಜೈನರು ಅಲ್ಲಿಗೆ ಬಂದು ಜಿನನೇ ದೈವಂ ಎಂದು ಹೊಗಳಲು ಈತನು ಕೋಪಿಸಿಕೊಂಡು, ಶಿವನಿದ್ದಂತೆ ಬೇರೆ ದೈವವುಂಟೇ ಎನಲು, ಶಿವನೇ ದೈವವಾದಲ್ಲಿ ನಿನ್ನ ತಲೆಯನ್ನು ಕೊಯ್ದು ಕೊಟ್ಟು ಪುನಃ ಪಡೆ ಎಂದು ಆ ಜನರು ಹೇಳಲು, ನಾನು ಹಾಗೆ ಮಾಡಿದರೆ ನೀವೇನು ಮಾಡುವಿರಿ ಎಂದು ಕೇಳಿದಾಗ ಅವರು ನಮ್ಮ ಜಿನನನ್ನು ಕಿತ್ತು ಶಿವನನ್ನು ನಿಲಿಸುವೆವು ಎಂದು ಓಲೆಯನ್ನು ಬರೆದುಕೊಟ್ಟರು. ಒಡನೆ ಅವನು ತಲೆಯನ್ನು ಕೊಯ್ದು ಶಿವಾರ್ಪಣ ಮಾಡಿ ಏಳು ದಿನದ ಮೇಲೆ ಅದನ್ನು ಮರಳಿ ಪಡೆದು ಅಲ್ಲಿಯ ಜಿನಬಿಂಬವನ್ನು ಒಡೆದು ಜೈನರ ಸೇನೆಯನ್ನು ಬಡಿದಟ್ಟಿ ವೀರಸೋಮನಾಥನನ್ನು ನಿಲಿಸಿದನು. ಬಳಿಕ ಜೈನರು ಬಿಜ್ಜಳನಲ್ಲಿ ಹೋಗಿ ದೂರಲು ಅವನು ಕೋಪಗೊಂಡು ರಾಮಯ್ಯನನ್ನು ಕರೆಯಿಸಿ

---

1. *Epi. Ind.*, V, 245.

ವಿಚಾರಿಸಲು, ಅವನು ಅವರು ಬರೆದುಕೊಟ್ಟ ಓಲೆಯನ್ನು ತೋರಿಸಿ ಅವರು ಆನೆಸೆಜ್ಜೆಯ ಬಸದಿಯೇ ಮೊದಲಾದ 700 ಬಸದಿಗಳ ಜಿನಬಿಂಬಗಳನ್ನು ಒಡ್ಡುವುದಾದರೆ ತಾನು ತನ್ನ ತಲೆಯನ್ನು ಕೊಯ್ದು ಅವರ ಕೈಯಲ್ಲಿ ಕೊಟ್ಟು ಅವರು ಅದನ್ನು ಸುಟ್ಟಬಳಿಕ ಪುನಃ ಪಡೆವೆನೆಂದು ಹೇಳಿದಾಗ ಬಿಜ್ಜಳನು (1156—1167) ಅವರನ್ನು ಕರೆಯಿಸಿ ಕೇಳಲು ಅವರು ಒಲ್ಲೆವೆನ್ನಲು ಅವರನ್ನು ಕಳುಹಿಸಿಬಿಟ್ಟು ರಾಮಯ್ಯನಿಗೆ ಜಯಪತ್ರವನ್ನು ಕೊಟ್ಟು ಅವನ ಸಾಹಸಕ್ಕೂ ಮಾಹೇಶ್ವರಭಕ್ತಿಗೂ ಮೆಚ್ಚಿ ವೀರಸೋಮನಾಥದೇವರ ಅಂಗಭೋಗಾದಿಗಳಿಗೆ ಗೋಗಾವೆಯೆಂಬ ಗ್ರಾಮವನ್ನು ಏಕಾಂತದ ರಾಮಯ್ಯನ ಕಾಲಂ ಕರ್ಚಿ ಕೊಟ್ಟನು. ಬಳಿಕ ಇವನ ಮಾಹಾತ್ಮ್ಯವನ್ನು ಕೇಳಿ ಚಾಳುಕ್ಯರಾಜನಾದ ತ್ರಿಭುವನ ಮಲ್ಲ ಸೋಮೇಶ್ವರದೇವನು (1182—1189) ಇವನನ್ನು ಬರಮಾಡಿಕೊಂಡು ಸತ್ಕರಿಸಿ ಇವನು ಪ್ರತಿಷ್ಠಿಸಿದ ವೀರಸೋಮನಾಥದೇವರ ಅಂಗಭೋಗಾದಿಗಳಿಗೆ ಅಬ್ಬಲೂರನ್ನು ಬಿಟ್ಟುಕೊಟ್ಟನು. ಆಮೇಲೆ ಕದಂಬರಾಜನಾದ ಕಾಮರಸನು (1181—1203) ಹಾನುಂಗಲ್ಲಿಗೆ ಕರೆದುಕೊಂಡು ಹೋಗಿ ಈತನನ್ನು ಸತ್ಕರಿಸಿ ವೀರಸೋಮನಾಥದೇವರ ಅಂಗಭೋಗಾದಿಗಳಿಗೆ ಮಲ್ಲವಳ್ಳಿಯೆಂಬ ಗ್ರಾಮವನ್ನು ಕೊಟ್ಟನು. ಏಕಾಂತದ ರಾಮಯ್ಯನು ಆರಲ್ಲಿಯೂ ಯಾಚಿಸದೆ ಈಶ್ವರಪ್ರಸಾದದಿಂದ ತವನಿಧಿಯನ್ನು ಪಡೆದು ದೇವಾಲಯವನ್ನು ಕಟ್ಟಿಸಿದನು.

ಈ ಶಾಸನದ ಬಂಧವನ್ನು ನೋಡಿದರೆ ಕೇಶವರಾಜ ಚಮೂಪನು ಪ್ರೌಢ ಕವಿಯೆಂದು ಹೇಳಲಿಕ್ಕೆ ಅಡ್ಡಿಯಿಲ್ಲ. ಈ ಶಾಸನದಲ್ಲಿ ಈತನು ಪುರಾತನಭಕ್ತರ ಗೋಷ್ಠಿಯಲ್ಲಿ ಕೊಂಡಗೂಳಿ ಕೇಶಿರಾಜನನ್ನು ಸೇರಿಸಿ ಸ್ತುತಿಸುವುದರಿಂದ ಈತನು ತದ್ಭಿನ್ನನೆಂಬುದು ವ್ಯಕ್ತವಾಗುತ್ತದೆ. ಮೆ॥ ಫ್ಲೀಟ್—ಈತನು ಬನವಾಸಿಯನ್ನು ಸುಮಾರು 1168 ರಿಂದ 1181 ರ ವರೆಗೆ ಆಳಿದುದಾಗಿ ಶಾಸನಗಳಿಂದ ತಿಳಿದು ಬರುವ ದಂಡನಾಯಕ ಬೊಳಿಕೆಯ ಕೇಶಿರಾಜಯ್ಯನಾಗಿರಬೇಕೆಂದು ಹೇಳುತ್ತಾರೆ.[1] ಆದರೆ ಈ ಕವಿ ತದ್ಭಿನ್ನನೆಂದೂ ಅವನಿಗಿಂತ ಸುಮಾರು 20 ವರ್ಷ ಈಚೆಯವನು—ಎಂದರೆ ಸುಮಾರು 1195 ರಲ್ಲಿದ್ದವನು—ಎಂದೂ ನಮಗೆ ತೋರುತ್ತದೆ.

ಈ ಶಾಸನದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ :—

ಹಿಮವತ್ಪರ್ವತ.

ಎಸೆಗುಂ ಪೂರ್ವಾಪರಾಂಭೋನಿಧಿಮಿತಿವಿತತಾಯಾಮದಿಂ ಸಿದ್ಧಕನ್ಯಾ ।
ವಿಸರಾನಂಗೋರುಕೇಳೀಶ್ರಮಶಮಹಿಮಾಕಂದರಂ ಸ್ವರ್ಧುನೀವಾಃ ॥
ಪ್ರಸರೋಪಕ್ಷುಣ್ಣನಾನಾನಗನಿಕರಗಳದ್ಗಂಡಶೈಲಾಳಿಮಾಳಾ ।
ವಿಸರಂ ಪ್ರಸ್ಫಾರಶೀತದ್ಯುತಿರುಚಿನಿಚಯಭ್ರಾಜಿತಂ ಶೀತಶೈಲಂ ॥ 659 ॥

1. *Epi. Ind.*, V, 238, 239.

ಅಲಂದೆನಗರ.

ಪ್ರಕಟಿತಕಮರಾವತಿಯೊಳ್ । ಸುಕೇಶಿಯುಂ ಮಂಜುಘೋಷೆಯುಂ ತಾ [ಮಿರ್ಬರ್ ।
ಸಕಲವಧೂತತಿಯೆಲ್ಲಂ । ಸುಕೇಶಿಯರ್ ಮಂಜುಘೋಷೆಯರ್ ತತ್ಪುರ [ದೊಳ್ ॥ 660 ॥

ಶಿವಪಾರಮ್ಯ.

ಜಗವಂ ಮಾಡುವನಾವನಾವನದನಾಪತ್ಕಾಲದೊಳ್ ಕಾವನಿಂ ।
ಮಿಗೆ ಕೋಪಂ ತನಗಾಗೆ ಸಂಹರಿಸಲಾವಂ ದಕ್ಷನಾಶಂಭು ಸ ॥
ರ್ವಗನಿರ್ದಂತೆ ಗತಪ್ರಭಾವವಿಭವಂ ಸಂಸಾರದೊಳ್ ಬಿಟ್ಟು ದಂ ।
ದುಗದೊಳ್ ಬಟ್ಟು ತಪಕ್ಕೆ ಸಾರ್ದು ಸುಖಮಂ ಪಾರ್ದಿರ್ಪನುಂ ದೇವನೇ ॥661॥

ವೀರಸೋಮನಾಥ.

ಶ್ರೀಯುಂ ದೀರ್ಘಾಯುವಂ ಕೀರ್ತಿಯನನುದಿನಮುಂ ಮಾಳ್ಕೆ ಗೀರ್ವಾಣ [ವೃಂದ ।
ಜ್ಯಾಯಂ ಶ್ರೀವೀರಸೋಮಂ ವಿಧೃತಹಿಮಕರಂ ಕಾಮದೇವಂಗುದಾರ ॥
ಶ್ರೀಯುಕ್ತಂಗದ್ರಿಜಾಸಸ್ಮಿತಸಿತತರಲಾಲೋಲವಿಸ್ತಾರಲೀಲಾ ।
ನೇಯಾಳೋಕೋದಿತಶ್ರೀಲಲಿತರತಿಕಲಾಲಾಸ್ಯಶೈಲೂಷವೇಷಂ ॥ 662 ॥

---

## ಸರಣ. ಸು. 1195.

ಇವನು, ಕೇಶವರಾಜ ಚಮೂಪನು[1] (ಸು. 1195) ಬರೆದ ಅಬ್ಬಲೂರು ಶಾಸನವನ್ನು ತಿದ್ದಿ ಬರೆದುದಾಗಿ ಅದೇ ಶಾಸನದ ಅಂತ್ಯದಲ್ಲಿರುವ—

ಕೇಶವರಾಜಚಮೂಪಂ । ಶಾಸನಮಂ ಪೇಳ್ದನಂತದಂ ತಿರ್ದಿ ನಿರಾ ।
ಯಾಸದೆ ಬರೆದವನೀಶನ । ದಾಸಂ ಶಿವಚರಣಕಮಲಶರಣಂ ಸರಣಂ ॥

ಎಂಬ ಪದ್ಯದಿಂದ ತಿಳಿಯುತ್ತದೆ. ಈತನು ಆವ ಗ್ರಂಥಗಳನ್ನು ಬರೆದಿದ್ದಾನೆಯೋ ತಿಳಿಯದು.

---

## ಆಚಣ್ಣ. ಸು. 1195.

ಈತನು ವರ್ಧಮಾನ ಪುರಾಣವನ್ನೂ ಶ್ರೀಪದಾಶೀತಿಯನ್ನೂ ಬರೆದಿದ್ದಾನೆ.

ಇವನು ಜೈನಕವಿ; ಭಾರದ್ವಾಜಗೋತ್ರದವನು. ಇವನ ತಂದೆ ಕೇಶವ ರಾಜ; ತಾಯಿ ಮಲ್ಲಾಂಬಿಕೆ; ಗುರು ನಂದಿಯೋಗೀಶ್ವರ. "ಪುರಿಕರನಗರಾ

1. ಪುಟ 297.

ಧೀಶ····(ಅ)ರ್ಹತ್ಶ್ರೀವಾಸಕ್ತಾಶಯುಂ" ಎಂಬುದರಿಂದ ಪುರಿಕರನಗರವು (ಪುಲಿಗೆರೆ) ಇವನ ಸ್ಥಳವಾಗಿರಬಹುದು. ವಸುಧೈಕಬಾಂಧವ ಎಂಬ ಬಿರುದುಳ್ಳ ರೇಚಣಚಮೂಪನು ವರ್ಧಮಾನ ಪುರಾಣವನ್ನು ಬರೆವಂತೆ ಹೇಳಲು ಕವಿಯ ತಂದೆಯಾದ ಕೇಶವರಾಜನೂ ತಿಕ್ಕಣಚಾವಣನೂ ಸೇರಿ ಉಪಕ್ರಮಿಸಿದುದು "ದೈವನಿಯೋಗದಿಂದ" ನಿಂತುಹೋಗಲು ಅದನ್ನು ಆ ರೇಚಣಚಮೂಪನ ಇಷ್ಟಾನುಸಾರವಾಗಿ ಈತನು ವಿಸ್ತಾರಿಸಿ ಪೂರೈಸಿದನು.

ಈ ಕವಿಗೆ ವಾಣೀವಲ್ಲಭ, ಪಂಚಪರಮಗುರುಪದವಿನತ ಎಂಬ ಬಿರುದುಗಳಿದ್ದಂತೆ ತಿಳಿಯುತ್ತದೆ.

ಈತನನ್ನು **ಪಾರ್ಶ್ವನು** (1205) ತನ್ನ ಪಾರ್ಶ್ವನಾಥಪುರಾಣದಲ್ಲಿ ಸ್ತುತಿಸಿರುವುದರಿಂದ ಈತನು 1205 ಕ್ಕೆ ಹಿಂದೆ ಇದ್ದನೆಂಬುದು ವ್ಯಕ್ತವಾಗುತ್ತದೆ. ಇವನು ಪೂರ್ವಕವಿಸ್ತವಾವಸರದಲ್ಲಿ **ಬೊಪ್ಪಣಪಂಡಿತನನ್ನೂ** (ಸು. 1180), **ಅಗ್ಗಳನನ್ನೂ** (1189) ಸ್ತುತಿಸಿರುವುದರಿಂದ ಅವರ ಕಾಲಕ್ಕೆ ಈಚೆಯವನಾಗಿರಬೇಕು. ಅಲ್ಲದೆ ಇವನಿಂದ ಗ್ರಂಥವನ್ನು ಬರೆಯಿಸಿದ ವಸುಧೈಕಬಾಂಧವ ರೇಚಣಚಮೂಪತಿ ಮೊದಲು ಕಲಚುರ್ಯರಾಜರಲ್ಲಿ ಮಂತ್ರಿಯಾಗಿದ್ದು ಆಮೇಲೆ ಹೊಯ್ಸಳ ವೀರಬಲ್ಲಾಳನಲ್ಲಿ (1173–1220) ಮಂತ್ರಿಯಾಗಿದ್ದಂತೆ ಶಾಸನಗಳಿಂದ[1] ತಿಳಿಯುತ್ತದೆ. ಕವಿಯ ಗುರುವಾದ ನಂದಿಯೋಗೀಶ್ವರನು 1189 ರಲ್ಲಿ ಇದ್ದಂತೆ ಮದರಾಸ್ ಪ್ರಾಚ್ಯಕೋಶಾಲಯದಲ್ಲಿರುವ ಒಂದು ಶಾಸನದಿಂದ ತಿಳಿಯುತ್ತದೆ. ಈ ಕಾರಣಗಳಿಂದ ಈತನು ಸುಮಾರು 1195 ರಲ್ಲಿ ಇದ್ದನೆಂದು ಹೇಳಬಹುದು.

ಈತನು ಪೂರ್ವಕವಿಗಳನ್ನು ಈ ಪದ್ಯದಲ್ಲಿ ಸ್ಮರಿಸಿದ್ದಾನೆ:—

ಶ್ರೀವಿಜಯಂ ಗಜಾಂಕುಶನುದಾತ್ತಯಶಂ ಗುಣವರ್ಮನಾಜಗ ।
ತ್ಪಾವನನಾಗವರ್ಮನಸಗಂ ರಸಿಕಾಗ್ರಣಿ ಪಂಪದೇವನಾ ॥
ಭಾವಕಚಕ್ರಿ ಹೊನ್ನಿಗನಿಳಾನುತರನ್ನಿಗನಗ್ಗದಗ್ಗಳಂ ।
ಧೀವಿಭು ಬೊಪ್ಪನೆಂಬ ಕವಿದರ್ಪಕರಿಂದೆಸೆದತ್ತು ಭೂತಳಂ ॥

ಈತನನ್ನು **ಪಾರ್ಶ್ವನು** ಹೀಗೆ ಸ್ತುತಿಸಿದ್ದಾನೆ:—

ಶ್ರೀಗುಣಗರ್ಭಂ ಕೀರ್ತಿಕ । ಳಾಗರ್ಭಂ ಸೂಕ್ತಿಸಂಗತಾಧ್ಯಾತ್ಮಂ ಜ್ಞಾ।
ನಾಗಮಗರ್ಭಮಿದೆನೆ ಜಗ । ತೀಗುರು ನೆಗಟ್ದಂ ಪ್ರಸನ್ನಗುಣನಾಚಣ್ಣಂ ॥
ನವರಸದೊಳಮಿತರರಸ । ಕ್ಕವಕಾಶಂಗುಡದೆ ತಳೆಯೆ ಶಾಂತರಸಮನಂ ।
ತವಿಚಳನವಮವಂ ಕರೆಗ । ಣ್ಮುವವೆನೆ ಪೃಥುಹೃದಯನಾದನೆಂತಾಚಣ್ಣಂ ॥

---

1. Arsikere 77.

ಕವಿ ತನ್ನ ಗುಣಾದಿಗಳನ್ನು ಈ ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ:—

ಭಾರದ್ವಾಜಪವಿತ್ರಗೋತ್ರತಿಳಕಂ ಶ್ರೀಕೇಶಿರಾಜಾತ್ಮಜಂ ।
ಸಾರೋದಾರಪತಿವ್ರತಾದಿಗುಣಭೃನ್ಮಲ್ಲಾಂಬಿಕಾನಂದನಂ ॥
ತಾರೇಶೋಜ್ಜ್ವಳಕೀರ್ತಿ ಜೈನರುಚಿ ವಾಣೀವಲ್ಲಭಂ ನಿರ್ಮಳಾ ।
ಚಾರಂ ನಿರ್ಮಿಸಿ ಪೆರ್ಮೆವೆತ್ತನೊಲವಿಂದಾಚಣ್ಣನೀಧಾತ್ರಿಯೊಳ್ ॥

ಜಿನಸಮಯಸಮುದ್ಧರಣಂ । ಜಿನಮತಸಿದ್ಧಾಂತವಾರ್ಧಿವರ್ಧನಚಂದ್ರಂ ।
ಜಿನರಂತೆ ಭವ್ಯಸೇವ್ಯಂ । ಜಿನಮುನಿಯಾಚಣ್ಣನಮಳಗುಣಗಣನಿಳಯಂ ॥

ಇವನ ಗ್ರಂಥಗಳಲ್ಲಿ

## 1. ವರ್ಧಮಾನ ಪುರಾಣ.

ಇದು 24 ನೆಯ ತೀರ್ಥಕರನಾದ ವರ್ಧಮಾನನ ಅಥವಾ ಮಹಾವೀರನ ಚರಿತವು; 16 ಆಶ್ವಾಸಗಳಾಗಿ ವಿಭಾಗಿಸಲ್ಪಟ್ಟಿದೆ. ಈ ಗ್ರಂಥದ ಉತ್ಕೃಷ್ಟತೆಯನ್ನು ಕವಿ ಈ ಪದ್ಯದಲ್ಲಿ ಹೇಳಿದ್ದಾನೆ:—

ಸದಳಂಕಾರದಗಾರಮುದ್ಧುರಸಭಾಪಾನೀಕದೀಕಂ ಸದ ।
ರ್ಥದ ಸಾರ್ಥಂ ವರಶಬ್ದವೃಂದದ ವಿರಾಜನ್ಮಂದಿರಂ ನಾಡೆಯುಂ ॥
ಮೃದುಸಂದರ್ಭದ ಗರ್ಭಮೆಂತೆನಿಸಲ್ ಸಾಲ್ದಿರ್ದ ಕಾವ್ಯಂ ಸಭಾ ।
ಸದರಂತಃಕರಣಕ್ಕದೇಂ ಕಡುಯಿದೇ ಸೌಖ್ಯಾಮೃತಾಸಾರಮಂ ॥

ಈ ಗ್ರಂಥವು "ದಂಡನಾಥರೇಚರಸನ ಮಾನಸಪ್ರಿಯಮೆನಿಪ್ಪ ಜಗನ್ನುತ ವರ್ಧಮಾನಸಚ್ಚರಿತಂ" ಎಂದು ಹೇಳಿದ್ದಾನೆ.

ಗ್ರಂಥಾವತಾರದಲ್ಲಿ ವರ್ಧಮಾನಸ್ತುತಿಯಿದೆ. ಬಳಿಕ ಕವಿ ಸಿದ್ಧಾದಿಗಳನ್ನೂ ಸರಸ್ವತಿಯನ್ನೂ ಯಕ್ಷಯಕ್ಷಿಯರನ್ನೂ ಸ್ತುತಿಸಿ ಗೌತಮನಿಂದ ಅಕಳಂಕನ[1] ವರೆಗೆ ಗುರುಗಳನ್ನು ಕ್ರಮವಾಗಿ ಹೊಗಳಿದ್ದಾನೆ.

ಆಶ್ವಾಸಗಳ ಕೊನೆಯಲ್ಲಿ ಈ ಗದ್ಯವಿದೆ:—

ಇದು ನಿಖಿಳಭುವನಜನವಿನೂತ ಸ್ಫೀತಮಹಿಮಾವದಾತ ವೀತರಾಗಸರ್ವಜ್ಞತಾ ಸಮೇತ ಖ್ಯಾತಜಿನಸಮಯಕಮಳಿನೀಕಳಹಂಸಾಯಮಾನ ಮಾನಿತಶ್ರೀನಂದಿಯೋಗೀಂದ್ರ ಪ್ರಸಾದವಾಚಾಮಹಿತ ಕೇಶವರಾಜಾನಂದನಂದನ ವಾಣೀವಲ್ಲಭವಿಸ್ತಾರಿತಮಪ್ಪ ವಸುಧೈಕಬಾಂಧವಶ್ರೀವರ್ಧಮಾನಪುರಾಣದೊಳ್.

ಈ ಗ್ರಂಥವು ಪ್ರಾಸಯಮಕಾದಿಶಬ್ದಾಲಂಕಾರಭೂಯಿಷ್ಠವಾಗಿ ಪ್ರೌಢವಾಗಿದೆ.

---

1. ಗೌತಮ, ಭೂತಬಲಿ, ಪುಷ್ಪದಂತ, ಗೃಧ್ರಪಿಂಛ, ಸಮಂತಭದ್ರ, ಪೂಜ್ಯಪಾದ, ಅಕಳಂಕ.

ಇದರಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

ನಗೇಂದ್ರ.

ಮಾರಾಮಾರಾಮರಂಗತ್ಕಮಳಕಮಳವನ್ಮಾನಸಂ ಮಾನಸಂಪ ।
ತ್ಸಾರಂ ಸಾರಂಗಯೋಷಿತ್ಸುರತಸುರತರೋನ್ಮಾನಭೋಗಂ ನಭೋಗಂ ॥
ಧಾರಾಧಾರಾರೂಢಮುಷ್ಟೋತ್ಕದಳಕದಳಗುಂಜಾಕರಂ ಜಾಕರಂ ಮಂ ।
ದಾರೋದಾರೋರುಕುಂಜಂ ವಿಷಮವಿಷಮಹಾಪನ್ನಗೇಂದ್ರಂ ನಗೇಂದ್ರಂ ॥ 663 ॥

ರಾಜಗೃಹನಗರ.

ಕರಮೆಸೆವುದು ರಾಜಗೃಹಂ । ಪುರಮುರುತರವಿಭವವಿಜಿತಸುರರಾಜಗೃಹಂ ।
ಸುರುಚಿರರಾಜಗೃಹಂ ರಾ । ಜರಾಜಗೃಹಸದ್ಮಶವರವಣಿಗ್ರಾಜಗೃಹಂ ॥ 664 ॥

ವಕುಳ.

ವಕುಳಂ ಸಪರಿಮಳಪ್ರಸ । ವಕುಳಂ ಸೌರಭಸಮಾಗತಭ್ರಮರಾರಾ ।
ವಕುಳಂ ಸೊಗಯಿಸಿದತ್ತೆಸೆ । ವ ಕುಳಂಬಿತವಿಟಪಮವನಿಸಂಸ್ಥಾವಕುಳಂ ॥ 665 ॥

ವನ.

ವನವನವನತಲತೋಜ್ಝ್ । ವನವನವನವತನುಶಿಖಿಗಿದೆಂದು ಜಗತ್ತಾ ।
ವನವನವನಳಿವಿಳಾಸಭ । ವನವನವನಜಾತಪೂರ್ವಮನೆ ಮಾಡಿಸಿದಂ ॥ 666 ॥

ದ್ವ್ಯಕ್ಷರಿ.

ಕಲಿ ಕೊಂಕಲ್ಕೆಕಲಕ್ಕಂ । ಕೆಲಕ್ಕೆ ಕೋಲಿಕ್ಕೆ ಲಕ್ಕೆಲೆಕ್ಕಕ್ಕೆಲ್ಲಂ ।
ಕಲಿ ಕೊಲಲೆ ಕಲಲ್ಕಕ್ಕಂ ।.. ಕಕ್ಕಂ ಕಲಿ ಕಲಂಕೆ ಕೊಂಕೆ ಕಲಂಕಂ ॥ 667 ॥

ಗತಪ್ರತ್ಯಾಗತ.

ಕುಂದಿನಿಂದೆಚ್ಚನದು ಬಂ । ಟಂದಮಲ್ಲದೆ ನಿಂದುದೆಂ ।
ದೆಂದು ನಿಂದೆಲ್ಲಮದಟಂ । ಬಂದು ನಚ್ಚದೆ ನಿಂದಿಕುಂ ॥ 668 ॥

ಚೂತ.

ಬಿಡದೆಱಗಿ ಕೊಂಬುಕೊಂಬಿನೊ । ಳೆಡೆಗಿಱದರಗಿಳಿಯ ಗಱಯ ತುಂಡದವುದುವಿಂ ।
ಪಡೆವುದು ಪಣ್ತುಲಮಿದೆನೆ । ಪಿಡಂಗನವಿರಳಿತಫಲಪರೀತಂ ಚೂತಂ ॥ 669 ॥

ಅರನೇರಿಲು.

ಉರಿಗೊಡ್ಡಿದರಗಿದೆಂಬಿನ । ಮರಗಿಳಿಗಳ ಚಂಚು ತಾಗಲೊಡನೊಡೆದೋರಂ ।
ತಿರೆ ಸುರಿವ ಪಣ್ಗಳಿಂದಮೆ । ಅರನೇಱಲ ಮರಗಳಲ್ಲಿ ಸೊಗಯಿಸಿ ತೋರ್ಕುಂ ॥ 670 ॥

## ಕತ್ತಲೆ.

ಇನಿತುಱ್ಪದೆ ಕತ್ತುರಿ ಚಂ । ದನಮುಂ ಕಱೆ ಪೆಱೆಯನಿಂದ್ರನೀಲಂ ಮುತ್ತಂ
ನನೆಯನಳಿ ಗಂಗೆಯುಂ ಜಗು । ಸೆ ಸುಂಗಿದಂತಾಯ್ತು ಸುಂಗೆ ಕಱ್ತಲೆ ಬೆಳಗಂ ॥ 671 ॥

ಉಱ್ಯೆ ಜಳಾಹಿಯೆಂದು ಬಿಸವಲ್ಲಿಯನಂಚೆ ಶಿಲೀಮುಖಂಗಳಂ ।
ದಿಱ್ಕೆಯು ಪೂಗಳಂ ಪಱಮೆ ಕೋಕಿಳಮೆಂದು ಪಿಕಂ ಬಳಾಕೆಯಂ ॥
ಬಱ್ಸಲಲಾಸೆಗೆಯ್ಯೆ ಕಳಹಂಸಕುಟುಂಬಿನಿಯುಂ ಮಯೂರಿಯೆಂ ।
ದೆಳಸೆ ಶಿಖಾವಳಂ ಪುದಿದುದಂಧತಮಂ ಭುವನಾಂತಮಂ ತಮಂ ॥ 672 ॥

## ನಕ್ಷತ್ರ.

ಅವಿರಳತಿಮಿರಾರ್ದ್ರಮೃಗೋ । ದ್ಭವಸಿಕ್ತನಭೋಂಗಣಕ್ಕೆ ರಾಜಾಗಮನೋ ।
ತ್ಸವದೊಳ್ ಬಿತ್ತರಿಸಿದರಂ । ಗವಲಿಯ ಮುತ್ತುಗಳಿವೆನಿಸಿದುವು ತಾರಗಗಳ್ ॥ 673 ॥

## ರಾಟಿಳ.

ಎಲವೊರ್ಯುಂದೂಸರ್ಪಕ್ಕಾಂಡರಸದಿಂ ತೋಂಟಕ್ಕೆ ತಮ್ಮೊಳ್ ಪಳಂ ।
ಚಲಿಪೊಳ್ಗೊಂಚಲ ಕಾಯೊಳುರ್ಕುವೆಳಸಿರಿಂದಂ ಬನಂಗಳ್ಗಗುಂ ॥
ಪಲಿ ನೀರೂಟಮಿದೇಕೆ ಕೆಮ್ಮನೆ ತೋಱುಲ್ಸುತ್ತಿರ್ಪರಿಂತೆಮ್ಮನೆಂ ।
ದುಲಿವಂತಿರ್ಪುವು ಜಱಾಟಳಂಗಳಸಕೃದ್ಘೂರ್ಧಾಕ್ಕಚೀತ್ಕಾರದಿಂ ॥ 674

## ತೊಂಡು ಹಸುವಿಗಂಜಿದ ಜನದ ತಲ್ಲಣ.

ಮನೆಮನೆದಪ್ಪಿದೋಡಿ ಪಡಿಯಂ ಕಿಱುತಿರ್ಪರ್ ಗೃಹಂಗಳಗ್ರಮಂ ।
ತನತನಗೇಱುತಿರ್ಪರ್ ದಡಿಯಂ ಪಿಡಿದಬ್ಬರಿಸುತ್ತುಮಿರ್ಪರ್ ತೊ ॥
ಟ್ಟನೆ ಕೆಡೆಯುತ್ತುಮಿರ್ಪರ್ ಬಿಡೆ ಕೂಗಿಡುತಿರ್ಪರುಱುತಿರ್ಪರ್ ತತ್ಪುರೀ ।
ಜನದ ಪೊದಱ್ದು ತಲ್ಲಱದ ಮಲ್ಲಱ ಬೀದಿಯೊಳಾದುದದ್ಭುತಂ ॥ 675 ॥

## ದಿವಿಜ.

ಪ್ರಾತಿಪದಿಕಂಬೊಲಾತನ । ಧಾತುಕನವಿಭಕ್ತಿಭೂಷಿತಂ ನಿಯತಾರ್ಥೋ ।
ಪೇತಂ ನಿಶ್ಚಿತನಾಮ । ಖ್ಯಾತಂ ತಾಂ ಪ್ರತ್ಯಯಾರ್ಹನಾದಂ ದಿವಿಜಂ ॥ 676 ॥

## ಬಲರಾಮನ ಪ್ರಲಾಪ.

ಗರುಡಿಯೊಳಾರೊಳಿಂ ನಲವಿನಾಡುವೆನಾರೊಡನೇಱ ತೋಱುವೆಂ ।
ಕರಿತುರಗಂಗಳಂ ನಗುವೆನಾರೊಡನಾರೊಡನಣ್ಣ ಮೆಚ್ಚಿದಂ ॥
ತಿರೆ ಮನದಿಚ್ಚೆಯಂ ನುಡಿವೆನಾರೊಡನಾಡುವೆನಕ್ಕಟಾ ಸಹೋ ।
ದರನನನಾಥನಂ ಬಿಸುಟು ಕೆಮ್ಮನೆ ತಮ್ಮನೆ ಪೋಗಲಕ್ಕುಮೇ ॥ 677 ॥

ಸರಸತಿ ನಿನ್ನ ಭಾಗ್ಯಮರೆಯಾದುದೆ ಹಾ ನಿನತೋೞಿವಾಗ್ಯವೋ ।
ಸರಿಸಿದುದೇ ಧರಿತ್ರಿ ಸಿರಿ ನಿನ್ನಯ ಮೆಯ್ಸಿರಿ ಸೂಱೆವೋಯ್ತು ಮ ॥
ಯ್ಗುರೆದುದೆ ವೀರಲಕ್ಷ್ಮಿ ನಿನತ್ಯದೆತನಂ ಬಿದಿ ಮೀರೆದಪ್ಪಿ ನಿ ।
ಷ್ಕರುಣದೆ ನಿಮ್ಮ ಬಾೞ್ಕ್ಮ್ರದಲನಕ್ಕಟ ವಂಚಿಸಿ ಕೊಂಡುಪೋದನೇ ॥ 678 ॥

ಸೊಗಯಿಪ ನಿನ್ನ ನುಣ್ಚರದ ಗೀತಿಗೆ ಮೆಚ್ಚುವರಾರೊ ಭೃಂಗ ಕಂ ।
ಠುಗೆ ಬರವೀವ ನಿನ್ನ ಬರವಿಂಗಿದಿರ್ವರ್ಪವರಾರೊ ಚೂತ ದೇ ॥
ಸೆಗೆ ನೆಲೆಯಾದ ನಿನ್ನಯ ಮುಗುಳ್ನಗೆಯಂ ಬಗೆಗೊಳ್ವರಾರೊ ಮ ।
ಲ್ಲಿಗೆ ಮಱಸಿಕ್ಕಿ ನಿಮ್ಮರಸನಂ ಜವನುಯ್ದುದನಿತ್ತ ಕೇಳಿರೇ ॥ 679 ॥

## 2. ಶ್ರೀಪದಾಶೀತಿ.

ಈ ಗ್ರಂಥವು "ಣಮೋ ಅರುಹಂತಾಣಂ" ಇತ್ಯಾದಿ ಪಂಚಪದಗಳ ಮಹಿಮೆಯನ್ನು ತಿಳಿಸುತ್ತದೆ: ಎಂದರೆ ಅರ್ಹಂತರು, ಸಿದ್ಧರು, ಆಚಾರ್ಯರು, ಉಪಾಧ್ಯಾಯರು, ಸಾಧುಗಳು ಎಂಬ ಪಂಚಪರಮೇಷ್ಠಿಗಳ ನಾಮದ ಮಹಿಮೆಯನ್ನು ಬೋಧಿಸುತ್ತದೆ. ಇದರಲ್ಲಿ ಸುಮಾರು 94 ಕಂದಗಳಿವೆ. ಈ ಗ್ರಂಥದ ಬಂಧವು ಪ್ರೌಢವಾಗಿದೆ. ಇದರ ಉತ್ಕೃಷ್ಟತೆಯನ್ನು ಕವಿ ಈ ಪದ್ಯದಲ್ಲಿ ತಿಳಿಸಿದ್ದಾನೆ:—

ನಿರಪಾಯಾತ್ಮಪ್ರಭಾವಂ ಪರಮಹಿಮಕರಂ ದೂಷಿತಾಶೇಷದೋಷಂ ।
ದುರಘವ್ರಾತಾಬ್ಜವಕ್ತ್ರಂ ವಿರಹಿಜನಹಿತಂ ಸತ್ಪಥಜ್ಯೋತಿ ಶಶ್ವ ॥
ತ್ಪರಿಪೂರ್ಣಂ ನಿಷ್ಕಳಂಕಂ ಬುಧಹೃದಯಗತಧ್ವಾಂತವಿಧ್ವಂಸಿತೇಜಂ ।
ಧರೆಯೊಳ್ ವರ್ತಿಕ್ಕೆ ನಿಚ್ಚಂ ಕುವಲಯಸುಖದಂ ಶ್ರೀಪದಾಶೀತಿಚಂದ್ರಂ ॥

ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

### ಪಂಚಪದ.

ಶ್ರೀಮತ್ಪಂಚಪದಂ ಗುರು । ನಾಮಾದಿತ್ರಿತಳಮತುಳರಮ್ಯಂ ಹರ್ಮ್ಯಂ ।
ದಾಮಮಯಂ ಸುಖಕಲಶೋ । ದ್ದಾಮಂ ವಿಶ್ರಾಮಧಾಮಮಕ್ಕೆಮಗನಿಶಂ ॥
॥ 680 ॥

### ಗುರುಪದ.

ಸುಖದ ಕಣಿ ಸುಖದ ತಿಂತಿಣಿ । ಸುಖದ ಬನಂ ಸುಖದ ಸುಗ್ಗಿ ಸುಖದ ಬಸಂತಂ ।
ಸುಖದ ತಿಳಿ ಸುಖದ ಪೊಂಪುೞಿ । ಸುಖದೊರ್ಬುೞಿ ಸುಖದ ಸೋನೆಯೆನಿಸದೆ
ನಿಸದಂ ॥ 681 ॥

ಸುಖದ ತನಿರಸದ ಪೆರ್ಮಡು । ಸುಖದೊತ್ತಿನ ಸುತ್ತು ಸುಖದತಣ್ಬುಟ್ಟಲಿನಿಕುಂ ।
ಸುಖದದೊಣೆ ಸುಖದದೀರ್ಘಿಕೆ । ಸುಖದಕೊಳಂ ಸುಖದಯಂತ್ರಧಾರಾಗಾರಂ
॥ 682 ॥

ಭುವನತ್ರಯಮುಂ ನಿಜರುಚಿ । ನವಾಮೃತಾರ್ಣವದೊಳಾವಗಂ ತೇಂಕಿಸುತಿ ।
ರ್ಪವಿತರ್ಕ್ಯಕಾಂತಿಕಾಂತಂ । ಶಿವಪದಮುಂ ಕಡುಗೆ ನಮಗೆ ಗುರುಪದಮ
ನಘಂ ॥ 683 ॥

ಮರುಳಕ್ಕೆಮ ಪುರುಳಕ್ಕೆಮ । ದುರಿತಾಹಿತಭೀತಿಯಿಂ ಭವತ್ಪದಪದ್ಮಂ ।
ಶರಣೆಂದು ಪೊರ್ದಿದೆನ್ನಂ । ಪರಿಪಾಳಿಸದಿರ್ದೊಡೆತ್ತ ನಿಮಗೆ ಗುರುತ್ವಂ ॥ 684 ॥

ಪ್ರಣವ.

ಅತಿಶಯಚಿಂತಾಮಣಿ ವಿ । ಶ್ರುತವಿದ್ಯಾಕಲ್ಪಕಂದಳೀಕಂದಮಿಳಾ ।
ಸ್ತುತಬೋಧವಾರ್ಧಿವೇಳಾ । ಸಿತರುಚಿಸಂಪೂರ್ಣಬಿಂಬವಿಭವಂ ಪ್ರಣವಂ ॥ 685 ॥

ಸಾಧುಗಳು.

ಜಡಿದುಂ ನುಡಿದುಂ ತಮ್ಮೊ । ಳ್ನಡೆಯುಂಪಡಿದೋಱಿ ಜಡರನೊಯ್ಯನೆ ಕೃಪೆಯಿಂ
ಕಿಡದೆಡೆಗೆಯ್ದಿಪ ಸಾಧುಗ। ಳಡಿದಳಿರ್ಗಳ್ ಕಿಡಿಸುಗೆಮ್ಮ ಜನ್ಮಶ್ರಮಮುಂ ॥ 686 ॥

---

## ಸಿಂಗದೇವ. 1197.

ಸೊರಬದ 140ನೆಯ ಶಾಸನದಲ್ಲಿ (ಶಕ 1119) ಈತನನ್ನು "ಸರಸೋದಾರ ಕವಿತ್ವತತ್ವಚತುರಾಸ್ಯಂ" ಎಂದು ಹೊಗಳಿದೆ. ಈತನು ಜಿಡ್ಡುಳಿಗೆಯ ಎಕ್ಕಲದೇವನ ಮತ್ತು ಚಟ್ಟಳದೇವಿಯ ಮಗನೆಂದು ಹೇಳಿದೆ. ಇವನು ಆವ ಗ್ರಂಥಗಳನ್ನು ಬರೆದಿದ್ದಾನೆಯೋ ತಿಳಿಯದು.

---

## ಕವಿಕಾಮ. ಸು. 1200.

ಈತನು **ಶೃಂಗಾರರತ್ನಾಕರವನ್ನು** ಬರೆದಿದ್ದಾನೆ. **ಸ್ತನಶತಕವೆಂಬ** ಮತ್ತೊಂದು ಗ್ರಂಥವನ್ನೂ ಬರೆದಿರುವುದಾಗಿ **ಪಾರ್ಶ್ವನ** (1205) ಈ ಪದ್ಯದಿಂದ ತಿಳಿಯುತ್ತದೆ:—

ಕಾಮನ ಬಾಣಕ್ಕಂ ಕವಿ । ಕಾಮನ ಬಾಣಕ್ಕಮಿಲ್ಲ ಭೇದಂ ಸುಮನೋ ।
ರಾಮತೆಯಿಂ ಸ್ತನಶತಕೋ । ದ್ದಾಮತೆಯಿಂ ಭುವನಮಂ ವಶಂಮಾಳ್ಪುದಱಿಂ ॥

ಈತನ ಬಿರುದುಗಳನ್ನು ನೋಡಿದರೆ ಇವನು ಇನ್ನೂ ಅನೇಕ ಗ್ರಂಥಗಳನ್ನು ರಚಿಸಿರಬಹುದೆಂದು ತೋರುತ್ತದೆ. ಇವನ ಸ್ತನಶತಕವೂ ಇತರ ಗ್ರಂಥಗಳೂ ನಮಗೆ ದೊರೆತಿಲ್ಲ.

"ಭವಪಾದಾಂಬುಜಷಟ್ಪದಂ" ಎಂಬುದರಿಂದಲೂ ಆಶ್ವಾಸಾಂತ್ಯಗದ್ಯದಿಂದಲೂ ಈತನು ಬ್ರಾಹ್ಮಣಕವಿಯೆಂದು ತೋರುತ್ತದೆ. ಅಲ್ಲದೆ

ನಿರುಪಮಕವಿತಾರಸಮಂ | ವರಕವಿಬುಧರತ್ನರಾಜ ಬಣ್ಣಿಸೆ ಸಾಮಂ |
ತರ ಮಂಡಳಿಕರ ಚಕ್ರೇ | ಶರ ಸಭೆಯೊಳ್ ನೆಗೞ್ದನಿಂತು ಕವಿಮುಖಮುಕುರಂ ||

ಎಂದೂ "ವಿವಿಧಭೂಭೃದ್ಭೂರಿಸಂಭಾವಿತಾಸ್ಪದದಿಂ" ಎಂದೂ ಹೇಳಿಕೊಂಡಿರುವುದರಿಂದ ಈತನು ರಾಜಾಸ್ಥಾನಗಳಲ್ಲಿ ಪ್ರಸಿದ್ಧಕವಿಯಾಗಿದ್ದಂತೆ ತಿಳಿಯುತ್ತದೆ.

ಈತನಿಗೆ ಶೃಂಗಾರರತ್ನಾಕರ, ಕವಿಮುಖಮುಕುರ ಎಂಬಿವೇ ಮೊದಲಾದ ಅನೇಕ ಬಿರುದುಗಳಿದ್ದಂತೆ ತೋರುತ್ತದೆ. ಇವನಿಗೆ ಅನ್ಯಾದೃಶವಾದ ಕವಿತಾಶಕ್ತಿಯೂ ಅವಧಾನಶಕ್ತಿಯೂ ಇದ್ದಂತೆ ಈ ಪದ್ಯದಿಂದ ತಿಳಿಯುತ್ತದೆ:—

ಎಸಕಂಬೆತ್ತ ಮತಿಪ್ರಕಾಶಮದನಿನ್ನೇನೆಂದಪೆಂ ಚೇಟಿ ನಾ |
ಲ್ದೆಸೆಯೊಳ್ ನಾಲ್ವರ ಕಂಠದೊಳ್ ಬರೆಯೆ ಕಬ್ಬಂಬೇೞ್ದನೊಲ್ದತ್ತಲಾ ||
ಡಿಸುವಂ ನೆತ್ತಮನಿತ್ತಲೋದಿದೊಡೆ ತಪ್ಪಂ ಪೇೞ್ದಪಂ ತಿರ್ದಿಯಾ |
ಲಿಸುವಂ ಗೀತಮನೆನ್ನುಮಂ ನಗಿಸುವಂ ಶೃಂಗಾರರತ್ನಾಕರಂ ||

ಈತನ ಗ್ರಂಥದಲ್ಲಿಯ ಪದ್ಯವನ್ನು[1] **ಮಲ್ಲಿಕಾರ್ಜುನನು** (ಸು. 1245) ತನ್ನ **ಸೂಕ್ತಿಸುಧಾರ್ಣವ**ದಲ್ಲಿ ಉದ್ಧರಿಸಿ ಬರೆದಿರುವುದರಿಂದ ಇವನು ಅವನ ಕಾಲಕ್ಕೆ ಹಿಂದೆ ಇದ್ದಿರಬೇಕೆಂದೂ **ಪಾರ್ಶ್ವಪಂಡಿತನು** (1205) ಇವನನ್ನು ಸ್ತುತಿಸುವುದರಿಂದ 1205 ಕ್ಕೆ ಹಿಂದೆ ಇದ್ದನೆಂದೂ ವ್ಯಕ್ತವಾಗುತ್ತದೆ. ಅಲ್ಲದೆ ಈತನು "ಶೃಂಗಾರ"ವನ್ನು ಬರೆದ ಕವಿಗಳ ಹೆಸರನ್ನು ಹೇಳುವ ಸಂದರ್ಭದಲ್ಲಿ **ಮನಸ್ಸಂಜಾತ** ಎಂಬ ಒಬ್ಬ ಕವಿಯ ಹೆಸರನ್ನು ಹೇಳುತ್ತಾನೆ. ಈ ಮನಸ್ಸಂಜಾತನು ಸುಮಾರು 1000 ರಲ್ಲಿದ್ದ **ಮನಸಿಜ**[2] ನೆಂಬ ಕನ್ನಡಕವಿಯೇ ಆಗಿದ್ದ ಪಕ್ಷದಲ್ಲಿ ಕವಿಕಾಮನು 1000 ಕ್ಕೆ ಈಚೆಯವನಾಗಿದ್ದಿರಬೇಕು. ಸುಮಾರು 1200 ರಲ್ಲಿ ಇದ್ದಿರಬಹುದೆಂದು ಊಹಿಸುತ್ತೇವೆ.

ಈತನು ತನಗೆ ಹಿಂದೆ ಇದ್ದ "ಶೃಂಗಾರ" ಕರ್ತೃಗಳ ಹೆಸರುಗಳನ್ನು ಈ ಪದ್ಯದಲ್ಲಿ ಹೇಳಿದ್ದಾನೆ:—

---

1 ಶೃಂಗಾರರತ್ನಾಕರ, ಪದ್ಯ 7.

2. ಪುಟ 72.

ಸರಸೀಜೋದ್ಭವಕರ್ಣಿಕಾಭವಕುಬೇರಾಪತ್ಯಪಾಂಚಾಳಕಾ ।
ಬರವಾತ್ಸ್ಯಾಯನಚಂದ್ರದತ್ತಕಮನಸ್ಸಂಜಾತನಾರಾಯಣಾ ॥
ಮರಸಿಂಹಾದಿಗಳಿಂ ನೆಗೞ್ತೆವಡೆದಾಶೃಂಗಾರವಿಾಗಳ್ ಕರಂ ।
ದೊರೆವೆತ್ತತ್ತೆನೆ ಚೋಜಕ್ಕೆ ವಿಸ್ತರಿಸಿದಂ ಶೃಂಗಾರಕಾರಾಗ್ರಹಂ ॥

ಈ ಪದ್ಯದಲ್ಲಿ ಉಕ್ತರಾದ ಕವಿಗಳೆಲ್ಲಾ ಪ್ರಾಯಶಃ **ಸಂಸ್ಕೃತ ಕವಿಗಳು.** ಆದರೆ ಚಂದ್ರನು **ಮದನತಿಲಕವನ್ನು** ಬರೆದ ಚಂದ್ರರಾಜ[1] **ನಾಗಿರಬಹುದು;** ಮನಸ್ಸಂಜಾತನು ಮನಸಿಜನಾಗಿರಬಹುದು.

ಈತನನ್ನು **ಪಾರ್ಶ್ವ** (1205), **ಸಾಳ್ವ** (ಸು. 1550), **ಮೊದಲಾದ** ಕವಿಗಳು ಸ್ತುತಿಸಿದ್ದಾರೆ.

ತನ್ನ ಕವಿತಾಚಾತುರಿಯನ್ನೂ ಗುಣಗಳನ್ನೂ ಬಿರುದುಗಳನ್ನೂ ಈ ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ :—

ಜಗದೊಳ್ ಸನ್ನಿದಮಾದ ನಾೞ್ನುಡಿಗಳಂ ಛಂದಕ್ಕೆ ಬರ್ಪಂತು ನೆ ।
ಟ್ಟಗೆ ಮಾತಾಡುವ ಬಲ್ಮೆ ಚಿತ್ತದೊಳೊಡಲ್ವಿರ್ದರ್ಥಮಂ ಕೂಡೆ ನಾ ॥
ಲಗೆಯಿಂ ರಂಜಿಸುವೊಂದು ಬಿನ್ನಣಮದಿನ್ನಾವಂಗೆ ಪುಣ್ಯೈಕಭಾ ।
ಗಿಗೆ ಸ್ವೈಪಿಂ ದೊರೆಕೊಳ್ಳುಮಾತನೆ ವಲಂ ಶೃಂಗಾರರತ್ನಾಕರಂ ॥
ಪದವೆತ್ತಿರ್ದ ಗಭೀರಭಾವಗುಣದಿಂ ಲಾವಣ್ಯಲೀಲಾವಿಲಾ ।
ಸದಿನುದ್ಯದ್ಗುಣಶೋಭೆಯಿಂ ವಿವಿಧಭೂಭೃದ್ಭೂರಿಸಂಭಾವಿತಾ ॥
ಸ್ಪದದಿಂ ಭೂಭುವನಪ್ರಸಿದ್ಧಿ ನಿಲೆ ತತ್ಕಾವ್ಯಂ ಜಗತ್ಸೇವ್ಯಮು ।
ಪ್ಪುದಱಿಂದಂ ಕವಿಕಾಮದೇವನೆ ವಲಂ ಶೃಂಗಾರರತ್ನಾಕರಂ ॥
ಮೃದುಮಧುರವಚನರಚನೆಯಿ । ನುದಾತ್ತಕವಿವೃಷಭಕವಿಕದಂಬವಿಪಶ್ಚಿ ।
ದ್ಧೃದಯಮನಿರ್ಕುೞಿಗೊಳುತಿ । ರ್ಪುದಱಿಂ ಕವಿಕಾಮನಿಂತು ದೆಸೆದೆಸೆಗೆಸೆದಂ ॥
ಅನವದ್ಯಕೀರ್ತಿ ವಿದ್ಯಾ । ವಿನೂತನನಿಮಿತ್ತಬಾಂಧವಂ ಬುಧಸೇವ್ಯಂ ।
ವಿನಯವಿಭೂಷಣನಭಿಮಾ । ನನಿಧಾನಂ ನಿಖಿಲಸುಕವಿಮುಖಮಣಿಮುಕುರಂ ॥
ಸಕಲಕಲಾಕಲಿತಂ ವಾ । ಚಕವಾಚಸ್ಪತಿ ಸರಸ್ವತೀಮುಖತಿಲಕಂ ।

* * * *

ಚದುರ ತವರ್ಮನೆ ರಸಭಾ । ವದ ನಿಧಿ ಮಹಿಮಾಂಬುರಾಶಿ ವಿನಯನಿಧಾನಂ ।

* * * *

ಶ್ರೀನಿಧಿ ವಿವೇಕನಿಧಿ ಕವಿ । ತಾನಿಧಿ ಸೌಭಾಗ್ಯನಿಧಿ ಯಶೋನಿಧಿ ವರವಿ ।
ದ್ಯಾನಿಧಿ ವಿಳಾಸನಿಧಿ ಮಹಿ । ಮಾನಿಧಿ ಮಾನನಿಧಿ ದಾನನಿಧಿ ಕವಿಕಾಮಂ ॥

---

1. ಪುಟ 89.

ಈ ಪದ್ಯಗಳಲ್ಲಿ ಉಕ್ತವಾದ ಬಿರುದುಗಳಲ್ಲದೆ ಕವಿತಾಪಿತಾಮಹ, ಸುಕವಿನಿಕರನಿಳಿಂಪ, ಗದ್ಯಪದ್ಯವಿದ್ಯಾಧರ, ಬುಧಜನಕುಮುದಶರಚ್ಚಂದ್ರ, ಸುಜನವನಜವನಮಾರ್ತಾಂಡ, ವಾಗ್ದೇವೀಲಬ್ಧವರಪ್ರಸಾದವಿಭವ, ಎಂಬ ಬಿರುದುಗಳನ್ನೂ ಹೇಳಿಕೊಂಡಿದ್ದಾನೆ.

ಇವನ ಗ್ರಂಥ

## ಶೃಂಗಾರರತ್ನಾಕರ.

ಈ ಗ್ರಂಥಕ್ಕೆ ರಸವಿವೇಕ ಎಂಬ ಹೆಸರನ್ನೂ ಹೇಳಿದ್ದಾನೆ; ಇದು ಅಲಂಕಾರ ಶಾಸ್ತ್ರದ ರಸಪ್ರಕ್ರಿಯೆಯನ್ನು ಪ್ರತಿಪಾದಿಸುತ್ತದೆ. ಇದರಲ್ಲಿ ಹಿಂದಣ ಕವಿಗಳು ಹೇಳಿದ ಶೃಂಗಾರವನ್ನು ತಾನು ವಿಸ್ತರಿಸಿ ಬರೆದಂತೆ ಹೇಳುತ್ತಾನೆ.

ಈ ಗ್ರಂಥವು (1) ನವರಸವ್ಯಾವರ್ಣನ, (2) ಭಾವಭೇದನಿರ್ಣಯ, (3) ನಾಯಕನಾಯಿಕಾವಿಕಲ್ಪವಿಸ್ತರ, (4) ಸಖಸಖೀಸಂಭೋಗವಿಪ್ರಲಂಭಪ್ರಮಾವಸ್ಥಾದಿವಿಸ್ತರ ಎಂದು ನಾಲ್ಕು ಪರಿಚ್ಛೇದಗಳಾಗಿ ಭಾಗಿಸಲ್ಪಟ್ಟಿದೆ. ಗ್ರಂಥಾವತಾರದಲ್ಲಿ ಕಾಮದೇವನನ್ನೂ ಸರಸ್ವತಿಯನ್ನೂ 'ಪ್ರಾಕ್ತನಕವಿ' ಗಳನ್ನೂ ಸ್ತುತಿಸಿದ್ದಾನೆ. ಬಳಿಕ, ಪಂಡಿತರು ಶೃಂಗಾರಸಾರವಾದ 'ಭಾವರಸಪ್ರಪಂಚ' ವನ್ನು ಹೇಳಬೇಕೆಂದು ಕೇಳಿಕೊಳ್ಳಲು ಈ ಕೆಳಗಣ ಪದ್ಯದಲ್ಲಿ ಹೇಳಿರುವ ವಿಷಯಗಳನ್ನು ಸೇರಿಸಿ ಶೃಂಗಾರರತ್ನಾಕರವೆಂಬ ಗ್ರಂಥವನ್ನು ಬರೆವೆನೆಂದು ಹೇಳಿ ಗ್ರಂಥವನ್ನು ಆರಂಭಿಸಿದ್ದಾನೆ :—

ಭವಪಾದಾಂಬುಜಷಟ್ಪದಂ ನವರಸವ್ಯಾಪಾರಮುಂ ಭಾವಸಂ ।
ಭವಮುಂ ನಾಯಕನಾಯಿಕಾಸಖಸಖೀಸಂಭೋಗತದ್ವಿಪ್ರಲಂ ॥
ಭವಿಟಪ್ರಸ್ತುತವೈಶಿಕಾದಿರಸಶಾಸ್ತ್ರೋದ್ಭೂತಸನ್ಮಾರ್ಗವೃ ।
ತ್ತಿವಿಕಲ್ಪಂಗಳುಮಂ ಮನಂಗೊಳಿಸಿದಂ ಶೃಂಗಾರರತ್ನಾಕರಂ ॥

ಪರಿಚ್ಛೇದಗಳ ಕೊನೆಯಲ್ಲಿ ಈ ಗದ್ಯವಿದೆ :—

ಇದು ವಿನಮದಮರನಿಕರಮಕುಟಮಣಿಗಣಕಿರಣರಮಣೀಯಚರಣಸರಸೀರುಹ ಶಿವಪದಾಂಬುಜಭೃಂಗಾಯಮಾನ ಸರಸ್ವತೀಪ್ರಸಾದಾಸಾದಿತಕವಿತಾಪ್ರಭಾವಂ ಕವಿಕಾಮದೇವವಿರಚಿತಮಪ್ಪ ರಸವಿವೇಕನಾಮ ಶೃಂಗಾರರತ್ನಾಕರದೊಳ್.

ಕನ್ನಡದಲ್ಲಿ ರಸಪ್ರಕರಣವನ್ನು ವಿಸ್ತಾರವಾಗಿ ಪ್ರತಿಪಾದಿಸುವ ಗ್ರಂಥಗಳಲ್ಲಿ ಇದೇ ಮೊದಲನೆಯದು. ಈ ಗ್ರಂಥದಿಂದ **ಸಾಳ್ವನು** ತನ್ನ ರಸರತ್ನಾಕರದಲ್ಲಿಯೂ **ತಿಮ್ಮನು** (ಸು. 1600) ತನ್ನ ನವರಸಾಲಂಕಾರದಲ್ಲಿಯೂ ಅನೇಕಲಕ್ಷಣಪದ್ಯಗಳನ್ನು ಉದ್ಧರಿಸಿ ಬರೆದಿದ್ದಾರೆ.

ನಮಗೆ ದೊರೆತ ಒಂದು ಓಲೆಯ ಪ್ರತಿಯಲ್ಲಿ ಶಿವನನ್ನು ಸ್ತುತಿಸುವ ಈ ಮಂಗಳಶ್ಲೋಕವು ಗ್ರಂಥಾವತಾರದಲ್ಲಿದೆ :—

ಉಮೆಯಿಂ ಶೃಂಗಾರಮಾಕೆಯುದ್ಗಳ ಬಳಗದಿಂ ವೀರಮಾರುಂಡಮಾಲಾ ।
. . ದಿಂ ಬೀಭತ್ಸಮಾಪನ್ನಗನಿನತಿಭಯಂ ಭಿಕ್ಷೆ ಕಾರುಣ್ಯಮಾನಾ ॥
ಗಮೆ ಹಾಸ್ಯಂ ಭಾಳನೇತ್ರಾದ್ಭುತಮುಲಿವ ಮರುಳ್ತಂಡದಿಂ ರೌದ್ರಮಾಚಂ ।
ದ್ರಮನಿಂ ಶಾಂತತ್ವಮಾಗಲ್ ನವರಸಭರಿತಂ ಶಂಭು ರಕ್ಷಿಕ್ಕೆ ನಮ್ಮಂ ॥

ಈ ಗ್ರಂಥದಿಂದ ಕುಕವಿನಿಂದಾರೂಪವಾದ ಈ ಪದ್ಯವನ್ನು ಉದ್ಧರಿಸಿ ಬರೆಯುತ್ತೇವೆ :—

ಶಿಥಿಲಪದಪ್ರಪೂರ್ಣಮಪಶಬ್ದತುಷಾವೃತಮುಸ್ತಭಾವಮು ।
ಪ್ರಥಿತಗತಾರ್ಥಶಾಸ್ತ್ರಮುಪಹಾಸ್ಯಸಮಾವೃತಮುಪ್ಪ ಕಬ್ಬಮುಂ ॥
ಗ್ರಥಯಿಸಿ ಗರ್ವದಿಂ ಬೆಱೆತು ಬಿಜ್ಜನೆ ಬೀಗಿ ಸರಸ್ವತೀಶಿರೋ ।
ವ್ಯಥೆಯನದೇಕೆ ಮಾಡುವರೊ ದುಷ್ಕವಿಗಳ್ ಕಲರೀಧರಿತ್ರಿಯೊಳ್　　॥ 687 ॥

---

## ಬಂಧುವರ್ಮ. ಸು. 1200.

ಈತನು **ಹರಿವಂಶಾಭ್ಯುದಯ**, **ಜೀವಸಂಬೋಧನೆ** ಎಂಬ ಗ್ರಂಥಗಳನ್ನು ಬರೆದಿದ್ದಾನೆ.

ಇವನು ಜೈನಕವಿ; ಜೀವಸಂಬೋಧನೆಯ ಕೊನೆಯ ಪದ್ಯದಲ್ಲಿ "ನುತವೈಶ್ಯೋತ್ತಮ ಬಂಧುವರ್ಮರಚಿತಂ" ಎಂದು ಹೇಳಿಕೊಂಡಿರುವುದರಿಂದ ವೈಶ್ಯ ಜಾತಿಯವನೆಂದು ತಿಳಿಯುತ್ತದೆ. ಇವನ ಗ್ರಂಥಗಳಿಂದ ಈತನ ವಿಷಯವಾಗಿ ಇನ್ನೇನೂ ತಿಳಿವುದಿಲ್ಲ; ಇವನು ತನ್ನ ಗುರುವಿನ ಹೆಸರನ್ನು ಸಹ ಹೇಳಿಲ್ಲ.

**ಕಮಲಭವನು** (ಸು. 1235) ಈತನನ್ನು "ಸಂದ ಬಂಧುವರ್ಮ" ಎಂದು ಸ್ತುತಿಸುವುದರಿಂದ ಇವನು 1235 ಕ್ಕೆ ಹಿಂದೆ ಇದ್ದಿರಬೇಕು; ಎಷ್ಟು ಹಿಂದೆ ಇದ್ದಿರಬಹುದೋ ಅದನ್ನು ನಿಶ್ಚಯಿಸಿ ಹೇಳುವುದಕ್ಕೆ ಆಧಾರವಿಲ್ಲ; ಸುಮಾರು 1200 ರಲ್ಲಿ ಇದ್ದಿರಬಹುದೆಂದು ಊಹಿಸುತ್ತೇವೆ.

ಇವನು ತನಗೆ ಹಿಂದೆ ಇದ್ದ ಆವ ಕವಿಯ ಹೆಸರನ್ನೂ ಹೇಳಿಲ್ಲ

ಈತನನ್ನು **ನಾಗರಾಜ**, **ಮಂಗರಸ**, ಮೊದಲಾದವರು ಸ್ತುತಿಸಿದ್ದಾರೆ:—

ಕವಿಗಳೊಳೆ ಬಂಧುವರ್ಮಂ । ಕವಿ [ಯಾತನ] ಮುಂದೆ ಕವಿಗಳೆಂಬವರೆಲ್ಲಂ ।
ಛವಿಗೆಟ್ಟಿರ್ಪರ್ ತೊಳಗುವ । ರವಿಯಿಂ ಬಳಸಿರ್ದ ಬಹಳಭಗಣಂಗಳವೋಲ್ ॥

[ **ನಾಗರಾಜನ** (1331) **ಪುಣ್ಯಾಸ್ರವ.** ]

ಬಂಧುರಭರತಯಾದವವಂಶವನು ಕೃತಿ । ಬಂಧದೊಳಗೆ ಸೇರಿಸಿದ ।
ಬಂಧುವರ್ಮನನು ನೆನೆದು ನೇಮಿಚರಿತಪ್ರ । ಬಂಧವನಾನುಸಿರುವೆನು ॥

[ ಮಂಗರಸನ (1508) ನೇಮಿಜಿನೇಶ ಸಂಗತಿ. ]

ತನ್ನ ಕವಿತಾಚಾತುರಿಯನ್ನು ಈ ಪದ್ಯದಲ್ಲಿ ಹೇಳಿಕೊಂಡಿದ್ದಾನೆ :—

ರಸದೊಳ್ ಬಿನ್ನಣದೊಳ್ಪು ಕೂಡೆ ಪದಮರ್ಥವ್ಯಕ್ತಿಯಿಂ ಮಾಡೆ ರಂ,
ಜಿಸಿ ಪತ್ತಿರ್ದೆಣೆಮಾತು ಬಲ್ಲರೆರ್ದೆಗೊಳ್ವಂತುಂ ಜನಂ ನಾಡೆ ಬೆ॥
ಕ್ಕಸಮಪ್ಪಂತುಮಿದೊಂದೆ ಸಾಲ್ವುದು ಜಗಕ್ಕೆಂಬಂತುಮಿಂ ಪೇೞ್ದೆನೆಂ ।
ದುಸಿರಲ್ ಕಬ್ಬಿಗರಣ್ಮದಂತುಮಿದನಾಂ ಪೇೞ್ದೆಂ ಮಹಾಕಾವ್ಯಮಂ ॥

ದುಷ್ಕವಿಗಳನ್ನು ಈ ಪದ್ಯದಲ್ಲಿ ಧಿಕ್ಕರಿಸಿದ್ದಾನೆ :—

ಆಲಿಸುತೆ ಬೇಗಮೋಹೋ । ಸಾಲಿಸಿಮೆನೆ ವಿರಸಮಪ್ಪ ಕಬ್ಬಂಬೇೞ್ದಾ ।
ಲೋಲತೆಯಿಂದಂ ಬರೆಬರೆ । ಮೊಲೆಗಳಂಕಿಡಿಸುವಂತು ತಾೞ್ದೊಳ್ ಪಗೆಯೆ ॥

ಇವನ ಗ್ರಂಥಗಳಲ್ಲಿ

## 1. ಹರಿವಂಶಾಭ್ಯುದಯ.

ಇದು 22 ನೆಯ ತೀರ್ಥಂಕರನಾದ ನೇಮಿನಾಥನ ಚರಿತವು; 14 ಆಶ್ವಾಸಗಳಾಗಿ ಭಾಗಿಸಲ್ಪಟ್ಟಿದೆ. ಈ ಗ್ರಂಥದ ಉತ್ಕೃಷ್ಟತೆಯನ್ನು ಕವಿ ಈ ಪದ್ಯದಲ್ಲಿ ಹೇಳಿದ್ದಾನೆ :—

ಪದ್ಯಾಂಗಿ ವಚನಸನ್ಮುಖಿ । ಗದ್ಯಮಹಾರಚನೆ ವಿಳಸದುಭಯಾಲಂಕಾ ।
ರೋದ್ಯತ್ಕುಚೆ ಮತ್ಕೃತಿವಧು । ವಿದ್ಯಾವಿಜ್ಞನದ ಮನದೊಳಿರೆ ವಿರಚಿಸುವೆಂ ॥

ಗ್ರಂಥಾವತಾರದಲ್ಲಿ ನೇಮಿನಾಥನನ್ನು ಸ್ತುತಿಸಿದ್ದಾನೆ; ಬಳಿಕ ಸಿದ್ಧಾದಿಗಳನ್ನೂ ಯಕ್ಷಯಕ್ಷಿಯರನ್ನೂ ಸರಸ್ವತಿಯನ್ನೂ ಸ್ತುತಿಸಿ ಕಥೆಯನ್ನು ಆರಂಭಿಸಿದ್ದಾನೆ.

ಆಶ್ವಾಸಗಳ ಕೊನೆಯಲ್ಲಿ ಈ ಗದ್ಯವಿದೆ :—

ಇದರ್ಹತ್ಸರ್ವಜ್ಞಪಾದಪದ್ಮವಿರಾಜಿತೋತ್ತಮಾಂಗ ಶ್ರೀಬಂಧುವರ್ಮನಿರ್ಮಿತಮಪ್ಪ ಹರಿವಂಶಾಭ್ಯುದಯದೊಳ್.

ಇವನ ಬಂಧವು ಲಲಿತವಾಗಿಯೂ ಪ್ರಾಸಬದ್ಧವಾಗಿಯೂ ಇದೆ.

ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ :—

ನಂದನ.

ತಳಿರ್ಗಳ ಕೆಂಪು ಸಂಪಗೆಯ ಕಂಪು ಮದಾಳಿಯಲಂಪು ಚೆಲ್ವಿನಿಂ ।
ಮಿಳಿರ್ವೆಳಗೊಂಬು ದಂಪತಿಗಳಿಂಬು ಮನೋಭವನಂಬು ಪೂತ ಪೂ ॥

ಗೊಳಗಳ ತೆಳ್ಪು ತೆಂಕಣೆಲರೊಳ್ಪು ಲತಾಳಿಯ ತಳ್ಪು ಕಾಮುಕ ।
ರ್ಕಳಿನಭಿನಂದನಂ ಬಗೆದು ನೋಡಲುಮಿಂತು ಮನೋನುಬಂಧನಂ ॥ 688 ॥

## ಕಾಳಿಯಮರ್ದನ.

ಪಿಡಿದು ತೆಗೆದೆತ್ತಿ ಬೀಸು। ತ್ತಡಸಿ ತಗುಳ್ದಱಿಯಮೇಲೆ ನೀಲಾಂಬರಮಂ ।
ಪಿಡಿದೊಗೆವಸಗನ ತೆಱದಿಂ। ಪೊಡೆದಂ ವಿಷಧಾರಿ ಸೊಪ್ಪುಸೊವಡಪ್ಪಿನೆಗಂ ॥ 689 ॥

## ರುಕ್ಮಿಣಿಯ ಕುರುಳು.

ಕರಿಯವೆನಿಸಿರ್ದು ಪೊಳೆವುವು। ಸುರುಳ್ದು ಕುಸಿದಿರ್ದುಮರಳುತಿರ್ಪುವು ಬೇಱಾ।
ಗಿರುತುಂ ಬಂಬಲ್ಗೊಳ್ವುವು । ಕುರುಳಂದಮಿದೇಂ ವಿರುದ್ಧಮೋ ಕಾಮಿನಿಯಾ ॥ 690 ॥

## ಶಿಶುಪಾಲಕೃತಕೃಷ್ಣನಿಂದೆ.

ಉಡಿದೈ ಭಂಡಿಯನೇನಗುರ್ವೊ ಮಗುೞ್ದಂ ವಿಕ್ರಾಂತದಿಂ ಕಾಗೆಯಂ ।
ಪಿಡಿದೈ ಸಂಕಿಸದೆೞ್ತು ಕೞ್ತೆಬಡಗೊಂಟೆಂದಿಂತಿವಂ ನೋವಿಸಂ ॥
ಬಡಿದೈ ನೀರೊಳಗೊಳ್ಳೆಯಂ ಮುಡಿಪಿದೈ ನೀಂ ಚೋದ್ಯಮೋ ಮತ್ತಿರ।
ೞ್ಗಡುವಂ ಮಾಣ್ದಿರದೊತ್ತಿದೈ ಗಡಮಿದೇನಾಶ್ಚರ್ಯಮೋ ಸಾಹಸಂ ॥ 691 ॥

## ಪೌರುಷ.

ಕೇಡೆಂಬುದು ಪುರುಷನನೀ । ಡಾಡಲುಮಱಿದಱಿದು ಕಾಡಲುಂ ಪುರುಷತೆಯಂ।
ನೋಡಲುಮೆಂದಾದೊಡೆ ಚಿಃ। ನಾಡೆ ಮನಂಗೆಟ್ಟು ಮಗುೞಲಕ್ಕುಮೆ ಪೋಪಂ ॥ 692 ॥

## ಪಾತಿವ್ರತ್ಯ.

ಪತಿ ಕಾಗುಮೆ ಪೆಂಡತಿಯಂ । ಸತಿ ತನ್ನಂ ತಾನೆ ಕಾಗುಮುತ್ತಮಜಾತಿ ।
ಸ್ಥಿತಿಯಂ ಗುಣಸಂತತಿಯಂ। ಗತಿಯಂ ತಾಂ ಬಗೆದು ನೆಗೞ್ತೆ ಪೞಿ ಪೊರ್ದುಗುಮೇ ॥ 693 ॥

## ಅಹಿಂಸೆ.

ಕಾವವರಾರುಮಿಲ್ಲ ದನಮೆಂಬುದು ಸೀರನಿತಿಲ್ಲ ದೋಷಮೆಂ ।
ಬಾವುದುಮಿಲ್ಲ ಬೆರ್ಚುವುದು ಮೆಯ್ಮುಳಿಸಿಲ್ಲದ ಮೂಗುಜಾತಿಗಳ್ ॥
ಮೇವುದು ಪುಲ್ ಜಲಂ ಕುಡಿವುದಿರ್ಪೆಡೆಯುಂ ಪೞುವಂತುಮಿಷ್ಟಸಂ ।
ಸೇವನೆಯಲ್ಲಿ ಮೆಯ್ಯಱಿಯದಿರ್ದವನೇಂ ಗಳ ಕೊಲ್ವುದೊಳ್ಳಿತೇ ॥ 694 ॥

## 2. ಜೀವಸಂಬೋಧನೆ.

ಈ ಗ್ರಂಥದಲ್ಲಿ ಕವಿ ಜೀವನನ್ನು ಸಂಬೋಧಿಸಿ ಜೈನಮತದ ತತ್ವಗಳನ್ನು ಉಪದೇಶಿಸಿದ್ದಾನೆ. ಇದು ಅಧ್ರುವಾಭಿಧಾನ, ಅಶರಣಾಭಿಧಾನ, ಏಕತ್ವಾಭಿಧಾನ, ಅನ್ಯತ್ವಾಭಿಧಾನ, ಸಂಸಾರಾಭಿಧಾನ, ಲೋಕಾಭಿಧಾನ ಅಶುಚಿತ್ವಾಭಿಧಾನ, ಆಸ್ರವಾಭಿಧಾನ, ಸಂವರಾಭಿಧಾನ, ನಿರ್ಜರಾಭಿಧಾನ, ಧರ್ಮಾಭಿಧಾನ, ಬೋಧ್ಯಭಿಧಾನ ಎಂದು 12 ಅಧಿಕಾರಗಳಾಗಿ ಭಾಗಿಸಲ್ಪಟ್ಟಿದೆ.

ಗ್ರಂಥಾವತಾರದಲ್ಲಿ ಜಿನಸ್ತುತಿ ಇದೆ. ಬಳಿಕ ಕವಿ ಸಿದ್ಧಾದಿಗಳನ್ನೂ ಸರಸ್ವತಿಯನ್ನೂ ಸ್ತುತಿಸಿ,

ಅಱಿವಿಲ್ಲದೆ ತಕ್ಕೆಡೆಯೊಳ್ । ತಱಿಸಲ್ಲದೆ ತೊಡರ್ದು ನವೆವ ಜೀವಕ್ಕೆಲ್ಲಂ ।
ನೆಱೆಯೆ ಹಿತಮೆಂದು ಬಗೆದಿದ । ನಱಿಪುವೆನಱಿವಂತು ಜೀವಸಂಬೋಧನೆಯಂ ॥

ಎಂದು ಗ್ರಂಥವನ್ನು ಆರಂಭಿಸಿದ್ದಾನೆ.

ಅಧಿಕಾರಗಳ ಅಂತ್ಯದಲ್ಲಿ

ಇದು ಜಿನಶಾಸನಪ್ರಭಾಸನತೀರ್ಥೋದಿತ[1] ವಿದಿತ ಬಂಧುವರ್ಮನಿರ್ಮಿತಮಪ್ಪ ಜೀವಸಂಬೋಧನಾಗ್ರಂಥಾವತಾರದೊಳ್

ಎಂಬ ಗದ್ಯವಿದೆ.

ಈ ಗ್ರಂಥವು ಲಲಿತವಾಗಿಯೂ ನೀತಿವೈರಾಗ್ಯಬೋಧಕವಾಗಿಯೂ ಇದೆ. ಇದರಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ :—

ಪೞಿಯಂ ಬರಿಸದೆ ಪೆಱರಂ । ಪೞಿಯದೆ ತನ್ನಳವಿಯಿಂದಮೆಂತುಂ ಧರ್ಮ ।
ಕ್ಕೞಿಲದೆ ವಿಶುದ್ಧವೃತ್ತಿಗೆ । ಬೞಿಲದೆ ನೆಗೞ್ವನನಘಂಗಳೇಂ ಪೊರ್ದುಗುಮೇ
॥ 695 ॥

ಕುಡಲಾರ್ಪೊಡೊಡೆಯನಪ್ಪುದು । ಕುಡಲಾಱದೆ ಬೇಡಿದವರ್ಗಳಂ ಮಱುಗಿಸುತಿ ।
ರ್ಪೊಡಮೆಯಿನಾರ್ಗಂ ಮಱುಕಮ । ನೊಡರಿಸದಿರ್ಪೊಂದು ಬಡತನಂ ಲೇಸಲ್ತೇ
॥ 696 ॥

ಎಲೆ ಎಲೆ ಜೀವರಾಶಿಗಳಿರಾ ಮಱೆದಿನ್ನೆಗಮಿರ್ದು ಕೆಟ್ಟ ಗಾ ।
ವಿಲಿಕೆಯೆ ಸಾಲ್ಗುಮಿನ್ನಱದು ಬಂಧನಹೇತುಗಳಪ್ಪುವೆಲ್ಲಮಂ ॥
ತೊಲಗಿಪುದಾತ್ಮ ತಕ್ಕೆಡೆಯೊಳೀವುದು ಕಾವುದು ಸದ್ಗುಣಂಗಳಂ ।
ಸಲಿಸುವುದೀಮನುಷ್ಯಭವಮಂ ಪಡೆದುಂ ಮಱೆದಿರ್ಪುದೊಳ್ಳಿತೇ ॥ 697 ॥

---

1. ಶೀಲೋದಿತ–ಎಂದು ಪಾಠಾಂತರ.

ಪಟ್ಟಂಗಟ್ಟಿದನೆಂಗುವೋ ಬಡವನಂ ಪೋ ಬಱ್ದ ಮಾಣೆಂಗುವೋ ।
ಕಟ್ಟಾಳೆಂಗುವೊ ಪಂದೆಯೆಂದು ಕಡೆಗಣ್ಚುತ್ತಿರ್ಕವೋ ಲೋಭಿ ನೀಂ ॥
ಮುಟ್ಟೆಂದಿರ್ಕವೊ ಜಾನಿ ಮೆಚ್ಚಿದೆನಿವಂ ಬಾೞಿಗ್ಗಂಗುವೋ ಕೆಮ್ಮನೇ ।
ಗೆಟ್ಟತ್ತೆಂಬವೊಲಟ್ಟಿ ಕೊಂದಪನಿವಂ ಮಾಯಾಂತಕಂ ಪಾತಕಂ ॥ 698 ॥

ಧರ್ಮಮನೆ ಕಿಡಿಸಿ ಮೆಯ್ಯಿಗ್ಗನಿ । ಸಾರ್ಮವಿದೆಂದಱಿಸುಕಕ್ಕೆ ಮೋಹಿಸುವುದೆ ಪೇೞಿಲ್ ।
ಪೆರ್ಮರನಂ ಕಡಿದೋವದೆ । ನಿರ್ಮೂಲಂಮಾಡಿ ಪಣ್ದನಲ್ ಬಯಸುವವೋಲ್ ॥ 699 ॥

ಸುರಧನುವೆಂತುಟಂತೆ ವಿಳಸಜ್ಜಳಬುದ್ಬುದಮೆಂತುಟಂತೆ ಪೆ ।
ರ್ದೆರೆಯಿರವೆಂತುಟಂತೆ ಕಿಸುಸಂಜೆಯ ರಂಜನೆಯೆಂತುಟಂತೆ ಭೂ ॥
ಧರನದಿಯೆಂತುಟಂತೆ ಮುಗಿಲೊಡ್ಡಿದಾಕೃತಿಯೆಂತುಟಂತೆ ಮ ।
ರ್ತ್ಯರ ತನುವುಂ ಕಳತ್ರಜನಮುಂ ಧನಮುಂ ಬಗೆದಂತು ನೋೞ್ಪೊಡಂ ॥ 700 ॥

ಪೞಿಯ ಮೊದಲ್ ಪರಾಭವದ ಮೊತ್ತಮೊದಲ್ ಖಳಮೋಹರಾಜನೆಂ ।
ಬೞಿಪನ ಬಾೞ್ಮೊದಲ್ ಬಳೆದ ಕರ್ಮದ ಬಿೞ್ತುಮೊದಲ್ ನಿತಾಂತಮೆಂ ॥
ದೞಿಪುವ ಕಾವ ಪೆರ್ಚಿಸುವ ಚಿಂತೆಯನರ್ಥದೊಳುಂಟುಮಾಡದೊ ।
ಳ್ಪೞಿಯದೆ ಮೋಹಮಂ ಬಿಸುಟ ಮಾನಸರಿಲಿ ಯೆ ದೇವರಲ್ಲರೇ ॥ 701 ॥

ತನುಬಳವುಂ ವಿಳಾಸದಳವುಂ ಧನಸಂಕುಳವುಂ ವಿನೂತಯೌ ।
ವನಭರವುಂ ಕಳತ್ರದಿರವುಂ ಸುತರಾದರವುಂ ಸರಾಗಿಯ ॥
ಪ್ಪನ ಸಲವುಂ ಲತಾಂಗಿಯೊಲವುಂ ಸಿರಿಯೊಳ್ ನಿಲವುಂ ನಿತಾಂತಮೆಂ ।
ದಿನಿತುಮನಿತ್ಯಮೆಂದಿವಱಿಗಳ್ಕಿಗೆ ದುಃಖಿಗಳಾಗಲಕ್ಕುಮೇ ॥ 702 ॥

ಅಡಗಿನ ತೋಲ ನೆತ್ತರ ಮಿದುಳ್ಗಳ ಶಲ್ಯದ ಪುಂಜಮೊತ್ತಿ ಬಂ ।
ದಡಸುವ ವಾತಪಿತ್ತಕಫದೋಷಸಮೂಹದೆ ಪತ್ತಿ ನಿಲ್ತುದೆಂ ॥
ದೊಡೆ ಪೆಱತೇಂ ಕ್ರಿಮಿವ್ರಜದ ಮೂತ್ರಪುರೀಷದ ಕೊಂಡಮೆಂದೊಡೇ ।
ಯೊಡಲಿದಱಂದಮಂ ಬಗೆದು ಭಾವಿಸಿ ಪೇಸದುದೇಕೆ ಜೀವನೇ ॥ 703 ॥

ಬಗೆ ಗಡ ಗರ್ಭದೊಳ್ ಬಳೆವುದಂ ಬಗೆ ಪುಟ್ಟುವ ಮಿೞ್ತುಗೊಡ್ಡಮಂ ।
ಬಗೆ ಬಳೆವಂದಿನೇಳಿದಿಕೆಯುಂ ಬಗೆ ಕುತ್ತದೊಳಾದವಸ್ಥೆಯುಂ ॥
ಬಗೆ ಕಡುಮುಪ್ಪುವೌಂಕುವೆಡೆಯುಂ ಬಗೆ ಸಾವಿನೊಳಪ್ಪ ಸೇದೆಯುಂ ।
ಬಗೆವಡಲೇವುದೆಂದು ನೆಗೞಲ್ಲದೊಡೆಲ್ಲಿಯುಮಾತೊ ಜೀವನೇ ॥ 704 ॥

---

## ದೇವಕವಿ. ಸು. 1200.

ಈತನು ಕುಸುಮಾವಳೀಕಾವ್ಯವನ್ನು ಬರೆದಿದ್ದಾನೆ ಇವನು ಬ್ರಾಹ್ಮಣ ಕವಿಯೆಂದು ತೋರುತ್ತದೆ. ತನ್ನ ಹೆಸರನ್ನು ಕಂಠೋಕ್ತವಾಗಿ ಹೇಳಿಕೊಂಡಿಲ್ಲ; ಆದರೆ ಗ್ರಂಥದ ಹದಿನೈದನೆಯ ಆಶ್ವಾಸದಲ್ಲಿ ಸೈನ್ಯದ ಭೇರೀರವವನ್ನು ವರ್ಣಿಸುವಾಗ—

ಕವಿಕಮಳಜಸೂಕ್ತಿಸುಧಾ । ರ್ಣವಸೋಮಂ ದೇವಕವಿ ದಲೆಂದಿನಿತಂ ಸಾ ।
ಱುವವೋಲ್ ಭೇರೀಭಾಂಕೃತಿ । ರವಮೊಗೆದತ್ತುತ್ತರಾಶೆಯೊಳ್ ಮತ್ತಾಗಳ್ ॥

ಎಂಬ ಪದ್ಯವನ್ನು ಬರೆದಿದ್ದಾನೆ. ಇಲ್ಲಿ **ದೇವಕವಿ**ಯೆಂದು ತನ್ನ ಹೆಸರನ್ನೇ ಹೇಳಿಕೊಂಡಿರುವಂತೆ ಕಾಣುತ್ತದೆ. "ಕವಿಕಮಳಜಸೂಕ್ತಿಸುಧಾರ್ಣವಸೋಮಂ" ಎಂಬುದರಿಂದ ಶಾಂತೀಶ್ವರಪುರಾಣವನ್ನು ಬರೆದ **ಕವಿಕಮಳಭವ**ನಿಗೆ ಗ್ರಂಥ ರಚನೆಯಲ್ಲಿ ಈತನು ಪ್ರೋತ್ಸಾಹವಾಡಿದಂತೆ ಊಹಿಸಬಹುದಾಗಿದೆ. ಈ ಊಹೆಗೆ ಸಹಕಾರಿಯಾಗಿ ಋತು, ಸೂರ್ಯಾಸ್ತ, ಮೊದಲಾದ ವರ್ಣನಾಭಾಗಗಳಲ್ಲಿ ಈತನು ಬರೆದಿರುವ ಪದ್ಯಗಳಲ್ಲಿ ಹಲವು ಅದೇ ಸಂದರ್ಭಗಳಲ್ಲಿ ಶಾಂತೀಶ್ವರ ಪುರಾಣದಲ್ಲಿಯೂ ದೊರೆಯುತ್ತವೆ.

ಈತನು ತನ್ನ ಗ್ರಂಥಕ್ಕೆ ಚಿಕ್ಕರಾಜಚಮೂಪ ಎಂಬವನನ್ನು ನಾಯಕನನ್ನಾಗಿ ಮಾಡಿದಂತೆ ಹೇಳುತ್ತಾನೆ. ಈ ಚಿಕ್ಕರಾಜನು ಕಾಶ್ಮೀರಕುಲದಲ್ಲಿ ಹುಟ್ಟಿದ ಕೇಶವದಂಡನಾಯಕನ ಪೌತ್ರನೆಂದೂ ಲಕ್ಷ್ಮೀಧರನ ಜ್ಯೇಷ್ಠಪುತ್ರನೆಂದೂ ಇವನಿಗೆ ವಿಟ್ಠಲ, ಲಾಹಿದೇವ ಎಂಬ ಇಬ್ಬರು ತಮ್ಮಂದಿರಿದ್ದರೆಂದೂ ಈತನು ಮಂತ್ರಿಯಾಗಿಯೂ ಚಮೂಪನಾಗಿಯೂ ಇದ್ದನೆಂದೂ ಈ ಗ್ರಂಥದಿಂದ ತಿಳಿಯುತ್ತದೆ. ಈ ಚಿಕ್ಕರಾಜನು ಆವ ರಾಜನಲ್ಲಿ ಮಂತ್ರಿಯಾಗಿದ್ದನೋ ತಿಳಿಯದು.

ಈ ಕವಿಗೆ ಕವೀಂದ್ರೋತ್ತಂಸ, ಕೃತಿರತಿರಮಣ, ಭಾರತೀಭೂಷಣ ಎಂಬ ಬಿರುದುಗಳಿದ್ದಂತೆ ತಿಳಿಯುತ್ತದೆ.

ಈತನ ಗ್ರಂಥದಿಂದ **ಮಲ್ಲಿಕಾರ್ಜುನ**ನು (ಸು. 1245) ಪದ್ಯಗಳನ್ನು ಉದ್ಧರಿಸಿ ಬರೆದಿರುವುದರಿಂದ ಇವನು ಅವನ ಕಾಲಕ್ಕೆ ಹಿಂದಣವನು ಎಂಬುದು ವ್ಯಕ್ತವಾಗುತ್ತದೆ. ಈತನು **ರುದ್ರಭಟ್ಟ**ನನ್ನೂ (ಸು. 1180), **ಅಗ್ಗಳ**ನನ್ನೂ (1189) ಸ್ತುತಿಸಿರುವುದರಿಂದ ಅವರ ಕಾಲಕ್ಕೆ ಈಚೆಯವನು ಎಂಬುದೂ ವ್ಯಕ್ತವಾಗುತ್ತದೆ. ಆದುದರಿಂದ ಇವನು ಸುಮಾರು 1200 ರಲ್ಲಿ ಇದ್ದಿರಬಹುದು.[1]

ಈತನು ಪೂರ್ವಕವಿಗಳನ್ನು ಈ ಪದ್ಯಗಳಲ್ಲಿ ಸ್ತುತಿಸಿದ್ದಾನೆ :—

1. ಇವನ ಗ್ರಂಥವು ಸಮಗ್ರವಾಗಿ ದೊರೆತಿಲ್ಲ. ಗ್ರಂಥಾಂತ್ಯದಲ್ಲಿ ಇವನು ತನ್ನ ವಿಷಯವಾಗಿ ಇನ್ನೂ ಏನಾದರೂ ಹೇಳಿಕೊಂಡಿದ್ದಾನೆಯೋ ಏನೋ ತಿಳಿಯದು.

ಕವಿನಿರ್ವಾಣಂಗೆ ಬಾಣಂಗವನಿಗೆಸೆವ ಹರ್ಷಂಗೆ ಹರ್ಷಂಗೆ ವಿಖ್ಯಾ ।
ತವಿಜನ್ಮಾಘಂಗೆ ಮಾಘಂಗಖಿಳಸುಕವಿರತ್ನಂಗೆ ರತ್ನಂಗೆ ಸಂದೊ ॥
ಪ್ಪವಿಳಾರುದ್ರಂಗೆ ರುದ್ರಂಗೊದವಿದ ಪದೆಪಿಂದಗ್ಗಳಂಗಗ್ಗಳಂಗು ।
ತ್ಸವದಿಂದಾವಂ ದಿಟಂ ವಂದಿಸುವದಟನವಂ ಸತ್ಕವೀಂದ್ರಾವತಂಸಂ ॥
ವಿದಿತಕಥಾವಿಚಿತ್ರಮೆಸೆವೀಕುಸುಮಾವಳಿಯೆಂಬ ನವ್ಯಕಾ ।
ವ್ಯದೊಳಿದು ಸ. ಶೋಭೆ ಶ. ಬಾಣನ ಸೂಕ್ತಿಕಳಾಕಳಾಪಮು ॥
ಗ್ಗದ ಕವಿಮಾಘಹರ್ಷರ ವಚಶ್ಶ್ರಿ . . ನತಿ ರುದ್ರಭಟ್ಟನೊಳ್ ।
ಪುಡಿದ ಪದಪ್ರಗಲ್ಭಗುಣಮುಗ್ಗಳದೇವನ ಭಾವಗೌರವಂ ॥

ತನ್ನ ಕವಿತಾಚಾತುರಿಯನ್ನೂ ಗುಣಗಳನ್ನೂ ಈ ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ :—

ವರಶಬ್ದಜ್ಞರನರ್ಥದರ್ಶಿಗಳನುಕ್ತಿಪ್ರೌಢರಂ ಭಾವತ ।
ತ್ಪರರಂ ನೀತಿವಿದರ್ಕಳಂ ರಸಿಕರಂ ಸಾಹಿತ್ಯದೊಳ್ ಸಂದ ಜಾ ॥
ಣರನಾಂದೋಳಶಿರಸ್ಸರೋಜಮುಖರಂ ಮಾಟ್ಪುಕ್ತಿಚಾತುರ್ಯಬಂ ।
ಧುರಮಾವಂಗೆಡೆಗೊಂಡುದಾತನೆ ಕವೀಂದ್ರೋತ್ತಂಸನೀಧಾತ್ರಿಯೊಳ್ ॥
ಸುಕೃತಿಶ್ರೀಭಾಮಿನೀಮಂಗಳಮಣಿಮುಯುದಾಮಂ ಬುಧಸ್ತುತ್ಯಸಾಹಿ ।
ತ್ಯಕಳಾಸಂದೋಹಸೀಮಂ ಸುಕವಿಸುಕರಕೀರಾಸ್ಯಪುಷ್ಪಾವಳೀಕ ॥
ಲ್ಪಕುಜಾರಾಮಂ ಸ್ವಕೀಯಾನ್ವಯಕುವಲಯಸಂಸ್ತೋಮಸೋಮಂ ಸದಾಚಾ ।
ರಕನಲ್ಲಕ್ಷ್ಮೀಲಲಾಮಂ ಕೃತಿರತಿರಮಣಂ ಸಾಹಸೋದ್ದಾಮಭೀಮಂ ॥ [1]

ಇವನ ಗ್ರಂಥ—

## ಕುಸುಮಾವಳಿ.

ಈ ಗ್ರಂಥವು ನೇಮಿಚಂದ್ರನ ಲೀಲಾವತಿಯಂತೆ ಒಂದು ಕಲ್ಪಿತಕಥೆ; ಚಂಪೂರೂಪವಾಗಿದೆ. ನಮಗೆ ದೊರೆತ ಅಸಮಗ್ರ ಪ್ರತಿಯಲ್ಲಿ 15 ಆಶ್ವಾಸಗಳಿವೆ. ಒಟ್ಟು 18 ಆಶ್ವಾಸಗಳಿರಬಹುದೆಂದು ತೋರುತ್ತದೆ.

ಇದರ ಕಥಾಗರ್ಭವನ್ನು ಕೆಳಗೆ ಬರೆಯುತ್ತೇವೆ :—

ಮದನಾವತೀಪುರದ ಮಣಿಕುಂಡಲರಾಜನು ಸ್ವಪ್ನದಲ್ಲಿ ಚಿತ್ರಕೂಟಾದ್ರಿಯ ಬಳಿಯ ಒಂದು ವನದಲ್ಲಿದ್ದ ಕಪಿಲಋಷಿಯ ಪಕ್ಕದಲ್ಲಿ ರೂಪವತಿಯಾದ ಒಬ್ಬ ಸ್ತ್ರೀಯನ್ನು ಕಂಡಂತೆ ಮಂತ್ರಿಗೆ ಹೇಳಲು, ಮಂತ್ರಿ—ಚಿತ್ರಕೂಟದ ಬಳಿಯಲ್ಲಿ ಕಪಿಲಋಷಿಯಿರುವುದು ನಿಜ; ನಾವು ಅಲ್ಲಿಗೆ ಹೋಗಿ ನೋಡಬಹುದು—ಎಂದು ಹೇಳಲು, ಇಬ್ಬರೂ ಹೊರಟು ಋಷಿಯನ್ನು ಕಂಡು ನಮಸ್ಕರಿಸಿ ಆತನ ಬಳಿಯಲ್ಲಿದ್ದ ಅಮೃತಶಿಲಾಪ್ರತಿಮೆಯನ್ನು

1. ಈ ಪದ್ಯವನ್ನು ಕಥಾನಾಯಕನಿಗೂ ಅನ್ವಯಿಸುವಂತೆ ಬರೆದಿರಬಹುದು.

ನೋಡಿ ಅದರ ವೃತ್ತಾಂತವನ್ನು ಕೇಳಿದಾಗ ಋಷಿಯಿಂತೆಂದನು :—ವಿಮಲಾಪುರಿಯ ವಿಶ್ವಂಭರರಾಜನು ಪುತ್ರಕಾಮೇಷ್ಟಿಯನ್ನು ಮಾಡಿ ಕಂದರ್ಪದೇವನೆಂಬ ಮಗನನ್ನು ಪಡೆದು ತದ್ವಿವಾಹಾರ್ಥವಾಗಿ ರಾಜಕನ್ಯೆಯರನ್ನು ಕರೆಯಿಸಿ ತೋರಿದಾಗ ಅವನಾರನ್ನೂ ವರಿಸದೆ, ಒಂದಾನೊಂದು ದಿನ ಉದ್ಯಾನವನದ ಮಾವಿನಮರಕ್ಕೆ ಕಟ್ಟಿದ್ದ ಕುಸುಮಾವಳಿಯ ಚಿತ್ರವನ್ನು ನೋಡಿ ಮೋಹಾವಿಷ್ಟನಾಗಿ ಆ ಸ್ತ್ರೀಯನ್ನು ಹುಡುಕುವುದಕ್ಕೆ ಮಂತ್ರಿಪುತ್ರನಾದ ಮೇಧಾವಳನೊಡನೆ ಪವನಂಜಯವೆಂಬ ಅಶ್ವವನ್ನು ಹತ್ತಿ ಹೊರಟು ಮಾರ್ಗದಲ್ಲಿ ಕೌಶಿಕಮುನಿಯಿಂದ ಅನೇಕ ದಿವ್ಯಾಸ್ತ್ರಗಳನ್ನು ಪಡೆದು ಪದ್ಮಪುರದರಸು ವಜ್ರಜಂಘನ ವೈರಿಯಾದ ಸಿಂಹಬಲನನ್ನು ಜಯಿಸಿ ವಜ್ರಜಂಘನಿಂದ ಕುಸುಮಾವಳಿಯಿರುವ ದೇಶವನ್ನು ತಿಳಿದುಕೊಂಡು ಚಂದ್ರಕಾವತೀವಿಷಯದ ಚಕ್ರವಾಳಪುರದ ಬಳಿಯ ಉದ್ಯಾನವನದಲ್ಲಿದ್ದನು. ಆ ದೇಶದ ರಾಜನಾದ ಚಂದ್ರಧ್ವಜನ ಮಗಳೇ ಕುಸುಮಾವಳಿ. ಆಕೆ ಕಂದರ್ಪದೇವನ ಚಿತ್ರಪಟವನ್ನು ನೋಡಿ ಮೋಹಗೊಂಡು ವಿರಹಾರ್ತೆಯಾಗಿರಲು ಅವಳ ಸಖಿ ಕಳಭಾಷಿಣಿ ಉದ್ಯಾನವನದಲ್ಲಿದ್ದ ಕಾತ್ಯಾಯನೀದೇವಿಯ ಆಲಯಕ್ಕೆ ಕುಸುಮಾವಳಿಯ ಅಭೀಷ್ಟಸಿದ್ಧಿಗಾಗಿ ಪ್ರಾರ್ಥಿಸಲಿಕ್ಕೆ ಹೋಗಿ ಅಲ್ಲಿದ್ದ ರಾಜಪುತ್ರನನ್ನು ಕಂಡು ಚಿತ್ರಪಟದಲ್ಲಿಯವನು ಈತನೇ ಎಂದರಿತು ಆಶ್ಚರ್ಯಪಟ್ಟು ಕುಸುಮಾವಳಿಯ ವಿಷಯವನ್ನು ಅವನೊಡನೆ ಹೇಳಿ ಅವಳ ಬಳಿಗೆ ಆತನನ್ನು ಕರೆದುಕೊಂಡು ಹೋದಳು. ಕಂದರ್ಪದೇವನು ಮೇಧಾವಳನನ್ನು ಅಲ್ಲಿಯೇ ಬಿಟ್ಟು ಕುಸುಮಾವಳಿಯೊಡನೆ ಕುದುರೆ ಹತ್ತಿಕೊಂಡು ತನ್ನೂರಿಗೆ ಹೊರಟು ದಾರಿಯಲ್ಲಿ ಒಂದು ಕಾಡಿನಲ್ಲಿ ವಿಶ್ರಮಿಸಿಕೊಂಡಿದ್ದಾಗ ಒಂದು ಸಿಂಹವು ಆರ್ಭಟಿಸಿಕೊಂಡು ಬರಲು ಕುದುರೆ ಕಿತ್ತುಕೊಂಡು ಓಡಿಹೋಯಿತು. ಕುಸುಮಾವಳಿ ಕುದುರೆಯನ್ನು ಹಿಡಿವುದಕ್ಕಾಗಿ ಹೋಗಿ ಬೇಡರ ಗುಂಪಿಗೆ ಸಿಕ್ಕಿ ಅವರಿಂದ ತಪ್ಪಿಸಿಕೊಂಡು ಓಡಿಹೋಗಿ ಕಪಿಲಋಷಿಯನ್ನು ಮರೆಹೊಗಲು ಋಷಿ ಅವಳ ಸಂಗತಿಯನ್ನು ಕೇಳಿ ತದ್ರಕ್ಷಣಾರ್ಥವಾಗಿ ಆಕೆಯನ್ನು ಶಿಲಾಪ್ರತಿಮೆಯನ್ನಾಗಿ ಮಾಡಿದನು. ಅತ್ತ ಕಂದರ್ಪದೇವನು ಸಿಂಹವನ್ನು ಸಂಹರಿಸಿ ಪ್ರಿಯೆಯನ್ನು ಕಾಣದೆ ತಲ್ಲಣಿಸಿ ಕಪಿಲಋಷ್ಯಾಶ್ರಮಕ್ಕೆ ಬಂದು ಋಷಿಯ ಅನುಗ್ರಹದಿಂದ ಮರಳಿ ಸ್ತ್ರೀರೂಪವನ್ನು ಪಡೆದ ತನ್ನ ಪ್ರಿಯೆಯೊಡನೆ ಸೇರಿದನು. ಕುಸುಮಾವಳಿಯ ತಂದೆಯೂ ಕಂದರ್ಪನ ತಂದೆಯೂ ತಂತಮ್ಮ ಮಕ್ಕಳನ್ನು ಹುಡುಕಿಕೊಂಡು ಅದೇ ವನಕ್ಕೆ ಬಂದು ಸೇರಿದರು. ಮಣಿಕುಂಡಲನು ಇದನ್ನೆಲ್ಲಾ ನೋಡಿ ಆಶ್ಚರ್ಯಪಟ್ಟನು.[1]

ಗ್ರಂಥಾವತಾರದಲ್ಲಿ ಕವಿ ವಿಶ್ವನಾಥನನ್ನು ಸ್ತುತಿಸಿ ಬಳಿಕ ಸರಸ್ವತಿಯನ್ನು ಹೊಗಳಿದ್ದಾನೆ.

**ಆಶ್ವಾಸಗಳ ಕೊನೆಯಲ್ಲಿ ಈ ಗದ್ಯವಿದೆ :—**

ಇದು ಕಮನಕುಧರೇಂದ್ರನಂದನಾಲೋಲಲೋಚನಚಕೋರೀಸುಖಪ್ರದಪರಮಾಂಗಕಾಂತಿಸಂತಾನಸಾಂದ್ರಚಂದ್ರಿಕಾವಿಭವಶೋಭಾಯಮಾನ ಶ್ರೀವಿಶ್ವನಾಥಚರಣನಖಮಯೂ

1. ಇದೇ ನಮಗೆ ದೊರೆತಿರುವ 15 ಆಶ್ವಾಸಗಳ ಕಥೆ.

ಖೋತ್ಫುಲ್ಲಮಲ್ಲಿಕಾಶೇಖರ ಕಂದರ್ಪದೇವಪ್ರಭಾವಪ್ರಶಂಸೋಲ್ಲಸಿತ ಕುಸುಮಾವಳಿ ಮಹಾಪ್ರಬಂಧದೊಳ್.

ಈತನ ಬಂಧವು ಪ್ರೌಢವಾಗಿಯೂ ನಿರರ್ಗಳವಾಗಿಯೂ ಗಂಭೀರವಾಗಿಯೂ ಇದೆ.

ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

### ಸೂರ್ಯಾಸ್ತ.

ಮಿಸುಗುವ ಕಾಂಚನಾಚಲದ ಕಾಂತಿಕಳಾಪಮನೆಯ್ದೆ ಪೀರ್ದು ತ |
ನ್ನೆಸಕದ ತೇಜದುಗ್ರತೆಯನಾತಪಮಾತಪನೀಯದೀಧಿತಿ ||
ಪ್ರಸರಮನಟ್ಟಿ ಕೆಸಲ್ ನೆಱೆಯದಿಂತು ಮಗುಟ್ಟಿದುದೆಂಬಿನಂ ವಿರಾ |
ಜಿಸಿದುದು ಪೊಂಬಿಸಿಲ್ ಪದೆಪಿನಿಂದಪರಪ್ರಹರಾರ್ಧಕಾಲದೊಳ್ || 705 ||

### ಪ್ರಭಾತಮಾರುತ.

ಪನಿಪುಲ್ಲಂಬುಕಣಂಗಳಂ ಕೆದಱುತುಂ ಕೋಕಂಗಳೊಳ್ ರಾಗಮಂ |
ನನೆವೊಯ್ಲುಣ್ಮಿಸುತುಂ ಪತತ್ರಿಗಳೊಳಿರ್ಪಾತೂಂಕಡಂ ನೂಂಕುತುಂ ||
ವನಜಕ್ಕೊಯ್ಯನಲರ್ಕೆಯಂ ಸಮನಿಸುತ್ತೋರಂತೆ ಮೆಯ್ವೆರ್ಚಿ ತ |
ಣ್ಣನೆ ತೀಡಿತ್ತನಸುಂ ಪ್ರಭಾತಸಮಯಪ್ರೋದ್ಭೂತಶೀತಾನಿಲಂ || 706 ||

### ಕಬ್ಬು.

ಮಿಡಿಯಬೊಡಂ ಸುರಿವುದು ರಸ| ಮೆಡೆಯುಡುಗದೆನಿಪ್ಪ ನುಡಿಗೆಕಡುಕಿನಿಸಿದವೋಲ್|
ಗುಡುಗುಡಿಸಿ ಗಂಟುಗಂಟುಗ| ಳೆಡೆಯಿಂ ರಸಮುಣ್ಮಿ ಬಿಕ್ಕು ವಾಟಿಗಳೆಸೆಗುಂ || 707 ||

### ಎಳೆಯ ಹುಲ್ಲು.

ಧುರದೊಳ್ ಶಕ್ರನನೊಕ್ಕಲಿಕ್ಕಿ ನೆಱೆ ಕಪ್ಪಂಗೊಂಡ ಪೀಯೂಷಮಂ |
ಭರದಿಂದೀಂಟುವಲಂಪಿನಿಂ ಗರುಡನಂತಶ್ಶುದ್ಧಿಯಂ ಮಾಡಲೆಂ ||
ದಿರದುದ್ಗಾರಿಸಿದೊಂದು ಪಿತ್ತರಸವೆತ್ತಂ ತಳ್ತವೋಲ್ ಪಚ್ಚನಾ |
ಗಿ ರಸಾವೇಷ್ಟಿತಮುಷ್ಟಿಮಾತ್ರದಳವುಲ್ಲಲ್ಲಿ ವಿಭ್ರಾಜಿಕುಂ || 708 ||

### ಕತ್ತಲೆ.

ಅಡಿಯಿಡಲುರ್ವಿಯಿಲ್ಲ ತಳರಲ್ ನೆಱೆ ನಾಲ್ದೆಸೆಯಿಲ್ಲ ಕಾಣ್ಕೆಯ |
ಪ್ಪೊಡೆ ನಯನಕ್ಕದಿಲ್ಲ ತನುವಿರ್ದಪುದಿಲ್ಲೆನುತುಂ ಕರಾಗ್ರದಿಂ ||
ತಡವರಿಸುತ್ತೆ ವಿಸ್ಮಯದೆ ಭೂಜನಮಿಂತಿರುತಿರ್ದುದಿರ್ದವೋಲ್ |
ಮಿಡುಕದೆ ಸುಮ್ಮನಿರ್ಪಿನಮುಗುರ್ವಿಸಿ ಪರ್ಬಿತು ಮರ್ಬು ಲೋಕಮಂ || 709 ||

ತಿಮಿರಸ್ತೋಮಾಬ್ಧಿಯೊಳ್ ತೊಟ್ಟನೆ ಮುೞುಗಿದುದೋ ದುಸ್ತರೋದಸ್ತಮಃಕ |
ರ್ದಮದೊಳ್ ಕೇಳೞ್ದುದೋ ಕಜ್ಜಳಬಹಳರಜೋರಾಶಿಯೊಳ್ ಬಿೞ್ದುದೋ ಧ್ವಾಂ ||
ತಮುಹಾಕೂಪೋದರಸ್ಥಾನದೊಳಿಳಿ ದಲಿದೇಂ ನೞ್ಗಿತೋ ನಿಶ್ಚಯಂ ಲೋ |
ಕಮಿದೆಂಬಂತುರ್ಬಿ ಪರ್ಬಿತ್ತತಿನಿಬಿಡತರಾಪೂರಘೋರಾಂಧಕಾರಂ || 710 ||

## ಚಂದ್ರಿಕೆ.

ತಳತಳಿಸುವ ತನಿವೆಳ್ಪಿಂ | ಗಳ ಬಳಗಮಭಿನ್ನಮಾಗೆ ಪರ್ಬಿದಗುರ್ಬಿಂ |
ಪೊಳೆವಮೃತಂ ತೀವಿದ ನಿ | ರ್ಮಳಹಿಮಕಿರಣಾಶ್ಮಭಾಂಡಮೆನಿಸಿತ್ತಜಾಂಡಂ || 711 ||

## ಮಾಗಿ.

ಹಗಲಿರುಳ್ಗಳ ಭೇದಂ ನೆ | ಟ್ಟಗೆ ಕೆಟ್ಟರೆ ಭುವನಗರ್ಭಕುಹರಂ ತಾನಾ |
ವಗಮಿಡಿದಡಸಿದ ತುಂತುರ | ಹಗವಮಿದೆನಿಸಿದುದು ಬಿಡದ ಬಡಹದ ಕೊರ್ಬಿಂ || 712 ||

ಪಱಿದಾಗಳ್ ಪನಿಪುಲ್ಲ ಬಿಂದುಗಳ ತಂದಲ್ ರೋಮರೋಮಂಗಳಿಂ |
ಸೆಱೆ ಸಾರುತ್ತಿರೆ ಜಾನುಮಧ್ಯಗತಮೂರ್ಧಭ್ರಾಂತಮಾಗಿಂತು ಪ ||
ಲ್ಲಱಿಗುಟ್ಟುತ್ತುಮ ವಾನರಾಳಿ ನಡುಗುತ್ತಿರ್ದತ್ತು ಶಾಖಾಗ್ರದೊಳ್ |
ಸೆಱೆಗೆಯ್ದಂದದೆ ಮುಂಬಗಲ್ವರಮದೆತ್ತಂ ಪೋಗದಾಮಾಗಿಯೊಳ್ || 713 ||

## ಪ್ರಭಾತ.

ಒದವಿದ ತೂಂಕಡೋಸರಿಸೆ ಕಣ್ದೆಱೆದೀಕ್ಷಿಸಿ ನಿಟ್ಟೆಱಂಕೆಯಂ |
ಬಿದಿರ್ದು ನಿಮಿರ್ಚಿ ಗೋಣ್ಮುಱಿದೆರೞ್ಕೆಲನಂ ಕಮನೀಯಚಂಚುವಿಂ ||
ಕರ್ದುಕಿ ಕುಲಾಯದಿಂದೆ ಪೊಱಮಟ್ಟು ವಿಹಂಗಮಸಂಗಮಂ ಮಹೀ |
ಜದ ಬಹುಶಾಖೆಯೊಳ್ ಚಿಲಿಮಿಲಿಧ್ವನಿಗೆಯ್ದುದು ಸುಪ್ರಭಾತದೊಳ್ || 714 ||

ಎಱಕೆಗಳೊಳ್ ಪೊದೞ್ದ ಪನಿಪುಲ್ಲ ಪಯಃಕಣಮಂ ಬಿದಿರ್ಚಿ ಕ |
ಣ್ದೆಱೆದಿದಿರ್ಗೊಂಬಿನೊಳ್ ತೊಡೆದು ಚಂಚುವನಂಟಿ ನಿಮಿರ್ಚಿ ನೀವಿ ಸು ||
ಣ್ಗಱಿಗಳನೊರ್ಮೊದಲ್ ಚಿಲಿಮಿಲಿಧ್ವನಿಗೆಯ್ದು ವಿಹಂಗಮಂಗಳ |
ೞ್ಕಱುಗುಟುಕಂ ಕೊಳಲ್ಕಿರದೆ ಪಾಱಿದುವೆಣ್ದೆಸೆಗಂ ಪ್ರಭಾತದೊಳ್ || 715 ||

## ಚಕೋರ.

ಅರೆಮುಗಿದಕ್ಷಿಗಳ್ ತೆಱೆದ ಚಂಚುಪುಟಂ ನಸುಸೋಂಕಿ ನೀಳ್ದ ಕಂ |
ಧರಮಿರದಿರ್ಕೆಲಂಗಳೊಳೆೞಲ್ವ ಪತತ್ರಪುಟಂ ಸಡಿಲ್ವ ಮೆಯ್ ||
ಸರಲತೆವೆತ್ತು ಬಿರ್ಚಿದ ನವಿರ್ ಪರಿರಂಜಿಸಲೀಂಟುತಿರ್ದುದು |
ಬ್ಬರಿಸಿದ ಚಂದ್ರಿಕಾರಸಮನಂಚಿತಚಾರುಚಕೋರಸಂಚಯಂ || 716 ||

### ಎಮ್ಮೆ

ನಲವಿಂದಂ ಮೇದು ಮೆಲ್ಲುಲ್ಲುಗಳನೊದವಿ ಕಡಲ್ಗಾಯ್ವ ಪಾರಾಂಬುವಂ ತ ।
ಣ್ಮಲವಿಂ ಪೊಕ್ಕೀಂಟಿ ಮೆಯ್ಯುಂಡಿಬ್ಬುದು ಪುದಿದೆರಲ್ಬನ್ನೆನಲ್ ಕೊರ್ಬಿ ಪಾಲ್ಗೆ ॥
ಚ್ಚೆಲ ಬಿಣ್ಪಿಂ ಪಾಯ್ದು ಮೆಲ್ಕೊತ್ತುತ್ತುವಿಳಯ ಪೊನಲ್ಗೆಯ್ದೆ ರೋವುಂಥಘೇನಾ ।
ವಲಿ ಗಂಗಾಶ್ರೀಯ ಸೊಂಪಂ ಕುಡುತಿರೆ ಮಹಿಷೀವ್ರಂದಮಿರ್ದತ್ತದೆತ್ತಂ ॥ 717 ॥

### ಗರ್ಭಿಣಿ.

ರಗಣಮನೆ ಪೋಲ್ತು ಪಿರಿದುಂ । ಸೊಗಯಿಪ ದೇವಿಯ ತದೀಯತನುಮಧ್ಯಮದಾ ।
ಜಗಣಮನೆ ಪೋಲ್ತು ಪಿರಿದುಂ । ಸೊಗಯಿಸಿದುದು ಗರ್ಭದರ್ಭಕನ ಕೊರ್ಬುಗೆಯಿಂ
॥ 718 ॥

### ಕಂದರ್ಪದೇವನ ಹುಬ್ಬು.

ಮನುಗಳ ದೊರೆ ಚರಿತದೊಳಿಂ । ತನೆನುತ್ತಿರ್ಕೆಯ್ಗಳಿಂ ವಿರಿಂಚಿಯ ಬರೆದೇ ।
ಬ್ಬನೆಯೆರಡುಲಿಕ್ಕಮೆನೆ ನೃಪ । ಮನೋಭವಭ್ರೂಲತಾಯುಗಂ ಸೊಗಯಿಸುಗುಂ
॥ 719 ॥

### ಚಿಕ್ಕರಾಜಚಮೂಪ.

ಸುಜನವ್ರಜಪಾಲನದಿಂ । ನಿಜಮಹಿಮೆಯೊಳೇಕವಾಕ್ಯದಿಂದಾಕ್ರತಿಯಿಂ ।
ದಜನಜನಜನಜನೆನಿಪಂ । ಭುಜಬಳಪವಮಾನಸೂನು ಚಿಕ್ಕಚಮೂಪಂ ॥ 720 ॥

---

## ಕೇಶಿಯಣ್ಣ. ಸು. 1200.

ಈತನು ಸಿಂಹಪ್ರಾಯೋಪಗಮನ ಎಂಬ ಗ್ರಂಥವನ್ನು ಬರೆದುದಾಗಿ **ಪಾರ್ಶ್ವಪಂಡಿತನು** (1205) ತನ್ನ **ಪಾರ್ಶ್ವನಾಥಪುರಾಣದೊಳಗೆ** ಕರ್ನಾಟಕ ಕವಿಸ್ತವಾವಸರದಲ್ಲಿ ಬರೆದಿರುವ ಈ ಪದ್ಯದಿಂದ ತಿಳಿಯಬರುತ್ತದೆ:—

ಅಂಹಮನಪಹರಿಸುವ ಗುಣ । ಸಂಹತಿಯುಂ ತಳೆದ ಕೇಶಿಯಣ್ಣಂ ಬುಧಬ್ರಂ ।
ದಂ ಹೊಗಟ್ಟೆ ಸುಕ್ರತಸಿಂಹಂ । ಸಿಂಹಪ್ರಾಯೋಪಗಮನಮಂ ವಿರಚಿಸಿದಂ ॥

ಇವನ ವಿಷಯವಾಗಿ ನಮಗೆ ಇನ್ನೇನೂ ತಿಳಿಯದು; ಇವನ ಗ್ರಂಥವೂ ನಮಗೆ ದೊರೆತಿಲ್ಲ.

---

## ವಾಸುದೇವ. ಸು. 1200.

ಈತನನ್ನು **ಪಾರ್ಶ್ವಪಂಡಿತನು** (1205) ತನ್ನ **ಪಾರ್ಶ್ವನಾಥಪುರಾಣ ದೊಳಗೆ** ಕರ್ಣಾಟಕ ಕವಿಸ್ತವಾವಸರದಲ್ಲಿ ಈ ರೀತಿಯಾಗಿ ಸ್ತುತಿಸಿದ್ದಾನೆ:—

ಶ್ರುತಿನೂತ್ನಾರ್ಥೋತ್ಪಾದನ । ಚತುರತೆಯುಂ ವಿವಿಧಕೀರ್ತಿಲಕ್ಷ್ಮೀಶತೆಯುಂ ।
ಕ್ಷಿತಿತಳದೊಳ್ ಕಾವ್ಯಕಳಾ । ಚತುರ್ಮುಖಂಗೆಸೆವ ವಾಸುದೇವಂಗರಿದೇ ॥

"ಕಾವ್ಯಕಳಾಚತುರ್ಮುಖಂ" ಎಂದು ವಿಶೇಷಿಸಿ ಹೇಳಿರುವುದರಿಂದ ಈತನು ಪ್ರಸಿದ್ಧಕವಿಯಾಗಿದ್ದಿರಬೇಕು. ಈತನ ಗ್ರಂಥಗಳಾವುವೂ ನಮಗೆ ದೊರೆತಿಲ್ಲ. **ಮಹಾಲಕ್ಷ್ಮಿ** ವಿರಚಿಸಿರುವ ರಾಮಪಟ್ಟಾಭಿಷೇಕದಲ್ಲಿ ಒಬ್ಬ ವಾಸುದೇವಕವಿ ಸ್ತುತನಾಗಿದ್ದಾನೆ; ಇವನೇ ಆಗಿರಬಹುದೋ ಏನೋ ತಿಳಿಯದು.

---

## ಸ್ವಯಂಭುರುದ್ರ. ಸು. 1200.

ಸ್ವಯಂಭುರುದ್ರರ 12,000 ವಚನ ಎಂಬ ಒಂದು **ಗ್ರಂಥವು** ಇರುವಂತೆ ತಿಳಿಯುತ್ತದೆ. **ಚೆನ್ನಬಸವಪುರಾಣದಲ್ಲಿ** (1584) ಬಸವನು ಕಾಲವಾದ ಮೇಲೆ (1168) ಒಬ್ಬ ರುದ್ರಮುನಿ ಪ್ರಸಿದ್ಧಗುರುವಾಗಿದ್ದಂತೆ ಈ ಪದ್ಯದಿಂದ ತಿಳಿಯುತ್ತದೆ:—

ಬಂದನಿಬರತಿಗೋಪ್ಯದಿಂದಿರುತೆ ರುದ್ರಮುನಿ ।
ತಂದೆ ತನ್ನಯ ಶಿಷ್ಯಮುಕ್ತಿಮುನಿಯೊಡನೆ ನೀ ।
ನಿಂದ್ಯದೆ ಸಕಲದೇಶಂಗಳಂ ಚರಿಸುತಂ ದುಷ್ಟಪರವಾದಿಗಳನು ॥
ಕೊಂದು ಶರಣರ ಪೊರೆವುದೆಂದುಸುರಿ ಕಳುಹಲಾ ।
ನಂದದಿಂದಖಿಳದೇಶಂಗಳಂ ಚರಿಸಿ ತಾಂ ।
ನಿಂದು ಸಿರಿಗಿರಿಯ ಸಿಂಹಾಸನದಿ ಸಕಲಸದ್ಭಕ್ತರಂ ಪಾಲಿಸುವನು ॥ [1]

ಈ ವಚನಗಳನ್ನು ಬರೆದವನು ಈತನೇಯೋ ಏನೋ ತಿಳಿಯದು. ಈಕವಿ ಸುಮಾರು 1200 ರಲ್ಲಿ ಇದ್ದಿರಬಹುದೆಂದು ಊಹಿಸುತ್ತೇವೆ.

---

## ದೇವೇಂದ್ರ ಮುನಿ. ಸು. 1200.

ಈತನು **ಬಾಲಗ್ರಹಚಿಕಿತ್ಸೆಯನ್ನು** ಬರೆದಿದ್ದಾನೆ. ಇವನು ಜೈನಕವಿ; ಸುಮಾರು 1200 ರಲ್ಲಿ ಇದ್ದಿರಬಹುದೆಂದು ಊಹಿಸುತ್ತೇವೆ.

ಇವನ ಗ್ರಂಥವು ಬಹಳಮಟ್ಟಿಗೆ ವಾಕ್ಯರೂಪವಾಗಿದೆ.

---

1. ಕಾಂಡ 5, ಸಂಧಿ 9, ಪದ್ಯ 37.

## ಶುಭಚಂದ್ರ. ಸು. 1200.

ಈತನು ಕಾರ್ತಿಕೇಯಾನುಪ್ರೇಕ್ಷೆಗೆ ಟೀಕೆಯನ್ನು ಬರೆದಿದ್ದಾನೆ. ಇವನು ಜೈನಕವಿ; ತ್ರೈವಿದ್ಯವಿದ್ಯಾಧರ, ಷಡ್ಭಾಷಾಕವಿಚಕ್ರವರ್ತಿ ಎಂದು ತನ್ನನ್ನು ವಿಶೇಷಿಸಿ ಹೇಳಿಕೊಂಡಿದ್ದಾನೆ. ಇವನ ಕಾಲವು ಸುಮಾರು 1200 ಆಗಿರಬಹುದು.

---

## ಬಾಳಚಂದ್ರಕವಿಕಂದರ್ಪ. 1204.

ಇವನು ಜೈನಕವಿ; **ಜನ್ನನ** (1209) ಪತ್ನಿಯಾದ ಲಕುಮಾದೇವಿಯ ಗುರುವೆಂದು ಆ ಕವಿಯ ಅನಂತನಾಥಪುರಾಣದಿಂದ (1230) ತಿಳಿಯುತ್ತದೆ. ಈತನು ಸಕಲಚಂದ್ರನ ಮಗನಾದ ಮಾಧವಚಂದ್ರನ ಶಿಷ್ಯನು. ಇವನು ಪ್ರಸಿದ್ಧನಾದ ಕವಿಯೆಂದು ಜನ್ನನು ಹೇಳುತ್ತಾನೆ. ಪಾರ್ಶ್ವಪಂಡಿತನು (1205),

ವಕ್ರೋಕ್ತಿಭವಯಶೋಜ್ಯೋ। ತ್ಸ್ನಾಕ್ರಾಂತಪರಾವಲೇಪತಿಮಿರಂ ಧರಣೀ।
ಚಕ್ರದೊಳತಿಚಿತ್ರಂ ಕವಿ। ಚಕ್ರಪ್ರಿಯನೆನಿಸಿ ಬಾಳಚಂದ್ರಂ ನೆಗಳ್ದಂ॥

ಎಂಬ ಪದ್ಯದಲ್ಲಿ ಸ್ತುತಿಸುವ ಬಾಳಚಂದ್ರನು ಇವನೇ ಆಗಿರಬಹುದು. ಈ ಪದ್ಯದಿಂದ ಇವನು ವಕ್ರೋಕ್ತಿಯಲ್ಲಿ ಪ್ರಗಲ್ಭನೆಂದು ತಿಳಿಯುತ್ತದೆ. ಈತನ ಗ್ರಂಥಗಳಾವುವೂ ನಮಗೆ ದೊರೆತಿಲ್ಲ.

ಆದರೆ ಬಾಂಬೆ ಪ್ರೆಸಿಡೆನ್ಸಿಗೆ ಸೇರಿದ ಬೆಳಗಾವಿನಲ್ಲಿ ಇದ್ದ ಎರಡು ಶಿಲಾಶಾಸನಗಳನ್ನು [1] ಇವನು ಬರೆದುದಾಗಿ ಆ ಶಾಸನಗಳ ಅಂತ್ಯದಲ್ಲಿರುವ ಈ ಭಾಗಗಳಿಂದ ತಿಳಿಯುತ್ತದೆ—

ದೋಷವ್ಯತೀತಮರ್ಥವಿ। ಶೇಷಮಿದೆನೆ ಪೇೞ್ದನೊಲ್ದು ಶಾಸನಮಂ ಪೀ।
ಯೂಷಸಮಸೂಕ್ತಿ ಚಾತು। ರ್ಭಾಷಾಕವಿಚಕ್ರವರ್ತಿ ಕವಿಕಂದರ್ಪಂ॥

ಶ್ರೀಮನ್ಮಾಧವಚಂದ್ರತ್ರೈವಿದ್ಯಚಕ್ರವರ್ತಿವಾಕ್ಸುಧಾರಸನಾಭ್ಯುದಿತನಿತ್ಯಸಾಹಿತ್ಯವನಕಮಲಮರಾಳಂ ಬಾಳಚಂದ್ರದೇವಂ ಪೇೞ್ದ ಶಾಸನಂ

ಪ್ರಹತಾರಿವ್ರಜಕಾರ್ತವೀರ್ಯಸಚಿವಂ ಶ್ರೀಬೀಚಿರಾಜಂ ಯಶೋ।
ಮಹಿತಂ ಪೇೞೆಮೆನಲ್ಕೆ ಶಾಸನಮನೊಳ್ಪಿಂ ಬಾಳಚಂದ್ರಂ ಗುಣಾ॥
ಗ್ರಹಿವಿದ್ವಜ್ಜನಸಮ್ಮತಸ್ಫುಟಪದಾರ್ಥಾಳಂಕ್ರಿಯಾಸಂಕುಳಾ।
ವಹಮಪ್ಪಂತಿರೆ ಪೇೞ್ದನಿಂತು ಕವಿಕಂದರ್ಪಂ ಬುಧಾಧೀಶ್ವರಂ॥

ಈ ಶಾಸನಗಳು 1204 ರಲ್ಲಿ ಹುಟ್ಟಿದುವು. ಇವುಗಳಲ್ಲಿ ಸೌಂದತ್ತಿಯ ರಟ್ಟರಾಜರಲ್ಲಿ ಒಬ್ಬನಾದ ಕಾರ್ತವೀರ್ಯ(IV)ನ ಶ್ರೀಕರಣಾಗ್ರಗಣ್ಯ ಬೀಚಿ

1. ಈಗ ಈ ಶಾಸನಗಳು ಬ್ರಿಟಿಷ್ ಮ್ಯೂಜಿಯಮಿನಲ್ಲಿ ಇವೆ; *Epi. Ind.*, XIII, 15-36.

ರಾಜನು ಬೆಳಗಾಮಿನಲ್ಲಿ ಕಟ್ಟಿಸಿದ ರಟ್ಟಜಿನಾಲಯಕ್ಕೆ ಕಾರ್ತವೀರ್ಯನೂ ಇತರರೂ ದತ್ತಿಯನ್ನು ಬಿಟ್ಟಂತೆ ಹೇಳಿದೆ. ಈ ಶಾಸನಗಳಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

### ಜಿನಸಮಯ.

ಶ್ರೀಜಿನಸಮಯನವಾಂಬುಧಿ । ರಾಜಿಸುತಿರ್ಕ್ಕುಮಥನೋರ್ಜಿತಾಮೃತರತ್ನ ।
ಶ್ರೀಜಿನನಗೃಹಂ ಸತ್ವದ । ಯಾಜೀವನಮಪರಿಮಿತಗಭೀರಮಪಾರಂ ॥ 721 ॥

### ಚಂದಲ ದೇವಿ.

ನರಪತಿಲಕ್ಷ್ಮಿದೇವಸತಿ ಚಂದಲದೇವಿ ನಿಜೋರ್ಧ್ವಹಸ್ತದಿಂ ।
ಧರೆಗೆಯಲ್ಕೆ ಸಂಕ್ರಮಣದೊಳ್ ಕುಡೆ ಕಾಂಚನಮಂ ಬೆರಲ್ಗಳೊಳ್ ॥
ಬೆರಸಿದ ಹೇಮಕಾಳಿಕೆಯ ಕರ್ಪ್ಪೆಸೆದಿರ್ಪುದು ಬಾಹುಕಲ್ಪವ ।
ಲ್ಲರಿಯ ತಳಪ್ರವಾಳದ ನಖಪ್ರಸವಕ್ಕೆಳಸಿರ್ದ್ದ ತುಂಬಿವೋಲ್ ॥ 722 ॥

### ಲಕ್ಷ್ಮೀದೇವ.

ವನಿತೆಯುರಂ ಮರುಳ್ಗುವಸಮಾಕೃತಿಯಂ ಸುಮನೋಭಿವೃದ್ಧಿಯಂ ।
ಜನಿಯಿಪ ಶೀಲದಿಂ ಕುವಲಯಕ್ಕೆ ವಿಕಾಸಮನೀವ ಮೈಮೆಯಿಂ ॥
ಜನನಯನಕ್ಕೆ ಕಾಮನೊ ವಸಂತನೊ ಚಂದ್ರಮನೋ ದಿಟಕ್ಕೆ ಪೇ ।
ೞೆನೆ ವಿಭು ಲಕ್ಷ್ಮಿದೇವನೆಸೆವಂ ಕವಿಸಂಕುಲಕಲ್ಪಭೂರುಹಂ ॥ 723 ॥

### ಬೀಚಿರಾಜ.

ಅನುಪಮವಿದ್ಯೆಗುದ್ಧವಿನಯಂ ಸಿರಿಗೊಪ್ಪುವ ಚಾಗದೇೞ್ಗೆ ಜಾ ।
ವನಕೆ ವಿನಿರ್ಮಲಾಚರಣಮಾಯುಗೆ ವಿಸ್ತೃತಕೀರ್ತಿ ವಾಕ್ಪವ ॥
ರ್ತನೆಗೆ ಋತೋಕ್ತಿ ತನ್ನೆಸಕದಿಂ ಸಲೆ ಮಂಡನಮಾಗೆ ವರ್ತಿಪಂ ।
ಜನಪತಿಕಾರ್ತವೀರ್ಯಸಚಿವೈಕಶಿರೋಮಣಿ ಬೀಚನುರ್ವ್ವಿಯೊಳ್ ॥ 724 ॥

---

## ಪಾರ್ಶ್ವಪಂಡಿತ. 1205.

ಈತನು ಪಾರ್ಶ್ವನಾಥಪುರಾಣವನ್ನು ಬರೆದಿದ್ದಾನೆ. ಇವನು ಜೈನಕವಿ; ಇವನ ತಂದೆ ಲೋಕಣನಾಯಕ, ತಾಯಿ ಕಾಮಿಯಕ್ಕ; ಅಗ್ರಜ ನಾಗಣ; ಗುರು "ಶ್ರೀ ಕುಮುದೇಂದುನಿರ್ಮಳಯಶಃಪ್ರಸರಂ ವಾಸುಪೂಜ್ಯಂ."

ತನ್ನ ಗ್ರಂಥವನ್ನು ಶಕ 1144 ರಲ್ಲಿ—ಎಂದರೆ 1222 ರಲ್ಲಿ—ಬರೆದಂತೆ ಹೇಳುತ್ತಾನೆ. "ಅಟ್ಟಾನ್ವಯಕಾರ್ತವೀರ್ಯನಖಿಳೋರ್ವಿಭಾಗಮಂ ಭೋಗಿಪಂ,"

"ಶ್ರೀಕಾರ್ತವೀರ್ಯನೃಪಲ। ಕ್ಷ್ಮೀಕವಿ........ವಿನೇಯಾ। ನೀಕಶಿರೋಮಣಿ ನೆಗಟ್ದಂ। ಲೋಕಪ್ರಿಯಜಾತಕೀರ್ತಿ ಕವಿಕುಳತಿಳಕಂ ॥" ಎಂಬುದರಿಂದ ಸೌಂದತ್ತಿಯ ರಟ್ಟರಾಜವಂಶಕ್ಕೆ ಸೇರಿದ ನಾಲ್ಕನೆಯ ಕಾರ್ತವೀರ್ಯರಾಜನಲ್ಲಿ (1202—1220) ಈತನು ಆಸ್ಥಾನಕವಿಯಾಗಿದ್ದಿರಬಹುದು. ಈ ಕಾರ್ತವೀರ್ಯನ ಮಗನು ಲಕ್ಷ್ಮಣರಾಜನು ಎಂದು ಹೇಳುತ್ತಾನೆ. ಈ ಲಕ್ಷ್ಮಣನು 1229 ರಲ್ಲಿ ಆಳುತ್ತಿದ್ದಂತೆ ಶಾಸನಗಳಿಂದ ತಿಳಿಯುತ್ತದೆ.

ಅಲ್ಲದೆ ಬಾಂಬೆ ಬ್ರಾಂಚ್ ರಾಯಲ್ ಏಷ್ಯಾಟಿಕ್ ಸೊಸೈಟಿ ಜರ್ನಲಿನಲ್ಲಿ ಇರುವ ಒಂದು ಶಾಸನವನ್ನು[1] ಪಾರ್ಶ್ವನೆಂಬ ಕವಿ ಬರೆದಂತೆ ಆ ಶಾಸನದ ಅಂತ್ಯದಲ್ಲಿರುವ—

ಲಳಿತಪದಾರ್ಥಾಳಂಕೃತಿ। ಗಳಿನೊಸರ್ವ ರಸಂಗಳಿಂದೆ ಬುಧರೊಳ್ ಪುಳಕಾ।
ವಳಿಸಸ್ಯಮೊಗೆಯೆ ಕವಿಕುಳ। ತಿಳಕಂ ಶಾಸನಮನೊಲ್ದು ಪೇಟ್ದಂ ಪಾರ್ಶ್ವಂ ॥

ಎಂಬ ಪದ್ಯದಿಂದ ತಿಳಿಯುತ್ತದೆ. ಈ ಶಾಸನವು ಶಕ 1127 ರಲ್ಲಿ—ಎಂದರೆ 1205 ರಲ್ಲಿ—ಬರೆದುದು. ಇದರಲ್ಲಿ ಕೂಂಡಿಮಂಡಲದ ವೇಣುಗ್ರಾಮದಲ್ಲಿ ರಟ್ಟಾನ್ವಯರಾಜರಾದ ಕಾರ್ತವೀರ್ಯ ಮಲ್ಲಿಕಾರ್ಜುನ ಎಂಬ ಸಹೋದರರು ಆಳುತ್ತಿದ್ದಂತೆಯೂ ಕಾರ್ತವೀರ್ಯನು ಮಂಡಲಾಚಾರ್ಯನಾದ ಶುಭಚಂದ್ರಭಟ್ಟಾರಕನಿಗೆ ದತ್ತಿಯನ್ನು ಬಿಟ್ಟಂತೆಯೂ ಹೇಳಿದೆ. ಕವಿ ತನ್ನ ಗ್ರಂಥದಲ್ಲಿ ಸ್ತುತಿಸಿರುವ ಕಾರ್ತವೀರ್ಯನ ಕಾಲದಲ್ಲಿಯೇ ಈ ಶಾಸನವೂ ಹುಟ್ಟಿದೆ. ಮತ್ತು ಕವಿ ಗ್ರಂಥದಲ್ಲಿ ತನಗೆ ಹೇಳಿಕೊಂಡಿರುವ ಕವಿಕುಳತಿಳಕ ಎಂಬ ಬಿರುದೇ ಶಾಸನದ ಕೊನೆಯ ಪದ್ಯದಲ್ಲಿಯೂ ಇದೆ. ಆದುದರಿಂದ ಈತನೇ ಈ ಶಾಸನವನ್ನು 1205 ರಲ್ಲಿ ಬರೆದಿರಬೇಕು.

ಈತನಿಗೆ ಸುಕವಿಜನಮನೋಹರ್ಷಸಸ್ಯಪ್ರವರ್ಷಂ, ವಿಬುಧಜನಮನಃಪದ್ಮಿನೀಪದ್ಮಮಿತ್ರಂ, ಕವಿಕುಳತಿಳಕಂ ಎಂಬ ಬಿರುದುಗಳಿದ್ದಂತೆ ತಿಳಿಯುತ್ತದೆ.

ಇವನು—

ಪಂಪನ ನುಣ್ಪುವೆತ್ತ ನುಡಿ ಪೊನ್ನನ ಬಿನ್ನಣದೋಜೆ ರನ್ನನೊ।
ಳ್ಪಂ ಪುದಿದಿರ್ದ ಲಕ್ಷಣವಿಚಕ್ಷಣತೋನ್ನತಿ ಕಣ್ಣಮಯ್ಯನಿಂ ॥
ಪಂ ಪುದಿದಿರ್ದ ಗೌರವಗುಣಂ ಗುಣವರ್ಮನ ದೇಸೆವೆತ್ತ ಮಾ।
ತೇಂ ಪರಿಕಿಪ್ಪೊಡೀಕೃತಿಯೊಳುಂಟೆನೆ ಪೇಟ್ವುದು ಪೇಟಲೊಲ್ದವಂ ॥

ಎಂಬೀ ಪದ್ಯದಲ್ಲಿ ಕೆಲವು ಪೂರ್ವಕವಿಗಳನ್ನು ಹೇಳಿರುವುದಲ್ಲದೆ ಧನಂಜಯ, ಭೂಪಾಲದೇವ, ಆಚಣ್ಣ, ಅಗ್ಗಳ, ನಾಗಚಂದ್ರ, ಬೊಪ್ಪಣಪಂಡಿತ,

1. Vol. X, 220.

**ಸಿಂಹಪ್ರಾಯೋಪಗಮನಕರ್ತೃವಾದ ಕೇಶಿಯಣ್ಣ, ಸ್ತನಶತಕ ಕರ್ತೃವಾದ ಕವಿಕಾಮ, ನೇಮಿಚಂದ್ರ, ಬಾಳಚಂದ್ರ, ವಾಸುದೇವ**—ಈ ಕವಿಗಳನ್ನೂ ಬೇರೆ ಬೇರೆ ಪದ್ಯಗಳಲ್ಲಿ ಸ್ತುತಿಸಿದ್ದಾನೆ.

ಕೆಳಗಣ ಪದ್ಯಗಳಲ್ಲಿ ತನ್ನ ಬಿರುದುಗಳನ್ನೂ ಅವಕ್ಕೆ ಕಾರಣಗಳನ್ನೂ ವಿವರಿಸಿದ್ದಾನೆ:—

ಘನಶಬ್ದಾಡಂಬರೋತ್ಪತ್ತಿಯಿನಖಿಲರಸೋತ್ಪಾದನಪ್ರೌಢಿಯಿಂ ಸ |
ಜ್ಜನಚೇತಶ್ಚಾತಕಾಸ್ವಾದಿತವಚನಸುಧಾಬಿಂದುಸಂದೋಹದಿಂ ಭೂ ||
ವಿನುತಶ್ರೀಕೀರ್ತಿವಲ್ಲೀಜನನವಿಭವದಿಂ ದಿಟ್ಟಸಲ್ ನೆಟ್ಟನಿಂತೀ |
ತನೆ ಸಂಪಚ್ಚಾರುಮೇಘಂ ಸುಕವಿಜನಮನೋಹರ್ಷಸಸ್ಯಪ್ರವರ್ಷಂ ||

ಪ್ರಕಟಪ್ರಜ್ಞೋದಯವ್ಯಾಪೃತವಿಪುಳಪದಾರ್ಥತ್ವದಿಂ ದುಷ್ಟಹೃತ್ಕೌ |
ಶಿಕದೃಕ್ಸಂಪಾದಿತಾಂಧತ್ವದಿನಮಳತೆಯಿಂ ಲೋಕದೀಪಸ್ವರೂಪಾ ||
ಧಿಕವಿಖ್ಯಾತತ್ವದೀತಂ ಬಗೆಯೆ ಜಗದೊಳಾನಂದಮಂ ಭವ್ಯಚಕ್ರಾ |
ಹ್ವಕುಳಕ್ಕೊಲ್ದೀವ ಪೆಂಪಿಂ ವಿಬುಧಜನಮನಃಪದ್ಮಿನೀಪದ್ಮಮಿತ್ರಂ ||

ಘನಚಂದನರಸರುಚಿರಂ | ಸುನಿರ್ಮಳಂ ಶೀತಳಂ ಜಗನ್ಮಂಗಳಮು |
ಮ್ಮನಶೇಷಸುಜನಮುಖಮಂ | ಡನನೆನಿಸುವ ವಿಭವದಿಂದೆ ಕವಿಕುಳತಿಳಕಂ ||
ಎಂಬನುಪಮನಿಜಗುಣನಾ | ಮಂ ಬುಧನಿಕರಕ್ಕೆ ರತ್ನಕಂಠಿಕೆಯುವೊಲೊ |
ಪ್ಪಂಬೆತ್ತಿರೆ ಕೀರ್ತಿಸುಧಾ | ಬಿಂಬೋದಯದಿಂದೆ ಬೆಳಗಿದಂ ಕುಲಗಿರಿಯಂ ||

ಇವನ ಗ್ರಂಥ

## ಪಾರ್ಶ್ವನಾಥಪುರಾಣ.

ಇದು 23 ನೆಯ ತೀರ್ಥಕರನ ಚರಿತವು; ಚಂಪೂರೂಪವಾಗಿದೆ; 16 ಆಶ್ವಾಸಗಳಾಗಿ ವಿಭಾಗಿಸಲ್ಪಟ್ಟಿದೆ. ಈ ಗ್ರಂಥದ ಉತ್ಕೃಷ್ಟತೆಯನ್ನು ಕವಿ ಈ ಪದ್ಯಗಳಲ್ಲಿ ಹೇಳಿದ್ದಾನೆ:—

ಸತ್ಕೀರ್ತಿಪ್ರಮದಾವಶೀಕರಣಮಂತ್ರಂ ಕಾಂತಿಯುಕ್ತಂ ಮನಃ |
ಕುತ್ಕೀಲಪ್ರಭವಂ ಪ್ರಸಿದ್ಧಮತಿನಿರ್ದುಷ್ಟಂ ಪರೀಕ್ಷಾಕ್ಷಮಂ ||
ಮುತ್ಕಾವ್ಯಂ ಗುಣರತ್ನಶೋಭಿ ಸರಸಂ ಸಾರಂ ಸುವರ್ಣಂ ಪ್ರಿಯಂ |
ಹೃತ್ಕರ್ಣಾಭರಣಂ ಸಮಸ್ತಬುಧಬೃಂದಕ್ಕಪ್ಪುದೇನೊಪ್ಪದೇ ||
ಜಡಮತಿ ಭೇದಿಸಲ್ ನೆಱೆಯದಂತಿರೆ ರೀತಿ ಬೆಡಂಗನೆಯ್ದೆ ಸೂ |
ರ್ಯಡಿಸೆ ವಿಚಿತ್ರಭಿತ್ತಿಯಳವಟ್ಟಿರೆ ಜಾತಿ ನಿಸರ್ಗಶೋಭೆಯಂ ||
ಗೆಡೆಗೊಳೆ ಪಾರ್ಶ್ವಪಂಡಿತವಿನಿರ್ಮಿತಕಾವ್ಯದವೋಲ್ ಜಿನಾಲಯಂ |
ಪಡೆದು ವಿನೇಯಸಂಪದಮನೇಂ ಪೆಸರ್ವೆತ್ತುದೊ ವಿಶ್ವಧಾತ್ರಿಯೊಳ್ ||

ಗ್ರಂಥಾವತಾರದಲ್ಲಿ ಪಾರ್ಶ್ವನಾಥಸ್ತುತಿಯಿದೆ. ಬಳಿಕ ಕವಿ, ಸಿದ್ಧರು ಮೊದಲುಗೊಂಡು ವೀರಣಂದಿಯುವರೆಗೆ[1] ಗುರುಗಳನ್ನು ಕ್ರಮವಾಗಿ ಸ್ತುತಿಸಿ ತರುವಾಯ ಪೂರ್ವಕವಿಗಳನ್ನು ಹೊಗಳಿ ಕಥೆಯನ್ನು ಆರಂಭಿಸಿದ್ದಾನೆ.

ಆಶ್ವಾಸಗಳ ಕೊನೆಯಲ್ಲಿ ಈ ಗದ್ಯವಿದೆ:—

ಇದು ವಿದಿತವಿಬುಧಲೋಕನಾಯಕಾಭಿಪೂಜ್ಯ ವಾಸುಪೂಜ್ಯಜಿನಮುನಿಪ್ರಸಾದಾಸಾದಿತನಿರ್ಮಳಧರ್ಮ ವಿನುತವಿನೇಯಜನವನಜವನವಿಳಸಿತ ಕವಿಕುಳತಿಳಕಪ್ರಣೂತ ಪಾರ್ಶ್ವನಾಥಪ್ರಣೀತಮಪ್ಪ ಪಾರ್ಶ್ವನಾಥಚರಿತದೊಳ್.

ಈತನು 'ಒಗಂಟುವೇಟ್ಟ ಕವಿಯುಂ ಕವಿಯೇ' ಎಂಬ ತನ್ನ ಅಭಿಪ್ರಾಯಾನುಸಾರವಾಗಿ ಗ್ರಂಥವನ್ನು ಲಲಿತವಾಗಿ ಬರೆದಿದ್ದಾನೆ.

ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

### ಬೇಸಗೆ.

ಒಡಲಂ ಚಂಡಾಂಶುಚಂಡದ್ಯುತಿ ಕಿಡಿವಿಡುತುಂ ಕಿರ್ಚಿನಂತಟ್ಟಿ ತಾಂ ಘೀ ।
ಳಿಡುತುಂ ಕಾಡಾನೆ ನೀರಂ ಮುಟ್ಟುಗೆ ಮಡುವಿನೊಳ್ ಕಾಯ್ದು ಕರ್ಬೊನ್ನಬೆಟ್ಟಂ ॥
ಬಿಡೆ ತಂದಂದಟ್ಟುದಂತಾಗಳೆ ಜಳಮನಿತುಂ ಬತ್ತಿದತ್ತೆಂದೊಡೇನು ।
ಗ್ಗಡಮಾಯ್ತೋ ಧಾತ್ರಿ ನಿರ್ಜೀವನಮೆನಿಸುವಿನಂ ಗ್ರೀಷ್ಮಮತ್ಯಂತಭೀಷ್ಮಂ ॥ 725॥

### ಕತ್ತಲೆ.

ವರ್ಣವ್ಯವಸ್ಥೆ ವಾಸ್ತವ । ನಿರ್ಣಯಮಕಳಂಕಸುಜನವರ್ತನಮಿನಿತುಂ ।
ದುರ್ಣಯನೃಪರಾಜ್ಯದೊಳವ । ಕರ್ಣಿತಮಪ್ಪಂತೆ ತಮದೊಳಾದತ್ತಾಗಳ್ ॥726॥

---

1. ಸಿದ್ಧಾದಿಗಳು, ಕೇವಲಿಗಳು, ಅತಿಶಯಕೇವಲಿಗಳು, ಶ್ರುತಕೇವಲಿಗಳು, ಗಣಧರರು, ಕವಿಪರಮೇಷ್ಠಿಗಣಧರರು, ಗಣಿಗಳು, ಉಮಾಸ್ವಾತಿ, ಜಟಾಚಾರ್ಯ, ಕುಂದಕುಂದಾಚಾರ್ಯ, ನೃಪಾಲಸಭೆಗಳಲ್ಲಿ ಗಮಕಿತ್ವವಾದಿತ್ವಗಳನ್ನು ಸಮರ್ಥಿಸಿದ ಸಮಂತಭದ್ರ, ಪರಮೇಷ್ಠಿಸ್ತವನಮಾಡಿದ ಕವಿಪರಮೇಷ್ಠಿ, ಕಲ್ಯಾಣಕಾರಕ ಜೈನೇಂದ್ರ ತತ್ವಾರ್ಥವೃತ್ತಿಗಳನ್ನು ರಚಿಸಿದ ಪೂಜ್ಯಪಾದ, ಅಕಳಂಕ, ವಿದ್ಯಾನಂದ, ಗಣಿತಾನ್ವಿತಬುದ್ಧಿಯೆನಿಸಿದ ವೀರಾಚಾರ್ಯ, ವೀರಸೇನ, ಜಿನಸೇನ, ಆತ್ಮಾನುಶಾಸನವನ್ನು ಬರೆದ ಗುಣಭದ್ರ, ವಾದೀಶ್ವರ ಸೋಮದೇವಮುನಿ, ಕಾವ್ಯತ್ರಯ ತರ್ಕತ್ರಯದ ವಾದಿರಾಜ, ಯಾವಂತಿಗಣಿತಭಾಸ್ಕರಪಾವನ ಮುನಿಚಂದ್ರ, ಕಟಕೋಪಾಧ್ಯಾಯನಾದ ಶ್ರುತಕೀರ್ತಿ, ನೇಮಿಚಂದ್ರಭಟ್ಟಾರಕ, ವಾಸುಪೂಜ್ಯ, ಇವನ ಶಿಷ್ಯ ಶ್ರುತಕೀರ್ತಿ, ಜಾವಳಿಗೆಯ ಮುನಿಚಂದ್ರ, ಮಗ ವೀರಣಂದಿ, ನೇಮಿಚಂದ್ರಸೈದ್ಧಾಂತಿಕ, ಬಲಾತ್ಕಾರಗಣಾಗ್ರಗಣ್ಯ ಉದಯಚಂದ್ರಮುನಿ, ನೇಮಿಚಂದ್ರಭಟ್ಟಾರಕಶಿಷ್ಯ ಭೂನಾಥಪೂಜ್ಯ ವಾಸುಪೂಜ್ಯಮುನಿ, ಅಷ್ಟೋಪವಾಸಿ ರಾಮಚಂದ್ರಮುನಿ, ನಾನಾನೃಪಪೂಜ್ಯ ಶ್ರೀನಂದಿಯೋಗಿ, ಶುಭಚಂದ್ರ, ಕುಮುದಚಂದ್ರ, ಕಮಳಸೇನ, ಮಾಧವೇಂದು, ಶುಭಚಂದ್ರಶಿಷ್ಯ ಲಲಿತಕೀರ್ತಿ, ನಂದಿಯೋಗಿಶಿಷ್ಯ ತರ್ಕವಿದ್ಯಾನಂದಪ್ರಭು, ಭಾವಸೇನ, ಕುಮುದಚಂದ್ರನ ಮಗ ವೀರಣಂದಿ.

## ಮೞೆಗಾಲ.

ಪರಿಕೊಂಡತ್ತು ಕಲಂಕುತುಂ ಕುಱುವಮಂ ಪೊಟ್ಟಿದ್ದತ್ತು ತೀರಕ್ಕೆ ತಾಂ ।
ಸರಿಯಾದತ್ತೆರಡುಂ ತಟಂಗಳನೆ ಮೀಱುತ್ತುಂಬಿಗರ್ ನಾವೆಯುಂ ॥
ಭರದಿಂದಿಕ್ಕದ ಮಾೞ್ಕೆಯಾಯ್ತು ನದಿಯೆಂದೆಂಬನ್ನೆಗಂ ಧಾತ್ರಿ ಭೋ ।
ರ್ಗರೆದೆತ್ತಂ ಕಱಿದತ್ತು ಕಾರ ಮೞೆ ಝುಂಝಾಮಾರುತಪ್ರೇರಿತಂ ॥ 727 ॥

ಜಡಹೃದಯರನಾಶ್ರಯಿಸಿ । ದೊರ್ಡೆ ಮೂಲೋಚ್ಛಿತ್ತಿಯಪ್ಪುದೆಂಬಿನೆಗಮೆರ ।
ೞ್ತಿಡಿವಿಡಿದಿರ್ದ ಮರಂಗಳ । ನಡಿಗೆಡಪಿದುವಿರದೆ ಪರಿವ ಪೂರದೆ ನದಿಗಳ್ ॥ 728 ॥

## ವಸಂತ.

ಲತಿಕಾಲಕ್ಷ್ಮೀವಿಳಾಸಂ ಮಳಯಪವನವಿನ್ಯಾಸಮಬ್ಜಪ್ರಹಾಸಂ ।
ಚತುರಾಶ್ವಾಸಂ ಸಮುತ್ಪಾದಿತವಿರಹಿಜನತ್ರಾಸಮುರ್ಕಪ್ರತಾಪಾ ॥
ಪ್ರತಿಮವ್ಯಾಸಂ ಶಶಾಂಕದ್ಯುತಿವಿಭವವಿಭಾಸಂ ವರಸ್ತ್ರೀವಿಳಾಸಂ ।
ಕ್ಷಿತಿಗತ್ಯಾನಂದಮಂ ಸಂದಿಸಿತು ಸುರಭಿಮಾಸಂ ಸ್ಮರಶ್ರೀನಿವಾಸಂ ॥ 729 ॥

ಲಲನಾಲಾವಣ್ಯವಾರಾಶಿಯೊಳೆ ಗುರುಕುಚಂ ಪೊನ್ನ ಬೀೞ್ಗೊಂಡು ಶುಂಭ ।
ತ್ಕಲಿತಾಮ್ರಂ ಕೂವಕಂಬಂ ವಿಚಕಿಳಮುಸೆಳಂ (?) ಚಂದ್ರಮಂ ಕೂವಕಂಬ ॥
ಕ್ಕಳಸಿರ್ಪಂ ಕಂತು ಸಾಂಯಾತ್ರಿಕನೆನಿಸೆ ಮನೋವೇಗದಿಂ ದಕ್ಷಿಣಾಶಾ ।
ನಿಳಸಂಪಚ್ಛೋದಿತಂ ಬಂದುದು ಸುಖಭರಿತಂ ಚೈತ್ರಮಂ ಪೋಲ್ತು ಚೈತ್ರಂ ॥730॥

## ಮಾವಿನ ಮರ.

ಸೊನೆ ತನಗಿಂಬುವೆತ್ತ ಮದಧಾರೆ ಕವಲ್ತೆಳಗೊಂಬೆ ಕೊಂಬು ಮೆ ।
ಲ್ಲನೆ ತೊನೆದಾಡುತಿರ್ಪ ಸೆಳೆಗೊಂಬು ಕರಂ ತಳಿರಗ್ರಪಲ್ಲವಂ ॥
ಧ್ವನಿ ಮಧುಪಸ್ವನಂ ಕುಸುಮಮಂಜರಿ ರಂಜಿಸುತಿರ್ಪ ಕುಂಭಮೆಂ ।
ಬಿನಮಿದೆ ಬಂದು ಕೊಂದಪುದು ಕಾಮಿಗಳಂ ಸಹಕಾರಕುಂಜರಂ ॥ 731 ॥

ಚಿಗುರ್ಗಳನೊರ್ಮೆ ಕರ್ಚಿ ತಳಿರ್ದೊಂಗಲನೊರ್ಮೆ ಕರ್ದುಂಕಿ ಕೋಕಿಳಂ ।
ಮುಗುಳ್ಗಳನೊರ್ಮೆ ಜಕ್ಕುಲಿಸಿ ಪೂಗಳನೊರ್ಮೆದಲೀಂಟಿ ಷಟ್ಪದಂ ॥
ಬಗೆಗೊಳೆ ಬಂದ ಮಾವುಗಳ ಕಾಯ್ಗಳನೊರ್ಮೆ ತುಡುಂಕಿ ತುಂಡದಿಂ ।
ಸೊಗಯಿಪ ಪಣ್ಣನೊರ್ಮೆ ಸವಿದೇಂ ಸುಕಮಂ ಶುಕನೊಲ್ದು ತಾಳ್ದಿತೋ ॥ 732 ॥

## ಬೇಡಿತಿ.

ಬೆಳತಿಗೆಗಣ್ಣ ಬೆಳ್ಪಿನೊಳೆ ಕೌಮುದಿಯಿಂ ಪುದಿದಿರ್ದ ಸಸ್ಮಿತೋ ।
ತ್ಪಳಿನಿಯನುಟ್ಟ ಪಲ್ಲವನಿಕಾಯದೆ ಪಲ್ಲವಭೃತ್ತಮಾಳಕೋ ॥

ಮಳಲತೆಯುಂ ನಿರಾಕರಿಸಿ ಪೆರ್ಮೊಲೆ ಪೊಂಗೊಡನಂತಿರೊಪ್ಪೆ ಪ |
ಜ್ಜಳಿಸುವ ನೀಳದಿಂ ಸಮೆದ ಪುತ್ತಳಿಯುಂತೆ ಪುಳಿಂದಿಯೊಪ್ಪಿದಳ್ ‖ 733 ‖

## ಭಕ್ಷ್ಯಗಳು.

ನಿಳ್ಪಂ ಬೆಳ್ಪಂ ತೆಳ್ಪಂ | ತಳ್ಪೊಯ್ದರೆ ಸುಗ್ಗಿಯುಚ್ಚವೆಳ್ದಿಂಗಳನೀ |
ಗಳ್ಪೊರೆಯೆತ್ತಿದರೆಂಬಂ | ತೊಳ್ಪಂ ಗೆಡೆಗೊಂಡು ಸೊಗಯಿಸುವ ಮಂಡಗೆಯುಂ
‖ 734 ‖

ಪೊಂಗಿರ್ದಂಗರವೋಳಿಗೆ | ಯುಂ ರಗರನಪ್ಪ ತುಪ್ಪಮುಂ ಸಕ್ಕರೆಯುಂ |
ಪಿಂಗದೆ ಹೂರಣಮೆನಿಸಿ ಮ | ನಂಗೊಳಿಪುವನಮೃತಪೂರಮುಂ ಹೂರಿಗೆಯುಂ
‖ 735 ‖

ಪ್ರಣುತಹಿಮವರಸುರಭಿಧಾ | ರಿಣಿಯುಂ ಪಂಚೇಂದ್ರಿಯಪ್ರಿಯಾತುಳಸುಖಕಾ |
ರಿಣಿಯುಂ ಪೊಸತೆನಿಸುವ ಶಿಖ | ರಿಣಿಯುಂ ರಸರಸಿಕಜನಮನೋಹಾರಿಣಿಯುಂ
‖ 736 ‖

ಲಡ್ಡುಗೆಯನಿನಿದೆನಿಪ ಬಿಡು | ಲಡ್ಡುಗೆಯುಂ ತುಪ್ಪದಲ್ಲಿ ತೇಂಕುವ ಕಂಪು |
ಳ್ಳಿಡ್ಡಲಿಗೆಗಳಂ ಬೇಗಂ | ಬಡ್ಡಿಸಿದರ್ ಜಾಣರೆಂಬಿನಂ ಬಾಣಸಿಗರ್ ‖ 737 ‖

## ರಾಜನೀತಿ.

ನಯವಿದನಂ ಸಾಮದಿನಪ | ನಯನಂ ದಂಡದೊಳೆ ಗೆಲ್ವುದೆಂತೆನೆ ಕಟುಕ |
ತ್ರಯದಿಂದಲ್ಲದೆ ಮಧುರ | ಪ್ರಯೋಗದಿಂ ಕಫಮನಾವನುಪಶಮಯಿಸುವಂ
‖ 738 ‖

ಜನಿಯಿಸಿದ ಶೋಫಮನುಲೇ | ಪನದಿಂ ಪೋಗದೊಡೆ ಶಸ್ತ್ರಕರ್ಮಮನೆಸಪಂ |
ತನುನಯಕೊಳಗಾಗದನಂ | ಮೊನೆಯೊಳ್ ದಂಡಿಪುದು ನಯಪರಾಕ್ರಮಯುಕ್ತಂ
‖ 739 ‖

ಇವನು ಬರೆದ ಶಾಸನದಿಂದ ಒಂದು ಪದ್ಯವನ್ನು ಉದ್ಧರಿಸಿ ಬರೆಯುತ್ತೇವೆ :—

## ಕಾರ್ತವೀರ್ಯನ ಕೀರ್ತಿ.

ನೇರು ನಭಸ್ಸ್ಥಳಂ ಜಳಧಿ ಮುತ್ತಿಯುನ್ನತಿಸನ್ಮಹತ್ವಗಂ |
ಭೀರಗುಣಕ್ಕೆ ಮುಚ್ಚರಿಪುವೆಂದಮರಾದ್ರಿಯನಿಕ್ಕಿ ಮೆಟ್ಟಿಯಾ ‖
ನೀರದಮಾರ್ಗಮುಂ ಪುದಿದು ವಾರಿಧಿಯುಂ ಮಿಗೆ ದಾಂಟಿ ಕೀರ್ತಿಯಾ |
ಶಾರಮಣಗ್ಗ್ರ ಬಣ್ಣಿಪುದು ಪೆಂಪಿನಲಂಪನೆ ಕಾರ್ತವೀರ್ಯನಾ ‖ 740 ‖

## ಕಲ್ಲಯ್ಯ. 1206.

ಈತನು ಚಿತ್ರದುರ್ಗದ 23 ನೆಯ ಶಾಸನವನ್ನು ಹೇಳಿ ಬರೆದನೆಂದೂ ಇವನು ಲಕ್ಕರಸರ ಮಗನೆಂದೂ ಹುಲ್ಲೂರ ಸೇನಬೋವನೆಂದೂ ಆ ಶಾಸನದ ಅಂತ್ಯಭಾಗದಿಂದ ತಿಳಿಯುತ್ತದೆ. ಈ ಶಾಸನವು ವೀರಬಲ್ಲಾಳನ ಆಳಿಕೆಯಲ್ಲಿ 1206 ರಲ್ಲಿ ಬರೆದುದು.

ಇದರಿಂದ ಒಂದೆರಡು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

ಶಿವ.

ಶ್ರೀಮದ್ಬಾಳೇಂದುರುಚಿ । ಸ್ತೋಮಾಲಂಕೃತಕಿರೀಟನಘವಿಧ್ವಂಸಂ ।
ಕಾಮಾಂತಕನಗಜಾತಾ । ಪ್ರೇಮಂ ನಮಗೀಗೆ ವಾಂಛಿತಾರ್ಥಮನೆಂದುಂ ॥ 741 ॥

ಹೊಸುಗುಂದದ ವೃತ್ತಿ.

ತಿಳಕತಮಾಳತಾಳವಕುಳಂ ಸಹಕಾರಮಶೋಕಚಂಪಕಂ ।
ಕುಳಿರ್ವ ಸರೋಜಷಂಡಮಲರ್ದೊಪ್ಪುವ ಮಲ್ಲಿಗೆ ಮಾಧವೀಲತಾ ॥
ವಳಿ ತನಿಗೊರ್ಬಿದಿಕ್ಷುವನವೊಯ್ಯನೆ ತೀಡುವ ಮಂದವಾಯು ಕ ।
ಣ್ಗೊಳಿಸುವುವೆತ್ತ ನೋಡೆ ಹೊಸುಗುಂದದ ವೃತ್ತಿಯತೀವಬಂಧುರಂ ॥ 742 ॥

---

## ಜನ್ನ. 1209.

ಈತನು ಯಶೋಧರಚರಿತೆ, ಅನಂತನಾಥಪುರಾಣ ಎಂಬ ಗ್ರಂಥಗಳನ್ನು ಬರೆದಿದ್ದಾನೆ. ಅಲ್ಲದೆ ಸ್ಮರತಂತ್ರವೆಂಬ ಗ್ರಂಥವನ್ನೂ ಬರೆದಿರುವಂತೆ ಮೋಹಾನುಭವಮುಕುರ (ಸು. 1400) ಎಂಬ ಗ್ರಂಥದಿಂದ ಊಹಿಸಬಹುದಾಗಿದೆ. ಈ ಗ್ರಂಥವು ನಮಗೆ ದೊರೆತಿಲ್ಲ.

ಇವನು ಜೈನಕವಿ; ಕಮ್ಮೆವಂಶದವನು; ಕಾಶ್ಯಪಗೋತ್ರದವನು. ಇವನ ತಂದೆ ಹೊಯ್ಸಳನಾರಸಿಂಹನಲ್ಲಿ (1141–1173) ಕಟಕೋಪಾಧ್ಯಾಯನಾಗಿಯೂ ಸುಮನೋಬಾಣ ಎಂಬ ಬಿರುದುಳ್ಳವನಾಗಿಯೂ ಇದ್ದ ಶಂಕರನು;[1] ತಾಯಿ ಗಂಗಾದೇವಿ. ಈತನು ಆಷಾಢಕೃಷ್ಣ ತ್ರಯೋದಶೀ ರೇವತೀನಕ್ಷತ್ರ ಶಿವ ಯೋಗದಲ್ಲಿ ಹುಟ್ಟಿದವನು. ಇವನ ಪತ್ನಿ "ರಾಯದಂಡಾಧಿನಾಥಕೃತಾಂತಂ ಪೆಸರ್ವೆತ್ತ ಚಾಕಣನಪತ್ಯಂ ರೇಚಯುಂ ಪೆತ್ತ ಪುತ್ರಿ" ಲಕುಮಾದೇವಿ; ಗುರು ಕಾಣೂರ್ಗಣದ ಮಾಧವಚಂದ್ರಶಿಷ್ಯನಾದ ಗಂಡವಿಮುಕ್ತರಾಮಚಂದ್ರ ದೇವಮುನಿ. ಜಗದೇಕಮಲ್ಲ (1138–1150) ನಲ್ಲಿ ಕಟಕೋಪಾಧ್ಯಾಯನಾಗಿಯೂ ಅಭಿನವಶರ್ವವರ್ಮನೆಂಬ ಬಿರುದುಳ್ಳವನಾಗಿಯೂ ಇದ್ದ ಎರಡನೆಯ

1. ಪುಟ 161.

**ನಾಗವರ್ಮನು**[1] ಇವನಿಗೆ ಉಪಾಧ್ಯಾಯನು; **ಸೂಕ್ತಿಸುಧಾರ್ಣವವನ್ನು** ಬರೆದ **ಮಲ್ಲಿಕಾರ್ಜುನನು** (ಸು. 1245) ಈತನ ಸೋದರಿಯ ಗಂಡನು; **ಶಬ್ದಮಣಿ ದರ್ಪಣವನ್ನು** ಬರೆದ **ಕೇಶಿರಾಜನು** (ಸು. 1260) ಇವನ ಸೋದರದಳಿಯನು. ಈ ಕವಿ,

ನರಸಿಂಹನ ಚೋಳಕುಲೋ । ದ್ಧರಣನ ಸರ್ವಜ್ಞಭೂಪನೋಲಗದೊಳ್ ನಿಂ ।
ದಿರೆ ದಂಡಾಧೀಶಂ ಕು । ಳ್ಳಿರೆ ಮಂತ್ರಿ ತೊಡಂಕೆ ಕವಿ ಜನಾರ್ದನದೇವಂ ॥

ಎಂದೂ "ನಾಟ್ಯಪ್ರಭು ಜನಾರ್ದನದೇವಂ" ಎಂದೂ ಹೇಳಿಕೊಂಡಿರುವುದರಿಂದ ಆ ರಾಜನ ಆಸ್ಥಾನಕವಿಯಾಗಿದ್ದುದು ಮಾತ್ರವಲ್ಲದೆ ದಂಡಾಧೀಶಮಂತ್ರಿಪದವಿಗಳನ್ನೂ ಕೂಡ ಪಡೆದಿದ್ದಂತೆ ತಿಳಿಯುತ್ತದೆ. ಈತನು ಗಂಡರಾದಿತ್ಯನ ಪೊಳಲಲ್ಲಿ[2] ಅನಂತನಾಥನ ಬಸದಿಯನ್ನು ಕಟ್ಟಿಸಿದಂತೆಯೂ ದ್ವಾರಸಮುದ್ರದಲ್ಲಿ ವಿಜಯ ಪಾರ್ಶ್ವಜಿನೇಶ್ವರನ ಬಸದಿಯ ದ್ವಾರವನ್ನು ಮಾಡಿಸಿದಂತೆಯೂ ಹೇಳುತ್ತಾನೆ. "ತಾನಿತ್ತ ಕೆಯ್ಯಲ್ಲದೊಡ್ಡಿದ ಕೆಯ್ಯಲ್ಲದ ಪೆಂಪು" ಎಂಬುದರಿಂದ ಇವನು ಬಹಳ ಉದಾರಿಯಾಗಿದ್ದಂತೆ ತಿಳಿಯುತ್ತದೆ.

ಕನ್ನರನು ಹೊನ್ನನಿಗೂ ತ್ರೈಲಪನು ರನ್ನನಿಗೂ ವೀರಬಲ್ಲಾಳನು ತನಗೂ ಕವಿಚಕ್ರವರ್ತಿ ಎಂಬ ಬಿರುದನ್ನು ಕೊಟ್ಟಂತೆ ಈ ಪದ್ಯದಲ್ಲಿ ಹೇಳಿದ್ದಾನೆ:—

ಕನ್ನರನಾದರದಿಂ ಕುಡೆ । ಹೊನ್ನಂ ಮನಮೊಸೆದು ತ್ರೈಲಪಂ ಕುಡೆ ರನ್ನಂ ।
ಮನ್ನಿಸಿ ಬಲ್ಲಾಳಂ ಕುಡೆ । ಜನ್ನಂ ಕವಿಚಕ್ರವರ್ತಿವೆಸರಂ ತಳೆದಂ ॥

ಈ ಪದ್ಯದಲ್ಲಿ ತನ್ನನ್ನು **ರನ್ನನಿಗೂ ಹೊನ್ನನಿಗೂ** ಹೋಲಿಸಿಕೊಂಡಿದ್ದಾನೆ:—

ರನ್ನಂ ವೈಯಾಕರಣಂ । ಜನ್ನಂ ಮೇಣ್ ಕವಿಗಳೊಳಗೆ ವೈಯಾಕರಣಂ ।
ಪೊನ್ನನಸಹಾಯಕವಿ ಮೇಣ್ । ಜನ್ನಿಗನಸಹಾಯಸುಕವಿ ಕವಿಚಕ್ರಿಗಳೊಳ್ ॥

ಈತನು ತನ್ನ **ಯಶೋಧರಚರಿತೆಯನ್ನು** ವೀರಬಲ್ಲಾಳನ (1173-1220) ಆಳಿಕೆಯಲ್ಲಿ ಶುಕ್ಲವರ್ಷದಲ್ಲಿ—ಎಂದರೆ 1209 ರಲ್ಲಿ ಬರೆದಂತೆಯೂ[3] ಅನಂತ

---

1. ಜನನಾಥಂ ಜಗದೇಕನಲ್ಲಿ ಕಟಕೋಪಾಧ್ಯಾಯನಾನಾಗವ ।
ರ್ಮನಿದಾನೀಂತನಶರ್ವವರ್ಮನೆ ಗಡಂ ಜನ್ನಂಗುಪಾಧ್ಯಾಯನಿಂ ॥
ದು ನೃಸಿಂಹಕ್ಷಿತಿಪಾಲನಲ್ಲಿ ಕಟಕೋಪಾಧ್ಯಾಯನಾರೆಂಬ ಸೂ ।
ಕ್ತಿನವೀನೋಜ್ಜ್ವಲಬಾಣನಪ್ಪ ಸುಮನೋಬಾಣಂ ಕವಿಶ್ರೇಷ್ಠರೊಳ್ ॥

2. ಕಿಲಕಿಲದುರ್ಗ.

3 ಶ್ರೀಗಿರಿದುರ್ಗಮಲ್ಲನೃಪರಾಜ್ಯದ ವತ್ಸರಮುತ್ತರೋತ್ತರ ।
ಶ್ಲಾಘಿಗೆ ಶುಕ್ಲದಾಶ್ವಯುಜ ಕೃಷ್ಣದ ಪಂಚಮಿ ಪೂರ್ಣತಾ ॥
ರಾಗುರುವಾಗೆ ಭೂತಳದೊಳೀಕೃತಿ ಪೆತ್ತುದು ಸುಪ್ರತಿಷ್ಠೆಯಂ ।
ಚಾಗದ ದಾನದಗ್ಗಳಿಕೆಯಂ ಪಡೆದಂ ಕವಿಭಾಳಲೋಚನಂ ॥

ನಾಥಪುರಾಣವನ್ನು ವೀರಬಲ್ಲಾಳನ ಮಗ ವೀರನರಸಿಂಹನ (1220—1235) ಆಳಿಕೆಯಲ್ಲಿ ವಿಕೃತವರ್ಷದಲ್ಲಿ—ಎಂದರೆ 1230 ರಲ್ಲಿ ರಚಿಸಿದಂತೆಯೂ[1] ತಿಳಿಯುತ್ತದೆ.

ಇವನು ಶಕ 1113 ರಲ್ಲಿ—ಎಂದರೆ 1191 ರಲ್ಲಿ—ಹುಟ್ಟಿದ ಚೆನ್ನರಾಯಪಟ್ಟಣದ 179 ನೆಯ ಶಾಸನವನ್ನೂ ಶಕ 1119 ರಲ್ಲಿ—ಎಂದರೆ 1197 ರಲ್ಲಿ—ಹುಟ್ಟಿದ ತರೀಕೆರೆಯ 45 ನೆಯ ಶಾಸನವನ್ನೂ ಬರೆದುದಾಗಿ ಆ ಶಾಸನಗಳ ಅಂತ್ಯದಲ್ಲಿರುವ "ಜನ್ನಯ್ಯನ ಕವಿತೆ," "ಉದ್ದಂಡಕವಿಭಾಳನೇತ್ರಂ ಸುಕವಿಜನಮಿತ್ರಂ ಜನ್ನಯ್ಯನ ಕವಿತೆ" ಎಂಬೀ ವಾಕ್ಯಗಳಿಂದ ತಿಳಿಯುತ್ತದೆ. ಇದರಿಂದ ಈತನು 1191 ರಲ್ಲಿಯೇ ಕವಿತ್ವಮಾಡುವುದಕ್ಕೆ ಆರಂಭಿಸಿದುದಾಗಿ ತಿಳಿಯಬಂದರೂ ನಮಗೆ ದೊರೆತಿರುವ ಈತನ ಪ್ರಥಮಗ್ರಂಥವಾದ ಯಶೋಧರಚರಿತೆಯ ರಚನಾಕಾಲವನ್ನೇ ಈತನಿಗೆ ಕೊಟ್ಟಿದ್ದೇವೆ.

ಈ ಕವಿಗೆ ಸಾಹಿತ್ಯರತ್ನಾಕರ, ಕವಿಭಾಳಲೋಚನ, ಕವಿಚಕ್ರವರ್ತಿ, ವಿನೇಯಜನಮುಖತಿಲಕ, ರಾಜವಿದ್ವತ್ಸಭಾಕಲಹಂಸ, ಕವಿವೃಂದಾರಕವಾಸವ, ಕವಿಕಲ್ಪಲತಾಮಂದಾರ ಎಂಬ ಬಿರುದುಗಳೂ; ಜನ್ನಮರಸ, ಜನ್ನಯ್ಯ, ಜನ್ನಿಗ, ಜನಾರ್ದನ, ಜಾನಕಿ ಎಂಬ ಹೆಸರುಗಳೂ ಇದ್ದಂತೆ ತಿಳಿಯುತ್ತದೆ.

ಜಿನಪುರಾಣಕರ್ತೃಗಳಾದ ಪೂರ್ವಕವಿಗಳನ್ನು ಈ ಪದ್ಯದಲ್ಲಿ ಸ್ಮರಿಸಿದ್ದಾನೆ:—

ಎನಗನುಕೂಲಮಕ್ಕೆ ಗುಣವರ್ಮನ ಜಾಣ್ನುಡಿ ಪಂಪನಿಂಪು ಪೊ।
ನ್ನನ ಬಗೆ ನಾಗವರ್ಮನ ಬಹುಜ್ಞತೆ ರನ್ನನ ಕಾಂತಿ ನಾಗಚಂ॥
ದ್ರನ ರಸಭಾವಮಗ್ಗಳನ ವಕ್ರತೆ ನೇಮಿಯ ದೇಸೆ ಪುಷ್ಪಬಾ।
ಣನ ಮೃದುಬಂಧಮಾಕವಿಗಳಲ್ತೆ ಜಿನೇಂದ್ರಪುರಾಣಕರ್ತೃಗಳ್॥

ಈತನನ್ನು **ಆಂಡಯ್ಯ** (ಸು. 1235), **ಕಮಲಭವ** (ಸು. 1235), **ಮಲ್ಲಿಕಾರ್ಜುನ** (ಸು. 1245), **ಕುಮುದೇಂದು** (ಸು. 1275), **ಮಧುರ** (ಸು. 1385), **ಮಂಗರಸ** (1508), **ನಂಜುಂಡ** (ಸು. 1525), **ಬಾಹುಬಲಿ** (ಸು. 1560) ಮೊದಲಾದ ಕವಿಗಳು ಸ್ತುತಿಸಿದ್ದಾರೆ.

---

1. ಶಕಸಂವತ್ಸರಮಂದು ಸಾಸಿರದನೂಱಯ್ವತ್ತೆರಡು ಸಲ್ವಿನಂ।
ವಿಕೃತಾಬ್ದಂ ಬರೆ ಚೈತ್ರಶುದ್ಧದಶಮೀಾದೇವೇಜ್ಯನೊಳ್ ಪುಷ್ಯತಾ॥
ರಕದೊಳ್ ಮಾಡಿಸಿದಂ ಪ್ರತಿಷ್ಠೆಯನನಂತಶ್ರೀಪುರಾಣಕ್ಕೆ ಕ।
ವ್ಮಕುಲಾಂಭೋರುಹಭಾನು ಜನ್ನಮರಸಂ ಸಾಹಿತ್ಯರತ್ನಾಕರಂ॥

ತನ್ನ ತಱುವಾಯೆ ಕೃತಿವೇ। ಟ್ವಿನ್ನಂ ನೀನಲ್ಲದಿಲ್ಲವೆಂದತಿಮುದದಿಂ।
ಮನ್ನಿಸಿ ಸಲಹುಗೆ ಸತ್ಕವಿ। ಜನ್ನಂ ಜಾಣೆಸೆಯಲಿತ್ತು ನುಡಿಗಳನೆನ್ನಂ॥
ಸರ್ವರ ಸಮ್ಮತಮೆನಗಿದು। ಗರ್ವದ ಮಾತಲ್ಲ ಶಾಸ್ತ್ರಲೌಕಿಕಕಲೆಯೊಳ್।
ಬೇರ್ವರಿದ ನೇಮಿಜನ್ನಮ। ರಿರ್ವರೆ ಕರ್ಣಾಟಕೃತಿಗೆ ಸೀಮಾಪುರುಷರ್॥

[ಮಧುರನ ಧರ್ಮನಾಥಪುರಾಣ.]

ಬಲ್ಲಿದ ಕರ್ಣಾಟಕವಿಗಳೆಲ್ಲರ ಗೆಲ್ದು। ಬಲ್ಲಾಳಭೂಮೀಶ್ವರನ।
ನಿಲ್ಲದೆ ಮೆಚ್ಚಿಸಿಕೊಂಡ ಜನ್ನನ ಪದ। ಪಲ್ಲವಗಳಿಗೆಱಗುವೆನು॥

[ನಂಜುಂಡನ ಕುಮಾರರಾಮಕಥೆ.]

ತನ್ನ ಕವಿತಾಚಾತುರಿಯನ್ನೂ ಗುಣಾದಿಗಳನ್ನೂ ಈ ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ :—

ಆನೃಪನ ಸಭೆಯೊಳಖಿಳಕ। ಳಾನಿಪುಣರ ನಟ್ಟನಡುವೆ ಬೆಟ್ಟಿತ್ತಿ ಗೆಲಲ್।
ತಾನೆ ಚತುರ್ವಿಧಪಂಡಿತ। ನೇನೆಂಬುದೊ ಸುಕವಿಭಾಳಲೋಚನನಳವಂ॥
ನವವ್ಯೈಯಾಕರಣಂ ತ। ರ್ಕವಿನೋದಂ ಭರತಸುರತಶಾಸ್ತ್ರವಿಳಾಸಂ।
ಕವಿರಾಜಶೇಖರಂ ಯಾ। ದವರಾಜಚ್ಛತ್ರನಖಿಳಬುಧಜನಮಿತ್ರಂ॥
ಚದುರ ನಿಧಿ ಚಲದ ನೆಲೆ ಚಾ। ಗದ ಸಾಗರಮುಣ್ಮೆ ನಾಗರಂ ಪೆಂಪಿನ ಸಂ।
ಪದಮಾಯದಾಯುವಾರೆಂ। ಬುದೊ ಜನ್ನಂ ಕಮ್ಮೆಕುಲದ ತೊಡವಿನ ರನ್ನಂ॥
ಚಂದನಪಂಕದೊಳ್ ಪರಿಮಳಂ ಮೆಱೆವಂತಿರೆ ಬಂಧದೊಳ್ ರಸ।
ಸ್ಯಂದಿಗಳಾದ ಮಾತು ಮನಮಂ ಸಲೆ ಸೋಲಿಸೆ ಪೇೞ್ದು ಲೋಕದೊಳ್॥
ಸಂದ ಜನಾರ್ದನಂ ಸುಕವಿವಲ್ಲಭನಾತನಮುಂದೆ ಗಣ್ಯರೇ।
ಚಂದದ ಬಳ್ಳಿಸಂಕಲೆಯೊಳಕ್ಕರಮಂ ಸೆಱೆಗೆಯ್ವ ಕಕ್ಕಸರ್॥
ಪಳುಕಿನ ಕಪ್ಪುರವಳುಕಿನ। ಮುಳಯಜದಿಂಗಡಲ ಪೊಳೆವ ಮುತ್ತಿನ ಬೆಳ್ಪಿಂ।
ಗಳ ಸಿರಿಗೆ ಸರಿಗೆ ವರ್ಪುವು। ಪಳಚನೆ ಕವಿಭಾಳನೇತ್ರನಿಡುವ ಪದಂಗಳ್॥
ಉಭಯಕವಿಚಕ್ರವರ್ತಿಯ। ಸಭೆಯಂ ಪುಗಲಣ್ಮವಲ್ತೆ ಪದವಾಕ್ಯಾರ್ಥ।
ಪ್ರಭವಕಲಂಕಮಲಂಕಾ। ರಭಾವರಸರೀತಿದೂಷಣಾಭಾಸಂಗಳ್॥
* * * * *
* * * ನವಸುಪ್ರಯೋಗತ॥
ತ್ವರತೆಗೆ ಬೇಱೆ ಪಂಡಿತರನಳ್ಕುಱೆ ಕೇಳದ ನೋಡದಾಸೆವ।
ಟ್ಟರದಸಹಾಯನಲ್ತೆ ಸಕಳಾನ್ವಯದೊಳ್ ಕವಿಭಾಳಲೋಚನಂ॥
ಪರಮಶ್ರೀಜಿನಪಾದಪಲ್ಲವನಿತಾಂತಂ ನಿರ್ಮಳಂ ಜೈನಮಂ।
ದಿರನಿರ್ಮಾಣಧನಂ ವಿನೇಯನಿಧಿ ಗಂಗಾನಂದನಂ ಶೌಚಿ ಶಂ॥

ಕರಪುತ್ರಂ ಕವಿ ಕಮ್ಮೆವಂಶನಧಿಕಜ್ಞಂ ಕಾಶ್ಯಪಂ ಮಾನವೋ |
ತ್ತರನೆಂದೇವೊಗಟ್ವಿಂ ಕವೀಂದ್ರಪರಿಷದ್ಭಾಳಾಕ್ಷನಂ ಜನ್ನನಂ ||

ಇವನ ಗ್ರಂಥಗಳಲ್ಲಿ—

## 1. ಯಶೋಧರ ಚರಿತೆ.

ಇದು ವರ್ಣಕಪ್ರಬಂಧವು; ಇದರಲ್ಲಿ ಗದ್ಯಭಾಗವೇ ಇಲ್ಲ; ಸುಮಾರು ಎಂಟುಹತ್ತು ವೃತ್ತಗಳು ಹೊರತು ಉಳಿದುವೆಲ್ಲಾ ಕಂದಪದ್ಯಗಳೇ ಆಗಿವೆ. ಈ ಗ್ರಂಥವು 4 ಅವತಾರಗಳಾಗಿ ಭಾಗಿಸಲ್ಪಟ್ಟಿದೆ; ಇದರಲ್ಲಿ ಒಟ್ಟು ಕಂದ ವೃತ್ತ ಸಹ 311 ಇವೆ. ಮಾರಿದತ್ತನೆಂಬ ರಾಜನು ಮಾರಿಗೆ ಬಲಿಕೊಡುವುದಕ್ಕಾಗಿ ಇಬ್ಬರು ಕುಲೀನರಾದ ಹುಡುಗರನ್ನು ಹಿಡಿದು ತರಿಸಿದಾಗ ಅವರು ಹೇಳಿದ ಪೂರ್ವಕಥೆಯಿಂದ ಪರಹಿಂಸಾಸಕ್ತಿಯನ್ನು ಬಿಟ್ಟು ಅವರನ್ನು ಬಿಡುಗಡೆಮಾಡಿ ತಪಂಬಟ್ಟನು—ಎಂಬುದೇ ಇದರ ಕಥಾಸಾರ. ಇದೇ ಕಥೆಯನ್ನು ಈ ಕವಿಯ ಕಾಲಕ್ಕೆ ಹಿಂದೆ ಇತರಕವಿಗಳು ಸಂಸ್ಕೃತದಲ್ಲಿಯೂ ಪ್ರಾಕೃತದಲ್ಲಿಯೂ ಕನ್ನಡ ದಲ್ಲಿಯೂ ಬರೆದಿದ್ದರೆಂಬಂಶವು ಈ ಪದ್ಯದಿಂದ ತಿಳಿಯುತ್ತದೆ:—

ಕ್ಷಿತಿಯೊಳ್ ಸಂಸ್ಕೃತದಿಂ ಪ್ರಾ | ಕೃತದಿಂ ಕನ್ನಡದಿನಾದ್ಯರಾರೀಕೃತಿಯಂ |
ಕೃತಿಮಾಡಿದರವರ್ಗಳ ಸ | ನ್ನತಿ ಕೆಯ್ಗುಡುಗೆಮಗೆ ಸರಸಪದಪದ್ಧತಿಯೊಳ್ ||

ಈ ಗ್ರಂಥದ ರಚನಾವಸರವನ್ನೂ ಪ್ರಾಶಸ್ತ್ಯವನ್ನೂ ಕವಿ ಈ ಪದ್ಯಗಳಲ್ಲಿ ಹೇಳಿದ್ದಾನೆ:—

ಶ್ರಾವಕಜನದುಪವಾಸಂ | ಜೀವದಯಾಷ್ಟಮಿಯೊಳಾಗೆ ಪಾರಣೆ ಕಿವಿಗ |
ಳ್ಗೀವಸ್ತುಕಥನದಿಂದು | ದ್ಭಾವಿಸೆ ಕವಿಭಾಳಲೋಚನಂ ವಿರಚಿಸಿದಂ ||
ಇತಿಹಾಸಮೆಂಬ ವಿಮಳಾ | ಮೃತವಾರ್ಧಿಯೊಳೊಗೆದ ಕಲ್ಪಕುಜದಂತೆ ರಸಾ |
ನ್ವಿತಮಾದೀಕೃತಿ ಬುಧಸಂ | ತತಿಗಕ್ಷಯಸುಖಮನೀವುದೊಂದಚ್ಚರಿಯೇ ||

ಗ್ರಂಥಾವತಾರದಲ್ಲಿ 20 ನೆಯ ತೀರ್ಥಕರನಾದ ಮುನಿಸುವ್ರತನನ್ನು ಸ್ತುತಿಸಿ ಬಳಿಕ ಸಿದ್ಧಾದಿಗಳನ್ನೂ, ವೀರಸೇನ, ಜಿನಸೇನ, ಸಿಂಹನಂದಿ, ಕೊಂಡಕುಂದ, ಸಮಂತಭದ್ರ, ಗುಣಭದ್ರ, ಪೂಜ್ಯಪಾದ ಎಂಬಿವರುಗಳನ್ನೂ ಹೊಗಳಿದ್ದಾನೆ. ಅನಂತರ—ಹುಲಿ ಪಾಯೆ ಗುರುಗಳ್ 'ಸಳ ಹೊಯ್' ಎಂದು ಕುಂಚದ ಸೆಳೆಯಂ ಕೊಡಲು ಹುಲಿಯನಟ್ಟಿ ಹೊಯ್ಸಳನಾದನು. ಅವನ ಮಗ ವಿನಯಾದಿತ್ಯ; ಆತನ ಪುತ್ರ ಎರೆಯಂಗ; ಅವನ ಸುತ ಬಿಟ್ಟಿದೇವ; ಆತನ ಮಗ ನರಸಿಂಹ; ಅವನ ಪುತ್ರ ವೀರಬಲ್ಲಾಳ—ಎಂದು ಹೊಯ್ಸಳರಾಜರ ಪರಂ ಪರೆಯನ್ನು ಹೇಳಿ, ವೀರಬಲ್ಲಾಳನು ತನಗೆ ಸ್ವಾಮಿಯಾದುದರಿಂದ ಅವನನ್ನು ವಿಶೇಷವಾಗಿ ಸ್ತುತಿಸಿದ್ದಾನೆ. ಗ್ರಂಥಾಂತ್ಯದಲ್ಲಿಯೂ "ಅಸಹಾಯಶೂರನ ಭುಜಕ್ಕೆ

ಜಯಂ ಸಮಸಲ್ಗೆ" ಎಂದು ವೀರಬಲ್ಲಾಳನನ್ನು ಆಶೀರ್ವದಿಸಿದ್ದಾನೆ. ಅವತಾರಗಳ ಅಂತ್ಯದಲ್ಲಿ ಈ ಗದ್ಯವಿದೆ—

ಇದು ಪರಮಜಿನಸಮಯಕುಮುದಿನೀಶರಚ್ಚಂದ್ರ ಚೈತ್ರಚಂದ್ರಮ ಸದಮಳರಾಮಚಂದ್ರಮುನೀಂದ್ರಪದಭಕ್ತಂ ಜಾನಕಿ ಮಾಡಿದ ಯಶೋಧರಚರಿತದೊಳ್.

ಈತನ ಬಂಧವು ಲಲಿತವಾಗಿಯೂ ಮಧುರವಾಗಿಯೂ ಗಂಭೀರವಾಗಿಯೂ ಹೃದಯಂಗಮವಾಗಿಯೂ ಇದೆ. ಈತನನ್ನು ಮಧುರನು 'ಕರ್ಣಾಟಕವಿತೆಗೆ ಸೀಮಾಪುರುಷಂ' ಎಂದು ಹೊಗಳಿರುವುದು ಉಚಿತವಾಗಿ ಕಾಣುತ್ತದೆ. ಈತನ ಪದ್ಯಗಳು ನಿರರ್ಗಳವಾಗಿ ಓಡುವುದನ್ನು ನೋಡಿದರೆ ಆಶ್ಚರ್ಯವುಂಟಾಗುತ್ತದೆ.

ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

### ಮಾರಿಯಗುಡಿ.

ಶಿಶಿರಮನೆ ಪಿಡಿದು ಪರಕೆಗೆ। ಬಸಂತನಲರ್ವೋದ ಮಾವಿನಡಿಮಂಚಕೆಯೊಳ್।
ಕುಸುರಿದಱದಡಗಿನಂತೆವೊ। ಲೆಸೆದುವು ತದ್ವನದೊಳುದಿರ್ದ ಮುತ್ತದ ಮುಗುಳ್ಗಳ್ ॥ 743 ॥

ತಾಳುಗೆಯನುರ್ಚಿ ನೆತ್ತಿಯ। ಗಾಳಂ ಗಗನದೊಳೆಲ್ಬಿಲ್ವ ವಾರಿಯ ಬೀರರ್।
ಪಾಳಿಯೊಳೆಸೆದರ್ ಪಾಪದ। ಜೋಳದ ಬೆಳಸಿಂಗೆ ಬೆರ್ಚುಗಟ್ಟಿದ ತೆಱದಿಂ ॥ 744 ॥

ದೆಸೆದೆಸೆಗೆ ನರಶಿರಂ ತೆ। ತ್ತಿಸಿ ಮೆಱೆದುವು ಮುಗಿಲೊಳಚ್ಚಿ ಪೇರಡಗಿನ ಪೆ।
ರ್ಬಸನದೆ ಪೊಱಗಣ ಜೀವ। ಪ್ರಸರಮುಮಂ ಪಲವು ಮುಖದಿನವಲೋಕಿಪವೋಲ್ ॥ 745 ॥

ಮಾರಿ ಮಲಯಾನಿಲಂ ನವ। ನೀರಜವನಮೆಂಬ ಕೆಂಡದೊಳ್ ದಂಡನಮ।
ಸ್ಕಾರಂ ಬಂದಪನಿತ್ತವ। ಧಾರಿಪುದೆಂಬಂತಿರುಲಿದುವರಗಿಳಿ ಬನದೊಳ್ ॥ 746 ॥

### ವಸಂತ.

ಬಾಳಲರ್ಗುಡಿ ಪಿಕರುತಿ ಬಾ। ಯ್ಕೇಳಿಕೆ ಮಾಂದಳಿರೆ ಕೆಂಪುದೀವಿಗೆಯೆನೆ ಭೂ॥
ಪಾಳಂ ಬರೆ ಶೋಭಿಪ ವನ। ಪಾಳನವೋಲ್ ಮುಂದೆ ಬಂದುದಂದು ವಸಂತಂ ॥ 747 ॥

ಪೊಂಬಾಳೆ ಚಾಮರಂ ಚಂ। ದ್ರಂ ಬೆಳ್ಗೊಡೆ ಕೇಳಿಶಿಖರಿ ಸಿಂಹಾಸನಮಾ।
ಯ್ತೆಂಬಿನೆಗಮಂಗಜಂ ಮಾ। ವೆಂಬ ಕುಮಾರಂಗೆ ಪಟ್ಟಮಂ ಕಟ್ಟಿಸಿದಂ ॥ 748 ॥

### ಉಪ್ಪರಿಗೆ.

ಕಾರಿರುಳೊಳಮೆಳವಿಸಿಲಂ । ಪೂರಂಬಲಿಯಿಪುವು ಬೀದಿಯೊಳ್ ನಿಜರುಚಿಯಿಂ ।
ಹೀರೆಯ ಹೂವಿನ ಬಣ್ಣದ । ನೇರಾಣಿಯ ಕುಸುರಿವೆಸದ ನೆಲೆಮಾಡಂಗಳ್ ॥749॥

### ಅರಮನೆ.

ಪರಿಮಳದ ತೂಂಬನೆತ್ತಿದ । ಸರಲಂಬಂ ಜನಮನೋವನಕ್ಕೆನೆ ಕಾಳಾ ।
ಗುರುಧೂಮಲತಿಕೆ ಜಾಳಾಂ । ದರದಿಂದೊಗೆದುದು ಕಪೋತಪಕ್ಷಚ್ಛುರಿತಂ ॥750॥

### ನವಿಲು.

ನವರತ್ನದ ಪಂಜರದೊಳ್ । ದಿವಿಜಶರಾಸನದ ಮುಱಿಯನಿರಿಸಿದವೋಲ್ ಸು ।
ತ್ತುವ ಸೋಗೆಯ ಸುತ್ತಿನೊಳಾ । ಡುವ ಕೇಕಿಯ ಭಂಗಿ ಲೋಕಮಂ ಸೋಲಿಸುಗುಂ
॥ 751 ॥

### ವೀರಬಲ್ಲಾಳ.

ಪರನೃಪರ ರಾಜ್ಯಲಕ್ಷ್ಮಿಯ । ಕುರುಳಾಕರ್ಷಣದೆ ನೀಳ್ದತೋಳ್ ಮೆಱೆವುವು ಪೇ ।
ರುರದೊಳ್ ನೆಲಸಿದ ಲಕ್ಷ್ಮೀ । ಕರಿಣಿಗೆ ಬಾಳಿಸಿದ ರನ್ನದಮಳ್ಗಂಬದವೋಲ್
॥ 752 ॥

ನಿನಗೆ ಶುಭನೆಂದ ವಂದಿಯ । ಮನೆಯಂಗಣದೊಳಗೆ ಪಣ್ತು ಪರ್ವಿದ ಮಂದಾ ।
ರನವೇರುಪಾರಿಜಾತದ । ಬನದೊಳ್ ಸಿರಿ ಮೆಱೆವುದಲ್ತೆ ವನಕೇಳಿಗಳಂ [1]
॥ 753 ॥

ಬಳೆಗೋದುದು ಕೀರ್ತಿ ದಿಶಾ । ಕಳಭಂಗಳ ನಿಗ್ಗವಂಗಳೊಳ್ ರಿಪುಕಾಂತಾ ।
ವಳಿಯನೆ ಭವತ್ಪ್ರತಾಪಂ । ಬಳೆಗಳೆಯಿಸೆ ತಾನದರ್ಕೆ ಮಚ್ಚರಿಸುವವೋಲ್
॥ 754 ॥

## 2. ಅನಂತನಾಥಪುರಾಣ.

ಇದು 14 ನೆಯ ತೀರ್ಥಕರನಾದ ಅನಂತನಾಥನ ಚರಿತವು; 14 ಆಶ್ವಾಸಗಳಾಗಿ ಭಾಗಿಸಲ್ಪಟ್ಟಿದೆ. ಈ ಗ್ರಂಥವನ್ನು ಕವಿ "ಅರುಹನ ಮೂರ್ತಿಯಂತಿರೆ ನಿರಾಭರಣಂ ಮೆಱೆಯಲ್ಕೆ ಪೇಟ್ದಪೆಂ ಚರಿತಪುರಾಣಮಂ" ಎಂಬ ತನ್ನ ಪ್ರತಿಜ್ಞೆಗೆ ಅನುಸಾರವಾಗಿ ವಿಶೇಷವಾಗಿ ಅಲಂಕಾರಗಳಿಲ್ಲದಂತೆ ಬರೆದಿದ್ದಾನೆ. ಈ ಪುರಾಣಕ್ಕೆ ದೋರಸಮುದ್ರದ ಶಾಂತೀಶ್ವರನ ಬಸದಿಯಲ್ಲಿ ಪ್ರತಿಷ್ಠೆಮಾಡಿಸಿದಂತೆ ಹೇಳುತ್ತಾನೆ.

ಗ್ರಂಥಾವತಾರದಲ್ಲಿ ಅನಂತನಾಥನ ಸ್ತುತಿಯಿದೆ. ಬಳಿಕ ಕವಿ ಸಿದ್ಧಾದಿಗಳನ್ನೂ ಸರಸ್ವತಿಯನ್ನೂ ಯಕ್ಷಯಕ್ಷಿಯರನ್ನೂ ಜೈನಶಾಸನವನ್ನೂ ಶ್ರುತಕೇವಲಿ

1. ಈ ಪದ್ಯವು ಸೂಕ್ತಿಸುಧಾರ್ಣವದಲ್ಲಿ ಉದಾಹೃತವಾಗಿದೆ.

ಗಳನ್ನೂ ಹೊಗಳಿ ಅನಂತರ ಗೃಧ್ರಪಿಂಛನಿಂದ ಸ್ವಗುರುವಾದ ಗಂಡವಿಮುಕ್ತರಾಮ ಚಂದ್ರದೇವನ ವರೆಗೆ[1] ಗುರುಗಳನ್ನು ಪರಿವಿಡಿಯಿಂದ ಸ್ತುತಿಸಿದ್ದಾನೆ. ತನ್ನ ಹೆಂಡತಿ ಲಕುಮಾದೇವಿಯ ಗುರುಗಳ ಪ್ರಸಿದ್ಧಾಚಾರ್ಯರೊಳಗೆ—ಜಾವಳಿಗೆಯ ಮುನಿಚಂದ್ರ, ಅವನ ಶಿಷ್ಯ ಕುಲಭೂಷಣ; ಸಕಲಚಂದ್ರ, ಇವನ ಮಗ ಮಾಧವಚಂದ್ರ, ಇವನ ಶಿಷ್ಯ ಬಾಲಚಂದ್ರಕವಿಕಂದರ್ಪ—ಇವರುಗಳನ್ನು ಹೊಗಳಿದ್ದಾನೆ. ಗ್ರಂಥಾಂತ್ಯದಲ್ಲಿ "ನರಸಿಂಹಂ ಸ್ಥಿರರಾಜ್ಯೋದ್ಭವಲಕ್ಷ್ಮಿಯಿಂದೆ ಸುಖಿಮಿರ್ಕೆ" ಎಂದು ಈ ಗ್ರಂಥರಚನಾಕಾಲದಲ್ಲಿದ್ದ ತನ್ನ ಸ್ವಾಮಿಯಾದ ವೀರನರಸಿಂಹನನ್ನು (1220—1235) ಆಶೀರ್ವದಿಸುತ್ತಾನೆ. ಆಶ್ವಾಸಗಳ ಕೊನೆಯಲ್ಲಿ ಈ ಗದ್ಯವಿದೆ :—

ಇದು ಪರಮಜಿನಸಮಯವನವಸಂತಸಂತಾನಾರಾಮ ರಾಮಚಂದ್ರಪ್ರಸಾದಾಸಾದಿತರತ್ನತ್ರಯಾಭರಣಕಿರಣಪ್ರಸನ್ನಾಂತಃಕರಣ ಕವಿಚಕ್ರವರ್ತಿಬಿರುದ ಕವಿಭಾಳಲೋಚನ ಜನಾರ್ದನದೇವವಿರಚಿತಮಪ್ಪನಂತನಾಥಪುರಾಣದೊಳ್.

ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ :—

### ವಸಂತ.

ನನೆದೋಱುತ್ತಿದಿರ್ಗಂತಿ ಮುಂತೆ ಪನೆಗಳ್ ತೋರ್ಪಂತೆ ತೆಂಗಾಳಿ ಕೆಂ |
ಗೊನರೊಳ್ ದಟ್ಟಡಿಯಿಟ್ಟುದೊಳ್ನಗೆ ಪೊದಟ್ಟುತ್ತಿಬ್ಬದೊಳ್ ಕೋಕಿಳಂ ||
ಕೊನರಂ ಕರ್ಚಿ ತೊದಳ್ಚರಂಗೆಡೆದುದೆತ್ತಂ ನಂದನಶ್ರೀಯ ನಂ |
ದನನಾನಂದನನನ್ಯಜಂಗಣುಗನಾಯ್ತಿಂತಾವಸಂತಾಗಮಂ || 755 ||

### ಬೆಳುದಿಂಗಳು.

ಬಳವೈರಿಯೆಂಬ ಸಾಧಕ | ನಿಳೆಯಂ ಪೊಸಮೂಸೆಮಾಡಿ ಶಶಿಮಂಡಲಮಂ |
ಗುಳಿಗೆಯಿಡೆ ತಿಮಿರಕಾಳಿಕೆ | ತಿಳಿದಂತಿರೆ ಜಳಕನಾಯ್ತು ಪೊಸವೆಳ್ದಿಂಗಳ್ ||756||

ಕುಸುಮಂ ಗಂಧಾನುಮೇಯಂ ಗಮನಕಮನಹಂಸಾಳಿ ಶಬ್ದಾನುಮೇಯಂ |
ರಸನಾಸ್ವಾದಾನುಮೇಯಂ ಮಧು ಮಲಯರುಹಕ್ಕೌಮಕರ್ಪೂರಮುಕ್ತಾ ||
ವಿಸರಂ ಸ್ಪರ್ಶಾನುಮೇಯಂ ದಿಟಮೆನೆ ಘಟಿತಂಬೆತ್ತ ಬೆಳ್ದಿಂಗಳಂ ತು |
ಟ್ಟಿಸೆ ಲೋಕಂ ಚಂದ್ರಕಾಂತೋಪಲದ ಮಯಣದಿಂ ಮಾಡಿದಂತಿರ್ದುದಾಗಳ್ ||
|| 757 ||

---

1. ಗೃಧ್ರಪಿಂಛ, ಕೊಂಡಕುಂದ, ಜಟಾಸಿಂಹನಂದಿ, ಭೂತಬಲಿ, ಪುಷ್ಪದಂತ, ಜಿನಸೇನ, ವೀರಸೇನ, ಸಮಂತಭದ್ರ, ಗುಣಭದ್ರ, ಪೂಜ್ಯಪಾದ, ಅಕಳಂಕ, ಕಾಣೂರ್ಗಣದ ಇಂದ್ರನಂದಿ, ಗುಣಚಂದ್ರ, ಇವನ ಮಕ್ಕಳು ಕನಕಚಂದ್ರ ಮಾಧವಚಂದ್ರರು, ಮಾಧವಚಂದ್ರ ಶಿಷ್ಯ ತನ್ನಗುರು ಗಂಡವಿಮುಕ್ತಶಿಖಾಮಣಿ ರಾಮಚಂದ್ರದೇವಮುನೀಂದ್ರ.

ಮುಗಿವ ಸರೋಜಮಾಲೆಗಮುರಲ್ವ ಸಿತೋತ್ಪಲಮಾಲೆಗಂ ಮನಂ ।
ತೆಗೆಬಗೆಯಾಗೆ ಸ್ವೈರಿಸದೆ ಷಟ್ಪದಸಂತತಿ ರಾಜಬಾಧೆಯಿಂ ॥
ಸುಗಿವ ನವಪ್ರಸಾದಫಲದಿಂದವಿವಾಪ್ತಜನಕ್ಕೆ ಕೂರ್ತ ಬಂ ।
ಧುಗಳೆಡೆಯಾಡುವಂತಿರೆಡೆಯಾಡಿದುವಂಬುರುಹಾಕರಂಗಳೊಳ್ ॥ 758 ॥

## ಸಂಪಗೆ.

ಸೊಡರ್ಗುಡಿಯುಗೆಯುಂ ಪಚ್ಚೆಯ । ಪಡಲಗೆಗಳೊಳಡಕಿಲಿಟ್ಟು ರತಿ ಪೊಯ್ದುವೊಲೇಂ ।
ಜಡಿದುದೊ ಸಂಪಗೆ ನನೆಯಿಂ । ಜಡಿದುದು ಮಧುಲಕ್ಷ್ಮಿ ತೊಟ್ಟ ಪೊಸಪೊಂ
[ದೊಡವಂ ॥ 759 ॥

## ಮಲ್ಲಿಗೆ.

ಮುಳಿದು ಬೀದೋಪರಳ್ದೈರ್ದೆ ಪುಗುಬ್ಬುರಿವಂತೆ ಕರಂ ಮುಗುಳ್ತು ನಾ।
ಣೊಳಗುಸಡಿಲ್ವಿನಂ ಪೊರೆ ಸಡಿಲ್ದು ಕದಂಪು ಬೆಳರ್ತು ಬಾಡಿ ಪೊ॥
ಟ್ಟಳಿಸಿ ಬೆಳರ್ತ ಮುದ್ರಿಸಿದ ಬಾಯ್ಗಳಲರ್ ಬಿರಿವಂತು ಕಂಪು ಕೆ।
ಯ್ಕೊಳೆ ಬಿರಿದತ್ತು ತುಂಬಿ ನೆಱವಲ್ಲಿಗೆ ಮಲ್ಲಿಗೆ ಸಂತೆಯುಂತೆವೋಲ್ ॥ 760 ॥

## ಕೋಗಿಲೆ.

ಎಳಲತೆ ಪೆಕ್ಕಣಕ್ಕೆ ತಳಿರಂ ತೆಗೆದುಟ್ಟಳದರ್ಕೆ ನಟ್ಟುವಂ ।
ಮಳಯಸಮೀರಣಂ ಪನಸರಂಗಳೊಳಿಂತಿವೆ ಪಣ್ಣಿ ಬಂದ ಮ ॥
ದ್ದಳೆ ಮಧುದೂತಿ ನಾಗಲತೆ ಮಲ್ಲಿಗೆ ಮಾಳತಿ ಬನ್ನಿಮೆಂದು ಸೂ।
ಚ್ವಳನವೊಲೆತ್ತಲುಂ ಕರೆಗುಮಾಬನದೊಳ್ ಕಿಸುಗಣ್ಣ ಕೋಕಿಲಂ ॥ 761 ॥

## ಸಿಂಹೀಪ್ರಸವ.

ಕಡೆವಾಯುಂ ಬಿರ್ಚಿ ಬೆನ್ನಂ ಕುಸಿದು ನೆಗಪಿ ವಾಲಾಗ್ರಮಂ ಬೇನೆಯಿಂದಾ।
ಳಿಡುತುಂ ಶೈಲಾಗ್ರದೊಳ್ ಕುಕ್ಕುಱಸಿ ಮುಱುಕದಿಂದೀಂಬ ಸಿಂಹೀಕಿಶೋರಂ ॥
ನಡುಸೂಲೊಳ್ ಸಿಲ್ಕಿ ಕಣ್ಣಂ ತೆಱದಿಭಪತಿಯಂ ತಾಱಲೊಳ್ ಕಂಡು ಕಾಯ್ಪಿಂ ।
ನಡುವಾಯ್ದಾತಾಯ್ಗೆ ದುಃಖಪ್ರಸವಸಮಯದೊಳ್ ತಂದುದಂತೊಂದಲಂಪಂ
॥ 762 ॥

## ಸೌಂದರ್ಯ.

ಅಲರಂಬಂ ಶಶಿಬಿಂಬದಿಂ ಸಮೆದವೋಲ್ ಕೂರ್ಪಿಂಗಡರ್ಪಾದ ಕ।
ಣ್ಮಲರ್ಗಳ್ ದರ್ಪಣರತ್ನಮಂ ತಿರುಳ ಮಿಂಚಿಂದೊಪ್ಪವಿಟ್ಟಂತಿರು॥
ಜ್ಜ್ವಲಿಪಾಸ್ಯಂ ಪೊಸಮುತ್ತನಾಯ್ದುಮರ್ದಿನೊಳ್ ತೊಯ್ದಂತೆ ನೇರ್ಪಟ್ಟ ನಿ।
ರ್ಮಲದಂತಚ್ಛವಿ ಬೇಡಿವರ್ಗ್ಗೆ ವರವೀವಂತಾಯ್ತು ಮಾಕಾಂತೆಯಾ ॥ 763 ॥

### ಕವಿತ್ವದ ಸಹೃದಯಸಾಪೇಕ್ಷತೆ.

ಎನಿತನೊಱಲ್ದು ಪೇೞ್ದ ಕವಿಯೇವನದಂ ಪೆಸರಿಟ್ಟು ಮೆಚ್ಚಬ |
ಲ್ಲನನಱಿಸಲ್ಕೆ ವೇೞ್ಪುದವನಂ ಜಗದೊಳ್ ಪಡೆಯಲ್ಕೆ ಬಾರದಾ ||
ತನ ಮುಖದಿಂದಮಲ್ಲದದು ಸಲ್ಲದು ಕಟ್ಟಿಯುಮೇನೊ ಮಾಲೆಗಾ |
ಱನ ಪೊಸಬಾಸಿಗಂ ಮುಡಿವ ಭೋಗಿಗಳಿಲ್ಲದೆ ಬಾಡಿಪೋಗದೇ || 764 ||

ಈತನು ಬರೆದಿರುವ **ಶಾಸನಗಳಲ್ಲಿ**—

## ಚೆನ್ನರಾಯಪಟ್ಟಣ 179. 1191.

ಇದು ತಾಮ್ರಶಾಸನವು. ಇದರಲ್ಲಿ ವೀರಬಲ್ಲಾಳನ ಶ್ರೀಕರಣಪ್ರಧಾನನಾದ ಮಾಚಿದೇವನು ಅಗ್ರಹಾರವನ್ನು ಬಿಡಿಸಿಕೊಟ್ಟಂತೆ ಹೇಳಿದೆ. ಇದರಿಂದ ಒಂದೆರಡು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

### ವರಾಹ.

ಶ್ರೀವಧುವಿಂಗೆ ಪೀಲಿದೞಿಯಿರ್ಪವೊಲಿರ್ದುದು ಕೋಡೊಳಿರ್ದ ಧಾ |
ತ್ರೀವಳಯಂ ಸಮುದ್ರಮುದು ಝಲ್ಲರಿಯಿರ್ಪವೊಲಿರ್ದುದಾಂತ ದಂ ||
ಷ್ಟ್ರಾವರಶೋಭೆ ತೆತ್ತಿಸಿದ ಮುತ್ತಿನ ಕಾವುವೊಲಿರ್ದುದಿಂತು ಸ |
ದ್ಭಾವಮನಾಳ್ದ ಸೂಕರವರಂ ಪೊರೆಗೀಗಿರಿದುರ್ಗಮಲ್ಲನಂ || 765 ||

### ಹೊಯ್ಸಳರ ಧ್ವಜ.

ಅಲಗಿಂ ಸಿಂಗಮನಿಱಿದನ | ಕಲಿತನಮಂ ನಗುವ ತೆಱದೆ ಮೆಱೆವುದು ಸೆಳೆಯಿಂ |
ಪುಲಿವೊಯ್ದು ಕುಱುಪು ಪೊಯ್ಸಳ | ಕುಲತಿಲಕರ ಮತ್ತಗಜದ ಟೆಕೆಯದೊಳೀಗಳ್
|| 766 ||

## ತರೀಕೆರೆ 45. 1197.

ಇದರಲ್ಲಿ ವೀರಬಲ್ಲಾಳನ ದಂಡನಾಯಕನಾದ ಅಮಿತನು ತಾನು ಪ್ರತಿಷ್ಠೆ ಮಾಡಿದ ಅಮೃತೇಶ್ವರದೇವರ ಅಂಗಭೋಗಾದಿಗಳಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ. ಈ ಶಾಸನದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

### ಹರಿಹರ.

ಸಿರಿಯಲರ್ಗಣ್ಣ ಬೆಳ್ಪೆಳಗಿನಿಂ ಪುದಿದಂಬುಜನಾಭನೀಶನಂ |
ತಿರೆ ಗಿರಿಜಾಕಟಾಕ್ಷರುಚಿಗಳ್ ಪುದಿದೀಶನುಮಬ್ಜನಾಭನಂ ||
ತಿರೆ ಜನಸಂಸ್ತವಂ ತಮಗೆ ಪಲ್ಲಟಮಪ್ಪಿನಮೊಪ್ಪಿ ತೋಱುವಾ |
ಹರಿಹರದೇವರೊಲ್ದಮಿತನಂ ಪರಿರಕ್ಷಿಸುತಿರ್ಕೆ ಸಂತತಂ || 767 ||

## ಬ್ರಹ್ಮ.

ಸಿರಿಯುಂ ಕೌಸ್ತುಭರತ್ನಮುಂ ಹರಿಯನಂತಾಶಂಖಮುಂ ಚಕ್ರಮುಂ।
ಭರದಿಂ ಪೇೞಱ ಬಹಿತ್ರದಂತಿರೆಸೆದಿರ್ದಂ ಶೇಷನಾಕ್ಷೀರಸಾ॥
ಗರದೊಳ್ ದೇವನ ನಾಭಿಪದ್ಮದ ಮೃಣಾಳಂ ಕೂವಕಂಬಂಬೊಲ।
ಚ್ಚರಿಯಾಗಿರ್ದುದು ಕರ್ಣಧಾರನವೊಲಿರ್ದಂ ಪುಟ್ಟಿ ಪದ್ಮೋದ್ಭವಂ ॥ 768 ॥

## ಎರೆಯಂಗ.

ನೆಱವಿಂದಂ ವೈರಿವೃಂದಂ ಕವಿವುದುಮುನಿತೊಂದಂ ರಣೋತ್ಸಾಹದಿಂದಂ।
ತಱದೊಟ್ಟಲ್ ಸೀಳ್ದು ಮೆಟ್ಟಲ್ ಯಮಪುರಿಗಿರದಟ್ಟಲ್ ಚಲಂಮುಟ್ಟಿ ಕಟ್ಟಲ್॥
ನೆಱೆದತ್ತಂ ಕೆಯ್ದುವೊತ್ತಂ ವಸುಧೆಯೊಳಗೆ ಮತ್ತಂ ಜಸಂಬೆತ್ತನಾಸಂ।
ದೆಱೆಯಂಗಂ ವೀರಗಂಗಂ ರಿಪುತಿಮಿರಪತಂಗಂ ಜಯಶ್ರೀಭುಜಂಗಂ ॥ 769 ॥

## ವೀರಬಲ್ಲಾಳ.

ಆರೆಣೆಯೆಂಬೆನಳುಂಬದ। ಬೀರಮನೀಜಗಮನಾವಗಂ ಸುತ್ತಿದ ಮು।
ನ್ನೀರೆಂಬುದು ಬಿರುದಿನ ಬೆ। ಳ್ಳಾರೆನಿಸಿದುದದಟರಾಯಕೋಳಾಹಳನಾ [1] ॥770॥

---

## ನಾಗದೇವ. 1217.

ಕಡೂರು 129 ನೆಯ ಶಾಸನದಲ್ಲಿ (ಶಕ 1129) ಈತನನ್ನು "ಕವಿತಿಳಕ" ಎಂದು ವಿಶೇಷಿಸಿ ಹೇಳಿದೆ. ಈತನು ಗೌತಮಗೋತ್ರದವನು. ಇವನ ತಂದೆ ನಾಗದೇವ, ತಾಯಿ ಚಾಮವ್ವೆ. ಈತನು ಆವ ಗ್ರಂಥವನ್ನು ಬರೆದಿದ್ದಾನೆಯೋ ತಿಳಿಯದು.

---

## ಸೋಮರಾಜ. 1222.

ಇವನು ಶೃಂಗಾರಸಾರ ಎಂಬ ಗ್ರಂಥವನ್ನು ಬರೆದಿದ್ದಾನೆ. ಇದಕ್ಕೆ ಉದ್ಭಟಕಾವ್ಯ ಎಂಬ ಹೆಸರೂ ಉಂಟು.

ಈತನು ವೀರಶೈವಕವಿ; ರಾಜನಾಗಿದ್ದಂತೆ ತಿಳಿಯುತ್ತದೆ. ಇವನ ಪ್ರಪಿತಾಮಹನು ಚಂದ್ರವಂಶೋತ್ಪನ್ನನಾದ ತಿರುಮಲರಾಜ, ಪಿತಾಮಹನು

---

1. ಈ ಪದ್ಯವು ಯಶೋಧರಚರಿತೆಯಲ್ಲಿಯೂ ದೊರೆಯುತ್ತದೆ.

ರಾಯಣರಾಜ, ತಂದೆ ಇಂದುಶೇಖರರಾಜ.[1] ಈ ವಂಶದ ರಾಜರು ಎಲ್ಲಿ ರಾಜ್ಯವಾಳುತ್ತಿದ್ದರೋ ತಿಳಿಯದು. ಆದರೆ ಪಶ್ಚಿಮತೀರದಲ್ಲಿ ಆಳುತ್ತಿದ್ದ ವೀರಶೈವಮತಾವಲಂಬಿಗಳಾದ ಚೌಟರಾಜರಲ್ಲಿ ತಿರುಮಲರಾಯ, ಚಂದ್ರಶೇಖರ ಎಂಬ ಹೆಸರುಗಳು ದೊರೆಯುತ್ತವೆ. ಈ ಕವಿ ಆ ವಂಶದ ದೊರೆಯಾಗಿರಬಹುದೋ ಏನೋ ತಿಳಿಯದು.

ತನ್ನ ಗ್ರಂಥವನ್ನು ರಾಯಸದ ಲಿಂಗರಸನು ಬರೆಯಲು ತಾನು ನಿರ್ಮಿಸಿದಂತೆ ಹೇಳುತ್ತಾನೆ.[2]

ಈ ಗ್ರಂಥವನ್ನು ಶಕ 1144 ನೆಯ ಚಿತ್ರಭಾನುವಿನಲ್ಲಿ—ಎಂದರೆ 1222 ರಲ್ಲಿ—ಬರೆದುದಾಗಿ ಈ ಪದ್ಯದಲ್ಲಿ ಹೇಳಿದ್ದಾನೆ:—

ಜನನಾಥೋತ್ತಮಸೋಮರಾಜನುಸಿರ್ದೀಕಾವ್ಯಂ ವಲಂ ಶಾಲಿವಾ ।
ಹನಶಾಕಾಬ್ದಮದೆಯ್ದೆ ಸಾಸಿರದನೂಱಂ ಸಂದ ನಾಲ್ವತ್ತುನಾ ॥
ಲ್ಕನೆಯಾರಂಜಿತಚಿತ್ರಭಾನುವ ವರಾಶ್ವೀಜೋತ್ಸಿತೈಕಾದಶೀ ।
ವನಜಾರಾತಿತನೂಜವಾಸರದೊಳಾದತ್ತಲ್ಲಮಂಗರ್ಪಿತಂ ॥

ಪೂರ್ವಕವಿಗಳಾದ **ಹರೀಶ್ವರ** (ಸು. 1165), **ಕೆರೆಯ ಪದ್ಮರಸ** (ಸು. 1165), **ಪಾಲ್ಕುರಿಕೆಸೋಮನಾಥ** (ಸು. 1195) ಇವರನ್ನು ಈ ಪದ್ಯದಲ್ಲಿ ಸ್ತುತಿಸಿದ್ದಾನೆ :—

ಪ್ರಮಥಾನೀಕಕಥಾರ್ಣವೇಂದು ಹರಿದೇವಾಚಾರ್ಯನಂ ಧೈರ್ಯನಂ ।
ಸಮುದಂಚದ್ವೃಷಭಸ್ತವಾಮಮಹೀಜಾರಾಮನಂ ಸೋಮನಂ ॥
ವಿಮಲಜ್ಞಾನಸುದೀಪಿಕಾಸ್ಫುರಿತಚೇತಸ್ಸದ್ಮನಂ ಪದ್ಮನಂ ।
ಕ್ರಮದಿಂದಂ ಬಲಗೊಂಡು ಪೇೞ್ವೆನೊಸೆದಾನೀಕಾವ್ಯಮಂ ಸೇವ್ಯಮಂ ॥

ತನ್ನ ಕವಿತಾಚಾತುರಿಯನ್ನು ಈ ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ :—

ಚಂದ್ರಮರೀಚಿಯಂತೆ ತನಿಮಾವಿನ ಪಣ್ಗಳ ತಂದಲಂತೆ ದೇ ।
ವೇಂದ್ರಮಹೀಜದಂತೆ ಮಲಯಾನಿಲನಂತೆ ವಸಂತನಂತೆ ಸ ॥

1. ಬಿಸಜಾರಾತಿಕುಲೋದ್ಭವಂ ತಿರುಮಲಕ್ಷೋಣೀಧರಂ ತನ್ನರೇಂ ।
ದ್ರಸುಪುತ್ರಂ ನುತರಾಯಣೋರ್ವಿಪತಿ ತದ್ರಾಜನ್ಯರಾಣ್ಣಂದನಂ ॥
ವಸುಧೇಶೋತ್ತಮನಿಂದುಶೇಖರನೃಪಂ ತದ್ಭೂಪಜಂ ಸೋಮನೊ ।
ಲ್ದುಸಿರ್ದೀಸತ್ಕೃತಿ ಸಜ್ಜನರ್ಗಳ ಮನಕ್ಕಂಟಿರ್ಪುದೇಂ ಚೋದ್ಯಮೋ ॥

2. ಎನ್ನೆರ್ದೆವಂದ ರಾಯಸದ ಲಿಂಗರಸಂ ಬರೆಯಲ್ ಸಮಂತುಟಾಂ ।
ಸನ್ನುತಶಂಭುಭಕ್ತರ ಪದಾಂಬುರುಹಂಗಳನೊಲ್ದು ಪೊತ್ತು ನಿ ॥
ರ್ಭಿನ್ನವಿಲಾಸಮಂ ಪಡೆದು ನಿರ್ಮಿಸಿದೀಕೃತಿ.

ಧ್ರ್ಯಂಧ್ರಸುಧಾಬ್ಧಿಯಂತೆ ನವಚಂಪಕಮಂಜರಿಯಂತೆ ಸೋಮರಾ ।
ಜೇಂದ್ರನ ಕಬ್ಬದಿಂಪು ಬುಧರಂ ಬಗೆಗೊಳ್ವುದಿಳಾತಳಾಗ್ರದೊಳ್ ॥
ನಲ್ಲಳ ಚೇಟವಾತೊ ಶುಕಚಾರುನಿನಾದಮೊ ವಾಗ್ವಧೂಟಿಕಾ ।
ವಲ್ಲಕಿಯೊಪ್ಪುವಿಂಚರಮೊ ಚೈತ್ರಪಿಕಧ್ವನಿಯೋ ಸಮಂತು ಪೂ ॥
ವಿಲ್ಲನ ಚಾಪಸಂಜನಿತಮೋಹನನಾದಮೊ ಸೋಮರಾಜಭೂ ।
ವಲ್ಲಭನಿಂಪುವೆತ್ತ ವಚನಾಮೃತಮೋ ವಿಬುಧಾನುರಾಗಮೋ ॥
ಹಿಮರುಚಿಮಂಡಲಂ ನವಚಕೋರಿಗೆ ಚಾದಗೆಗಂಬುದಾಗಮಂ ।
ವಿಮಲವಸಂತಸಂಪದಮುದನ್ಯಭೃತಕ್ಕೆ ಸುಧಾಬ್ಧಿ ಹಂಸೆಗು ॥
ದ್ಗಮಮೆಳದುಂಬಿಗೊಂದಿನಿತರೋಚಕಮಪ್ಪುದೆ ಸೋಮರಾಜಚಂ ।
ದ್ರಮನ ವಚಸ್ಸುಧಾಲಹರಿ ಸಜ್ಜನಸಂತತಿಗೇನಸಹ್ಯಮೇ ॥

ಇವನ ಗ್ರಂಥ

## ಶೃಂಗಾರಸಾರ.

ಇದು ಕುಮಾರಪಾಲ ಘೂರ್ಜರನ ಅಥವಾ ಉದ್ಭಟನ ಚರಿತ್ರೆಯಾದುದರಿಂದ ಇದಕ್ಕೆ **ಉದ್ಭಟಕಾವ್ಯ** ಎಂಬ ಹೆಸರೂ ಉಂಟು. ಇದು 12 ಆಶ್ವಾಸಗಳಾಗಿ ಭಾಗಿಸಲ್ಪಟ್ಟಿದೆ. ಈ ಗ್ರಂಥದ ಉತ್ಕೃಷ್ಟತೆಯನ್ನು ಕವಿ ಈ ಪದ್ಯಗಳಲ್ಲಿ ಹೇಳಿದ್ದಾನೆ:—

ವಿಧೃತಾಲಂಕಾರದಿಂದಂ ನವಯುವತಿಯವೋಲ್ ಲಕ್ಷಣಸ್ಫೂರ್ತಿಯಿಂದಂ ।
ವಿಧುಜೃಂಭದ್ಬಿಂಬದಂತುಜ್ಜ್ವಲರಸಮಯದಿಂದಂ ಮನೋಜ್ಞೋಕ್ತಿವಂತು ॥
ದ್ಬುಧತತ್ಯಾನಂದದಿಂದಂ ತ್ರಿದಶಕುಜದವೋಲ್ ಧಾತ್ರಿಯೊಳ್ ಶೋಭಿಕುಂ ಸ ।
ನ್ಮಧುರಂಚಿತ್ತಿರ್ಪ ಕಾವ್ಯಂ ಸುಜನನಿಕರಸೇವ್ಯಂ ವಿಭಾವ್ಯಂ ಸುನವ್ಯಂ ॥
ಸರಸರ ಚೇತನೋತ್ಪಲಕೆ ಪೂರ್ಣಹಿಮಾಂಶುಮರೀಚಿಯಾಗೆ ಬ ।
ಲ್ಲರ ಕಿವಿಗಳ್ಗೆ ಮಾಣಿಕದ ಮಂಜರಿಯಾಗೆ ಪಳಂಚದೋದುವ ॥
ಕ್ಕರಿಗರ ಜಿಹ್ವೆಗಿಂಪಮರ್ದ ನೂತ್ನತರಾಮೃತಧಾರೆಯಾಗೆ ಕೂ ।
ರ್ತೊರೆವೆನಪಾರಸಾರಗುಣಬೃಂದಮನೀರುಚಿರಪ್ರಬಂಧಮಂ ॥

ಚಂದ್ರವಂಶದ ದೊರೆಯಾದ ಉದ್ಭಟನು ಭಲ್ಲಕೀಪುರವನ್ನು ಆಳುತ್ತಿದ್ದನು. ಈತನು ದೇವಲಋಷಿಯ ಯಜ್ಞಸಂರಕ್ಷಣಾರ್ಥವಾಗಿ ಹೋಗಿ ಯಜ್ಞವಿಘ್ನಕಾರಿಯಾದ ನಿಘೂರ್ಜಾಸುರನನ್ನು ಸಂಹಾರಮಾಡಿ ಸುಧರ್ಮನೆಂಬ ಚೋಳರಾಜನ ಸೌಂದರ್ಯವತಿಯೆಂಬ ಮಗಳನ್ನು ಮದುವೆಮಾಡಿಕೊಂಡು ತನ್ನ ರಾಜಧಾನಿಗೆ ಬಂದುಸೇರಿ ಪತ್ನಿಯೊಡನೆ ಅಕ್ಷಕ್ರೀಡೆಯಾಡುತ್ತಿರುವಾಗ ಆಕಾಶದಲ್ಲಿ ಕೈಲಾಸಕ್ಕೆ ಹೋಗುತ್ತಿದ್ದ ಓಹಿಲನನ್ನು ಕಂಡು ತಾನು ಹೀಯಾಳಿಸಲು ಪತ್ನಿಗೆ ಅಸಮಾಧಾನವಾಗಿ ಇಬ್ಬರಿಗೂ

ವಾಗ್ವಾದವುಂಟಾಯಿತು. ಆಗ ಉದ್ಭಟನು—ಓಹಿಲನು ಏಕಾಕಿಯಾಗಿ ಕೈಲಾಸಕ್ಕೆ ಹೋಗುತ್ತಿದ್ದಾನೆ; ಇದು ವಿಶೇಷವಲ್ಲ; ನಾನು ನಗರವನ್ನೆಲ್ಲಾ ಕರೆದುಕೊಂಡು ಹೋಗುವೆನು—ಎಂದು ಪಂಥಮಾಡಿಕೊಂಡು ಶಿವನನ್ನು ಒಲಿಸಿ ತನ್ನ ಪ್ರತಿಜ್ಞಾನುಸಾರ ನಗರವನ್ನೆಲ್ಲಾ ಕರೆದುಕೊಂಡು ಕೈಲಾಸಕ್ಕೆ ಹೋದನು—ಎಂಬುದೇ ಈ ಕಾವ್ಯದ ಕಥಾಗರ್ಭ.

ಗ್ರಂಥಾವತಾರದಲ್ಲಿ ಕವಿ ವಿರೂಪಾಕ್ಷಲಿಂಗವನ್ನು ಸ್ತುತಿಸಿದ್ದಾನೆ; ಬಳಿಕ ಪಂಪಾಂಬಿಕೆ, ವಿಘ್ನೇಶ್ವರ, ವೀರಭದ್ರ, ಷಣ್ಮುಖ, ಬಸವೇಶ್ವರಮುಖ್ಯಮಹೇಶ ಪೂಜಕರು, ಅಲ್ಲಮ ಎಂಬಿವರನ್ನು ಹೊಗಳಿದ್ದಾನೆ. "ಪಂಪಾನಗರೀಶ್ವರನೀ ಪೆಂಪಮರ್ದಿನಿಗಬ್ಬಕಾಣ್ಕೆಂ" ಎಂದು ಹೇಳುತ್ತಾನೆ. ಗುರು ಅಲ್ಲಮಾಂಕನ ದಯೆಯಿಂದ ಈ ಕೃತಿಯನ್ನು ಮಾಡಿದಂತೆಯೂ ಅಲ್ಲಮನಾಮಸ್ಮರಣವನ್ನು ಒಂದೊಂದು ನೆವದಿಂದ ಮಾಡುವಂತೆಯೂ ಹೇಳಿ, ಪ್ರತ್ಯಾಶ್ವಾಸದ ಕೊನೆಯ ಪದ್ಯದಲ್ಲಿಯೂ "ಅಲ್ಲಮಪ್ರಿಯ" ಎಂದು ಈಶ್ವರನನ್ನು ಸ್ತುತಿಸಿದ್ದಾನೆ. ಆಶ್ವಾಸಗಳ ಕೊನೆಯಲ್ಲಿ ಈ ಗದ್ಯವಿದೆ:—

ಇದು ಸಮಸ್ತಸುರಕದಂಬವಿಜೃಂಭಿತಮಕುಟತಟಘಟಿತನವರತ್ನಪುಂಜಸಂಜಾತಪಿಂಜರಿತಮಂಜುಳಮಯೂಖಮಂಜರೀರಂಜಿತ ಶ್ರೀಗುರುವಿರೂಪಾಕ್ಷಪಾವನಪಾದನಖೋಚ್ಚಳಿತಪ್ರಭಾನಿಸ್ತಂದ್ರರುಂದ್ರಸಾಂದ್ರಚಂದ್ರಿಕಾಪಟಲಪಟುಲಂಪಟಚಕೋರಾಯಮಾನಮಾನಸ ಶ್ರೀಸೋಮರಾಜೇಂದ್ರವಿರಚಿತಮಪ್ಪ ಕರ್ಣಾಟಕಶೃಂಗಾರಸಾರಮಹಾಪ್ರಬಂಧದೊಳ್.

ಈ ಕವಿಯ ಬಂಧವು ಲಲಿತವಾಗಿದೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

### ವರ್ಷಾಕಾಲ.

ಒಡೆಯೆ ತಟಾಕರಾಜಿ ಹೊನಲೇೞೆ ಧರಿತ್ರಿ ಸಮಸ್ತಸಿಂಧುಗಳ್ ।
ತಡಿಯನೆ ಮೀಱೆ ತಾಂ ಪರಿಯೆ ಬೆಂಚೆಗಳುರ್ವಿರೆ ನಿರ್ಝರಾಳಿ ಭೋ ॥
ರಿಡುತೆ ಮಹೀಧ್ರದಿಂ ಜಗುೞೆ ಡಂಗರಗಳ್ ಪಿರಿದಾಗಿ ತೋರ್ಪ ಕ ॥
ರ್ಮಡು ಕಡುವೆರ್ಚೆ ಕಟ್ಟೆ ಕಱೆದತ್ತು ಸುವೃಷ್ಟಿ ಪೊದಱ್ದು ಧಾತ್ರಿಯೊಳ್ ॥ 771 ॥

ಗಗನಾಂಗನೆ ಕುಡುಮಿಂಚಿಂ । ಬುಗುಗರ್ಜನೆಯಿಂ ಮುಗಿಲೆನಿಪ್ಪ ಮುಡಿಯಂ [ಪಿಕ್ಕಲ್ ।
ಮಿಗೆ ಮುಂ ತುಱುಂಬಿದೊಳ್ಪಲ । ರುಗುವವೊಲುದಿರ್ದತ್ತು ಕರಕನಿಕರಮದಿ [ಳಿಯೊಳ್ ॥ 772 ॥

## ಚಂದ್ರ.

ಸ್ಫುರದುಡ್ಡೀನಮರೀಚಿರಾಜಿ ವಿಲಸತ್ಸೂತ್ರಂಗಳಂದಾಗೆ ಬಂ ।
ಧುರದಂಡಂ ನಭಮಾಗೆ ಕಾಲಮೆನಿಪುದ್ಯತ್ತಾಸಪಾತ್ರಂಗಳೊಳ್ ॥
ಸರಸೀಜೋದ್ಭವನಿಂದುವಂ ತರಣಿಯುಂ ತೂಗಲ್ ಮಿಗಂ ಭಾರದಿಂ ।
ಧರೆಗಲ್ಲಿಂತಿಱಿದಂ ಹಿಮಾಂಶು ಚಿಗಿಯಲ್ ಬೆಳ್ಪಾದನಾನೋವಿನಿಂ ॥ 773 ॥

ಅಂಬುಜಪೀಠನೆಂದೆನಿಪ ಜೋಯಿಸನಾರಜನೀಪ್ರಮಾಣಮುಂ ।
ತಾಂ ಬಗೆದೀಕ್ಷಿಸಲ್ ಗಱಿಗೆವಟ್ಟಲನಿಕ್ಕಿದ ಬಟ್ಟಲ್ಸೈದೆ ಕಾ ॥
ಲಂಬಡೆದಂದು ನೀರೊಳಿರದಾಱವೊಲಱ್ದುದು ಪಶ್ಚಿಮಾಬ್ಧಿಯೊಳ್ ।
ತಂಬೆಳಗೋಡೆ ಜೋಡೆ ನಲಿದಾಡೆ ಸಮುಜ್ಜ್ವಳಚಂದ್ರಮಂಡಳಂ ॥ 774 ॥

## ಹಲಸು.

ನುಡಿಗುಡದನಿಶಂ ಸುಮ್ಮನೆ । ಕುಡುವ ಮಹಾದಾನಿಯಂತಿರಲರೇಱದ ಸೊಂ ।
ಪಿಡಿದಿನಿವಣ್ಗಳನೆಲ್ಲ । ಗ್ಗೆಡೆವಿಡದೀಯುತ್ತುಮೊಪ್ಪುಗುಂ ಪನಸಕುಜಂ ॥ 775 ॥

## ಚಪ್ಪರ.

ಆಡುವ ನಚ್ಚಣಿಯರ್ಕಳ ಪೆಂಪಿಂ । ಪಾಡುವ ಗೇಯರಸಾಮೃತದಿಂಪಿಂ ।
ನಾಡೆ ಮೃದಂಗನಿನಾದದ ಸೊಂಪಿಂ । ಗಾಡಿಯನಾಂತುದು ಪಂದಲಲಂಪಿಂ
॥ 776 ॥

## ಉದ್ಘಟರಾಜಕೀರ್ತಿಪ್ರತಾಪಗಳು.

ಅವನೀಧ್ರೌಘಂಗಳೆಲ್ಲಂ ಪುರಹರಕುಧರಂ ಸರ್ವರತ್ನಂಗಳೆಲ್ಲಂ ।
ನವಮುಕ್ತಾಸಂಕುಳಂ ಮಂಜುಳತಟಿನಿಗಳೆಲ್ಲಂ ವಿಯದ್ಗಂಗೆ ಸಪ್ತಾ ॥
ರ್ಣವಮೆಲ್ಲಂ ಪಾಲ್ಗಡಲ್ ಸತ್ಸುಮತತಿಗಳನೆಲ್ಲಂ ಸುಮಲ್ಲೀಮತಲ್ಲೀ ।
ನಿವಹಂ ಮೇಣಾದುವಂದುದ್ಘಟವಿಶದಯಶಃಕಾಂತಿಸಂದೋಹದಿಂದಂ ॥ 777 ॥

ವಿದ್ರುಮಮಂಬುರಾಶಿಗೆ ನಭಕ್ಕೆ ವಿಯನ್ಮಣಿ ರತ್ನರಾಜಿ ಶೋ ।
ಣಾದ್ರಿಗೆ ಪೂಗೊಳಕ್ಕೆ ನವಕೋಕನದಂ ದೆಸೆವೆಣ್ಗೆ ಚಾರುಹಾ ॥
ರಿದ್ರವಿಲೇಪನಂ ಫಣಿವರಂಗೆ ಫಣಾಮಣಿಯಾದುದಾವಗಂ ।
ರುದ್ರಪದಾಬ್ಜಷಟ್ಚರಣನುದ್ಘಟನುನ್ನತವಿಕ್ರಮಾನಲಂ ॥ 778 ॥

ನಿರ್ಮೋಕಂಗಳೆದು ಕರಂ । ಘೂರ್ಮಿಸಿ ಮೆಯ್ಮುಱಿವ ಕೃಷ್ಣಫಣಿಯೆನಲೊ
[ರೆಯಿಂ ।
ಕೂರ್ಮೆ ಮಿಗೆ ತೆಗೆದು ಜಡಿಯೆ ಪೊ । ಗರ್ಮೆಗುತುದ್ಘಟನ ಖಡ್ಗಲತೆ ಸೊಗ
[ಯಿಸುಗುಂ ॥ 779 ॥

## ಗಿಳಿ.

ಒಡಲ ಪಸುರ್ ಮೂಗಿನ ಕೆಂ। ಪಡಿಗಳ ಬೆಳ್ಪುಮರ್ದ ಕೊರಲ ಕರ್ಪೆಲ್ಲಂ ಸಂ।
ಗಡಿಸಿರೆ ಸುರಧನುವಿಳೆಯೊಳ್। ಕೆಡೆವವೊಲಿಟ್ಟಿದತ್ತದೊಂದು ಗಿಳಿವಿಂಡರಸಾ ॥ 780 ॥

ಚಪ್ಪರಿದೀಂಟಿ ನೂತ್ನಕಣಿಶೋದ್ಧ್ರಸಾರಮನುರ್ಕಿ ಸೊರ್ಕಿ ನು।
ಣ್ಪುಪ್ಪುಟಿನೊಪ್ಪಲರ್ಚಿಸುತುಮಂಚಿತಕುಂಚಿತಚಂಚುಕೋಟಿಯುಂ॥
ತಪ್ಪದೆ ನೆಲ್ಲ ನಿಟ್ಟಿಸಟ್ಟೊಳಿಟ್ಟಲೆದುರ್ಬಿ ಮನೋನುರಾಗವಾಂ।
ತೊಪ್ಪಿದುದಂದು ಕುಂದದೆ ವಿರಾಜಿತರಾಜಶುಕಾರ್ಭಕೋತ್ಕರಂ ॥781॥

## ಹುಲಿ.

ಕೆಂಪಿಡಿದಕ್ಷಿ ರೌದ್ರವದನಂ ಮಿಗೆ ಪೊಣ್ಮುವ ನಿಷ್ಠುರಸ್ವನಂ।
ಕಂಪಿಸ ಮಿಸೆ ನೀಡಿ ನಿಮಿರ್ದಿಕ್ಕುವ ಕಾಲ್ ಮಹಿಯಂ ಮಹೋಗ್ರದಿಂ॥
ಪಂ ಪೊಡೆವಗ್ರವಾಲಮಿರದೇಟ್ಟು ಕೊಡಂಕೆಗಳಿಂ ನಿಕುಂಜಮಂ।
ತಾಂ ಪೊಜಮಟ್ಟುದೊಂದು ಪುಲಿ ಗರ್ಜಿಸುತುಂ ಬಿರಿವಂತು ದಿಕ್ತಯಂ ॥ 782 ॥

## ಡೊಂಬರು.

ನೂಲ್ಗಟ್ಟಿ ಪೊಯ್ದು ಪೊಸಗುಡಿ। ಸಲ್ಗಳ್ ತವೆ ನಟ್ಟ ಗಟ್ಟಿಗಳಿರಿಸಿದ ದೋಳ್ಗಳ್।
ಕಾಲ್ಗಟ್ಟಿ ಮೇವ ಕಟ್ಟಿಯ। ಸಾಲ್ಗಳಿರಲ್ ಕೊಲ್ಲಟಿಗರ ಬೀಡೆಸೆದಿರ್ಕುಂ ॥ 783 ॥

## ವೇಶ್ಯಾಗರ್ಹಣ.

ನಿಚ್ಚಂ ನಿರ್ಮಲಜಲಮಿರೆ। ಬಚ್ಚಲ ನೀರ್ಗೆಳಸ ಕೀಟಕಂಬೋಲ್ ತನ್ನಂ।
ನಚ್ಚಿದ ಸತಿಯಿರೆ ಬೆಲೆವೆಣ್ಗೆಚ್ಚಪುದು ನೀತಿಯೇ ವಿದಗ್ಧಲಲಾಮಾ ॥ 784 ॥

ಕೀಟ್ಕಾನಿಸರಶ್ರಾಂತಮು। ಗುಟ್ಟ ಶರಾವಂಬೊಲಮರ್ದ ವೇಶ್ಯಾಧರಮಂ।
ತಳ್ತದೆ ಚುಂಬಿಸಿ ನರಕದೊ। ಳಾಟ್ಟುದದೇಂ ನೀತಿಯೇ ವಿದಗ್ಧಲಲಾಮಾ ॥ 785 ॥

ಪಣಮುಳ್ಳನ್ನೆವರಂ ಪೂ। ಗಣೆಯಂ ಮತ್ತಾವನೆಂಬಳವನಲ್ಲದೆ ಮೇಣ್।
ಪಣಮೆಲ್ಲಂ ತೀರಲೊಡಂ। ಪೆಣಮೆಂಬಳ್ ಪಣವಧೂಟಿ ಗುಣಮಣಿಹಾರಾ ॥ 786 ॥

ನಾನಾವಿಧದಿಂ ಮಣಿಕನ। ಕಾನೀಕಮನೆಯ್ದೆ ಕವರ್ದು ವಿಟನಂ ಕಡೆಯೊಳ್।
ಶ್ವಾನಂಗೆಣೆಮಾಡುವ ಗಣಿ। ಕಾನಾರಿಗೆ ಸೋಲ್ವನಧಮನಲ್ತೆ ಗುಣಾಢ್ಯಾ[1] ॥ 787 ॥

---

1 ಹೀಗೆ ಗುಣಾಢ್ಯ, ವಿದಗ್ಧಲಲಾಮ, ಗುಣಮಣಿಹಾರ, ವಿವೇಕಾಭರಣ, ಎಂದು ಮುಗಿವ ಪದ್ಯಗಳು ಈ ಗ್ರಂಥದಲ್ಲಿವೆ ಇವುಗಳಂತೆಯೇ ಇತರಬಿರುದುಗಳಿಂದ ಮುಗಿವ ನೀತಿಬೋಧಕವಾದ ಅನೇಕ ಕಂದಪದ್ಯಗಳು ಇತರಗ್ರಂಥಗಳಲ್ಲಿಯೂ ದೊರೆಯುತ್ತವೆ. ಕೆಲವು ಸಂದರ್ಭಗಳಲ್ಲಿ ಅವು ಆಆಬಿರುದುಗಳುಳ್ಳ ಕವಿಗಳಿಂದ ರಚಿತವಾಗಿವೆ ಎಂದು ಹೇಳಬಹುದು; ಉಳಿದ ಕಡೆ ಇದು ಹೀಗೆಯೇ ಸರಿ ಎಂದು ನಿಶ್ಚಯಿಸಲು ಕಷ್ಟವಾಗಿದೆ. ಬೊಪ್ಪಣಪಂಡಿತ, ಕರ್ಣಾಭರಣ, ಮಂಗರಸ 1, ಇವರ ಚರಿತೆಗಳನ್ನು ನೋಡಿರಿ ಸೋಮರಾಜನ ಈ ಗ್ರಂಥದಲ್ಲಿ ಬರುವ ಈ ಬಿರುದುಗಳು ಕಥಾನಾಯಕನಿಗೆ ಅನ್ವಯಿಸುತ್ತವೆ.

## ಪೋಲಾಳ್ವದಂಡನಾಥ. 1224.

ಈತನು ಹರಿಚಾರಿತ್ರ ಎಂಬ ಷಟ್ಪದೀಗ್ರಂಥವನ್ನು ಬರೆದುದಾಗಿ ಶಕ 1145 ರಲ್ಲಿ–ಎಂದರೆ 1224 ರಲ್ಲಿ–ಹುಟ್ಟಿದ ದಾವಣಗೆರೆಯ 25 ನೆಯ ಶಾಸನದಲ್ಲಿರುವ

ಗುರು ಧರ್ಮದ್ವಿತಯಕ್ಕೆ ನೀನೆ ದಿಟದಿಂ ಪೋಲಾಳ್ವ ಕೇಳ್ ಮುನ್ನವಾ।
ದರೊಳಿನ್ನಪ್ಪರೊಳಿಂದು ವರ್ತಿಪರೊಳಾರ್ಗುಂಟಾದುವೀಧರ್ಮವಾರ್॥
ಹರಿಚಾರಿತ್ರಮನೊಲ್ದು ಷಟ್ಪದದೆ ಪೇಟ್ದರ್ ನಿನ್ನವೋಲ್ ನಿನ್ನವೋಲ್।
ಧರೆ ಜೋದ್ಯಂಬಡುವಂತಿರಾರ್ ಹರಿಹರಶ್ರೀಗೇಹಮಂ ಮಾಡಿದರ್॥

ಎಂಬ ಪದ್ಯದಿಂದ ತಿಳಿಯುತ್ತದೆ. ಇವನ ಹರಿಚಾರಿತ್ರವು ನಮಗೆ ದೊರೆತಿಲ್ಲ.

ಮೇಲೆ ಹೇಳಿದ ಶಾಸನದಿಂದ ಇವನ ವಿಷಯವಾಗಿ ಈಯಂಶಗಳು ತಿಳಿಯುತ್ತವೆ :—

ಈತನ ತಂದೆ ಆಂಧ್ರದೇಶದ ನಾರಣಪುರದ ಅತ್ತಿರಾಜ; ತಾಯಿ ನವಿಲಾಡೆಯಕ್ಕ. ಇವನು ಹೊಯ್ಸಳವೀರಬಲ್ಲಾಳನಲ್ಲಿಯೂ (1173–1220) ಅವನ ಮಗ ವೀರನರಸಿಂಹ (1220–1235) ನಲ್ಲಿಯೂ ಅಮಾತ್ಯನಾಗಿದ್ದನು. ಈತನು ವಿಷ್ಣುಭಕ್ತನು; ಮಹಾ ಪರಾಕ್ರಮಶಾಲಿ; ಶಕ 1145 ನೆಯ ಸ್ವಭಾನುಸಂವತ್ಸರದ ಮಾಘಶುದ್ಧ ಏಕಾದಶೀ ಬೃಹಸ್ಪತಿವಾರದಲ್ಲಿ 115 ಹೊನ್ನ ಕಳಶದಿಂದ ಮೆರೆವಂತಾಗಿ ಹರಿಹರಕ್ಷೇತ್ರದಲ್ಲಿ ಹರಿಹರದೇವರಿಗೆ ದೇವತಾಲಯವನ್ನು ಮಾಡಿಸಿ, ಅಲ್ಲಿಯ 104 ಬ್ರಾಹ್ಮಣರಿಗೆ ಬಾನವಳ್ಳಿಯನ್ನು ಸರ್ವನಮಸ್ಯವಾಗಿ ಕೊಟ್ಟನು; ಬಾನವಳ್ಳಿಯಲ್ಲಿ ಲಕ್ಷ್ಮೀನಾರಾಯಣದೇವಾಲಯವನ್ನು ಕಟ್ಟಿಸಿ, ದೇವಸ್ಥಾನಕ್ಕೆ ನಾಲ್ಕು ವೃತ್ತಿಗಳನ್ನೂ ಬಿಟ್ಟನು.

ಈ ಶಾಸನದಿಂದ ಈತನ ಪ್ರಶಸ್ತಿರೂಪವಾದ ಸ್ವಲ್ಪ ಭಾಗವನ್ನು ತೆಗೆದು ಇಲ್ಲಿ ಬರೆಯುತ್ತೇವೆ :—

ಹೊಯ್ಸಳ ಶ್ರೀ ವೀರನಾರಸಿಂಹದೇವಂ ನಿಜರಾಜಧಾನಿ ದೋರಸಮುದ್ರದೊಳ್ ಸುಖಸಂಕಥಾವಿನೋದದಿಂ ಪೃಥ್ವೀರಾಜ್ಯಂಗೆಯ್ಯುತ್ತುಮಿರ್ದಂ. ಆ ಪ್ರತಾಪಚಕ್ರವರ್ತಿಯ ತೇಜಕ್ಕೆ ಕಾಯ್ಪಿನಂತೆ ಕ್ಷೇದುಗೆ ಕೂರ್ಪಿನಂತೆ ಮಂತ್ರಕ್ಕೆ ಶಕ್ತಿಯಂತೆ ರಾಜ್ಯಕ್ಕೆ ವಜ್ರಸನ್ನಾಹದಂತಭೇದಭಾವದಿಂ ಮನಸಂದು ಮಹಾಪ್ರಧಾನಪದವಿಗಧಿನಾಥನಾದ ತೊಲಗದಕಂಬಮೆಂಬ ಬಿರುದಧ್ವಜಾಡಂಬರಮನವಲಂಬಿಸಿದ ಸಂಗೀತಸಾರನ ಸಜ್ಜನಾಧಾರನ ಕಾವ್ಯಕರ್ತಾರನ ಕೀರ್ತಿಭರ್ತಾರನ ಕವಿಜನಾಭರಣನ ಸೂಕ್ತಿಸುಧಾಕಿರಣನ ವಿತರಣವಿಳಾಸನ ಲಕ್ಷ್ಮೀನಿವಾಸನ ವೈಷ್ಣವಚಕ್ರವರ್ತಿಯ ಜಗನ್ಮೋಹನಮೂರ್ತಿಯ ಸತ್ಯಸ್ವಭಾವನ ಪೋಲಾಳ್ವದೇವನ ಪೆರ್ಮೆಯ ವಿಸ್ತಾರಮಂ ಪೇಟ್ವೊಡೆ,

ಕರುವಿಟ್ಟಂ ಸತ್ಯದಿಂ ಕಣ್ವೆಱೆದನಸಮಸಾಹಿತ್ಯದಿಂ ಬಣ್ಣವಿಟ್ಟಂ।
ಸಿರಿಯಿಂ ಕೂರ್ತಾಯುವೊಯ್ದಂ ಪರಹಿತಚರಿತೋದ್ಯೋಗದಿಂ ಬರ್ಮನೆಂಬಂ॥

ತಿರೆ ಸತ್ಯಜ್ಞಾನಲಕ್ಷ್ಮೀಪರಹಿತಚರಿತೋದ್ಯೋಗದೊಳ್ ತಾನೆ ಧಾತ್ರೀ |
ಗುರುವಾದಂ ನಾರಸಿಂಹಾಧಿಪನ ಕಟಕದೊಳ್ ಮಂತ್ರಿ ಪೋಲಾಳ್ವದೇವಂ ||
ಬಗೆಗೇನುಂ ಕವಲಿಲ್ಲ ವಾಕ್ಯಮೆರಡಿಲ್ಲೌದಾರ್ಯದೊಳ್ ಮಾಂದ್ಯಮಿ |
ಲ್ಲ ಗುಣಪ್ರೀತಿಯೊಳಾತ್ಮಪಕ್ಷಪರಪಕ್ಷಾಸಂಗಮಿಲ್ಲಾಳ್ದನು ||
ಜ್ಞಗದೊಳ್ ಲಾಭದ ಲೋಭಮಿಲ್ಲ ಸಿರಿಯೊಳ್ ಸೊರ್ಕಿಲ್ಲ ಪೋಲಾಳ್ವನಂ |
ಪೊಗಳ್ವೀ ನ್ನನ್ನರನಣ್ಣ ಪೇಳ್ ಪೊಗಳ್ದುದೇ ಪಾಲುಂಡು ಮೇಲುಂಬುದೇ ||

---

## ಕವಿನಾಗದೇವ. 1224.

ಈತನು ಕಡೂರು 95 ನೆಯ ಶಾಸನವನ್ನು ಬರೆದುದಾಗಿ ಆ ಶಾಸನದ ಕೊನೆಯಲ್ಲಿರುವ ಈ ಪದ್ಯದಿಂದ ತಿಳಿಯುತ್ತದೆ:—

ಹರಿಹರಮಾಯಿದೇವಿಗಳ ಪುತ್ರನನಿಂದಿತವಾಜಿವಂಶಶೇ |
ಖರನಕಳಂಕಕೀರ್ತಿ ಕಲಿಕಾಲಬೃಹಸ್ಪತಿ ಸೋಮನಾಥಶಂ ||
ಕರರನುಜಂ ಬುಧರ್ ಪೊಗಳೆ ನಿರ್ಮಿಸಿದಂ ಕವಿನಾಗದೇವನೀ |
ಸ್ಥಿರತರಮಪ್ಪ ಶಾಸನಮನುತ್ತಮಕಾಶ್ಯಪಗೋತ್ರವರ್ಧನಂ ||

ಇದರಿಂದ ಈತನು ವಾಜಿವಂಶದ ಕಾಶ್ಯಪಗೋತ್ರದ ಹರಿಹರಮಾಯಿ ದೇವಿಗಳ ಪುತ್ರನೆಂದೂ ಸೋಮನಾಥ ಶಂಕರ ಇವರ ತಮ್ಮನೆಂದೂ ತಿಳಿಯುತ್ತದೆ. ಇವನಿಗೆ ಕಲಿಕಾಲಬೃಹಸ್ಪತಿಯೆಂಬ ಬಿರುದಿದ್ದಂತೆ ತೋರುತ್ತದೆ. ಈ ಶಾಸನವು ಶಕ 1145 ನೆಯ ಸ್ವಭಾನುಸಂವತ್ಸರದಲ್ಲಿ—ಎಂದರೆ 1224 ರಲ್ಲಿ—ಬರೆದುದು. ಇದರಲ್ಲಿ ಚೌಂಡಿಸೆಟ್ಟಿ ವಿಷ್ಣುಸಮುದ್ರದಲ್ಲಿ ಶಂಭುದೇವಸ್ಥಾನವನ್ನು ಕಟ್ಟಿಸಿ, ಆ ದೇವರಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ. ಈ ಶಾಸನದಿಂದ ಒಂದೆರಡು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

### ಆದಿವರಾಹ.

ಧರೆ ರುಚಿರಕೇತಕೀಮಧು | ಕರಿಪೋಲ್ ದಂತಾಗ್ರದೊಳ್ ವಿರಾಜಿಸೆ ಮಹಿಮಾ |
ಕರನಾದಾದಿವರಾಹಂ | ವರಾಹಮಂ ನಮಗೆ ಕೂರ್ತು ಮಾಳ್ಕನವರತಂ ||788||

### ವಿಷ್ಣುನೃಪ.

ಕಮಠಂ ಭೋಗೀಂದ್ರನಂ ಪನ್ನಗಪತಿ ಧರೆಯಂ ಧಾತ್ರಿ ತಾರಾದ್ರಿಯಂ ತಾ |
ರಮಹೀಧ್ರಂ ಪಾರ್ವತೀವಲ್ಲಭನನಭವನಾಬಾಲಶೀತಾಂಶುವಂ ಶ್ರೀ ||
ತಮಯೂಖಂ ಸತ್ಕಳಾಸ್ತೋಮಮನತಿ . . . ತಾಳ್ಪುವಂತಾಂತನೀವಿ |
ಕ್ಷಮಹೀಸಾಮ್ರಾಜ್ಯಲಕ್ಷ್ಮೀಭರಮನುರುಭುಜಾದಂಡದೊಳ್ ವಿಷ್ಣುಭೂಪಂ||789||

---

## ಮುನಿಚಂದ್ರ. 1229.

ಈತನು ಜೈನಕವಿ. ಇವನನ್ನು ಇವನ ಶಿಷ್ಯನಾದ ಎರಡನೆಯ **ಗುಣವರ್ಮನು** (ಸು. 1235) ತನ್ನ **ಪುಷ್ಪದಂತಪುರಾಣದಲ್ಲಿ** "ಉಭಯಕವಿಕಮಲಗರ್ಭ" ಎಂದು ಸ್ತುತಿಸಿದ್ದಾನೆ; **ಮಹಾಬಲಕವಿ** (1254) ತನ್ನ **ನೇಮಿನಾಥಪುರಾಣದಲ್ಲಿ** "ಅಖಿಳತರ್ಕತಂತ್ರಮಂತ್ರವ್ಯಾಕರಣಭರತಕಾವ್ಯನಾಟಕಪ್ರವೀಣಂ" ಎಂದು ಕೊಂಡಾಡಿದ್ದಾನೆ. "ಉಭಯಕವಿ" ಎಂಬುದರಿಂದ ಇವನು ಕನ್ನಡದಲ್ಲಿ ಬರೆದಿದ್ದರೂ ಇರಬಹುದು; ಆವ ಗ್ರಂಥಗಳನ್ನು ಬರೆದಿದ್ದಾನೆಯೋ ತಿಳಿಯದು.

ಬಾಂಬೆ ಬ್ರಾಂಚ್ ರಾಯಲ್ ಏಷ್ಯಾಟಿಕ್ ಸೊಸೈಟಿ ಜರ್ನಲಿನಲ್ಲಿ ಮುದ್ರಿತವಾಗಿರುವ, ಶಕ 1151 ರಲ್ಲಿ—ಎಂದರೆ 1229 ರಲ್ಲಿ—ಬರೆದ ಸೌಂದತ್ತಿಯ ಶಾಸನದಿಂದ[1] ಈತನು ರಟ್ಟರಾಜನಾದ ಕಾರ್ತವೀರ್ಯನಿಗೆ ಗುರುವಾಗಿದ್ದಂತೆಯೂ ಆ ರಾಜನ ಮಗನಾದ ಲಕ್ಷ್ಮೀದೇವನಿಗೆ ಶಸ್ತ್ರಶಾಸ್ತ್ರಶಿಕ್ಷಾಗುರುವಾಗಿಯೂ ಸಚಿವನಾಗಿಯೂ ಇದ್ದಂತೆಯೂ ಬಹಳ ಪರಾಕ್ರಮಶಾಲಿಯಾಗಿ ಪರರಾಜರನ್ನು ಅಡಗಿಸಿ ರಟ್ಟರಾಜ್ಯಪ್ರತಿಷ್ಠಾಚಾರ್ಯನೆಂಬ ಬಿರುದನ್ನು ವಹಿಸಿದ್ದಂತೆಯೂ ಇವನಲ್ಲಿ ಶಾಂತಿನಾಥ, ನಾಗ, ಮಲ್ಲಿಕಾರ್ಜುನ ಎಂಬವರು ಅಮಾತ್ಯರಾಗಿದ್ದಂತೆಯೂ ತಿಳಿಯಬರುತ್ತದೆ.

ಈತನನ್ನು ಸ್ತುತಿಸುವ ಶಾಸನಪದ್ಯಗಳನ್ನು ಕೆಳಗೆ ಬರೆದಿದ್ದೇವೆ:—

ಕುಮುದಾನಂದತೆಯಿಂದಮೊಂದಿ ಮುನಿಚಂದ್ರಂ ಶತ್ರುಭೂಭೃನ್ಮುಖಾ |
ಬ್ಜಮನಿರ್ಪೀಡಿಪ ತೇಜದಿಂದೆ ಮುನಿಚಂದ್ರಂ ಅಟ್ಟರಾಜ್ಯಾಬ್ಧಿಯಂ ||
ಕ್ರಮದಿಂ ದಿಕ್ತಟಮಂ ಪಳಂಚಲೆವಿನಂ ಪೆರ್ಚಿಪ್ಪ ತನ್ನೊಂದು ವಿ |
ಕ್ರಮದಿಂದಂ ಮುನಿಚಂದ್ರನಿಂತು ಮುನಿಚಂದ್ರಂ ಚಂದ್ರಸಾಮಾನ್ವಿತಂ ||
ಗುರುವಾದಂ ಕಾರ್ತವೀರ್ಯಕ್ಷಿತಿಪತಿಗೆನಸುಂ ಮಂತ್ರದಿಂ ತಾನೆ ಶಿಕ್ಷಾ |
ಗುರುವಾದಂ ಶಸ್ತ್ರಶಾಸ್ತ್ರಸ್ಥಿರಪರಿಣತಿಯೊಳ್ ಲಕ್ಷ್ಮಿದೇವಂಗೆ ದೀಕ್ಷಾ ||
ಗುರುವಾದಂ ಪ್ರಾಜ್ಯರಾಜ್ಯಾಪಹರಣದೆ ಪರಕ್ಷೋಣಿಪಾಲರ್ಗೆನಲ್ ಕೇಳ್ |
ಗುರುಶಬ್ದಂ ವಾಚ್ಯಮಾಯ್ತಲ್ಲದೆ ವರಮುನಿಚಂದ್ರಂಗಿದೇಂ ದೇಸೆಗಾಯ್ತೇ ||

ಈತನ ವಿಷಯವಾಗಿ **ಮಹಾಬಲಕವಿ** ಹೀಗೆ ಬರೆದಿದ್ದಾನೆ:—

ಮತ್ತಮಾಜಗತ್ತ್ರಯಪವಿತ್ರಮೆನಿಪ ಕಾಣೂರ್ಗಣಾಗ್ರಣಿಗಳೊಳಗ್ರಗಣ್ಯನುಂ ಅಗಣ್ಯಪುಣ್ಯನುಂ ರಾಜಗುರುತಾರಾಜೀವಿನೀವಾ . . ನೀಕಾಂತನುಂ ವಿರೋಧಿಬಲಕೃತಾಂತನುಂ ಶ್ರೀಮದಘುಪಟ್ಟತೀರ್ಥಚತುರ್ಮುಖಜಿನೇಂದ್ರಮಂದಿರಾದ್ಯನೇಕ ಜಿನಮಂದಿರೋದ್ಧಾರ

---

1. Vol. X, 260.

ಕನುಂ ಜಟ್ಟರಾಜ್ಯವಿಸ್ತಾರಕನುಮಖಿಲತರ್ಕತಂತ್ರಮಂತ್ರವ್ಯಾಕರಣಭರತಕಾವ್ಯನಾಟಕಪ್ರವೀಣನುಂ ಚರಣಶರಣಾಯಾತಖ್ಯಾತಭೂಪಾಲರಾಜಾಳಿಕೃತತ್ರಾಣನುಮೆನಿಸಿ

ಪೊಗಟೆ ಜಗಂ ನೆಗಟ್ತೆವಡೆದಂ ಮುನಿಚಂದ್ರನಮಾತ್ಯಮಂಡನಂ।
ನೆಗಟ್ದ ಬಲಂ ಜಗಕ್ಕೆ ಮಿಗಿಲುನ್ನತಿ ಮೇರುವಿನಿಂ ಮಿಗಿಲ್ ಜಯಂ॥
ಮಿಗಿಲಿಭವೈರಿಗಾಶೆಗೆ ನಿಜೋಜ್ಜ್ವಲಕೀರ್ತಿ ಮಿಗಿಲ್ ಕರಂ ಸುರ।
ದ್ರುಗೆ ಮಿಗಿಲರ್ಥನೀತಿ ಮಿಗಿಲಾದಿವಿಜಾಧಿಪಮಂತ್ರಿಗೆಂಬಿನಂ॥

---

## ಮಾದಿರಾಜ. 1229.

ಈತನು ಬಾಂಬೆ ಬ್ರಾಂಚ್ ರಾಯಲ್ ಏಷ್ಯಾಟಿಕ್ ಸೊಸೈಟಿ ಜರ್ನಲಿನಲ್ಲಿ ಕೊಟ್ಟಿರುವ ಸೌಂದತ್ತಿಯ ಶಾಸನವನ್ನು [1] ಬರೆದುದಾಗಿ ಅದರ ಅಂತ್ಯದಲ್ಲಿರುವ

ಎಸೆವೀಶಾಸನಮಂ ವಿರ। ಚಿಸಿ ಬರೆದಂ ಪೂರ್ವಜನ್ಮದೊಳ್ ಸುಕೃತಮನಾ।
ರ್ಜಿಸಿ ಕೇಶಿರಾಜವಿಭುವಿನ। ಸಿಸುವೆನಿಸಿದ ಮಾದಿರಾಜನಾವಿಭುಮತದಿಂ॥

ಎಂಬ ಪದ್ಯದಿಂದ ತಿಳಿಯುತ್ತದೆ.

ಈ ಶಾಸನದಲ್ಲಿ ರಟ್ಟಕುಲಭೂಷಣ, ಮಂಡಲಿಕಗಂಡತಳಪ್ರಹಾರಿ, ಸಾಹಸೋತ್ತುಂಗ, ಬೊಪ್ಪನಸಿಂಗ ಮೊದಲಾದ ಬಿರುದುಗಳುಳ್ಳ ಲಕ್ಷ್ಮೀದೇವರಸನು ವೇಣುಗ್ರಾಮದ ನೆಲೆವೀಡಿನಲ್ಲಿರೆ, ಶಕ 1151 ರಲ್ಲಿ—ಎಂದರೆ 1229 ರಲ್ಲಿ—ಮುನಿಚಂದ್ರನ ನಿಯಾಮದಿಂ ಈ ಕವಿಯ ತಂದೆಯಾದ ಕೇಶವರಾಜನು ಮಲ್ಲಿನಾಥದೇವರಿಗಾಗಿ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ಈ ಶಾಸನದ ಬಂಧವನ್ನು ನೋಡಿದರೆ ಈ ಮಾದಿರಾಜನು ಒಳ್ಳೆಯ ಕವಿಯೆಂಬುದರಲ್ಲಿ ಸಂಶಯವಿಲ್ಲ. ಈತನ ವಿಷಯವಾಗಿ ಈ ಶಾಸನದಿಂದ ಈಯಂಶಗಳು ತಿಳಿಯುತ್ತವೆ :—

ಈತನು ಸಾಮಾಸಿಗಕುಲದ ಅತ್ರಿಗೋತ್ರದ ಬ್ರಾಹ್ಮಣನು. ಈ ವಂಶದ ಮೂಲಪುರುಷನು ರುದ್ರಭಟ್ಟಕವೀಂದ್ರನು. ಇವನು ತನ್ನ ಕವಿತೆಯಿಂದ ಕನ್ನರನನ್ನು (939–968) ಮೆಚ್ಚಿಸಿ, ಅವನಿಂದ 18 ಗ್ರಾಮಗಳನ್ನು ಬಹುಮಾನವಾಗಿ ಪಡೆದನು. ಈ ರುದ್ರಭಟ್ಟನು ತನ್ನ ಹೆಸರಿನ 'ಭ' ಎಂಬಕ್ಷರವನ್ನು 1,000 ಹೊನ್ನಿಗೆ ಅಡವಿಟ್ಟು, ಅದನ್ನು ಬಿಡಿಸಿಕೊಳ್ಳುವ ವರೆಗೆ ರುದ್ರಟ ಎಂಬ ಹೆಸರನ್ನು ವಹಿಸಿದ್ದನು.[2] ಈತನ ವಂಶದವರಲ್ಲಿ ಕಲಿದೇವ

---

1. Vol. X, 260.

2. ಇವನೇ ಸಂಸ್ಕೃತದಲ್ಲಿ ಕಾವ್ಯಾಲಂಕಾರವನ್ನು ಬರೆದಿರುವ ರುದ್ರಟನಾಗಿರಬಹುದು ಈ ರುದ್ರಟನ ಚಕ್ರಬಂಧಪದ್ಯದಿಂದ ಉದ್ಧಾರವಾಗುವ ಸ್ವವಿಷಯಕವಾದ ಶ್ಲೋಕದಲ್ಲಿ 'ಸಾಮಾಜಾ' ಎಂಬ ವಿಶೇಷಣವಿದೆ. ಇದು ಇಲ್ಲಿ ಬಂದಿರುವ 'ಸಾಮಾಸಿಗ' ಎಂಬುದಕ್ಕೆ ಪರ್ಯಾಯಶಬ್ದವಾಗಿರಬಹುದೆಂದು ತೋರುತ್ತದೆ.

ನೆಂಬವನು ಪ್ರಸಿದ್ಧನಾಗಿದ್ದನು· ಅವನ ಮಗ ಬನಿಹಟ್ಟಿ ಮೊದಲಾದ 18 ಪುರಗಳಿಗೆ ಪ್ರಭುವಾದ ಶ್ರೀಧರ; ಆತನ ಪುತ್ರ ಮಹದೇವ; ಅವನ ಸುತ ಶ್ರೀಧರ; ಆತನ ಮಗ ಮಹದೇವ ಅಥವಾ ಮಾಯಿದೇವ; ಅವನ ಮಗ ರಾಜಗುರು ಮುನಿಚಂದ್ರನ ಮಂತ್ರಿಯಾಗಿದ್ದ ಮಲ್ಲಿಕಾರ್ಜುನ; ಇವನ ಸುತ ಕೇಶಿರಾಜ, ಇವನ ಹೆಂಡತಿ ಮಾಳಲದೇವಿ; ಇವರ ಮಗನೇ ಈ ಶಾಸನವನ್ನು ಬರೆದ ಮಾದಿರಾಜ. ಈ ಮಾದಿರಾಜನಿಗೆ ಮಲ್ಲಿಕಾರ್ಜುನ ಎಂಬ ಸಹೋದರನಿದ್ದನು. ಇವರಿಬ್ಬರೂ "ಶ್ರೀರಟ್ಟರಾಜ್ಯಪ್ರತಿಷ್ಠಾಚಾರ್ಯನುಂ ಅರಿಬಿರುದಮಂಡಳಿಕಜವರಾಜನುಮಪ್ಪ ಶ್ರೀಮದ್ರಾಜಗುರುಗಳ್ ಮುನಿಚಂದ್ರದೇವರ ನೋಲಗಿಸಿ ಕೂಂಡಿಮೂಱುಸಾಸಿರದ ಬೞಿಯ ಬಾಡಂ ಮುನಿಚಂದ್ರದೇವರಾಳ್ಕೆ ವಾಡಂ ಸುಗಂಧವರ್ತಿಯ ಹನ್ನೆರಡುಮಂ ತದಾಜ್ಞೆಯಿಂ ಪ್ರತಿಪಾಳಿಸುತ್ತುಮಿರ್ದರ್."

## ಈ ಶಾಸನದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

### ರುದ್ರಭಟ್ಟ.

ತನ್ನಯ ವಂಶಜರ್ಕಳ್ಮುದಿಂಗಳೊಳುದ್ಧಕವೀಶರಪ್ಪ ವಾ।
ಕ್ಯೋನ್ನತಿಯಿಂ ಸರಸ್ವತಿಯಿನೂರ್ ಪದಿನೆಂಟಱೊಳಂ ಪ್ರಭುತ್ವಮಂ॥
ಕನ್ನರನಿಂದಮುಂದು ಪಡೆದಂ ದೊರೆಯಾರ್ ಕವಿತಾವಿಳಾಸದೊಂ।
ದುನ್ನತಿಯೊಳ್ ಪ್ರಭುತ್ವದ ನೆಗೞ್ತೆಯೊಳಾವಿಭುರುದ್ರಭಟ್ಟನೊಳ್ ॥ 790 ॥

### ಕವಿಯ ತಾಯಿ ಮಾಳಲದೇವಿ.

ಮನೆಯೊಳಗೇನುಳ್ಳೊಡಮಿ। ಲ್ಲೆನುತುಂ ಸ್ವಯಮರ್ಥಭೂರಿಯಾಗುತ್ತಿರ್ಪಂ।
ಗನೆಯರ್ ಮಾಳಲದೇವಿಯ। ವಿನಯಾಂಭೋನಿಧಿಯ ಗುಣದೊಳೆಂತೆಣೆಯ
[ಪ್ಪರ್ ॥ 791 ॥

ಮನೆಯೊಳಗುಳ್ಳೊಡಂ ಮಡಗಿ ತತ್ಪತಿಗಂ ಮನೆಮಕ್ಕಳಿಂಗಮೆ।
ಳ್ಳನಿತುಮನಿಕ್ಕಲಾಜದೆ ಕೆಲಂ ಕಡೆಯುಂ ಸುಡೆನಲ್ಕೆ ಜೀವಿಪಂ॥
ಗನೆಯರನೇಂ ಕುಲಾಂಗನೆಯರೆಂದೆನಲಕ್ಕುಮೆ ಕೇಶಿರಾಜನಂ।
ಗನೆ ಪತಿಭಕ್ತೆ ಚಾರುಗುಣಯುಕ್ತೆ ಕುಲಾಂಗನೆ ಭೂತಳಾಗ್ರದೊಳ್ ॥ 792 ॥

ಕುಟಿಲೆ ಕುಮಾರ್ಗೆ ಕುತ್ಸಿತೆ ಕುರೂಪೆ ಕುಭಾಗ್ಯೆ ಕುಶೀಲೆ ಜಿಹ್ವಲಂ।
ಪಟಿ ಶಠೆ ಧೂರ್ತೆ ದುರ್ಗುಣೆ ದುರನ್ವಿತೆ ದುರ್ಜನೆ ದುಷ್ಟೆ ಕಷ್ಟೆಯೆಂ॥
ಬಟಮಟಕಾರ್ತಿಯರ್ ಸತಿಯರೇ ಗುಣದೊಳ್ ಸಲೆ ಮಾಳಿಯವ್ವೆಯುಂ।
ಗುಟಕೆಣೆಯಾಗರೆಂದೊಡಿತರಾಂಗನೆಯರ್ ಭುವನಾಂತರಾಳದೊಳ್ ॥ 793 ॥

ಪುರುಷರನೇಳಿದಮುಂ ಮಾ। ೞ್ಪರಿದುಂ ಪಿರಿದಾಗೆ ಬಗೆವ ಪರರಂ ಮಾಯಾ।
ಚರಣದೊಳೆಸಗುವ ಸತಿಯರ್। ದೊರೆಯೇ ಪೇೞ್ ಮಾಳಿಯವ್ವೆಯೊಳ್ ಕು
[ತ್ಸಿತೆಯರ್ ॥ 794 ॥

ಅಸವನೆಗಂಗಳಕ್ಕೆ ? ತಲೆವಾಗಿಲೆಗಚ್ಚನೆ ನೋಡಲೇಱಲಿಂ ।
ಗೊಸಗೆಗೆ ನೋಂಪಿಗಂಗಡಿಗೆ ಬಾಡಿನ ಸಂತೆಗೆ ಬಾಯಿನಕ್ಕೆ ಪೋ ॥
ಪೆಸಕದೆ ಪಾಣ್ಬರೊಳ್ ನೆರೆವರಂ ಕುಲನಾರಿಯರೆಂಬುದೇ ವಿಚಾ ।
ರಿಸೆ ಪತಿಭಕ್ತಿವೆತ್ತೆಸೆವ ಮಾಳಲದೇವಿಯನಲ್ಲದನ್ಯರಂ ॥ 795 ॥

ಗಾಳುತನದಿಂದೆ ಪುರುಷರ। ನೇಳಿದಮಂ ಮಾಳ್ಪ ದುಶ್ಚರಿತ್ರೆಯರಂ ವಾ ।
ಚಾಳೆಯರಂ ಕಂಡಘತತಿ । ಮಾಳಲದೇವಿಯ ಗುಣಾನುಕಥನದೆ ಕಿಡುಗುಂ ॥ 796 ॥

ಪತಿ ಬಸದಕ್ಕುಮಿಂತು ತಮಗೆಂದು ದುರೌಷಧಮಂ ಪ್ರಯೋಗಿಪರ್ ।
ಕೃತಕೆಯರಂತಱಂದೆ ಪುರುಷರ್ ಕ್ಷಯಕಾಮಲೆಪಾಂಡುಗುಲ್ಮದಿಂ ॥
ದತಿಕೃಶರಾಗೆ ಬಿಚ್ಚಟಿಸುತಿರ್ಪವರೆಂತೊ ಕುಲಾಂಗನಾಜನಂ ।
ಪತಿಹಿತೆ ಮಾಳಿಯವ್ವೆಯೆ ಕುಲಾಂಗನೆ ವಾರ್ಧಿಪರೀತಧಾತ್ರಿಯೊಳ್ ॥ 797 ॥

ಮನೆಗೀಬಂದರೆ ಬಿರ್ದಿನ । ರೆನಲೊಳಯಿಂಕೋಡಿಪೋಗಿಯಡಗುವ ಸಮುಖಿಂ ।
ತನಗಾಡೊಡೆ ನೀವಾರೆಂ । ಬನಲೆಯರೀಮಾಳಿಯವ್ವೆಗೆಂತೆಣೆಯಪ್ಪರ್ ॥ 798 ॥

---

## ಶಿಶುಮಾಯಣ. ?1233.

ಈತನು ತ್ರಿಪುರದಹನಸಾಂಗತ್ಯ, ಅಂಜನಾಚರಿತ್ರೆ ಎಂಬ ಗ್ರಂಥಗಳನ್ನು ಬರೆದಿದ್ದಾನೆ. ಇವನು ಜೈನಕವಿ.

ಇವನ ಗ್ರಂಥಗಳಿಂದ ಇವನ ವಿಷಯವಾಗಿ ಈ ಸಂಗತಿಗಳು ತಿಳಿಯ ಬರುತ್ತವೆ:—

ಹೊಯ್ಸಳದೇಶದಲ್ಲಿ ಕಾವೇರಿಯ ಕಾಲುವೆಯ ಸಮೀಪದಲ್ಲಿರುವ ನಯನಾಪುರವೆಂಬ ಊರಿನಲ್ಲಿ ದೇವರಾಜನ ಇಷ್ಟಾನುಸಾರವಾಗಿ ರಾಜರಾಜನು ಒಂದು ನೇಮಿಜಿನಾಲಯವನ್ನು ಕಟ್ಟಿಸಿದನು. ಅದೇ ಊರಿನಲ್ಲಿ ಮಾಯಣಸೆಟ್ಟಿಯೆಂಬ ಒಬ್ಬ 'ವಣಿಗ್ವರ' ನಿದ್ದನು. ಅವನ ಹೆಂಡತಿ ತಾಮರಸಿ; ಮಗ ಬೊಮ್ಮಸೆಟ್ಟಿ. ಈತನು—"ಮಾನವಪತಿಗಳ ಸಭೆಯೊಳು ರತ್ನಸಮಾನದೀಪದವೊಲೊಪ್ಪುವನು." ಇವನ ಹೆಂಡತಿ ನೇಮಾಂಬಿಕೆ; ಮಗ ಕವಿ ಶಿಶುಮಾಯಣ. ಇವನ ಗುರು ಕಾಣೂರ್ಗಣದ ಭಾನುಮುನಿ. ಬೆಳುಕೆರೆಯ ಪುರದರಸಾದ ಗುಮ್ಮಟದೇವನು ಹೇಳಿನಲು ಕವಿ ಅಂಜನಾಚರಿತ್ರೆಯನ್ನು ಬರೆದನು.

ತ್ರಿಪುರದಹನಸಾಂಗತ್ಯವು

ಶಕವರ್ಷದ ಸಾವಿರದನೂಱಱೊಳು । ತ್ಸಕಲವಾದಾಱುವತ್ಸರದ ।
ಪ್ರಕಟಿತಪುತ್ರವರ್ಷದ ಮಾಘಶುದ್ಧದಿ । ನಕಳಂಕಪಾದ್ಯದೊಳಾಯ್ತು ॥

ಎಂದು ಹೇಳಿದೆ. ಪುತ್ರವರ್ಷವೆಂದರೆ ನಂದನವರ್ಷವೆಂದು ತೋರುತ್ತದೆ. ಆದರೆ 1106 ನೆಯ ವರ್ಷವು ಕ್ರೋಧಿಯಾಗುತ್ತದೆ. ಉತ್ಕಲ ಎಂಬ ಪದಕ್ಕೆ ವಿಶೇಷಾರ್ಥವೇನಾದರೂ ಇರಬಹುದೋ ಏನೋ ತಿಳಿಯದು. ಶಕ 1100 ವರ್ಷಗಳಾದ ಮೇಲೆ ಪ್ರಭವಾದಿವತ್ಸರಗಳಲ್ಲಿ ಮಿಕ್ಕ ಕೊನೆಯ 6 ವರ್ಷಗಳಲ್ಲಿಯ ನಂದನ ಎಂದು ಅರ್ಥಮಾಡಿದರೆ ಶಕ 1154 (1233) ಆಗುತ್ತದೆ. ಕವಿಯ ಆಶಯವು ಇದೇ ಆಗಿರಬಹುದೋ ಏನೋ ತಿಳಿಯದು. ಈತನು ಜನ್ನನನ್ನು (1230) ಸ್ತುತಿಸುವುದರಿಂದ ಸ್ವಲ್ಪ ಹೆಚ್ಚು ಕಡಮೆ ಅವನ ಸಮಕಾಲದವನಾಗಿದ್ದಿರಬಹುದು. ಒಬ್ಬ ಬೆಳುಕರೆಯಧಿಪನಾದ ಗುಮ್ಮಟ್ಟನು 1313 ರಲ್ಲಿದ್ದಂತೆ ಶ್ರ. ಬೆ. 65 ನೆಯ ಶಾಸನದಿಂದ ತಿಳಿಯುತ್ತದೆ. ಕವಿ ಹೇಳುವ ಗುಮ್ಮಟದೇವನು ಇವನೇ ಆಗಿದ್ದಪಕ್ಷದಲ್ಲಿ ಕವಿಯ ಕಾಲವು ಪದ್ಯದಲ್ಲಿ ಕೊಟ್ಟಿರುವ ಕಾಲಕ್ಕಿಂತ 80 ವರ್ಷ ಈಚೆಯಾಗುತ್ತದೆ. ಆದುದರಿಂದ ಕವಿ ಹೇಳುವ ಗುಮ್ಮಟನು ಶಾಸನೋಕ್ತನಾದ ಗುಮ್ಮಟ್ಟನ ಪಿತಾಮಹನಾಗಿರಬಹುದೆಂದು ತೋರುತ್ತದೆ.

ಈತನಿಗೆ ಹಸುಳೆಮಾಯಣ, ತರಳಮಾಯಣ ಎಂಬ ಹೆಸರುಗಳೂ ಉಂಟು. ಈ ಹೆಸರಿಗೆ ಕಾರಣವನ್ನು ಈ ಪದ್ಯದಲ್ಲಿ ಸೂಚಿಸಿದ್ದಾನೆ:—

ವಸುಧೆಯೊಳುಳ್ಳ ಭವ್ಯರುಗಳಿಗೆಲ್ಲಗ್ಗ । ಿಸುವಾಗಿಪ್ಪುದಱಿಂದ ।
ಉಸುರುವ ಪದಪದ್ಯದೊಳು ತನ್ನ ಪೆಸರನು । ಹಸುಳೆಮಾಯಣನೆಂದು ಇಡುವ ॥

ಪೂರ್ವಕವಿಗಳನ್ನು ಈ ಪದ್ಯದಲ್ಲಿ ಸ್ತುತಿಸಿದ್ದಾನೆ:—

ರನ್ನನ ಹೊನ್ನನ ಜನ್ನಮಯ್ಯನ ಚತು । ರೋನ್ನತಕವಿತಾರ್ಣವನ ।
ಸನ್ನುತಕವಿಪಂಪರಾಜಮೊದಲಾದರ । ಚೆನ್ನಡಿಗಳಿಗೆಱಗುವೆನು ॥

ತನ್ನ ಕವಿತಾಚಾತುರಿಯನ್ನು ಈ ಪದ್ಯದಲ್ಲಿ ಹೇಳಿಕೊಂಡಿದ್ದಾನೆ:—

ಹಸುಳೆಮಾಯಣನುಸುರಿದ ಕೃತಿಯೊಳು ನವ । ರಸ ಪರಿಪೂರಿತಮಾಗಿ ।
ಒಸರುವುದಾರಸಭೇದವನಱಿದು ಸೇ । ವಿಸುವುದು ರಸಿಕಕೋವಿದರು ॥

ಇವನ ಗ್ರಂಥಗಳಲ್ಲಿ—

## 1. ಅಂಜನಾಚರಿತ್ರೆ.

ಇದು ಸಾಂಗತ್ಯವೆಂಬ ಹಾಡಿನ ರೂಪವಾದ ಗ್ರಂಥವು; 15 ಸಂಧಿಗಳಾಗಿ ಭಾಗಿಸಲ್ಪಟ್ಟಿದೆ; ಪದ್ಯ 6,000.

ಅರುಹನ ಮತದೊಳೆಸೆವ ಪದ್ಮಚರಿತವ । ವಿರಚಿಸಿದನು ರವಿಷೇಣ ।
ಪರಮಮುನೀಂದ್ರ ಗೀರ್ವಾಣಭಾಷೆಯೊಳದ । ನೊರೆವೊಡಿನ್ನಾರಳವಹುದು ।
ಅದಱೊಳಂಜನೆಯೆಂಬ ಸುದತಿಯ ಚರಿತೆಯ । ನೊದವಿ ಪೇಟ್ದನು ಕನ್ನಡದಿಂ ॥

ಎಂಬುದರಿಂದ ಈ ಗ್ರಂಥವು ರವಿಷೇಣನು ಸಂಸ್ಕೃತದಲ್ಲಿ ಬರೆದಿರುವ ಪದ್ಮಚರಿತ್ರದ ಒಂದು ಭಾಗವೆಂದು ತಿಳಿಯುತ್ತದೆ. ಇದರ ಉತ್ಕೃಷ್ಟತೆಯನ್ನು ಕವಿ ಈ ಪದ್ಯದಲ್ಲಿ ಹೇಳಿದ್ದಾನೆ :—

ಅಂಜನಾಚರಿತವೆಂದೆಂಬ ನಾಮವು ಕೃತಿ । ಗೆಂಜಲಲ್ಲನ್ವರ್ಥಕವು ।
ಕಂಜಭವನ ರಾಣಿಯ ನಯನದೊಳಿಸೆ । ವಂಜನವಾದ ಕಾರಣದಿ ॥

ಗ್ರಂಥಾವತಾರದಲ್ಲಿ 24 ಜಿನರನ್ನು ಸ್ತುತಿಸಿದ್ದಾನೆ. ಬಳಿಕ ಗುಮ್ಮಟೇಶ, ಭುಜಬಲಿಪುರದ ಭುಜಬಲಿ, ಸಿದ್ಧಾದಿಗಳು, ಯಕ್ಷಿಯಕ್ಷರು, ಸರಸ್ವತಿ, ಜ್ವಾಲಾಮಾಲಿನಿ, ಪದ್ಮಾವತಿ, ಬಾಹುಬಲಿಪದಸೇವಕ ಬ್ರಹ್ಮ ಇವರುಗಳನ್ನು ಸ್ಮರಿಸಿ ತರುವಾಯ ಮಾಘಣಂದಿಮೊದಲುಗೊಂಡು ಪಂಡಿತನವರೆಗೆ ಜೈನಗುರುಗಳನ್ನು ಕ್ರಮವಾಗಿ ಹೊಗಳಿದ್ದಾನೆ.[1]

ನಮಗೆ ದೊರೆತಿರುವ ಸಾಂಗತ್ಯಕವಿಗಳಲ್ಲಿ ಈತನೇ ಮೊದಲನೆಯವನು; ಸಾಂಗತ್ಯದಲ್ಲಿ ಅನೇಕ ಜೈನ ವೀರಶೈವ ಬ್ರಾಹ್ಮಣ ಗ್ರಂಥಗಳು ಹುಟ್ಟಿವೆ. ಸುಮಾರು 13 ನೆಯ ಶತಮಾನದಲ್ಲಿ ಹಾಡಿನ ರೂಪವಾದ ಈ ಸಾಂಗತ್ಯ ಗ್ರಂಥಗಳ ರಚನೆ ಆರಂಭವಾದಂತೆ ತೋರುತ್ತದೆ.

ಈ ಗ್ರಂಥದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ :—

### ಅಡಕೆ.

ಇಳೆಯೆಂಬ ಸತಿಗಜ ಪೊಳೆವ ಪಚ್ಚೆಯ ಚತ್ರ । ಗಳನು ನಿರ್ಮಿಸಿದನೆಂಬಂತೆ ।
ಪಲವು ಹೊಂಬಾಳೆಯ ತಳೆದು ಪೂಗಾಳಿಗ । ಳಲಘುಫಲದಿನೊಪ್ಪುತಿಹುವು ॥ 799 ॥

### ಬಾಳೆ.

ಕಂದಿನೊಳಗೆ ಹುಟ್ಟಿ ಕಂದರೆಲ್ಲರ ಬಿಟ್ಟು । ಮುಂದಲೆಯನು ಕೊಟ್ಟು ಜನದ ।
ನಿಂದೆಯೊಳೊಂದಿ ಬಾಡುವ ಬಾಲೆ ಸುಡಲೆಂದು । ನೊಂದೆಱಗಿದ ಬಾಳೆಯಿಹುವು ॥ 800 ॥

1. ಮಾಘಣಂದಿ. ಜಿನಸೇನ, ಸಮಂತಭದ್ರ, ನೇಮಿಚಂದ್ರ, ರಾಮಚಂದ್ರ, ಪ್ರಭಾಚಂದ್ರ, ಸೋಮಜಿದಕಲಂಕಚಂದ್ರ, ಜಿನಚಂದ್ರ, ಭದ್ರಬಾಹು, ಸುಭದ್ರಾರ್ಯ, ಪರವಾದಿಧ್ವಂಸಕಪಂಡಿತಯೋಗಿ, ವಾದಿವಿದ್ಯಾನಂದ, ವರ್ಧಮಾನ, ವೀರಸೇನ, ಕಾಣೂರ್ಗಣದ ದೇವಕೀರ್ತಿ, ಶ್ರುತಕೀರ್ತಿ, ವಿಜಯಸುಕೀರ್ತಿ, ಭೂಭೂಷಣ, ರಾಮಚಂದ್ರ, ಪ್ರಭೇಂದು, ಇಂದುಕೀರ್ತಿ, ಸಾಸಿರಕೀರ್ತಿ, ದೇಶೀಯಗಣದ ಚಂಗದೇಶದ ಪ್ರಭೇಂದು, ಸಮಂತಭದ್ರ, ಕಾಣೂರ್ಗಣದ ಭಾನುಮುನಿ, ಯತಿವರ್ಧಮಾನ, ನೇಮಿಚಂದ್ರ, ಗುಮ್ಮಟದೇವಸೂರಿ, ಪಂಡಿತ.

ಹುಣಿಸೆ.

ಒಮ್ಮೆ ಫಲವನಿತ್ತು ಸುಮ್ಮನೆಯಿಹ ತರು । ವೆಮ್ಮೊಳು ಮಚ್ಚರಿಸಿದೊಡೆ ।
ಹಮ್ಮು ಮುಱವೆನೆಂಬ ಹುಣಿಸೆಯ ಮರಗಳು । ಸುಮ್ಮಾನದಿ ಬೆಳೆದಿಹುವು ॥ 801 ॥

## 2. ತ್ರಿಪುರದಹನಸಾಂಗತ್ಯ.

ಇದೂ ಸಾಂಗತ್ಯದಲ್ಲಿ ಬರೆದಿದೆ; ಪದ್ಯ 281. ಈ ಗ್ರಂಥದಲ್ಲಿ "ಜನನ ಜರಾಮರಣಗಳೆಂಬ ಪೆಸರಿಂದ ಘನತರವಹ ಮೂಱು ಪುರವನು ಜ್ಯೋತಿ ರೂಪವ ತಳೆದಾದೀಶ್ವರ ಸುಟ್ಟ ಕೌತುಕವನು ಪೇೞುವೆನು" ಎಂದು ಕವಿ ಹೇಳುತ್ತಾನೆ.

ಗ್ರಂಥಾವತಾರದಲ್ಲಿ ಕವಿ ಚಂದ್ರನಾಥನನ್ನು ಸ್ತುತಿಸಿ ಬಳಿಕ ಶಾಂತಿಜಿನ, ನೇಮಿ, ವರ್ಧಮಾನ ಮುಂತಾದ 24 ಜಿನರನ್ನೂ ಬೆಳ್ಗೊಳದ ಭುಜಬಲಿಯನ್ನೂ ಸಿದ್ಧರು, ಆಚಾರ್ಯರು, ಶಾರದೆ, ಭಾನುಮುನಿ ಇವರುಗಳನ್ನೂ ಸ್ಮರಿಸಿದ್ದಾನೆ.

ಈ ಗ್ರಂಥದಿಂದ ಒಂದು ಪದ್ಯವನ್ನು ಉದ್ಧರಿಸಿ ಬರೆಯುತ್ತೇವೆ:—

ಬ್ರಾಹ್ಮಣಪರಿಹಾಸ

ಪದಿನಾಲ್ಕು ಭುವನವೆಲ್ಲವು ಪುರುಷೋತ್ತಮ । ನುದರದೊಳಿರುತಿರ್ದು ತಾನು ।
ಅದಟರಕ್ಕಸನ ಮೇಲಿರದೆ ಸಂಗ್ರಾಮವ । ನೊದವಿದುದಿದು ಚಿತ್ರವಲ್ತೇ ॥ 802 ॥

---

## ಸೋಮನಾಥಪಂಡಿತ. 1234.

ಈತನು ಅರಸಿಯಕೆರೆಯ 123 ನೆಯ ಶಾಸನವನ್ನು ಬರೆದುದಾಗಿ ಆ ಶಾಸನದ ಕೊನೆಯಲ್ಲಿರುವ "ಶ್ರೀಮದಾನಂದಬೋಧಪ್ರಭುಗಳ ದಾಸ ಗ..ಕುಳ ತಿಳಕ ಸುಕವಿಕಂಠಾಭರಣ ಸೋಮನಾಥಪಂಡಿತರು ಪದ್ಯಂಗಳ ಹೇೞಿದರು" ಎಂಬ ವಾಕ್ಯದಿಂದ ತಿಳಿಯುತ್ತದೆ.

ಈ ಶಾಸನದ ಬಂಧದಿಂದಲೂ "ಸುಕವಿಕಂಠಾಭರಣ" ಎಂಬ ಈತನ ಬಿರುದಿನಿಂದಲೂ ಇವನು ದೊಡ್ಡ ಕವಿಯಾಗಿದ್ದನೆಂಬುದರಲ್ಲಿ ಸಂದೇಹವಿಲ್ಲ.

ಈತನು ಬ್ರಾಹ್ಮಣ ಕವಿ; ಸಿಂದವಿಗೆಯ ಆನಂದಬೋಧಮುನಿಯ ಶಿಷ್ಯನು. ಈ ಶಾಸನವು ಹೊಯ್ಸಳವೀರನಾರಸಿಂಹನ ಆಳಿಕೆಯಲ್ಲಿ ಶಕ 1156 ರಲ್ಲಿ—ಎಂದರೆ 1234 ರಲ್ಲಿ—ಬರೆದುದು. ಇದರಲ್ಲಿ ಸಿಂದವಿಗೆಯ ಸ್ವಾಮಿಯ ಹೆಸರಿನಲ್ಲಿ ಸೋಮನಾಥಪುರದೊಳಗೆ ನರಸಿಂಹದೇವರ ಪ್ರತಿಷ್ಠೆಯಾದುದಾಗಿ ಹೇಳಿದೆ.

ಈ ಶಾಸನದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

### ನಾರಸಿಂಹದೇವರು.

ಶ್ರೀರಾಮಾಲಿಂಗನಾಲೋಕನವಶಜನಿತಾಂತಃಪ್ರಮೋದಪ್ರಕರ್ಷ ।
ಸ್ತ್ರೀರಾಸ್ಯಂ ಪದ್ಮಗರ್ಭಪ್ರಣುತಚರಿತನಾನಮ್ರನಾನಾಮರುತ್ಕೋ ॥
ಟೀರಾಗ್ರೋದ್ಭಾಸಮಾನಾರುಣಮಣಿಗಣನೀರಾಜಿತಾಂಘ್ರಿದ್ವಯಂ ಲೋ ।
ಕಾರಾಧ್ಯಂ ನಾರಸಿಂಹಂ ಕುಡುಗಭಿಮತಮಂ ಸೋವಿದೇವಂಗಜಸ್ರಂ ॥ 803 ॥

### ಹೊಯ್ಸಳ ನರಸಿಂಹ.

ಕರನಾಳ್ ವಾಸುಗಿ ತೋಳ್ವಮಂ । ದರವಾಗೆ ವಿರೋಧಿಮಗರಬಳಜಳನಿಧಿಯಂ ।
ಭರದಿಂ ಕಡೆದಂ ಪಡೆದಂ । ಕರಿರತ್ನಮನಶ್ವರತ್ನಮಂ ನರಸಿಂಹಂ ॥ 804 ॥

### ಸೋವಿದೇವ.

ಪೊಗೞೆ ಜಗಜ್ಜನಂ ತಣಿದು ತನ್ನನೆ ಹೊಯ್ಸಳಸೋವಿದೇವನಾ ।
ವಗಮಖಿಳೋರ್ವಿಯುಂ ತಳೆದನಿಂ ಕಮಠಾಗ್ರಣಿ ರಾಗದಿಂದೆ ಪೊಂ ॥
ಗುಗೆ ತಲೆಯೆತ್ತಿ ಸ್ಕೃತು ನಿಮಿರ್ದೋಡುಗೆ ಪನ್ನಗರಾಜನುರ್ಕಿ ಸೊ ।
ರ್ಕುಗೆ ದಿಗಿಭವ್ರಜಂ ಕುಲನಗಾವಳಿ ಮೇಲ್ವಳಿಗಂಬರಂಬರಂ ॥ 805 ॥

---

## ಶ್ರೀವಿಜಯರ್ ದಶಕೀರ್ತಿದೇವರ್. 1234.

ಇವರು ಚೆನ್ನಗಿರಿ 52 ನೆಯ ಶಾಸನವನ್ನು ಬರೆದುದಾಗಿ ಆ ಶಾಸನದ ಕೊನೆಯಲ್ಲಿರುವ "ಶ್ರೀವಿಜಯರ್ ದಶಕೀರ್ತಿದೇವರ್ ವಿರಚಿಸಿದರ್ ಸೇವ್ಯಶಾಸನ ಕೃತಿಯಂ" ಎಂಬ ಭಾಗದಿಂದ ತಿಳಿಯುತ್ತದೆ.

ಈ ಶಾಸನವು ಹೊಯ್ಸಳ ವೀರನಾರಸಿಂಹನ ಆಳಿಕೆಯಲ್ಲಿ ಶಕ 1156 ರಲ್ಲಿ—ಎಂದರೆ 1234 ರಲ್ಲಿ—ಬರೆದುದು. ಇದರಲ್ಲಿ ನೆಲ್ಕುದುರೆಯ ಬ್ರಹ್ಮೇಶ್ವರದೇವರಿಗೆ ಊರೊಡೆಯರು ದತ್ತಿಯನ್ನು ಬಿಟ್ಟಂತೆ ಹೇಳಿದೆ.

ಇದರಿಂದ ಒಂದೆರಡು ಪದ್ಯಗಳನ್ನು ತೆಗೆದು ಬರೆಯುತ್ತೇವೆ:—

### ಹೊಯ್ಸಳ ನರಸಿಂಹ.

ನರಪತಿನಾರಸಿಂಹನೊಳಿದಿರ್ಚಿದೊಡೆಚ್ಚಱಿದೆಂಬ ಭೀತಿಯಿಂ ।
ಹರಣದ ಹಾನಿಗಂಜಿ ಜವನಂ ಮಱೆವೊಕ್ಕು ಬರ್ದುಂಕುವೋಪ ರಾ ॥
ಯರ ನಡುಬೆನ್ನೊಳುಂಡಿಗೆಯನೊತ್ತುವೆನೆಂದಮೃತಾಂಶು ತಾಳ್ದನೊಂ ।
ದೆರಳೆಯನೆಂದೊಡೇವೊಗೞ್ವುದುನ್ನತಿಯಂ ಶಶಿವಂಶರತ್ನನಾ ॥ 806 ॥

ಮುದ್ದಲೆ.

ನಯವತಿಯೆಂದು ಶೀಲವತಿಯೆಂದು ಕಳಾವತಿಯೆಂದು ಸದ್ಗುಣಾ ।
ನ್ವಯವತಿಯೆಂದು ಧರ್ಮವತಿಯೆಂದು ದಯಾವತಿಯೆಂದು ಪುಣ್ಯಸಂ ॥
ಚಯವತಿಯೆಂದು ಕೀರ್ತಿಸುವುದೂರೊಡೆಚೋಕನ ಪೆರ್ಮೆವೆತ್ತ ಕಾಂ ।
ತೆಯನೊಲವಿಂದೆ ಮುದ್ದಲೆಮಹಾಸತಿಯಂ ನೆಗಬ್ದೀ ಜಗಜ್ಜನಂ ॥ 807 ॥

---

## ಚಿದಾನಂದಕವಿ. 1234.

ಈತನು ಮಂಡ್ಯದ 121, 122 ನೆಯ ಶಾಸನಗಳನ್ನು ಬರೆದಂತೆ ಎರಡ ನೆಯ ಶಾಸನದ ಕೊನೆಯಲ್ಲಿರುವ—

ಧರೆ ಪೊಗೞೆ ಚಿದಾನಂದಂ । ವಿರಚಿಸಿದಂ ಸತ್ಯವೀಶ್ವರಂ ಶಾಸನಮಂ ।
ಪರಮುಪ್ರಕಾಶಯೋಗೀ । ಶ್ವರತನಯಂ ಬ್ರಹ್ಮವಿದ್ಯೆಗಾಸ್ಪದರೂಪಂ ॥

ಎಂಬ ಪದ್ಯದಿಂದ ತಿಳಿಯುತ್ತದೆ. ಇವನು ಪರಮುಪ್ರಕಾಶಯೋಗೀಶ್ವರನ ಮಗನೆಂದೂ ಬಹ್ಮವಿದ್ಯಾವೇತ್ತನೆಂದೂ ಸತ್ಯವೀಶ್ವರನೆಂದೂ ಈ ಪದ್ಯ ದಿಂದಲೇ ವ್ಯಕ್ತವಾಗುತ್ತದೆ. ಈತನು ಬ್ರಾಹ್ಮಣಕವಿ. ಈ ಶಾಸನಗಳಲ್ಲಿ 1 ನೆಯದು ಹೊಯ್ಸಳರಾಜನಾದ 2 ನೆಯ ನಾರಸಿಂಹನ (1220–1235) ಆಳಿಕೆಯಲ್ಲಿ 1234 ರಲ್ಲಿಯೂ 2 ನೆಯದು ಈ ರಾಜನ ಮಗನಾದ ಸೋಮೇಶ್ವರನ (1233–1254) ಆಳಿಕೆಯಲ್ಲಿ 1237 ರಲ್ಲಿಯೂ ಬರೆದುವು. ಇವುಗಳಲ್ಲಿ ಈ ಇಬ್ಬರು ರಾಜರಲ್ಲಿಯೂ ಮಹಾಪ್ರಧಾನನಾಗಿದ್ದ ಅಡ್ಡಾಯುದದ ಹರಿಹರದಂಡ ನಾಯಕನು ಬಸಿರಾಳಿನಲ್ಲಿ ಮಲ್ಲಿಕಾರ್ಜುನದೇವಸ್ಥಾನವನ್ನು ಕಟ್ಟಿಸಿ ದೇವರಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ. ಈ ದೇವಸ್ಥಾನವು ಚಿತ್ರಕೆಲಸದಿಂದ ಶೋಭಿತ ವಾಗಿ ಬಹಳ ರಮಣೀಯವಾಗಿದೆ. ಈ ಶಾಸನಗಳಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ :—

ನಾರಸಿಂಹ.

ಶ್ರೀವಧು ಮುತ್ತಿನೆಕ್ಕಸರದಂತುರದೊಳ್ ನಲಿವಂತು ವಿಕ್ರಮ ।
ಶ್ರೀವಧು ಬಾಹುಪೂರಕದವೋಲ್ ಭುಜದೊಳ್ ನಲಿವಂತು ಕೀರ್ತಿ ದಿ ॥
ಗ್ದೇವಿಯರೊಳ್ ನಿಜಾಜ್ಞೆವೆರಸಾದರದಿಂ ನಲಿವಂತು ಧರ್ಮಲ ।
ಕ್ಷ್ಮೀವರನಾಗಿ ಪಾಲಿಸಿದನುರ್ವರೆಯಂ ನರಸಿಂಹಭೂಭುಜಂ ॥ 808 ॥

ನಡೆವನ್ನಂ ನಾರಸಿಂಹಕ್ಷಿತಿಪತಿಗವನೀಪಾಳರಲ್ಲಿರ್ದಪರ್ ಬಾ ।
ಳ್ಪಿಡಿವನ್ನಂ ಕ್ಷತ್ರಿಯರ್ ಸಂಗರಸಮಯದೊಳಾರ್ ನಿಂದಪರ್ ದುರ್ಗಮಂ ಪೊ ॥

ಕ್ಕೊಡಮುರ್ವೀಪಾಳರಂ ಪೆಣ್ಣುಡೆಯುನುಡಿಸುಗುಂ ತನ್ನ ದೋರ್ದಂಡಶೌರ್ಯಂ ।
ಪೊಡೆಗಿಟ್ಟಂ ಕಾಸುತಿರ್ಕುಂ ಕಡೆಯುರಸುಗಳಂ ತನ್ನ ತೇಜಃಪ್ರತಾಪಂ ॥ ೮೦೯ ॥

## ಸೋಮೇಶ್ವರ.

[1] ಸಿರಿ ವಕ್ಷೋರಂಗದೊಳ್ ನರ್ತಿಸೆ ವಿಜಯಭುಜಾದಂಡದೊಳ್ ವಿಕ್ರಮಶ್ರೀ ।
ಯಿರೆ ವಕ್ತ್ರಾಂಭೋಜದೊಳ್ ವಾಗ್ವನಿತೆ ನೆಲಸೆ ತನ್ನಾಜ್ಞೆ ವಿದ್ವಿಷ್ಟಭೂಪಾ ॥
ಳರ ಕೋಟೀರಂಗಳೊಳ್ ವರ್ತಿಸೆ ವಿಶದಯಶಂ ಪರ್ವೆ ವಾರಾಶಿತೀರಂ ।
ಬರಮಾಳ್ದಂ ವಿಶ್ವಧಾತ್ರೀತಳಮನತಿಬಳಂ ರಾಯರೊಳ್ ಸೋಯಿದೇವಂ ॥ ೮೧೦ ॥

ನೆಲನಂ ಪೊತ್ತಿತ್ತೆ ನಾಳ್ವರ್ತನದ ಮಹಿಮೆಯುಂ ಪೊಂಗುವಂ ಕೂರ್ಮರಾಜಂ ।
ತಲೆಯೆತ್ತಿರ್ಪಂ ಫಣೀಶಂ ಮದಮನೆಸಗುವಂ ದಿಗ್ಗಜೇಂದ್ರಂ ನಿತಾಂತಂ ॥
ಬಲಿದಿರ್ಪಂ ಗೋತ್ರಭೂಭೃದ್ವರ. ದೊಸಗೆಯಿಂದುರ್ವಿಯುಂ ನಿರ್ವಿಕಾರಂ ।
ಬಲದೋಳೊಳ್ ತಾಳ್ದಿ ಪೆಂಪಂ ತಳೆದತುಳಬಳಂ ರಾಯರೊಳ್ ಸೋವಿದೇವಂ ॥ ೮೧೧ ॥

## ಅಡ್ಡಾಯುದದ ಹರಿಹರದಂಡನಾಥ.

ಚರಿತಂ ಗಂಗಾನದೀಸಂಗಮಸಹಚರಮಾಸ್ಯೇಂದು ಸತ್ಯಾಮೃತಶ್ರೀ ।
ಭರಿತಂ ಲಕ್ಷ್ಮೀವಿಳಾಸಂ ದ್ವಿಜಗುರುಬುಧಗೋತ್ರಾದಿಸದ್ದಾನದೀಕ್ಷಂ ॥
ಗುರುಚಿತ್ತಂ ಪಾರ್ವತೀವಲ್ಲಭಪದಕಮಳಧ್ಯಾನಸಂಧಾನಸಾರಂ ।
ನರಸಿಂಹೋರ್ವೀಶನಡ್ಡಾಯುದದ ಹರಿಹರಂ ಲೋಕದೊಳ್ ತಾನೆ ಧನ್ಯಂ ॥ ೮೧೨ ॥

ಕಡುಪಿಂ ಮುತ್ತಿದ ಏರಸೇವುಣರ ಸೈನ್ಯಾನೀಕವುಂ ಪೊಕ್ಕು ? ಮು ।
ಯ್ದುಡೆ ಕೊಂದಿಕ್ಕಿದನೊಕ್ಕಲಿಕ್ಕಿ ತುೞಿದಂ ಚಿನ್ನಟ್ಟಿದಂ ಮುಟ್ಟಿದಂ ॥
ಪಿಡಿದಂ ಸಾಲೆ ತುರಂಗಮಂ ಹರಿಹರಂ ತನ್ನೊಂದೆ ಜಾತ್ಯಶ್ವದಿಂ ।
ಗಡ ವಿಶ್ವಾವನಿ ಮೆಚ್ಚೆ ಮಂತ್ರಿತಿಲಕಂ ವಿದ್ವಿಷ್ಟವಿದ್ರಾವಣಂ ॥ ೮೧೩ ॥

## ಮಲ್ಲಿಕಾರ್ಜುನದೇವಾಲಯ.

ಮೊದಲಿಂದಂ ಕಲಶಂಬರಂ ಮೆಱೆವ ನಾನಾಚಿತ್ರಪತ್ರಂಗಳಿಂ ।
ಮುದಮಂ ಬೀಱುವ ಭಾರತಾದಿಕಥೆಯಿಂ ಮೆಯ್ವೆತ್ತ ಕೂಟಂಗಳಿಂ ॥
ದಿದು ಪಾಂಚಾಳಿಕೆ ತಳ್ತ ಮೇರುಗಿರಿಯೋ ಪೇೞಿಂಬಿನಂ ವಿಭ್ರಮಾ ।
ಸ್ಪದಮಾಗಿರ್ಪುದು ಮಲ್ಲಿಕಾರ್ಜುನ..... ದೇವಾಲಯಂ ॥ ೮೧೪ ॥

---

1 ಈ ಪದ್ಯವು ಸೂಕ್ತಿಸುಧಾರ್ಣವದಲ್ಲಿ ಅನುವಾದಮಾಡಲ್ಪಟ್ಟಿದೆ.

## ಎರಡನೆಯ ಗುಣವರ್ಮ.[1] ಸು. 1235.

ಈತನು **ಪುಷ್ಪದಂತಪುರಾಣವನ್ನೂ** **ಚಂದ್ರನಾಥಾಷ್ಟಕವನ್ನೂ** ಬರೆದಿದ್ದಾನೆ.

ಇವನು ಜೈನಕವಿ; ಇವನ ಪೋಷಕನು 'ಅಹಿತಕ್ಷ್ಮಾಭೃದ್ಭೃಹದ್ವಜ್ರ' ನಾದ ಕಾರ್ತವೀರ್ಯರಾಜನ ಕೈಯಕೆಳಗೆ 'ನಾಳ್ಪ್ರಭು' ವಾಗಿದ್ದ ಶಾಂತಿವರ್ಮನು; ಗುರು ಕಾರ್ತವೀರ್ಯನ ಗುರುವಾದ ಮುನಿಚಂದ್ರನು.

ಈತನು ಪೂರ್ವಕವಿಗಳನ್ನು ಸ್ಮರಿಸುವಾಗ **ಜನ್ನನನ್ನು** (1230) ಸ್ತುತಿಸಿರುವುದರಿಂದ ಆ ಕವಿಗಿಂತ ಈಚೆಯವನಾಗಿರಬೇಕು; **ಮಲ್ಲಿಕಾರ್ಜುನನು** (ಸು. 1245) ಈತನ ಪುಷ್ಪದಂತಪುರಾಣದಿಂದ ಪದ್ಯಗಳನ್ನು ಅನುವಾದಮಾಡಿರುವುದರಿಂದ ಅವನಿಗೆ ಹಿಂದೆ ಇದ್ದಿರಬೇಕು; ಸುಮಾರು 1235 ರಲ್ಲಿ ಇದ್ದಿರಬಹುದೆಂದು ತೋರುತ್ತದೆ.

1229 ರಲ್ಲಿ ಬರೆದ ಸೌಂದತ್ತಿಯ ಶಾಸನದಲ್ಲಿ [2] ಹೇಳಿರುವ ಕಾರ್ತವೀರ್ಯ, ಮುನಿಚಂದ್ರ, ಶಾಂತಿನಾಥ ಎಂಬವರು ಈತನು ಹೇಳುವ ಕಾರ್ತವೀರ್ಯ ಮುನಿಚಂದ್ರ ಶಾಂತಿವರ್ಮರೇ ಆಗಿರಬೇಕೆಂಬುದರಲ್ಲಿ ಸಂದೇಹವಿಲ್ಲ. ಶಾಸನದಲ್ಲಿ ಶಾಂತಿನಾಥನು ಮುನಿಚಂದ್ರನಿಗೆ ಅಮಾತ್ಯನಾಗಿದ್ದಂತೆ ಹೇಳಿದೆ. ಅಲ್ಲದೆ ಇವನನ್ನು 'ಇಷ್ಟಶಿಷ್ಟ ಚಿಂತಾಮಣಿ' ಎಂದು ವಿಶೇಷಿಸಿ ಹೇಳಿದೆ. ಪುಷ್ಪದಂತಪುರಾಣದಲ್ಲಿ ಶಾಂತಿವರ್ಮನನ್ನು 'ಇಷ್ಟ ಶಿಷ್ಟ ಕಲ್ಪಕುಜ' ಎಂದು ಕವಿ ಸ್ತುತಿಸಿದ್ದಾನೆ. ಮೇಲೆ ಹೇಳಿದ ಕಾರ್ತವೀರ್ಯನು 1202 ರಿಂದ 1220 ರ ವರೆಗೆ ಆಳಿದಂತೆ ಶಾಸನಗಳಿಂದ ತಿಳಿಯುತ್ತದೆ. ಈ ರಾಜನ ಸಭೆಯಲ್ಲಿ ಶಾಂತಿವರ್ಮನು ಪುಷ್ಪದಂತಪುರಾಣವನ್ನು ರಚಿಸಹೇಳಲು ಕವಿ ರಚಿಸಿದಂತೆ—

ಎಂದೋರಂತಿರೆ ವಜ್ರದೇವನರನಾಥಾಸ್ಥಾನದೊಳ್ ಕೂರ್ತ ನ ।
ಣ್ಪಿಂದಂ ಕೋವಿದರೆಯ್ದೆ ಕೊಂಡುಕೊನೆಯಲ್ ಕೇಳ್ವಬ್ಜಿಕಾಂ ಶಾಂತಿವ ॥
ರ್ಮಂ ದೀನಾನತವರ್ಮನಾದರಿಸಿ ನೀಂ ಪೇೞಿಂದೊಡೀಗಳ್ ಮನಂ ।
ದಂದಂ ಪಾಲ್ಗಡ ಮದ್ವಚನಲ್ ಜಿನಕಥಾವಿಸ್ತಾರಮುಂ ಸಾರಮುಂ ॥

ಎಂಬ ಪದ್ಯದಿಂದ ವ್ಯಕ್ತವಾಗುತ್ತದೆ. ಕಾರ್ತವೀರ್ಯನು ಕುಂತಳದೇಶದಲ್ಲಿಯ ಕೊಂಡಿಯನ್ನು ಆಳುತ್ತಿದ್ದಂತೆ ತಿಳಿವುದರಿಂದ ಕೊಂಡಿಯೇ ಕವಿಯ ಸ್ಥಳವಾಗಿದ್ದಿರಬಹುದು. "ಮುನಿಚಂದ್ರಪಂಡಿತದೇವರ್ ಗುರುವಾಗೆ ತನಗೆ ಕವಿತೆ ಬಂದುದು" ಎಂದು ಹೇಳಿಕೊಂಡಿದ್ದಾನೆ.

---

1. ಪುಟ 23. 2. ಪುಟ 346.

**ಈತನಿಗೆ ಗುಣಾಬ್ಜವನಕಲಹಂಸ, ಕವಿತಿಲಕ, ಕಾವ್ಯಸತ್ಕಳಾರ್ಣವ ವ್ಯಾಗಲಕ್ಷ್ಮೀ ಎಂಬ ಬಿರುದುಗಳಿದ್ದಂತೆ ತೋರುತ್ತದೆ.**

**ಪೂರ್ವಕವಿಗಳನ್ನು ಈ ಪದ್ಯದಲ್ಲಿ ಸ್ಮರಿಸಿದ್ದಾನೆ :—**

ಅನುಗುಣವಾಗಿ ಕೊಡೆ ಗುಣವರ್ಮನ ಮೆಯ್ಸಿರಿ ಪಂಪನೋಜೆ ಪೊ ।
ನ್ನನ ಪೊಸದೇಸೆ ರನ್ನನ ಗುಣೋನ್ನತಿಯುಗ್ಗಳನೊಳ್ಪು ನಾಗವ ॥
ರ್ಮನ ಬಹುರೀತಿ ನೇಮಿಯ ಚಮತ್ಕೃತಿ ಜನ್ನಿಗನಿಂಪು ನಾಗಚಂ ।
ದ್ರನ ರಸವೃತ್ತಿ ರಂಜಿಸುಗೆ ನಿರ್ಣಯಮೆನ್ನಯ ನವ್ಯಕಾವ್ಯದೊಳ್ ॥

**ತನ್ನ ಗುಣಗಳನ್ನೂ ಕವಿತಾಚಾತುರಿಯನ್ನೂ ಈ ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ :—**

ಸ್ವೀಕೃತಜಿನಧರ್ಮನನಂ । ಗೀಕೃತಖಿಳವರ್ಮನಮಳವಾಗೀಕರುಣಾಂ ।
ಗೀಕೃತಕವಿತಾವರ್ಮನ । ಪಾಕೃತದುಷ್ಕರ್ಮನಮಮ ಕವಿಗುಣವರ್ಮಂ ॥
ವಿವಿಧಕಳಾಭಿಜ್ಞಂ ಭಾ । ವವಿದಂ ರಸರಸಿಕನುಚಿತಕವಿತಾಚತುರಂ ।
ಸುವಿವೇಕನಿಧಾನಂ ವಿಬು । ಧವತ್ಸಲಂ ಮಾನಮೇರು ನೃಪತತಿಮಹಿತಂ ॥
ಪದಮೆ ಪದಮರ್ಥಮರ್ಥಂ । ಪುದಿದ ರಸಂ ತೃಪ್ತಿಕರರಸಂ ಭಾವಂ ಪೊ ।
ಣ್ಮಿದ ಸದ್ಭಾವಂ ದನಿಯಿಂ । ಪೊದವಿದ ದನಿಯೆನಿಸಿ ಪೇಲ್ವಿಪಂ ಕವಿತಿಲಕಂ ॥
ರತಿ ಪದೆದಂತೆ ಚಂದ್ರಕಿರಣಂಗಳ ಪಾಲ್ಗುಡಿದಂತೆ ಮಂದಮಾ ।
ರುತನೊಡಗೂಡಿ ಬಂದ ಸಹಕಾರಪರಾಗದೊಳಾಡಿದಂತೆ ರಾ ॥
ಜಿತಮಧುಮಾಸದೊಳ್ ಪರೆಯದಿಂ ಪೊರೆದಂತಬಲಾಕಟಾಕ್ಷದಿ ।
ಕ್ಷಿತಮೆನಿಪಂತೆ ಮೋಹಿಸದೆ ಪೇೞ್ ಗುಣವರ್ಮನ ಸೂಕ್ತಿಸಂಚಯಂ ॥
ನವರಸಮುಂ ನಿಮಿರ್ಚುವ ಬೆಡಂಗನಮರ್ಚುವ ದೋಷಮುಂ ತಳ ।
ರ್ಚುವ ಗುಣಮುಂ ಕೆಳರ್ಚುವಮರ್ದಿಂಪನೊಡರ್ಚುವ ಬಂಧಮುಂ ತೊಡ ॥
ರ್ಚುವ ಕವಿಪೊರ್ಕುಳರ್ಚುವೆಳಸುಣ್ಪನೊಡರ್ಚುವ ಕಾವ್ಯಸತ್ಕಳಾ ।
ರ್ಣವಮ್ಯಗಲಕ್ಷ್ಮಿಲಕ್ಷ್ಮನ ವಚೋವಧುವಂ ಬುಧರೊಲ್ದು ವರ್ಣಿಕುಂ ॥

ಇವನ ಗ್ರಂಥಗಳಲ್ಲಿ—

## 1. ಪುಷ್ಪದಂತಪುರಾಣ.

ಇದು ಒಂಬತ್ತನೆಯ ತೀರ್ಥಕರನಾದ ಪುಷ್ಪದಂತನ ಚರಿತವು ; 14 ಆಶ್ವಾಸಗಳಾಗಿ ಭಾಗಿಸಲ್ಪಟ್ಟಿದೆ. ಈ ಗ್ರಂಥವನ್ನು 'ನಾಬ್ರಿಭುನಭೋಮಣಿ ಶಾಂತಿವರ್ಮನ ಯಶೋಲತೆಗಾಲಂಬನವಾಗೆ' ಬರೆದು ಆತನಿಗೆ ಸಮರ್ಪಿಸಿದಂತೆ ಈ ಪದ್ಯದಲ್ಲಿ ಹೇಳುತ್ತಾನೆ—

ಕ್ಷಿತಿಯೊಳ್ ಮುನ್ನಬ್ಜನೇತ್ರಂ ಮನೆಯುಳಿಯನೆನಲ್ ಕ್ಷೀರವಾರಾಶಿಯಿಂ ವಿ।
ಶ್ರುತಲಕ್ಷ್ಮೀದೇವಿಯಂ ಕೌಸ್ತುಭಮಣಿಸಹಿತಂ ಕೊಂಡನೆಂತಂತೆ ತನ್ನಂ॥
ಸತತಂ ಕೂರ್ತಿತ್ತು ಕೊಂಡಂ ಗುಣನಿಧಿ ಗುಣವರ್ಮಂಗೆ ಕೀರ್ತ್ಯನ್ವಿತಂ ಸ।
ತ್ಕೃತಿಲಕ್ಷ್ಮೀಕಾಂತೆಯಂ ರಂಜಿತವಿಬುಧಜನಸ್ವಾಂತೆಯಂ ಶಾಂತಿವರ್ಮಂ॥

"ಪೂರ್ವದೊಳ್ ಗಣಧರಾದಿಮಹಾಮುನಿಸತ್ಕವೀಶ್ವರರ್ ಮಾಡಿದ ಪುಷ್ಪದಂತಜಿನನಾಥಪುರಾಣಮನಿಂದು ಕನ್ನಡಂಮಾಡುವೆಂ" ಎಂದು ಹೇಳಿದ್ದಾನೆ.

ಗ್ರಂಥಾವತಾರದಲ್ಲಿ ಪುಷ್ಪದಂತನನ್ನು ಸ್ತುತಿಸಿದ್ದಾನೆ. ಬಳಿಕ ಸಿದ್ಧಾದಿಗಳನ್ನೂ ಸರಸ್ವತಿಯನ್ನೂ ಯಕ್ಷಯಕ್ಷಿಯರನ್ನೂ ಅನುಬದ್ಧಕೇವಲಿ ಶ್ರುತಕೇವಲಿ ದಶಪೂರ್ವಿಗಳನ್ನೂ ಏಕಾದಶಾಂಗಧಾರಿಗಳನ್ನೂ ಆಚಾರಾಂಗಧರರನ್ನೂ ಸ್ಮರಿಸಿ ಅನಂತರ ಕೊಂಡಕುಂದಾಚಾರ್ಯನಿಂದ ಮುನಿಚಂದ್ರದೇವನವರೆಗೆ ಗುರುಗಳನ್ನು[1] ಕ್ರಮವಾಗಿ ಹೊಗಳಿದ್ದಾನೆ.

ಆಶ್ವಾಸಗಳ ಕೊನೆಯಲ್ಲಿ ಈ ಗದ್ಯವಿದೆ :—

ಇದು ಸಮಸ್ತಭುವನಜನಸಂಸ್ತುತಜಿನಾಗಮಕುಮುದ್ವತೀಚಾರುಚಂದ್ರಾಯಮಾನಮಾನಿತಶ್ರೀಮದುಭಯಕವಿಕಮಲಗರ್ಭ ಮುನಿಚಂದ್ರಪಂಡಿತದೇವಸುವ್ಯಕ್ತಸೂಕ್ತಿಚಂದ್ರಿಕಾಪಾನಪರಿಪುಷ್ಟಮಾನಸಮರಾಳ ಗುಣವರ್ಮನಿರ್ಮಿತಮಪ್ಪ ಪುಷ್ಪದಂತ ಪುರಾಣದೊಳ್.

ಇವನ ಬಂಧವು ಪ್ರೌಢವಾಗಿಯೂ ಪ್ರಾಸಬದ್ಧವಾಗಿಯೂ ಇದೆ. ಇವನ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ :—

ಗ್ರೀಷ್ಮ

ಕೆಂಡದ ಮಟ್ಟಿ ಕೊಂಡಪ್ಪುದ। ಜಾಂಡದಿನೆಳೆ ದೂವೆಗಿರ್ಚನುಗುಳ್ವಪ್ಪುದು ದಿ।
ಙ್ಮಂಡಳಿ ದಳ್ಳುರಿಗೆಡೆಳ್ಳಿಯ। ತಂಡದೆ ಕೇರ್ಗಟ್ಟಿತೆನಿಸಿ ತೋಱುತ್ತದೞೊಳ್॥ 815॥
ತಾಱಿದ ಬಳ್ಳಿ ಮಾಱಿದ ದವಾನಳನಾಱದ ಬೆಂಚೆ ತಾಯ್ಮುಳ।
ಲ್ದೋಱದ ಸಿಂಧು ಬೆಂದೊಡೆದು ಪಾಱಿದ ಬೆಟ್ಟು ಕರಿಂಕುವೋಗಿ ಕ॥

---

1 ಕೊಂಡಕುಂದ, ಗೃಧ್ರಪಿಂಛ, ಬಲಾಕಪಿಂಛ, ಮಯೂರಪಿಂಛ, ಅರ್ಹದ್ಬಲಿ, ಭೂತಬಲಿ, ಪುಷ್ಪದಂತ,

ಬಿತ್ತರಮಾಗೆ ಸೂತ್ರಗತಿಯಿಂ ಮಿಗೆ ಪಣ್ಣಿದ ಗಂಧಹಸ್ತಿತೊಂ।
ಬತ್ತಱುಸಾಸಿರಕ್ಕೆ ಶಿವಕೋಟಿಯ ಕೋಟಿವಿಪಕ್ಷವಿದ್ವದು॥
ನ್ಮತ್ತಗಜಂ ಮದಂಬಜತು ಕೆಯ್ಯೆಡೆಗೊಟ್ಟುದೆನಲ್ಕೆ ಪೇೞ್ವುದೇಂ।
ಮತ್ತೆ ಸಮಂತಭದ್ರಮುನಿರಾಜನುದಾತ್ತಜಯಪ್ರಶಸ್ತಿಯಂ॥

ಎಂಬ ಪ್ರಶಸ್ತಿಯುಳ್ಳ ಸಮಂತಭದ್ರ, ಅಕಳಂಕ, ಪೂಜ್ಯಪಾದ, ವಿದ್ಯಾನಂದ, 'ಪುರಾಣಪುರುಷ' ನಾದ ಕವಿಪರಮೇಷ್ಠಿ, ವೀರಸೇನ, ಜಿನಸೇನ, ಗುಣಭದ್ರ, ಜಟಾಸಿಂಹನಂದಿಗಳು, ಕಾಲುದಕನೋಲಾನದಿಯಾದ ಏಲಾಚಾರ್ಯ, ದಿಗಂಬರಕುಲಚಂದ್ರಯೋಗೀಂದ್ರದೇವಚಂದ್ರರು, ಸ್ವಗುರುಮುನಿಚಂದ್ರ.

ಪೆರ್ಗೞಿದರಣ್ಯಭೂಮಿ ಬೆಮರೇಱಿದ ದೇಹಿಸಮೂಹಮೂಷ್ಮೆಯಂ ।
ಪೇಱಿದ ಭಾನುಭಾನು ಬಿಸುಪೇಱಿದಿಳಾತಳಮಿಲ್ಲದೆಲ್ಲಿಯುಂ ॥ 816 ॥

## ನಂದನ.

ಸಲೆ ನಿಲೆ ಮಾವು ಪೂವು ಬಕುಲಂ ಮುಕುಲಂ ಪೊಸತೆಂಗು ಕೌಂಗು ಕಾ ।
ದಲರೆಲರಂಚೆ ಬೆಂಚೆ ಪುಳಿನಂ ನಳಿನಂ ಗಿಳಿವಿಂಡು ಬಂಡು ಕೋ ॥
ಗಿಲೆ ಗೊಲೆ ತುಂಬಿ ಬಿಂಬಿ ಸುೞಿಗೇದಗೆ ಚಾದಗೆ ಕಂಪು ಸೊಂಪಗುಂ ।
ದಲೆಯಿಸೆ ರಮ್ಯಮಾವಿಷಯದೂರ್ಗಳ ನಂದನಬೃಂದಮೊತ್ತಲುಂ ॥ 817 ॥

ಒದವಿದ ರಾಳಿ ಗರ್ದೆಗಳ ಪಾಳಿ ಕುಕಿಲ್ವ ಎಕಾಳಿ ತಣ್ಪುವೇ ।
ಱದ ಸುೞಿಗಾಳಿ ಪಾಮರಿಯರೋೞಿ ವಿಟೀವಿಟಕೇೞಿ ಪೂಗಳಿಂ ॥
ಕೆದಱುವ ದೂಳಿ ಪಾಡುವ ಮದಾಳಿ ಪೊದಱ್ದಲರೋಳಿಯೆಂಬಿವಂ ।
ಮದನನ ದಾೞಿಗೆತ್ತು ಸುಗಿದಿರ್ಪುದು ಪಾಂಥಜನಂ ನಿರಂತರಂ ॥ 818 ॥

## ಶಾರದಾಗಮ.

ಸೊಗಯಿಪ ಕೇತಕೀವಿಭವಮೇೞಿಲೆಪಾೞಿಗೆ ನೀಪದೇೞ್ಗೆ ಪೊ ।
ನ್ನಗೆ ಕುಟಜೋಪಶೋಭೆ ಕುಮುದಕ್ಕೆ ಕದಂಬದ ಸೊಂಪು ನೆಯ್ದಿಲೊ ॥
ಳ್ಪುಗುಳ್ಗೆ ಮಯೂರದಭ್ಯುದಯಮಂಚೆಗೆ ಚಾದಗೆಯುತ್ಸವಂ ಚಕೋ ।
ರಿಗೆ ತಳರ್ದೊಪ್ಪುಗೊಪ್ಪಿದುದು ನೀರದಶಾರದನಿರ್ಗಮಾಗಮಂ ॥ 819 ॥

## ಇರುಳ್.

ಕಳಾರುಂದ್ರಂ ಚಂದ್ರಂ ಬೆಳಗೆ ನಭಮುಂ ಕಾಂತಿವಿಸರಂ ।
ಗಳಿಂ ನೆಯ್ದಿಲ್ಗೆಯ್ದಲ್ ಮೊಗಸಿ ನಳಿನೀಬೃಂದದಳಿನೀ ॥
ಕುಳಂ ಕೋಕಂ ಶೋಕಂಬಡೆಯೆ ಮನದೊಳ್ ಪುಟ್ಟೆ ಜನದೊಳ್ ।
ಬಳಾತ್ಕಾರಂ ಮಾರಂಗದಟಿನ ತಿರುಳ್ ರಂಜಿಸಿತಿರುಳ್ ॥ 820 ॥

## ನಕ್ಷತ್ರ.

ಸಂಕಳಿತ ಬಹಳತಾರಾ । ಸಂಕುಳದಿಂ ಪೊೞಲ್ದುದಭ್ರಮಾವೃತತಿಮಿರಂ ।
ತೇಂಕುವ ಮಲ್ಲಿಮುಕುಳದ । ಸಂಕುಳಮಂ ತಳೆದು ನಿಂದ ಜಗುನೆಯ ಮಡುವಂ
॥ 821 ॥

## ದೀಪ.

ಮುನಿದು ತವೆ ನುಂಗಿ ತಿಮಿರಮ । ನಿನಿತಱ್ಕಸಲಾಱದದರೆ ಕಾಱದಪುವಿವೆಂ ॥
ಬಿನದಮೆಸೆದುವು ಸೊಡರ್ಗಳ್ ಜಳ । ಕೆನೆ ನಿಜಚೂಳಿಕೆಯಿನೊಗೆವ ಕಾಳಿಕೆಯಿಂದಂ
॥ 822 ॥

### ಕಾಡು.

ಎಲೆವೆರಸು ಗಾಳಿಯಿಂ ಪಱ | ದೆಲವದ ಪಸುರ್ಗಾಯ್ಗಳುರುಳೆ ಮೂಗುಡಿದು ಶುಕಾ |
ವಳಿ ಬಿರ್ದುವೆಂದು ಬಿಡೆನುಂ | ಗಱೊಡರ್ಚುವುವದಱ ಪೊದಱ ಬಾಳಬಿಡಾಳಂ ॥ 823 ॥

### ಗಜಪ್ರಸವ.

ಬೇನೆಯುನಕ್ಕಿಗಳ್ ನಸುಮುಗುಳ್ತಿರೆ ಪಿಂತು ಕುಸುಂಗಿ ಜೋಲೆ ಪೇ |
ರಾನೆಯು ಕರ್ಣವಾಯು ಚಿವುರಾಱಿಸೆ ತಾಯ್ವಿಡಿ ನೀವೆ ಹಸ್ತದಿಂ ॥
ತಾನವಳಂಬಿಸಿರ್ದು ವಟಭೂಜದೊಳೊಂದು ಕರೇಣು ಸೂಲಿಸು |
ತ್ತೇನಣಮುಲಿ ಮಾಡಿದುದೊ ಬೇಡರೊಳಂ ಕರುಣಾನುಭಾವಮಂ ॥ 824 ॥

### ಸುಜನ.

ಇಲ್ಲದ ಗುಣಮಂ ಪೆಱರೊಳ್ | ಸೊಲ್ಲಿಸುವಂ ತನ್ನೊಳುಳ್ಳ ಗುಣಗಣಮಂ ತಾ |
ನಿಲ್ಲೆಂದಾಡುವ ಪುಸಿಕಂ | ಗೆಲ್ಲೆಂದಂ ಬಂದುದಮಮ ಸುಜನತೆ ಚಿತ್ರಂ ॥ 825 ॥

### ಸ್ತ್ರೀಸೌಂದರ್ಯ.

ನಡು ಮಡು ಲೋಕಲೋಚನಝುಷಕ್ಕೆ ಬೆರಲ್ ಸರಲಂಗಜಂಗೆ ಮೆ |
ಲ್ಲಡಿ ಪಡಿ ಪಲ್ಲವಕ್ಕೆ ವದನಂ ಸದನಂ ಸಿರಿಗಕ್ಕಿ ಪಕ್ಕಿ ಚೆ ॥
ಲ್ವಿಡಿದಲರ್ವಿಲ್ಗೆ ಸೋರ್ಮುಡಿ ಪದಿರ್ಮುಡಿ ಸೋಗೆಗೆ ಪುರ್ವು ಕೊರ್ವು ಚೆ |
ನ್ನಿಡೆಗೆ ನಖಂ ಮುಖಂ ಸವಿಗೆ ತೋಳ್ ಕರವಾಳ್ ಮದನಂಗೆ ಕಾಂತೆಯಾ ॥ 826 ॥

### ಶಾಂತಿವರ್ಮ.

ಗುರುಜನಕಂ ಕವೀಂದ್ರಜನಕಂ ಗುಣವಜ್ಜನಕಂ ಸಮಸ್ತಸಾ |
ಕ್ಷರಜನಕಂ ಜಗಜ್ಜನಕವೊಲ್ದುದನಿತ್ತಭಿರಕ್ಷಿಪಱ್ತಿಯಿಂ ॥
ಗುರುಜನಕಂ ಕವೀಂದ್ರಜನಕಂ ಗುಣವಜ್ಜನಕಂ ಸಮಸ್ತಸಾ |
ಕ್ಷರಜನಕಂ ಜಗಜ್ಜನಕನೆಂಬುದು ಮೇದಿನಿ ಶಾಂತಿವರ್ಮನಂ ॥ 827 ॥

ಶ್ರೀಯುತ ಶಾಂತಿವರ್ಮ ಪೆಱರಾರ್ಪು ವಿಚಾರಿಪೊಡಂಥವರ್ತಕ |
ನ್ಯಾಯಮೆ ಬೇರದೆಂಟಿಗೆ ಪರಿಭಾವಿಪೊಡಂತದು ತಾನಜಾಕೃಪಾ ॥
ಣೀಯಮೆ ನಿಕ್ಕುವಂ ನುಡಿವ ಪೆಂಪು ವಿಚಾರಿಪೊಡುಂತೆ ಕಾಕತಾ |
ಳೀಯಮೆ ಭಾಪು ನಿನ್ನವೊಲುದಾರರ ವೀರರೆ ಸತ್ಯವಾಕ್ಯರೇ ॥ 828 ॥

## 2. ಚಂದ್ರನಾಥಾಷ್ಟಕ.

ಈ ಅಷ್ಟಕವು ಕೊಲ್ಲಾಪುರದ ತ್ರಿಭುವನತಿಲಕಜಿನಾಲಯದ ಚಂದ್ರನಾಥನ ಸ್ತುತಿಯೆಂಬಂಶವು ಗ್ರಂಥದ ಅಂತ್ಯದಲ್ಲಿರುವ ಈ ಪದ್ಯದಿಂದ ತಿಳಿಯುತ್ತದೆ:—

ಬಹುವಿದ್ಯಾಮಂಡನಂ ಪಂಡಿತಮುನಿಪತಿಚಂದ್ರವ್ರತಿಶ್ರೀಪದಾಂಭೋ ।
ರುಹಸೇವಾಸಂಗಭೃಂಗಂ ಕ್ಷಿತಿನುತಗುಣವರ್ಮಂ ವಚೋಮಾಲೆಯಿಂದ ॥
ನ್ನಹಮಾದಂ ಪೂಜಿಸಲ್ ರಾಜಿಪ ಜಿನನನಘಂ ಮಾಳ್ಕೆ ಭವ್ಯರ್ಗೆ ಸೌಖ್ಯಾ ।
ವಹಮಂ ಕೊಲ್ಲಾಪುರಶ್ರೀತ್ರಿಭುವನತಿಲಕಾಲಂಕೃತಂ ಚಂದ್ರನಾಥಂ ॥

ಇದರಲ್ಲಿ ಒಂಬತ್ತು ಪದ್ಯಗಳಿವೆ; ಇವು ಮಹಾಸ್ರಗ್ಧರಾವೃತ್ತದಲ್ಲಿ ಬರೆದಿವೆ; ಪ್ರತಿಪದ್ಯವೂ 'ಚಂದ್ರನಾಥಾ' ಎಂದು ಮುಗಿಯುತ್ತದೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

ನೆನೆವಂದಾನಂದದಿಂ ತಣ್ಣನೆ ತಣಿದು ಜಿಗಿಲ್ಕುಂ ಮನಂ ಬಂದು ಕಂಡಂ ।
ದೆನಸುಂ ತಣ್ಪಿಂ ಕುಳಿರ್ಕೊಳ್ದುಗುಮುಮರ್ದಿನೊಳಟ್ಟಿಂತೆ ಕರ್ಣ್ ಬಣ್ಣಿಸಂದಿಂ ॥
ಪಿನಲಂಪಂ ಸೇವಿಪಂತಗ್ಗಲಿಸಿ ನಲಿಗುವಿಾಜಿಹ್ವೆಯೆಂದಂದು ನಿನ್ನಂ ।
ನೆನೆದುಂ ಕಂಡುಂ ಪೊಗಳ್ದುಂ ಸುಖಿಯೆನಿಸಿದವಂ ಧನ್ಯನೈ ಚಂದ್ರನಾಥಾ ॥ 829 ॥

ಸುದತೀಲೀಲಾಂಗಮಂ ಸೋಂಕದ ವರಯುವತೀಸ್ನಿಗ್ಧಮುಗ್ಧಾಸ್ಯಮಂ ನೋ ।
ಡದ ಕಾಂತಾಳಾಪಮಂ ಕೇಳದ ವನಜಮುಖೀವಕ್ತ್ರಸೌರಭ್ಯಮಂ ಕೊ ॥
ಳ್ಳದ ರಾಮಾರಮ್ಯಬಿಂಬಾಧರರಸಮನಡುರ್ತುಂಟದಕ್ಷೂಣಮೋಕ್ಷಾ ।
ಸ್ಪದಲಕ್ಷ್ಮೀಸಂಗಸೌಖ್ಯೋನ್ನತಿ ನಿನಗೆ ನಿಜಂ ದೇವರೊಳ್ ಚಂದ್ರನಾಥಾ ॥ 830 ॥

ಮೃಗತೃಷ್ಣಾಭೋಗಮಂ ತಿರ್ದಿದ ನಿಡುಮಡುವೆಂದ್ಯದುಮಾಭೀಳಕಾಳೋ ।
ರಗನಂ ನೇಮಾಳಮೆಂದೆತ್ತುವ ನಿಶಿತಕನತ್ಖಡ್ಗಮಂ ನೆಯ್ದಿಲೊಳ್ದಾ ॥
ಸಿಗಮೆಂದಾಂಪಂತೆ ನೀನಲ್ಲದ ಕುಮತಶತಭ್ರಾಂತರಂ ದೇವರೆಂದೋ ।
ಲಗಿಪೆಗ್ಗರ್ಗಾದ ಖೇದಂ ನಗಿಸುವುದು ಭವತ್ತ್ರಸ್ತರಂ ಚಂದ್ರನಾಥಾ ॥ 831 ॥

---

## ಕಮಲಭವ. ಸು. 1235.

ಈತನು ಶಾಂತೀಶ್ವರಪುರಾಣವನ್ನು ಬರೆದಿದ್ದಾನೆ. ಇವನು ಜೈನಕವಿ ಇವನ ಗುರು ದೇಶೀಯಗಣದ ಪುಸ್ತಕಗಚ್ಛದ ಕೊಂಡಕುಂದಾನ್ವಯದ ಮಾಘಣಂದಿ ಪಂಡಿತಯತಿ.

ಈತನು ತನಗೆ ಹಿಂದೆ ಇದ್ದ ಕವಿಗಳಲ್ಲಿ ಜನ್ನನನ್ನು (1230) ಸ್ತುತಿಸುವುದರಿಂದ ಆತನಿಗೆ ಈಚೆಯವನೆಂದು ವ್ಯಕ್ತವಾಗುತ್ತದೆ; ಇವನ ಗ್ರಂಥದಿಂದ ಪದ್ಯಗಳನ್ನು ಉದ್ಧರಿಸಿ ಮಲ್ಲಿಕಾರ್ಜುನನು (ಸು. 1245) ಸೂಕ್ತಿಸುಧಾರ್ಣವದಲ್ಲಿ ಬರೆದಿರುವುದರಿಂದ ಅವನಿಗಿಂತ ಸ್ವಲ್ಪ ಹಿಂದೆ ಇದ್ದಿರಬೇಕು; ಸುಮಾರು

1235 ರಲ್ಲಿ ಇದ್ದಿರಬಹುದು.[1] **ಕುಸುಮಾವಳಿ**ಯನ್ನು ಬರೆದ **ದೇವಕವಿ** ಈತನ ಗ್ರಂಥರಚನೆಗೆ ಪ್ರೋತ್ಸಾಹಕನಾಗಿದ್ದಂತೆ ಹಿಂದೆಯೇ ತಿಳಿಸಿದ್ದೇವೆ.[2] ಕುಸುಮಾವಳಿಯಲ್ಲಿ ವರ್ಣನಾಭಾಗಗಳಲ್ಲಿ ದೊರೆವ ಕೆಲವು ಪದ್ಯಗಳು **ಕಮಲಭವ**ನ ಗ್ರಂಥದಲ್ಲಿಯೂ ಇವೆ.

ಈ ಕವಿಗೆ ಕವಿಕಂಜಗರ್ಭ, ಸೂಕ್ತಿಸಂದರ್ಭಗರ್ಭ ಎಂಬ ಬಿರುದುಗಳು ಇದ್ದಂತೆ ತೋರುತ್ತದೆ.

ಪೂರ್ವಕವಿಗಳನ್ನು ಈ ಪದ್ಯದಲ್ಲಿ ಸ್ಮರಿಸಿದ್ದಾನೆ :—

ಜಿನಸಮಯಪ್ರಕಾಶಕೃತಸತ್ಕವಿಹಂಪನ ಪೆಂಪುವೆತ್ತ ಪೊ ।
ನ್ನನ ಕವಿನಾಗಚಂದ್ರನ ನೆಗೞ್ತೆಯ ರನ್ನನ ಸಂದ ಬಂಧುವ ॥
ರ್ಮನ ಬುಧನೇಮಿಚಂದ್ರನ ಜಗನ್ನುತಜನ್ನನ ರಂಜಿಪಗ್ಗಳ ।
ಯ್ಯನ ಕೃತಿಸೌಂದರೀಸುಭಗಮಾವಗಮಿರ್ಕೆ ಮದೀಯಕಾವ್ಯದೊಳ್ ॥

ತನ್ನ ಗುಣಗಳನ್ನೂ ಕವಿತಾಚಾತುರಿಯನ್ನೂ ಈ ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ :—

ವರಶಬ್ದಜ್ಞರನರ್ಥದರ್ಶಿಗಳನುಕ್ತಿಪ್ರೌಢರಂ ಭಾವತ ।
ತ್ಪರರಂ ನೀತಿವಿದರ್ಕಳಂ ರಸಿಕರಂ ಸಾಹಿತ್ಯದೊಳ್ ಸಂದ ಜಾ ॥
ಣರನಾಂದೋಳಶಿರಸ್ಸರೋಜಮುಖರಂ ಮಾೞ್ಪುಕ್ತಿಚಾತುರ್ಯಬಂ ।
ಧುರನೊರ್ವಂ **ಕವಿಕಂಜಗರ್ಭ**ನುರುವಾಕ್ಸಂದರ್ಭನಿಂತುರ್ವಿಯೊಳ್[3] ॥

ಸತ್ಕವಿಕಮಳಭವನ ಭಾ । ಸ್ವತ್ಕವಿತಾಕಾಮಧೇನು ತಾನಖಿಳಬುಧೌ ।
ದ್ಯತ್ಕಾಮಿತಾರ್ಥಭಾವರ । ಸೋತ್ಕರಮಂ ಕಱೆವುದಸ್ತಿ ಕಾವ್ಯಸ್ಥಳಿಯೊಳ್ ॥
**ಕಮಳಭವ**ನ ಕವಿತಾರಸ । ಮಮರ್ದಿನ ತನಿವೊನಲನಂಗಮೋಹನಬಾಣಂ ।
ರಮಣೀಯಮಧುರರುತಿ ಬಾ । ಳಮರಾಳದ ನಲ್ಮೆಯಾಟಮಿನಿಯಳ ಕೂಟಂ ॥

ವಿಮಳವಿಭಾಸ್ವದೇಕಮುಖನುನ್ನತಸನ್ಮತಿಸುಪ್ರಕಾಶನು ।
ತ್ತಮಚರಿತಾಂಚಿತಂ ಸಕಳಜೀವಹಿತಾಗಮವರ್ಧನೀಕ್ಷ್ಯತೋ ॥
ದ್ಯಮನಮದಾತ್ಮನಪ್ರತಿಹತಂ ದಿಟಮೆಂದೊಲವಿಂದಜಸ್ರಿಯೆ ।
ಕಮಲಭವಾಸ್ಯಪದ್ಮಮನೆ ಪೊರ್ದಿದಳೇಂಗಡ ವಾಣಿ ಜಾಣೆಯೋ ॥

---

1. ಈತನು ಗುರುಪರಂಪರೆಯನ್ನು ಸ್ತುತಿಸುವಾಗ ವಿನಯೇಂದುವ್ರತಿ ಎಂಬ ಒಬ್ಬ ಗುರುವನ್ನು ಸ್ಮರಿಸಿ, ಅವನಿಗೆ " ಸಿಂಹಣೋರ್ವೀಶ್ವರಂ ವಿನಮನ್ಮಸ್ತಕನಾದಂ " ಎಂದು ಹೇಳಿದ್ದಾನೆ. ಈ ಸಿಂಹಣನು ದೇವಗಿರಿಯ ಯಾದವರಾಜರಲ್ಲಿ ಒಬ್ಬನು. ಇವನು 1210 ರಿಂದ 1247 ರ ವರೆಗೆ ಆಳಿದಂತೆ ತಿಳಿಯುತ್ತದೆ.

2 ಪುಟ 314.

3. ಈ ಪದ್ಯವು ಇದೇ ಆನುಪೂರ್ವಿಯಲ್ಲಿ ಕುಸುಮಾವಳಿಯಲ್ಲಿಯೂ ದೊರೆಯುತ್ತದೆ. ಪುಟ 315.

ಇವನ ಗ್ರಂಥ

## ಶಾಂತೀಶ್ವರಪುರಾಣ.

ಇದು ಹದಿನಾರನೆಯ ತೀರ್ಥಕರನಾದ **ಶಾಂತಿನಾಥನ** ಚರಿತವು; 16 ಆಶ್ವಾಸಗಳಾಗಿ ಭಾಗಿಸಲ್ಪಟ್ಟಿದೆ. ಗ್ರಂಥಾವತಾರದಲ್ಲಿ ಕವಿ ಶಾಂತೀಶ್ವರನನ್ನು ಸ್ತುತಿಸಿದ್ದಾನೆ; ಬಳಿಕ ಸಿದ್ಧಾದಿಗಳು, ಕೇವಲಿಗಳು, ಅನುಬದ್ಧಕೇವಲಿಗಳು, ಶ್ರುತಕೇವಲಿಗಳು, ಗಣಧರರು, ಯಕ್ಷಯಕ್ಷಿಯರು,- ಸರಸ್ವತಿ, ಇವರನ್ನು ಸ್ಮರಿಸಿ ಅನಂತರ ಕೊಂಡಕುಂದನಿಂದ ಮಾಘಣಂದಿ ಪಂಡಿತಯತಿಯವರೆಗೆ ಗುರುಗಳನ್ನು ಪ್ರಾಜ್ಞವಾಗಿ ಸ್ತುತಿಸಿದ್ದಾನೆ.[1]

ಆಶ್ವಾಸಗಳ ಕೊನೆಯಲ್ಲಿ ಈ ಗದ್ಯವಿದೆ:—

ಇದು ವಿನಮದಮರೇಂದ್ರಮೌಳಿಮಣಿಕಿರಣಮಾಲಾಪರಾಗಪರಿರಂಜಿತ ಚರಣಸರಸಿರುಹರಾಜಿತಪರಮಜಿನರಾಜಸಮಯಸಮುದಿತ ಸದಮಳಾಗಮಸುಧಾಶರಧಿಶರದಿಂದು ಶ್ರೀಮಾಘಣಂದಿಪಂಡಿತಮುನೀಶ್ವರಮನೋಜನಿತನಿರುಪಮದಯಾಸರಸ್ಸರಸೀಸಂಭೂತಸಂಭವಾಮಳ ಸುಕವಿಕಮಳಭವವಿರಚಿತಮಪ್ಪ ಶಾಂತೀಶ್ವರಪರಮಪುರಾಣದೊಳ್.

ಈ ಗ್ರಂಥವು ಲಲಿತವಾಗಿದೆ. ಕವಿ ಧಾರಾಳವಾಗಿ ಬರೆಯುತ್ತಾನೆ. ಪದಗಳು ನಿರರ್ಗಳವಾಗಿ ಓಡುತ್ತವೆ. ಕಾವ್ಯದಲ್ಲಿ ವರ್ಣನೀಯಾಂಶಗಳೆಲ್ಲಾ ಚೆನ್ನಾಗಿ ವರ್ಣಿತವಾಗಿವೆ.

ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

### ಮಳೆ.

* ಪರಿವ ಜಳಪ್ರವಾಹಕುಳದಿಂ ನೆಱೆ ಕಚ್ಚರಿವೋಗೆ ಭೂಧರೋ |
ತ್ಕರಮಿರದೆಯ್ದೆ ಬೇರ್ಕೊಱೆದಡಂಗೆಡೆಯುತ್ತಿರೆ ಪೆರ್ಮರಂಗಳು ||
ರ್ವರೆಯಘಮರ್ಷಣಕ್ರಿಯೆಯನಾಂತುದು ನಾಡೆಯುಮೆಂಬಿನಂ ಕರಂ |
ಸುರಿದುದು ಭೋರೆನುತ್ತೊಗೆದ ಕಾರ ಮುಗಿಲ್ ಮೞೆಯುಂ ನಿರಂತರಂ || 832 ||

---

1. ಕೊಂಡಕುಂದ, ಭೂತಬಲಿ, ಪುಷ್ಪದಂತ, ಜಿನಸೇನ, ವೀರಸೇನ. ಅಕಳಂಕಚಂದ್ರ. ಆರ್ಯದ್ವಲಿ, ಜಟಾಸಿಂಹನಂದಿ, ಗೃಧ್ರಪಿಂಛ, ಸಮಂತಭದ್ರ, ಕವಿಪರಮೇಷ್ಠಿ. ಪೂಜ್ಯಪಾದ, ಕುಲಚಂದ್ರವ್ರತಿ. ಕನಕನಂದಿಮುನಿ, ಶ್ರುತಕೀರ್ತಿ, ನಯಕೀರ್ತಿಮುಮುಕ್ಷು, ಅಭಯಚಂದ್ರಮುನಿ, ವೀರಣಂದಿವ್ರತಿ, ಮಾಘಣಂದಿ, ವರ್ಧಮಾನವ್ರತಿ, ದೇವಚಂದ್ರವ್ರತಿ, ರಾಮನಂದಿವ್ರತಿ, ನೇಮಿಚಂದ್ರ, ಶ್ರುತಕೀರ್ತಿ ಭಟ್ಟಾರಕ, 'ಸಿಂಹಣಂ ವಿನಮನ್ಮಸ್ತಕ' ನಾದ ವಿನಯೇಂದುವ್ರತಿ, ಬಾಳಚಂದ್ರಮುನಿ, ಪದ್ಮಸೇನವ್ರತಿ, ಜಯಕೀರ್ತಿವ್ರತಿ, ಕುಮುದೇಂದುಯೋಗಿಶಿಷ್ಯ ಮಾಘಣಂದಿಮುನಿ. ಜಯಕೀರ್ತಿವ್ರತಿ, ಬಾಳಚಂದ್ರ ಪಂಡಿತಯತಿ, ಪ್ರಭಾಚಂದ್ರಮುನಿ, ಕಾಣೂರ್ಗಣದ ಭಾನುಕೀರ್ತಿಮಲಧಾರಿ, ವಾದೀಭವಜ್ರಾಂಕುಶ ತರ್ಕಜ್ಞ ಹೇಮನಂದಿವ್ರತಿ, ಶ್ರುತಕೀರ್ತಿ, ಸ್ವಗುರು ಮಾಘಣಂದಿಪಂಡಿತಯತಿ.

* ಈ ಚಿಹ್ನೆಯಿರುವ ಪದ್ಯವು ಕುಸುಮಾವಳಿಯಲ್ಲಿಯೂ ಇದೆ.

## ಮಾಗಿ.

* ತನಿವಡಹಕ್ಕೆ ಕೋಡಿ ತನುವೊರ್ಬುಳಿವಂದು ಕೊರಲ್ಕನುಂಗಿ ಮೇ |
ಪಿನ ಪುದಿದಿಚ್ಛೆಯಚ್ಚೞಿದು ಕರ್ಣಮೆೞಲ್ದು ಕರಂ ಕೞಲ್ದು ಕಂ ॥
ಪನಮೆಡೆಗೊಂಡು ಕಿೞ್ಬಸುಱನೆೞ್ದು ನವಿರ್ಗೊನೆಯಿಂದೆ ತಳ್ತು ತ |
ಣ್ಣನಿವಿಡುತುಂ ಮೃಗಪ್ರಕರಮಿರ್ದುದು ಕಾನನದೊಂದು ಸಾನಲೊಳ್ ॥ 833 ॥

* ಪಕ್ಕದಿಱುಂಬಿನೊಳ್ ಮಱೆಯನಿಟ್ಟು ಕುಲಾಯಮನೊತ್ತುಗೊಂಡು ಮೆ |
ಯ್ಯಿಕ್ಕಿ ಕೊರಲ್ಕನುಂಗಿ ನವಿರಗ್ರದೊಳಾವನಿಪುಲ್ಲ ಬಿಂದುಗಳ್ ॥
ತೆಕ್ಕನೆ ತೀವೆ ಮುತ್ತಿನ ವಿಹಂಗಮದಂತೆ ವಿಹಂಗಸಂಕುಳಂ |
ಪೊಕ್ಕಳಮಾಗಿ ಮಾಗಿಯೊಳಗಿರ್ದುದು ಪಾಱದೆ ಮುಂಬಗಲ್ವರಂ ॥ 834 ॥

* ಸಲೆ ನೆಲೆದೋಱದಾನದಿಯ ಕರ್ಮಡುವಂ ಪೊಱಮಟ್ಟು ಕೋಟವು |
ಗ್ಗಲಿಸೆ ಬಿಸಿಲ್ಗೆ ಮೆಯ್ಯನದವೊಡ್ಡಿ ತದೀಯತಟಂಗಳಲ್ಲಿಯಾಂ ॥
ಚಿಲ ಕಡೆಗೊಂಬುಗಳ್ ತುಱುಗಿ ಬಿರ್ದವೊಲಿರ್ದುವು ಮುಂಬಗಲ್ವರಂ |
ತೊಲಗದನಾಕುಳಂ ಮೊಸಳೆಗಳ್ ನೆಱೆದೊತ್ತರಮಾಗಿ ಮಾಗಿಯೊಳ್ ॥ 835 ॥

## ಕತ್ತಲೆ.

ಮೆಟ್ಟಿದುದಲ್ಲದಿಲ್ಲುೞಿದ ಭೂತಳಮೆಣ್ದೆಸೆಗಳ್ ನಭಸ್ಥಳಂ |
ತೊಟ್ಟನೆ ಮಾಯಮಾಯ್ತು ತನುವಿರ್ದಪುದಿಲ್ಲೆನುತುಂ ಕರಾಗ್ರದಿಂ ॥
ಮುಟ್ಟುತುಮಿರ್ದ ತಾಣದೊಳೆ ಸುಮ್ಮನೆ ವಿಸ್ಮಯದಿಂ ಜನೋತ್ಕರಂ |
ನಟ್ಟವೊಲಿರ್ಪಿನಂ ನಿಮಿರ್ದು ಪರ್ವಿದುದುರ್ವಿ ಮಹತ್ತಮಂ ತಮಂ ॥ 836 ॥

## ಬಾಳೆ.

ಅರವಿರಿದೊಪ್ಪುವ ಪಣ್ಗಳ್ | ಬೆರಸಿದ ಬಿಣ್ಗೊನೆಗಳಿಂದೆ ಪಥಿಕರ ಕಣ್ಗ |
ಚ್ಚರಿವಡೆವ ಬಿಡದೆ ಬಾಯುಂ | ಬಿರಿಯಿಸುತೆಸೆದಿರ್ಪುವಲ್ಲಿ ಬಾೞೆಯ ಮರಗಳ್
॥ 837 ॥

## ಬೆಳುದಿಂಗಳು.

* ನಾಡೆ ಬಯಲ್ಗೆ ಬಿೞ್ದ ತಮಮುಂ ತವೆ ನುಣ್ಣನೆ ನುಂಗಿ ಕೆಟ್ಟು ಬಿ |
ಟ್ಟೋಡಿ ಕುಜಚ್ಛದಂಗಳಿಱುಬಂ ನೆಱೆ ಪೊಕ್ಕ ತಮಿಸ್ರಮಲ್ಲಿಯ ॥
ಬ್ಬೆಕ್ಕಡೆ ಪೊರಳ್ದು ತೂಳ್ದು ಕಡುಪಿಂ ಕೆದಱಟ್ಟಿ ಮಹಾಂಧಕಾರಮಂ |
ಕೂಡೆ ಗುಹಾಳಿಯಂ ಪುಗಿಸುತಿರ್ದುವು ಚಂದ್ರನ ಸಾಂದ್ರರಶ್ಮಿಗಳ್ ॥ 838 ॥

---

* ಈ ಚಿಹ್ನೆಯಿರುವ ಪದ್ಯಗಳು ಕುಸುಮಾವಳಿಯಲ್ಲಿಯೂ ಇವೆ.

## ಮುಂಜಾನೆಯ ಕೋೞಿ.

* ತನುವಂ ತಳ್ಪೊಯ್ಯೆ ತಂಗಾೞಿಯ ಪದೆಪಿನೊಳೆಚ್ಚತ್ತು ಪಕ್ಷಂಗಳೊಳ್ ಪ |
ಟ್ಟನಿತುಂ ಪೋತಂಗಳಂ ವೀಕ್ಷಿಸುತೆಱಕೆಗಳಂ ಮೆಲ್ಲನುರ್ಚುತ್ತೆ ನಿಂದೊ ||
ಯ್ಯನೆ ಸಾರ್ದ್ರತ್ರೋಟಿಯಿಂ ತೊಟ್ಟೆಡೆದು ಗಱಿಗಳಂ ನುಣ್ಪಿರ್ ಬಿರ್ಚಿ ಮೆಯ್ಯಂ |
ತೊನೆದುದ್ದಂ ನೀಡಿ ಗೋಣಂ ನವದಿನಮುಖದೊಳ್ ಕುಕ್ಕುಟಂ ಕೂಗಿತಾಗಳ್
|| 839 ||

## ಚಿನ್ನವರದರು.

ಒರೆಯುಂ ನೋಡದೆ ನೋಡೆ ಚಿನ್ನಮನೆ ಕಂಡಾಚಿನ್ನಮುಂ ಬಣ್ಣದಂ |
ತರಮುಂ ತಪ್ಪದೆ ಪೇೞ್ವ ತೂಗದೆನಸುಂ ಕೈತೂಕದಿಂ ತೂಕದಂ ||
ತರಮುಂ ಪುಟ್ಟಗೆ ಪೇೞ್ವ ಮಚ್ಚಮನೆ ಲೀಲಾಮಾತ್ರದಿಂ ಕಟ್ಟುವ |
ಚ್ಚರಿಯಿಂದಾಪುರದಲ್ಲಿ ಚಿನ್ನವರದರ್ ತಾವಿಂತು ವಿಭ್ರಾಜಿಪರ್ || 840 ||

## ಮಂಡಗೆ.

ಶರದದ ನವಚಂದ್ರಿಕೆಯುಂ | ಪೊರೆಯೆತ್ತಿದ ತೆಱದೆ ಮಿಱುಪ ಬೆಳ್ಪಿಂ ತೆಳ್ಪಿಂ |
ಪಿರಿದೆಸೆವ ಮಂಡಕಾಪರಿ | ಕರಮುಂ ಬಡ್ಡಿಸಿದರಸಪಳಂ ಸುರಸತಿಯರ್ || 841 ||

## ಇಡ್ಡಲಿಗೆ.

ಸುರಸಿಂಧುಫೇನಪಿಂಡೋ | ತ್ಕರಮಿವೆನಲ್ ಕಾಂತಿವೆತ್ತು ನಗಣದ ತೆಱದಿಂ |
ಪಿರಿದುಂ ಲಘುತ್ವದಿಂ ಬಿ | ತ್ತರಿಪಿಡ್ಡಲಿಗೆಗಳನಂತವರ್ ಬಡ್ಡಿಸಿದರ್ || 842 ||

## ಶಾಲ್ಯನ್ನ.

ಕಱೆಗಳೆದ ಶಶಿಯ ತಣ್ಣದಿ | ದುರ್ಱುಂಗಲಂ ನಗುವ ತೆಱದ ನೀಳ್ಪಿಂ ಬೆಳ್ಪಿಂ |
ನೆಱೆ ಮಿಱುಗುವ ಶಾಲ್ಯನ್ನಮ | ನೆಱಕದಿನಮಳೇಂದುವದನೆಯರ್ ಬಡ್ಡಿಸಿದರ್
|| 843 ||

## ಮೊಸರು.

ಅಧರೀಕೃತಶಾರದನೀ | ರಧರದ್ಯುತಿಯೆನಿಪ ಕೆನೆಯನೊಳಕೆಯ್ದಿರ್ಪ |
ಮಧುರಾಮ್ಲಮಪ್ಪ ದಧಿಯಂ | ವಿಧುವದನೆಯರೊಸೆದು ನಿಸದಮನೆ ಬಡ್ಡಿಸಿದರ್
|| 844 ||

## ಪಾಯಸ.

ಪೊಳೆವ ಶರಚ್ಚಂದ್ರಿಕೆಯೊಳ್ | ಮುೞುಂಕಿ ನಸುದೋರ್ಪ ತಾರೆಗಳ ತೆಱದಿಂ ಕಂ |
ಗೊಳಿಸಿ ಮಗಮಗಿಪ ಮಣಸರ | ವಳಿಗೆಯ ಪಾಯಸಮನಸದಳಂ ಬಡ್ಡಿಸಿದರ್
|| 845 ||

---

* ಈ ಚಿಹ್ನೆಯಿರುವ ಪದ್ಯವು ಕುಸುಮಾವಳಿಯಲ್ಲಿಯೂ ಇದೆ.

## ಆಂಡಯ್ಯ. ಸು. 1235.

ಈತನು ಕಬ್ಬಿಗರಕಾವವನ್ನು ಬರೆದಿದ್ದಾನೆ. ಇವನು ಜೈನಕವಿ. ಇವನ ಅಜ್ಜನು "ಅರುಹಂಗಲ್ಲದೆಜಗದ ಲೆಕ್ಕಿಗರ ಪಿರಿಯನೆನಿಪ" ಆಂಡಯ್ಯ. ಈ ಆಂಡಯ್ಯನಿಗೆ ಸಾಂತ ಗುಮ್ಮಟ ವೈಜಣ ಎಂಬ ಮೂವರು ಮಕ್ಕಳಿದ್ದರು. ಇವರಲ್ಲಿ ಜ್ಯೇಷ್ಠನಾದ ಸಾಂತನ ಹೆಂಡತಿ ಬಲ್ಲವ್ವೆ. ಈ ದಂಪತಿಗಳ ಮಗನೇ ಕವಿ ಆಂಡಯ್ಯ. ಈತನು 'ಲೆಕ್ಕಿಗರರಸಂ'[1] ಎಂದು ತನ್ನನ್ನು ವಿಶೇಷಿಸಿ ಹೇಳಿಕೊಂಡಿದ್ದಾನೆ. ಗ್ರಂಥಾರಂಭದಲ್ಲಿ ದೇಶವರ್ಣನಾವಸರದಲ್ಲಿ 'ಕನ್ನಡವೆಸಿಪ್ಪಾನಾಡು ಚೆಲ್ವಾಯ್ತು' ಎಂದು ಹೇಳಿದ್ದಾನೆ; ಗ್ರಂಥಾಂತ್ಯದಲ್ಲಿ ತನ್ನ ಗ್ರಂಥವು "ರಾಯನ ಸಾಲ್ಕೆಳೊಳಿರ್ಕೆ ನಿಚ್ಚಮುಂ" ಎಂದು ಬರೆದಿದ್ದಾನೆ. ಕನ್ನಡದೇಶದ ಆವ ಭಾಗದಲ್ಲಿ ಆವ ರಾಯನ ನಾಡಿನಲ್ಲಿ ಇವನು ಇದ್ದನೋ ತಿಳಿಯದು.

ಇವನು ಪೂರ್ವಕವಿಗಳಲ್ಲಿ **ಜನ್ನ**ನನ್ನು (1230) ಸ್ಮರಿಸುವುದರಿಂದ ಆತನಿಗೆ ಈಚೆಯವನಾಗಿಯೂ **ಮಲ್ಲಿಕಾರ್ಜುನ**ನು (ಸು. 1245) ಇವನ ಗ್ರಂಥದಿಂದ ಪದ್ಯಗಳನ್ನು ಅನುವಾದಮಾಡಿರುವುದರಿಂದ ಅವನಿಗೆ ಹಿಂದಣವನಾಗಿಯೂ ಇದ್ದಿರಬೇಕು; ಸುಮಾರು 1235 ರಲ್ಲಿ ಇದ್ದಿರಬಹುದು.

"ಹಿಂದಣ ಕವಿಗಳು ಸಂಸ್ಕೃತಪದಗಳನ್ನು ಬೆರಸದೆ ಕನ್ನಡದಲ್ಲಿ ಕಾವ್ಯವನ್ನು ಬರೆದಿಲ್ಲ. ನೀನು ಇಂಥ ಗ್ರಂಥವನ್ನು ಮಾಡಬೇಕು" ಎಂದು ವಿದ್ವಾಂಸರು ಹೇಳಲು ಅವರ ಬಯಕೆಯನ್ನು ಸಲಿಸುವುದಕ್ಕಾಗಿ 'ಅಚ್ಚಗನ್ನಡ' ದಿಂದ ಈ ಗ್ರಂಥವನ್ನು ಬರೆದಂತೆ ಹೇಳಿಕೊಂಡಿದ್ದಾನೆ.

ಪೂರ್ವಕವಿಗಳನ್ನು ಈ ಪದ್ಯದಲ್ಲಿ ಸ್ಮರಿಸಿದ್ದಾನೆ :—

ಎನ್ನೀಕಬ್ಬದೊಳೆಂದುಂ । ಸನ್ನಿದಮಾಗಿರ್ಕೆ ಕಣ್ಣಪಯ್ಯನ ಕಡುಜಾಣ್ ।
ರನ್ನನ ಮೆಯ್ಸಿರಿ ಗಜಗನ । ಬಿನ್ನಣಮುಗ್ಗಳನ ಕಾಣ್ಕೆ ಜನ್ನಿಗನ ಜಸಂ ॥

ತನ್ನ ಕವಿತಾಚಮತ್ಕೃತಿಯನ್ನು ಈ ಪದ್ಯದಲ್ಲಿ ಸೂಚಿಸಿದ್ದಾನೆ :—

ಸಿಂಗರಮೇಟ್ಟಿಗ್ಗಯಂ ಪಡೆಯೆ ದೇಸೆ ಪೊದಟ್ಟಿದ್ದರೆ ಕೊಂಕು ತೀವೆ ಬ ।
ದ್ದಿಂಗೊಳಗಾದ ಮಾತಮರೆ ಬಲ್ಲವರಾ ಎನೆ ಚೆಂದವೊಂದಿದಾ ॥
ಟ್ಟಿಂ ಗೆಡೆಗೊಂಡು ತೋಱೆ ನನೆವಿಲ್ಲನ ಬೀರಮನೊಲ್ದು ಪೇೞ್ವೆನಾಂ ।
ತಿಂಗಳ ಸೊಂಪು ಗುಜ್ಜುವಡೆದೆಣ್ದೆಸೆಗಂ ಪರಿಗೊಂಡುದೆಂಬಿನಂ ॥

---

1. ಇವನ ಅಜ್ಜನಿಗೂ ಈ ವಿಶೇಷಣವಿರುವುದರಿಂದ ಇವರು ಸೇನಬೋವರಾಗಿದ್ದಿರಬಹುದೆಂದು ತೋರುತ್ತದೆ.

ಇವನ ಗ್ರಂಥ—

## ಕಬ್ಬಿಗರಕಾವ.

ಈ ಗ್ರಂಥಕ್ಕೆ ಅಕ್ಕರಿಗರು ಸೊಬಗಿನಸುಗ್ಗಿ ಎಂಬ ಹೆಸರನ್ನೂ ಸಂಸ್ಕೃತವನ್ನು ತಿಳಿದವರು ಮದನವಿಜಯ ಎಂಬ ಹೆಸರನ್ನೂ ಕೊಟ್ಟಂತೆ ಹೇಳುತ್ತಾನೆ. ಗ್ರಂಥಾಂತ್ಯದ ಗದ್ಯದಿಂದ ಇದಕ್ಕೆ "ಕಾವನ ಗೆಲ್ಲ" ಎಂಬ ಹೆಸರೂ ಇರುವಂತೆ ತಿಳಿಯುತ್ತದೆ. ಇದಕ್ಕೆ ಸಂಸ್ಕೃತ ಸಹೋದರಿ ಎಂಬ ಹೆಸರೂ ಉಂಟು. ಈ ಗ್ರಂಥದಲ್ಲಿ ಗದ್ಯಪದ್ಯಗಳು ಸುಮಾರು 350 ಇವೆ; ಆಶ್ವಾಸಾದಿವಿಭಾಗಗಳಿಲ್ಲ.

ಶಿವನು ಚಂದ್ರನನ್ನು ಸೆರೆಹಾಕಿದನೆಂದು ಕೇಳಿ ಕುಪಿತನಾದ ಮನ್ಮಥನು ಸೈನ್ಯದೊಡನೆ ಯುದ್ಧಕ್ಕೆ ಹೊರಟು ಶಿವನ ಮೇಲೆ ಬಾಣಪ್ರಯೋಗಮಾಡಿ ಶಿವನಿಂದ ಪತ್ನೀವಿಶ್ಲೇಷರೂಪವಾದ ಶಾಪವನ್ನು ಪಡೆದು ನನೆಯಂಬನಾಗಿ ಒಂದು ದಿನ ಉದ್ಯಾನವನದಲ್ಲಿ ಒಬ್ಬ ಅಪ್ಸರಸ್ತ್ರೀಯಿಂದ ಈ ವೃತ್ತಾಂತವನ್ನು ಕೇಳಿ ಶಾಪದಿಂದ ವಿಮುಕ್ತನಾಗಿ ಪತ್ನಿಯೊಡಗೂಡಿ ಸುಖವಾಗಿದ್ದನು—ಎಂಬುದೇ ಈ ಗ್ರಂಥದ ಕಥಾಗರ್ಭ.

ಈ ಗ್ರಂಥದ ಉತ್ಕೃಷ್ಟತೆಯನ್ನು ಕವಿ ಈ ಪದ್ಯಗಳಲ್ಲಿ ಹೇಳಿದ್ದಾನೆ:—

ಒಪ್ಪಂಬೂಸಿದವೋಲ್ ತೆಱಂಬೊಳೆವ ಕೊಂಕುಂ ಪಾಲೊಳೊಂದಿರ್ಪವೋ ।
ಲೊಪ್ಪಂಬೆತ್ತಿನಿದಾವ ಬದ್ದುಗನುಡಿಯುಂ ತಳ್ತೋಜೆಯುಂ ಸಿಲ್ಕಿನಂ ॥
ತಪ್ಪೊಂದುಂ ತಲೆದೋಱದಂತೆ ಪಲರೆಲ್ಲರ್ ತಿರ್ದಿದೀಕಬ್ಬಮೆಂ ।
ತಪ್ಪಂಗಂ ಪೊಸಮುತ್ತಿನೆಕ್ಕಸರದಂತೆಂದುಂ ಕೊರಲ್ಗೊಳ್ಪದೇ ॥
ಎಳಗಿಳಿವಿಂಡಿನಂತೆ ಮಿಳಿರ್ದಾಡುವ ತುಂಬಿಯ ಬಂಬಲಂತೆ ಕೆಂ ।
ದಳಿರ್ಗಳ ತೊಂಗಲಂತೆ ನಡೆ ನೋಡುವ ಪೆಂಡಿರ ನೋಟದಂತೆ ಪೂ ॥
ಗಳ ಪೊಸಗಂಪಿನೊಳ್ ಪೊರೆದು ತೀಡುವ ತೆಂಬೆಲರಂತೆ ತೋರ್ಪ ತಿಂ ।
ಗಳ ಸಿರಿಯಂತೆ ಸೋಲಿಸದೆ ಕಾವನ ಕಬ್ಬಮುದಾರನಾದೊಡಂ ॥

ಅಲ್ಲದೆ ಈ ಗ್ರಂಥವು 'ದೇಸಿಯ ಗೊತ್ತು' 'ಜಾಣ್ನುಡಿಯ ತಾಯ್ವನೆ' 'ನುಣ್ಬರುಳೀೞ್ಗೆ' ಎಂದು ಹೇಳಿ, "ಕನ್ನಡದೊಳ್ಪಿನ ನುಡಿಯಂ ಮುನ್ನಿದಱೊಳೆ ನೋಡಿ ತಿಳಿದುಕೊಳ್ವುದು ಚದುರಂ" ಎಂದೂ ಹೇಳಿದ್ದಾನೆ.

ಗ್ರಂಥಾವತಾರದಲ್ಲಿ ಮನ್ಮಥನನ್ನು ಸ್ತುತಿಸಿದ್ದಾನೆ; ಬಳಿಕ ತ್ರಿಮೂರ್ತಿಗಳನ್ನೂ ಸರಸ್ವತಿಯನ್ನೂ ಹೊಗಳಿದ್ದಾನೆ. ಗ್ರಂಥಾಂತ್ಯದಲ್ಲಿ—

ಇದು ಪಸುಳೆವಿಸಿಲ ಮಸಕದಿನೆಸಟ್ಟಿ ಸಪ ಪೊಸದಾವರೆಯ ಪಸೆಯೊಳಸದಳಮೆಸೆವ ಸರಸತಿಯಡಿದಳಿರ್ಗೆ ತಲೆದುಡಿಗೆಯೆನೆ ಪೆಸರ್ವಡೆದ ಬಿಜ್ಜೆವಲದಿಂ ಸಮೆದ ಕಾವನಗೆಲ್ಲಂಮೆಱೆಯುತಿರ್ಪುದು

ಎಂಬ ಗದ್ಯವಿದೆ.

ಈ ಗ್ರಂಥವು ತತ್ಸಮಪದಗಳಿಲ್ಲದಂತೆ ತದ್ಭವ ದೇಶ್ಯ ಪದಗಳಿಂದಲೇ ರಚಿತವಾಗಿದೆ. ತದ್ಭವಪದಗಳಿದ್ದರೂ ಕವಿ "ಅಚ್ಚಗನ್ನಡ" ದಿಂದ ಬರೆದಿರುವುದಾಗಿ ಹೇಳುತ್ತಾನೆ. ಈ ವಿಧವಾದ ಮತ್ತಾವ ಗ್ರಂಥವೂ ನಮಗೆ ದೊರೆತಿಲ್ಲ. ಇದರ ಬಂಧವು ಬಹಳ ಲಲಿತವಾಗಿಯೂ ಮಧುರವಾಗಿಯೂ ಇದೆ.

ಈ ಗ್ರಂಥದಿಂದ[1] ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

### ವಸಂತ.

ಬಿರಯಿಗಳಂಜಿ ತಾಱ್ ಪಗಲಾಣ್ಮನ ಮೆಯ್ಯ್ ಬಿಸುಪೇಱ್ ಮಾಗಿ ಚೆ |
ಚ್ಚರದೊಳೆ ಪಾಱ್ ನೀರ್ದೆಗೆದು ಬೆಂಚೆಗಳೊಳ್ ಕೆಸಱಾಱ್ ತುಂಬಿಗಳ್ ||
ಮೊರೆದಲರತ್ತ ಜಾಱ್ ನನೆಯಂ ತರದಿಂದದಿಮುರ್ಚತ್ತೆ ಪೇಱ್ ತಾ |
ವರೆ ತಲೆದೋಱ್ ತೀಡಿದುದು ತೆಂಕಣ ಗಾಳಿ ಬಸಂತದೇೞ್ಗೆಯೊಳ್ || 846 ||

### ಗಾಳಿ.

ತಳಿರಂ ಮೆಲ್ಲನೆ ನೂಂಕಿ ಮಾವಿಡಿಗಳಂ ಸೆಂಡಾಡುತುಂ ಕೂಡೆ ಪೂ |
ಗಳ ದೂಳಿಂ ಪೊರೆಯೇಱುತುಂ ಸೊನೆಗಳೊಳ್ ನೀರಾಟಮಂ ಮಾಡುತುಂ ||
ಬಟ್ಟೆಯಂ ಕೆಯ್ಮಿಗೆ ಬರ್ಪ ತುಂಬಿಯುಲಿಯಿಂದಂ ಡಂಗುರಂಬೊಯ್ಯುತುಂ |
ತಳರ್ದೇಂ ಬಂದುದೊ ಕಾವನಾನೆಯವೊಲಾ ತಣ್ಗಾಳಿ ತನ್ನಿಚ್ಚೆಯಿಂ || 847 ||

### ಮಾವು.

ಕನಗೊರ್ನರಿರ್ಕೆ ನುಣ್ದಳಿರ ಬಾಟ್ಟನೆ ಕೆಂದಳಿರಿರ್ಪ ಬೀದು ಬ |
ಲ್ಲನೆಯ ಪೊದಱ್ ಮುಗುಳ್ನನೆಯ ಪೆರ್ಮನೆ ಮೊಗ್ಗೆಯ ತಾಣಮಚ್ಚವೂ ||
ವಿನ ನೆಱೆ ಸಣ್ಣಗಾಯ ಬಲುಗಾಯ ಪೊಟ್ಟಲ್ ನಸುದೋರೆವಣ್ಣ ತಾ |
ಯ್ಯನೆ ಪೊಸವಣ್ಣ ಗೊತ್ತಿದೆನೆ ಕಣ್ಗೆಸೆದಿರ್ದುದದೊಂದು ಮಾಮರಂ || 848 ||

### ಪುಷ್ಪಬಾಣದ ಮಹಿಮೆ.

ಕಡುಪಿಂ ಪೂವಿನ ಕೋಲ್ಗಳ್ | ಗಡಣಿಸಿ ಕವಿತಂದು ನಾಂಟುವಾಗಳ್ ನಿನ್ನೀ |
ಜಡೆಯುಂ ತೊವಲುಂ ಪಾವಿನ | ತೊಡವುಂ ಲಾಗುಳಮುಮಡ್ಡಮೇಂ ಬಂದಪುವೇ
|| 849 ||

ಇವು ಮುನ್ನಾರಾರ ಬಲ್ಪಂ ನೆಲೆಗಿಡಿಸವಿವಾರಾರ ತಕ್ಕಂ ನೆಲಕ್ಕಿ |
ಕ್ಕವಿವಾರಾರುರ್ಕನೊತ್ತಂಬಡೆದು ಕಿಡಿಸವಾರಾರ ಕಾಯ್ಪಿಲ್ಲಮಂ ನೂಂ ||

1 ಈ ಗ್ರಂಥದಲ್ಲಿಯ "ತನಿಪಣ್ಣಂ ಲಂಚವಿಾವೇಂ"—(318) ಎಂಬ ಪದ್ಯವನ್ನು ಭಟ್ಟಾಕಳಂಕನು (1604) ಶಬ್ದಾನುಶಾಸನದಲ್ಲಿ 442 ನೆಯ ಸೂತ್ರದ ಕೆಳಗೆ ಉದಾಹರಿಸಿದ್ದಾನೆ

ಕವಿವಾರಾರೇಟಿಗ್ಗೆಯುಂ ಕುಂದಿಸಿ ಕಳೆಯುವವಾರಾರ ಕಲ್ಮೆಯ್ಗಳೊಳ್ ನಾಂ ।
ಟವೆನುತ್ತುಂತಲ್ಲರುಂ ಬಾಯ್ವಿಡೆ ಗಡಣದೆ ಪೂಗೋಲ್ಗಳೆಯ್ತುಂದುವಾಗಳ್
॥ 850 ॥

**ಸತ್ಕಾವ್ಯ.**

ಪುರುಳುಂ ಲಕ್ಕಣಮುಂ ಮ । ಯ್ಸಿರಿಯುಂ ತಳ್ತಿಸೆಯೆ ಪೇಟ್ದ ಕಬ್ಬಮದೆಂತುಂ ।
ಪುರುಳುಂ ಲಕ್ಕಣಮುಂ ಮ । ಯ್ಸಿರಿಯುಂ ತಳ್ತಿಸೆವ ರನ್ನದಂತೆರ್ದವುಗದೇ
॥ 851 ॥

---

## ಮಲ್ಲಿಕಾರ್ಜುನ. ಸು. 1245.

ಈತನು **ಸೂಕ್ತಿಸುಧಾರ್ಣವವೆಂಬ** ಗ್ರಂಥವನ್ನು ಬರೆದಿದ್ದಾನೆ. ಇವನು **ಚೋರಕಥೆಯೆಂಬ** ಗ್ರಂಥವನ್ನೂ ಬರೆದಿರಬಹುದೆಂದು ಮೆ॥ ರೈಸ್ ಹೇಳುತ್ತಾರೆ.[1] ಆದರೆ ಈ ಚೋರಕಥೆ ಆಧುನಿಕನಾದ ಒಬ್ಬ **ಮಲ್ಲಿಕಾರ್ಜುನರಾಯನೆಂಬವನಿಂದ** ತ್ರಿಪದೀರೂಪವಾಗಿ ಬರೆಯಲ್ಪಟ್ಟಿದೆ. ಈ ಕವಿಗೂ ಆ ಗ್ರಂಥಕ್ಕೂ ಏನೂ ಸಂಬಂಧವಿಲ್ಲ. ಸೂಕ್ತಿಸುಧಾರ್ಣವದಲ್ಲಿ ಕವಿ ಕಾವ್ಯಾಂಗಗಳ ವರ್ಣನಾರೂಪವಾದ ಪದ್ಯಗಳನ್ನು ಪೂರ್ವಕವಿಗಳ ಗ್ರಂಥಗಳಿಂದ ಸಂಗ್ರಹಿಸಿದ್ದಾನೆ. ಆದರೂ 'ಸರಸಕವೀಶ್ವರಸಭೆಯೊಳ್ ಸರಸಕವೀಶಂ' ಎಂದು ತನ್ನನ್ನು ವಿಶೇಷಿಸಿ ಹೇಳಿಕೊಂಡಿರುವುದರಿಂದ ಈತನು ಸ್ವತಂತ್ರವಾದ ಗ್ರಂಥಗಳನ್ನೂ ಬರೆದಿರಬಹುದು. ನಮಗೆ ಅವುವೂ ದೊರೆತಿಲ್ಲ.

ಇವನು ಜೈನಕವಿ. ಈತನಿಗೆ ಮಲ್ಲಪ, ಮಲ್ಲ, ಚಿದಾನಂದಮಲ್ಲಿಕಾರ್ಜುನ ಎಂಬ ಹೆಸರುಗಳೂ ಉಂಟು. "ಯಾದವಕಟಕಾಚಾರ್ಯಸುಕವಿಸುಮನೋಬಾಣಜಾಮಾತೃ" ಎಂಬುದರಿಂದ ಈತನು ಶಬ್ದಮಣಿದರ್ಪಣವನ್ನು ಬರೆದ **ಕೇಶಿರಾಜನ** ತಂದೆಯೆಂದೂ **ಜನ್ನನ** ಸೋದರಿಯ ಗಂಡನೆಂದೂ ತಿಳಿಯುತ್ತದೆ. ಹೊಯ್ಸಳವೀರಸೋಮೇಶ್ವರನ "ವಿನೋದಾಕರ್ಣನ ಕೌತುಕೋತ್ಪಾದಿತಮುಂ" ಎಂಬುದರಿಂದ ಆ ದೊರೆಯ ಕಾಲದಲ್ಲಿ ಈ ಗ್ರಂಥವು ಹುಟ್ಟಿದಂತೆ ತಿಳಿಯುತ್ತದೆ. ವೀರಸೋಮೇಶ್ವರನು 1233 ರಿಂದ 1254 ರ ವರೆಗೆ ರಾಜ್ಯವಾಳಿದಂತೆ ತಿಳಿವುದರಿಂದ ಕವಿ ಸುಮಾರು 1245 ರಲ್ಲಿ ಇದ್ದಿರಬಹುದು. "ಮುನಿಗಳ ಸಭೆಯೊಳ್ ಪರಮಮುನಿ" ಎಂಬುದರಿಂದಲೂ, ಕೇಶಿರಾಜನು "ಯೋಗಿಪ್ರವರ ಚಿದಾನಂದ ಮಲ್ಲಿಕಾರ್ಜುನ" ಎಂಬುದರಿಂದಲೂ ಈತನು ಮುನಿಶ್ರೇಷ್ಠನೆಂದು ತಿಳಿಯುತ್ತದೆ.

---

1 ಶಬ್ದಾನುಶಾಸನದ ಉಪೋದ್ಘಾತ, ಪುಟ 35.

ತಾನು ಅನುವಾದಮಾಡಿರುವ ಪೂರ್ವಕವಿಗಳಲ್ಲಿ ಕೆಲವರ ಹೆಸರನ್ನು ಈ ಪದ್ಯದಲ್ಲಿ ಹೇಳಿದ್ದಾನೆ:—

[1] ಜನ್ನನ ದೇಸೆ ಪಂಪನ ಗುಣಂ ಗುಣನಂದಿಯ ತೊಂಡು ಪೊನ್ನನೊಳ್ ।
ಸನ್ನಿದಮಾದ ಜಾಣ್ನುಡಿ [2] ಗಜಾಂಕುಶರಾಜನ ಚಿತ್ತವೃತ್ತಿ ತಾ ॥
ನುನ್ನತಮಾಗಿ ಸಂದ ಗುಣವರ್ಮನ ಜಾತಿ ಸಮಾನುರಕ್ತಿಯಿಂ ।
ದನ್ನೆಲಸಿರ್ಪುವೀ ಸುಕವಿಮಲ್ಲನ ಕಾವ್ಯವಿಳಾಸಗೇಹದೊಳ್ ॥

ತನ್ನ ಗುಣಗಳನ್ನೂ ಕವಿತಾಚಾತುರಿಯನ್ನೂ ಈ ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ:—

ಸರಸಕವೀಶ್ವರಸಭೆಯೊಳ್ । ಸರಸಕವೀಶಂ ವಿಶಿಷ್ಟಮುನಿಗಳ ಸಭೆಯೊಳ್ ।
ಪರಮಮುನಿ ಬುಧರ ಸಭೆಯೊಳ್ । ಪರಮಬುಧನೆನಿಪ್ಪನೀ ಚಿದಾನಂದಬುಧಂ ॥
ಚದುರೆಸೆವಂತು ಭಾವಮುಮುರ್ವಂತು ನಯಂ ನಿಮಿರ್ವಂತು ಮಲ್ಲಪಂ ।
ಪದವಿಡೆ ಭಾರತೀವನಿತೆ ಭೋಂಕನೆ ಬಂದು ಮನಸ್ಸರೋಜದೊಳ್ ॥
ಚದುರೆಸೆವಂತು ಭಾವಮುಮುರ್ವಂತು ನಯಂ ನಿಮಿರ್ವಂತು ಲೀಲೆಯಿಂ ।
ಪದವಿಡುತಿರ್ಪಳಾಹವದ ಮಾರಣಮಂತ್ರ (?) ಮಿದಾಗದಿರ್ಕುಮೇ ॥

ಇವನ ಗ್ರಂಥ

## ಸೂಕ್ತಿಸುಧಾರ್ಣವ.

ಇದರಲ್ಲಿ ಕಾವ್ಯದ ಅಂಗಗಳೆನಿಸಿಕೊಳ್ಳುವ

ವಾರಿಧಿ ಪರ್ವತಂ ಪುರಮಧೀಶ್ವರನುದ್ವಹನಂ ಕುಮಾರನಂ ।
ಭೋರುಹವೈರಿಮಿತ್ರರುದಯಂ ಋತು ನಂದನಮಂಬು ಸೀಧು ಕಾಂ ॥
ತಾರತಿ ಚಿಂತೆ ಮಂತ್ರಚರಯಾನವಿರೋಧಿಜಯಂಗಳೆಂಬಿವಂ ।
ಸೂರಿಗಳಂಗಮೆಂದು ಕೃತಿಯೊಳ್ ಪದಿನೆಂಟುಮನೆಯ್ದೆ ಬಣ್ಣಿಪರ್ ॥

ಈ ಹದಿನೆಂಟು ವಿಷಯಗಳ ವರ್ಣನಾರೂಪವಾದ ಪದ್ಯಗಳನ್ನು ಪೂರ್ವಕವಿಗಳ ಗ್ರಂಥಗಳಿಂದ ಉದ್ಧರಿಸಿ ಒಂದೊಂದು ಅಂಗವನ್ನು ಒಂದೊಂದು ಆಶ್ವಾಸದಲ್ಲಿ ವಿವರಿಸಿದ್ದಾನೆ. ಈ ವಿಷಯವು "ಮಲ್ಲಿಕಾರ್ಜುನ ಸಂಯೋಜಿತ ಸೂಕ್ತಿಸುಧಾರ್ಣವ" ಎಂಬುದರಿಂದಲೂ ವ್ಯಕ್ತವಾಗುತ್ತದೆ. ಪೀಠಿಕಾಶ್ವಾಸವೂ ಸೇರಿ ಒಟ್ಟು ಹತ್ತೊಂಬತ್ತು ಆಶ್ವಾಸಗಳಿವೆ. ನಮಗೆ ಗ್ರಂಥವು ಸಮಗ್ರವಾಗಿ ದೊರೆತಿಲ್ಲ;

1. ಈ ಪದ್ಯಕ್ಕೆ ಹಿಂದೆ ಶ್ರೀಹರ್ಷ, ಭೋಜ, ವಜ್ರಹಸ್ತ, ಸರ್ವಜ್ಞಸೋಮೇಶ್ವರ ಎಂಬ ಕವಿಗಳಾದ ರಾಜರ ಹೆಸರನ್ನೂ ಹೇಳಿದ್ದಾನೆ.

2. ಗಜಾಂಕುಶನೊಳ್ಪು ಮನೋಜನೋಜೆ ಲೋ । ಕೋನ್ನತಮಾಗಿ— ಎಂದು ಪಾಠಾಂತರ.

15 ಆಶ್ವಾಸಗಳು ಮಾತ್ರ ದೊರೆತಿವೆ. ಈ ಗ್ರಂಥಕ್ಕೆ ಕಾವ್ಯಸಾರ ಎಂಬ ಹೆಸರೂ ಉಂಟು. ಪಂಡಿತರು ಕರೆದು ಈ ಗ್ರಂಥವನ್ನು ರಚಿಸು ಎನಲು ರಚಿಸಿದೆನು— ಎಂದು ಕವಿ ಹೇಳುತ್ತಾನೆ. ಇದರ ಉತ್ಕೃಷ್ಟತೆಯನ್ನು ಈ ಪದ್ಯದಲ್ಲಿ ಹೇಳಿದ್ದಾನೆ :—

ಚದುರರ ಮೆಚ್ಚು ಭಾವಕರ ಕೈಪಿಡಿ ಜಾಣರ ಬಯ್ಕೆ ಸತ್ಕಲಾ ।
ವಿದರ ವಿಲಾಸಮುಕ್ಕರಿಗರಾಭರಣಂ ಬುಧರಿಚ್ಚೆಯುಚ್ಚು ವೀ ॥
ರದ ಕಣಿ ಕೂರ್ತು ಕೂರಿಸಿದ ನಲ್ಲಳ ಮೆಯ್ಸಿರಿ ತಾನದೆಂದೆ ಸ ।
ನ್ಮುದದೊಳೆ ಬಣ್ಣಿಕುಂ ಧರಣಿ ಸತ್ಕವಿಮಲ್ಲನ ಕಾವ್ಯಸಾರಮಂ ॥

ಗ್ರಂಥಾವತಾರದಲ್ಲಿ ಜಿನಸ್ತುತಿ ಇದೆ. ಅನಂತರ ವಿಷ್ಣು, ಶಿವ, ಗಜಾನನ, ಸರಸ್ವತಿ, ಇವರುಗಳ ಸ್ತೋತ್ರರೂಪವಾದ ಪದ್ಯಗಳಿವೆ. ಬಳಿಕ ಹೊಯ್ಸಳವಂಶದ ರಾಜರ ಸ್ತುತಿಯಿದೆ. ಹೊಯ್ಸಳ ಎಂಬ ಹೆಸರು ಬರುವುದಕ್ಕೆ ಕಾರಣವನ್ನು—

ಸಳನೆಂಬಂ ಶಶಕಾಭಿಧಾನಪುರದೊಳ್ ವಾಸಂತಿಕಾದೇವಿಯಂ ।
ಬಳನಾರಾಧಿಸುವಾಗಳುಗ್ರತರನೇತ್ರಂ ಘೋರವಕ್ತ್ರಂ ವಿಶ್ವಂ ॥
ಖಳಗಾತ್ರಂ ಪುಲಿಯುಯ್ಯೆ ಕಂಡು ಮುನಿನಾಥಂ ಕುಂಚವಂ ಕೊಟ್ಟು ಹೊ ।
ಯ್ಸಳ ಎಂದಂ ಬಳಿಯಾಯ್ತು ಹೊಯ್ಸಳವೆಸರ್ ತದ್ವಂಶಜೋರ್ವೀಶರೊಳ್ ॥

ಎಂಬ ಪದ್ಯದಲ್ಲಿ ಹೇಳಿದ್ದಾನೆ. ಹೊಯ್ಸಳರಾಜರ ಪರಂಪರೆ ಈ ರೀತಿಯಾಗಿ ಹೇಳಿದೆ—

ಸಳ, ಮಗ ವಿನಯಾದಿತ್ಯ, ಮಗ ವಿರೆಯಂಗ, ಮಗ ಬಿಟ್ಟಿದೇವ ಅಥವಾ ವಿಷ್ಣುವರ್ಧನ, ಇವನ ಹೆಂಡತಿ ಲಕುಮಾದೇವಿ, ಮಗ ವೀರನಾರಸಿಂಹ, ಹೆಂಡತಿ ಅಚಲಾದೇವಿ, ಮಗ ವೀರಬಲ್ಲಾಳ, ಮಗ ಚೋಳರಾಜಪ್ರತಿಷ್ಠಾಚಾರ್ಯ ಮಗಧರಾಜಲಯಕಾಲ ಪಾಂಡ್ಯರಾಜಜೇತ್ರ ವೀರನರಸಿಂಹ, ಮಗ ಕವಿಯ ಸ್ವಾಮಿಯಾದ ವೀರಸೋಮೇಶ್ವರ ಅಥವಾ ಸೋಯಿದೇವ. ಈ ದೊರೆಗೆ 'ಸರ್ವಜ್ಞಚಕ್ರಿ ಸೋಮನೃಪಾಲಂ' ಎಂದೂ ಹೆಸರು ಹೇಳಿದ್ದಾನೆ.

ಈ ಗ್ರಂಥವನ್ನು ವೀರಸೋಮೇಶ್ವರನು ಕೇಳಿ ಮೆಚ್ಚಿದನೆಂದು ಈ ಪದ್ಯಗಳಲ್ಲಿ ಹೇಳಿದ್ದಾನೆ :—

ಪದವಿನ್ಯಾಸದ ದೇಸಿ ಮಾರ್ಗದ ವಿಲಾಸಂ ರೂಢಿವೆತ್ತಂಗಹಾ ।
ರದಲಂಕಾರದ ಬಂಧಭಾವದೆಸಕಂ ಮೆಲ್ಪಾಡಿನೊಳ್ ಬಂದು ಕೂ ॥
ಡಿದ ನಾನಾರಸಸಾರದಾನಮೆಸೆದತ್ತೆಂದೊಲ್ದು ಕೆಯ್ಕೊಂಡು ಮೆ ।
ಚ್ಚಿದನಾ ಸೂಕ್ತಿಸುಧಾರ್ಣವಾಧ್ಯಕೃತಿಪಾತ್ರಶ್ರೀಗೆ ಸೋಮೇಶ್ವರಂ ॥

ಓರಂತೆ ಮೆಚ್ಚಿದಂ ಕೃತಿ । ಸಾರಂ ಕೃತಿಶೇಖರಕ್ಕೆ ಹೊಯ್ಸಳವಂಶೋ ।
ದ್ಧಾರಂ ನರಸಿಂಹಸುತಂ । ದೋರಸಮುದ್ರಾಧಿನಾಯಕಂ ಸೋಮನೃಪಂ ॥

ಆಶ್ವಾಸಗಳ ಕೊನೆಯಲ್ಲಿ ಈ ಗದ್ಯವಿದೆ:—

ಇದು ಸಮಸ್ತಭುವನಾನಂದ ಸರಸ್ವತೀಸರ್ವಾಂಗದರ್ಪಣಾಯಮಾನಪ್ರತಿಭಾನ ನೂತನಪುರಾತನಪ್ರಮಾಣಕವಿಪುಂಗವಪ್ರಣೀತ ಮಹಾಪ್ರಬಂಧಸಾರೋದ್ಧಾರಮುಂ ಅಷ್ಟಾದಶಸ್ಥಲವರ್ಣನಮಾರ್ಗಮನೋಹರಮುಂ ವೀರಹೊಯ್ಸಳ ಸೋವಿದೇವರಾಯ ವಿನೋದಾಕರ್ಣನಕೌತುಕೋತ್ಪಾದಿತಮುಂ ಯಾದವಕಟಕಾಚಾರ್ಯ ಸುಕವಿಸುಮನೋಬಾಣಜಾಮಾತೃ ಪರಮಚಿದಾನಂದ ಮಲ್ಲಿಕಾರ್ಜುನಮಹಾಕವೀಶ್ವರಸಂಯೋಜಿತಮುಮಪ್ಪ ಸೂಕ್ತಿಸುಧಾರ್ಣವದೊಳ್.

ಈ ಗ್ರಂಥವು ಮಲ್ಲಿಕಾರ್ಜುನನ ಹಿಂದೆ ಇದ್ದ ಕವಿಗಳನ್ನು ನಿರ್ಧರಿಸುವುದಕ್ಕೆ ಅಮೂಲ್ಯವಾದ ಸಾಧನವಾಗಿದೆ.[1] ಇದರಲ್ಲಿ ಪಂಪ, ಪೊನ್ನ, ರನ್ನ ಇವರ ಗ್ರಂಥಗಳಲ್ಲಿಯ ಪದ್ಯಗಳಲ್ಲದೆ ನಮಗೆ ತಿಳಿದಮಟ್ಟಿಗೆ ಈ ಕೆಳಗೆ ಹೇಳುವ ಕವಿಗಳ ಗ್ರಂಥಗಳಿಂದ ಉದ್ಧೃತವಾದ ಪದ್ಯಗಳೂ ದೊರೆಯುತ್ತವೆ:—

| | |
|---|---|
| ಅಗ್ಗಳನ ಚಂದ್ರಪ್ರಭಪುರಾಣ. | ಕವಿಕಾಮನ ಶೃಂಗಾರರತ್ನಾಕರ. |
| ಅಭಿನವಪಂಪನ ರಾಮಾಯಣ, ಮಲ್ಲಿನಾಥಪುರಾಣ. | ಗುಣವರ್ಮನ ಪುಷ್ಪದಂತಪುರಾಣ. |
| | ಚಂದ್ರರಾಜನ ಮದನತಿಲಕ. |
| ಆಂಡಯ್ಯನ ಕಬ್ಬಿಗರಕಾವ. | ದುರ್ಗಸಿಂಹನ ಪಂಚತಂತ್ರ. |
| ಆದಿಗುಣವರ್ಮನ ಶೂದ್ರಕ. | ದೇವಕವಿಯ ಕುಸುಮಾವಳಿ. |
| ಆದಿನಾಗವರ್ಮನ ಕಾದಂಬರಿ. | ನೇಮಿಚಂದ್ರನಲೀಲಾವತಿ, ಅರ್ಧನೇಮಿ. |
| ಉದಯಾದಿತ್ಯನ ಅಲಂಕಾರ. | ರುದ್ರಭಟ್ಟನ ಜಗನ್ನಾಥವಿಜಯ. |
| ಕಮಲಭವನ ಶಾಂತೀಶ್ವರಪುರಾಣ. | ಹರಿಹರನ ಗಿರಿಜಾಕಲ್ಯಾಣ. |

ಈ ಕವಿಯ ಕವಿತಾಶೈಲಿಯನ್ನು ತೋರಿಸುವುದಕ್ಕೆ ಇವನ ಸ್ವಾಮಿಯಾದ ವೀರಸೋಮೇಶ್ವರನ ಸ್ತುತಿರೂಪವಾದ ಎರಡು ಪದ್ಯಗಳನ್ನು ಪೀಠಿಕಾಶ್ವಾಸದಿಂದ ಉದ್ಧರಿಸಿ ಬರೆದು, ಬಳಿಕ ಈ ಗ್ರಂಥದಲ್ಲಿ ನಮಗೆ ದೊರೆತಿರುವ ಉಳಿದ 14 ಆಶ್ವಾಸಗಳಲ್ಲಿ ವರ್ಣಿತವಾಗಿರುವ ಕಾವ್ಯಾಂಗಗಳ ವಿಷಯವಾಗಿ ಒಂದೆರಡು ಪದ್ಯಗಳನ್ನೂ ಒಂದೊಂದು ಆಶ್ವಾಸದ ಆದಿಭಾಗದಲ್ಲಿಯೂ ಅದರಲ್ಲಿ ವರ್ಣಿತವಾಗುವ ಕಾವ್ಯಾಂಗದ ವರ್ಣನೀಯಾಂಶಗಳನ್ನು ಹೇಳುವ ಪದ್ಯವನ್ನೂ ತೆಗೆದು ಬರೆಯುತ್ತೇವೆ:—

1. ಇದರಂತೆಯೇ ಅಭಿನವವಾದಿವಿದ್ಯಾನಂದನ (1533) ಕಾವ್ಯಸಾರವೂ ಅವನಿಗೆ ಹಿಂದೆ ಇದ್ದ ಕವಿಗಳನ್ನು ನಿರ್ಧರಿಸುವುದಕ್ಕೆ ಸಾಧಕವಾಗಿದೆ.

## ಸೋಮೇಶ್ವರಸ್ತುತಿ.

ಹಣಿದಂಬೊಯ್ಸಳ್ ಜವಂ ರಾಯರನೆ ಬಯಸಿ ಬರ್ಪಂತೆ ಸೋಮೇಶ್ವರಂ ತಾಂ ।
ಕಣ ರಾಯಂ ಬಂದನಾಶಾಜಯಕೆಲಿಲಿ ಮಹಾದೇವ ವಿದ್ವಿಣ್ನೃಪರ್ಗೆ ॥
ತ್ತಣ ತೋರ್ಪಿನ್ನೆತ್ತಣಾರ್ಪೆತ್ತಣ ಜಯದೊದವಿನ್ನೆತ್ತಣಾಟೋಪಮಿನ್ನೆ ।
ತ್ತಣ ಧಾತ್ರೀಚಕ್ರಮಿನ್ನೆತ್ತಣ ಗಜಘಟೆಯಿನ್ನೆತ್ತಣಾತ್ಮೀಯಸೈನ್ಯಂ ॥ 852 ॥

ಗಿರಿದುರ್ಗಂ ತಿಱುಕಲ್ ಸಮಗ್ರವನದುರ್ಗಂ ಕರ್ಬುದೋಂಟಂ ಜಲೋ ।
ದರದುರ್ಗಂ ಕಡುಪಿಂದದಿಂಟಿವೊಗಮುಂತಾಪೋಶನಂ ಕಾಣ್ಬುದೇ ॥
ಕರಣಂ ಕೇಳ್ ಸರಣಿಲ್ಲ ಬೇಱೆ ನಿಮಗೆಂದುದ್ವೃತ್ತರಂ ಸಾಱಿ ಡಂ ।
ಗುರಿಪಂತಬ್ಬರಿಕುಂ ಜಯೋತ್ಥಪಟಹಂ ಶ್ರೀಸೋಮಭೂಪಾಲನಾ ॥ 853 ॥

## II. ಸಮುದ್ರ.

### ವರ್ಣನೀಯಾಂಶಗಳು :—

ತೆರೆ ನೊರೆ ಬುದ್ಬುದಂ ಸುೞಿ ಜಲಂ ತೆಗೆ ಪೆರ್ಚುಗೆ ಗುಣ್ಪು ಘೋಷಣಂ ।
ವರುಣನಗಂ ವಧೂಟಿಜನನಂ ಮಣಿಗಳ್ ಬಡಬಾಗ್ನಿ ವಾಶ್ಚರಂ ॥
ಹರಿ ಮಱಯಾವೆ ವೇಳೆ ತೊಱೆಯಾಶತೆ ನೀರ್ಮೊಗೆವಭ್ರಮುರ್ವರಾ ।
ಪರಿವೃತಿ ನಾಗರಿಕ್ಕೆ ಬಗೆಗಾದೊಡೆ ಸ್ಥಿತು ಸಮುದ್ರವರ್ಣನಂ ॥ 854 ॥

ಪವಳದ ಬೀಡು ಕಂಬುಗಳ ನಾಡು ಜಲೇಶನ ಜೊಂಡು ನಾಡೆಯುಂ ।
ಕವಿಗಳ ಲೀಲೆ ಗಂಗೆಗಿವಿಯೋಲೆ ವನೇಭವಶಾಲೆ ಪದ್ಮಸಂ ॥
ಭವನ ನೆಗೞ್ತೆ ಪೂರ್ವದ ಪೊಗೞ್ತೆ ಕುದುರ್ಗಳಗೞ್ತೆ ಮಿಕ್ಕ ಬಾ ।
ಡವಶಿಖಿಗೋಗರಂ ಮಣಿಗಳಾಗರಮುಂದೆಸೆದತ್ತು ಸಾಗರಂ ॥ 855 ॥

ಮಾಲಾಮಾಲಾಪ್ರವಾಳಾವೃತಸುರತರುಶೋಭಾವಹಂ ಭಾವಹಂ ಶ್ರೀ ।
ವಾಲಾವಾಲಾಭಿಘಾತಪ್ರಕರಮುಕರಕುಂಭೀಕರಂ ಭೀಕರಂ ಜಂ ॥
ಬಾಲಾಬಾಲಾಮೃಣಾಳೋಚ್ಚಲಿತಶಫರಕಂಜಾಕರಂ ಜಾಕರಂ ಕ ।
ಲ್ಲೋಲಾಲೋಲಾಯಮಾನಧ್ವನಿಜನಿತದಿಶಾಭಿತ್ತಿಮುದ್ರಂ ಸಮುದ್ರಂ ॥ 856 ॥

## III. ಪರ್ವತ.

### ವರ್ಣನೀಯಾಂಶಗಳು :—

ತರುತತಿ ಬಳ್ಳಿ ಪುಲ್ಲೊದಱು ಪಕ್ಕಿ ಮೃಗಂ ಫಣಿ ಜೇನ್ ಮೃಗವ್ಯಮೊ ।
ಜ್ಝರಮೆಸೆವುನ್ನತಿಕ್ಕೆ ಸಿಲೆ ಕೋಡು ಗುಹಾವಳಿ ತಾಪಸಾಶ್ರಮಂ ॥

[1] ದರಿ ಸರಿವಾನೆಗಳ್ ಸರಿಕೆ ಮೇವ ಮುಗಿಲ್ ದೊಣೆ ಬಿಲ್ಲಪಕ್ಕಿ ಕಿ ।
ನ್ನರಮಿಥುನಾಳಿಗಳ್ ವಿಷಯಮಾಗಿರೆ ತೀರ್ವುದು ಶೈಲವರ್ಣನಂ ॥ 857 ॥

ಬಹುರತ್ನಚ್ಛಾಯೆಯಿಂ ಪರ್ವಿದುದಖಿಳದಿಶಾಭಿತ್ತಿಯಂ ಚೂಳಿಕಾನೋ ।
ಕಹಶಾಖಾಹಸ್ತದಿಂ ಜಕ್ಕುಲಿಸಿ ರವಿರಥಾಶ್ವಂಗಳಂ ಗಂಡಶೈಲಾ ॥
ಗ್ರಹಟತ್ಕೂಟಂಗಳಿಂದಂ ಧರಿಸಿ ದಿವಮನೇಂ ಪೆಂಪುವೆತ್ತತ್ತೊ ಭೂಭೃ ।
ನ್ಮಹಿತಂ ಶ್ರೀಪರ್ವತಂ ನಿರ್ಝರಜಲಲಹರೀಲಾಸ್ಯಮಾಂಗಲ್ಯರಂಗಂ ॥ 858 ॥

ನಡುವಿಂ ಸಾಲ್ವಡಿ ಕೊರ್ವುವೆತ್ತು ಕೊರಲೊಳ್ ಕರ್ಬೊನ್ನ ಬಲ್ಲಾಸಿಗಳ್ ।
ನಡೆ ಬೊಟ್ಟಿಟ್ಟವೊಲುರ್ಬಿ ರೋಮನಿಕರಂ ಕಂಕಾಳಮುಂ ರಕ್ಕಸಂ ॥
ಕಡೆವಾಯೊಳ್ ಕುಡಿದೋರ್ಪಿನಂ ಮುಡಗಿವೊಲ್ ದಂಷ್ಟ್ರಾಂಕುರಂ ತೋಱೆ ಕರ್ ।
ಕಿಡಿಯುಂ ಸಾಲಿಡೆ ಹಂದಿಓಂಡೊಡೆದು ಗಂಡಂ ಬೀಱೆ ಪೋಯ್ತುಕ್ಕಲಂ ॥ 859 ॥

## IV. ಪುರ.

ವರ್ಣನೀಯಾಂಶಗಳು :—

ಬನಮುಂ ಕೆಯ್ಯೊಲಗಾವ ಪಾಮರಿಯರುಂ ಮಾರ್ಗಪ್ರಪಾಪಾಲಿಕಾ ।
ಜನಮುಂ ಗೋಕುಲಮುಂ ಜಲಾಶ್ರಯಮುಮಾರೂಢಾಸ್ತ್ರಶಸ್ತ್ರಶ್ರಮಾ ॥
ವನಿಯುಂ ಕೋಂಟೆಯುಮುತ್ತಿದಂಗಡಿಗಳುಂ ವಾರಾಂಗನಾಪಾಟದೇ ।
ವನೃಪೇಂದ್ರಾಲಯವರ್ಗಮುಂ ವರಪುರವ್ಯಾವರ್ಣನಕ್ಕಾಸ್ಪದಂ ॥ 860 ॥

ಪಾಡುವ ತುಂಬಿ ತುಂಬಿಯೊಳರಲ್ದ ಮುರಲ್ ಮುರಲೊಂದು ಸೊಂಕಿನಿಂ ।
ತೀಡುವ ಗಾಳಿ ಗಾಳಿಗೆ ಬಲ್ದ ತಳಿರ್ ತಳಿರಿಂ ಫಲಂಗಳಿಂ ॥
ದಾಡುವ ರಾಜಕೀರತತಿ ಕೀರಚಯಂಗಳಕೂಡೆ ಜ್ಪಿದು ಜ್ಪಿ ।
ದಾಡುವ ತೊಂಡುವೆಣ್ಬುರುಳಿ ಮಾಡುವುವಾರ್ಗಮನಂಗದಾನಮುಂ ॥ 861 ॥

ಬರೆಯಲ್ಬಾರದು ಬರ್ಣಿಸಲ್ಕರಿದು ನೋಡಲ್ಕೂಡದೊಡ್ಡೈಸಲ ।
ಚ್ಚರಿ ಭೂಮಂಡಲಮಧ್ಯದಿಂದೊಡೆದು ಮೂಡಿತ್ತೆಂಬಿನಂ ಚೆಲ್ವನಾ ॥
ಕರುಮಾಡಂ ನವಭೂಮಿಕಾಪ್ರಕಟಿತಂ ವಿಷ್ಕಂಭವಿಸ್ತಾರಬಂ ।
ಧುರಸಂಧಿಪ್ರತಿಭಾಸಿ ನಾಟಕದ ಪಾಂಗಿಂ ಚೂಳಿಕಂ ಲಾಳಿಕಂ ॥ 862 ॥

## V. ನಾಯಕಾಭ್ಯುದಯ.

ವರ್ಣನೀಯಾಂಶಗಳು :—

ಮುನಿಸಿಂದಾಂತರನಿಕ್ಕಿ ಭೂವಳಯಮಂ ನಿಷ್ಕಂಟಕಂಮಾಡಿ ಕೀ ।
ರ್ತಿ ನಿಜಾಜ್ಞಾಸಹಿತಂ ದಿಶಾವಳಯಮಂ ತಳ್ತೊಪ್ಪೆ ಸಂಗೀತಮಂ ॥

1. ಹರಿಮುರಿಯಾನೆಯುತೆರಗಿ—ಪಾಠಾಂತರ.

ಜನನಾಥರ್ ಮುದದಿಂದಮೋಲಗದೊಳಿತ್ತಂ ಕೇಳ್ದು ತಾಂ ತ್ಯಾಗವ ।
ರ್ಧನಮಂ ಮಾೞ್ಪುದು ನಾಯಕಾಭ್ಯುದಯಮೆಂಬಂಗಂ ಮಹಾಕಾವ್ಯದೊಳ್ ॥ 863 ॥

ಉಂಟು ಭುಜಾಬಲಂ ಪಿರಿದು ಚಾಗದ ಸಂಪದಮೇೞುವಾರ್ಧಿಯಂ ।
ದಾಂಟಿತುದಾತ್ತಕೀರ್ತಿ ಕಳೆಯೊಳ್ ಬಿನದಂ ತನಗೆಂದು ನಿಚ್ಚಲುಂ ॥
ಕಂಟಕಿತಾಂಗಿಯಾದಪುದು ಪಂಡಿತಮಂಡಲಿ ರಾಜ್ಯಮಂತು ನಿ ।
ಷ್ಕಂಟಕಮೆಂಬಿನಂ ಪಡೆದನಚ್ಚರಿಯಂ[1] ನೃಪಧೀಶನೊಚ್ಚತಂ ॥ 864 ॥

ನುಡಿ ಸಲೆ ನನ್ನಿಗಿಕ್ಕೆವನೆಯಾದುದು ಜವ್ವನೆ ಬಂದ ಸೀಲ್ಕಿ ಕ ।
ನ್ನಡಿಯೆನಿಸಿತ್ತು ಸೊಂಪು ಪಿರಿಯರ್ಗೆಡೆಗೊಟ್ಟುದು ಗಾಡಿ ರೂಢಿಯಂ ॥
ಪಡೆದುದು ಬೀರಮುಗ್ಗಡದ ಸೈರಣೆಗಾಗರಮಾಯ್ತು ನೋೞ್ಪಡೆಂ ।
ದಡಿಗಡಿಗೊಲ್ದು ಬಣ್ಣಿಸುವುದಾನೆಲದಾಣ್ಮನನಾವಗಂ ನೆಲಂ ॥ 865 ॥

## VI. ವಿವಾಹ.

ವರ್ಣನೀಯಾಂಶಗಳು :—

ಪಸೆ ಪಂದಲ್ದಟ್ಟ[2] ಜಾಗಂ ಜಗಲಿ ಬಿಗಿದ ಭೃಂಗಾರಿ ಮೇಲ್ಕಟ್ಟು ಚಿತ್ರಂ ।
ಪೊಸಕುಂಭಂ ಶಂಕು ನೂಲ್ಪೆರಣೆ ತಳಿರ್ಗಳಸಂ ಸರ್ವಧಾನ್ಯಂ ಮೊಸರ್ ಭ ॥
ಕ್ಷ್ಯಸಹಸ್ರಂ ಲಾಜೆ ಹೋಮಂ ಪಱೆ ಕಡೆ ಗುಡಿ ಪೂದೋರಣಂ ಬಾಸಿಗಂ ಸೇ ।
ಸೆ ಸಮಸ್ತಸ್ತ್ರೀಜನಂ ಕನ್ನಡಿ ಜವಳಿಗಳುದ್ವಾಹದೊಳ್ ವರ್ಣನೀಯಂ ॥ 866 ॥

ಪೂಗಣೆ ಕರ್ಬುವಿಲ್ ಮಿಳಿರ್ವ ಮೀಂಗುಡಿ ಮಲ್ಲಿಗೆ ಮಾವು ತೆಂಬೆಲರ್ ।
ಕೋಗಿಲೆ ಜೊನ್ನಮಿಂದೊಳದ ನುಣ್ಬನಿ ಸುಗ್ಗಿಯೆನಿಪ್ಪಿವೆಲ್ಲಮೊಂ ॥
ದಾಗಿಯೆ ದರ್ಪಕಂಗೆ ಸಮನಿಪ್ಪ ಜಗಜ್ಜಯದರ್ಪಮಂ ಸಮಂ ।
ತಾಗಿಸಲೊಂದೆ ಸಾಲ್ಗುಮೆನಿಸಿತ್ತು ಕುಮಾರಕೃತಪ್ರಸಾಧನಂ ॥ 867 ॥

ಎಱಕೆಮುರಲ್ದು ಗೋಣ್ಮುಱಿದು ಚಂಚುಪುಟಂದೆಱೆದಳ್ಳೆಬಾಱೆ ಬಂ ।
ದೆಱಗುವುವಲ್ಲಿ ಚುಂಚುಲೊವೆಯೊಳ್ ಕಡೆಯಿಕ್ಕಿದ ಪಚ್ಚೆಸಾರಮಂ ॥
ಕಿಱುವಡಿಗೆತ್ತು ಸಾರಿ ಕಿಟಕಾರಿಯ ಮಾಣಿಕವಟ್ಟೆಯಂ ಪಿಕಂ ।
ಕಿಱುದಳಿರ್ಗೆತ್ತು ಲಂಬಳದ ಮುತ್ತುಗಳಂ ಮಱಿಗೆತ್ತು ಚಾತಕಂ ॥ 868 ॥

## VII. ಕುಮಾರೋದಯ.

ವರ್ಣನೀಯಾಂಶಗಳು :—

ತನುಭವಲಾಭದೌಹೃದನಿಮಿತ್ತದ[3] ಸಂತತಿ ತಕ್ಕ ನೋಂಪಿ ಮುಂ ।
ಗನಸು ಬಯಕ್ಕೆ ಗೆಂಟುಗೆ ದೃಗುತ್ಸವಕಾರಣಗರ್ಭಚಿಹ್ನಮೊ ॥

1. ನೃಪನೇಂ ವಿದಗ್ಧನೋ. 2. ಕುಡ್ಯಂ. 3. ಸಂಗತಿಗಂಡು ನೋಂತ.

ಳ್ಪಿನ ದಿವಸಂ ಶುಭೋದಯಮಿಳಾದಿಮನೋಹರಭೂತಲಕ್ಷಣಂ ||
ಜನನುತಜಾತಕರ್ಮಮಿನಿತುಂ ಸುತಶೋಭನವರ್ಣನಸ್ಥಳಂ || 869 ||

ಸೆಣಸಿ ಪಳಂಚಿ ಸಂಚಳಿಸಿ ಮುಂಚಿ ತೆಱಂಬೊಳೆದೊಂದನೊಂದು ಸಂ |
ದಣಿಸಿ ಪಲರ್ಮೆಯಿಂ ಕರ್ದುಕಿ ಭೋಂಕನೆ ಸೋಂಕಿ ಚಲಂಕಿ ಬಿಂಕದಿಂ ||
ಮಣಿದು ಕುಲಂಕಿ ತೇಂಕಿ ಪೊನಲೊಳ್ ಪರಿದಾಡುವ ತನ್ನ ನೀಳ್ದ ಕ |
ಣ್ಬೊಣರ್ಗೆಣೆಯಪ್ಪ ಮಾನ್ಪೊಣರನಂಬುಜಲೋಚನೆ ಕೂರ್ತು ನೋಡಿದಳ್ || 870 ||

ಮಾಣದೆ ಧೂಳಿಕೇಳಿಗೆ ಕಡಂಗುವ ಸಾಚರ್ಮವ ತಾಯ ಜಂಘೆ ನ |
ಶ್ರೇಣಿವೊಲಾಗೆ ಮೆಟ್ಟಿ ತೊಡೆಯೇಱುವ ಚಿತ್ರದ ಪಣ್ಗಳಂಗಳಂ ||
ಕಾಣಿಸಿ ದಾದಿಯಂ ಬಿಡದೆ ಬೇಡುವ ಕಂಡರ ಹಸ್ತತಾಳಕ |
ಲ್ಯಾಣರವಕ್ಕೆ ನರ್ತಿಸುವ ಮುದ್ದುಗಳೊಪ್ಪಿದುವಾಕುಮಾರನೊಳ್ || 871 ||

## VIII. ಚಂದ್ರೋದಯ.

ವರ್ಣನೀಯಾಂಶಗಳು :—

ಮೊದಲೊಳ್ ನೇಸಱ ಪಕ್ಕೆ ಕೋಕವಿರಹಂ ಸಂಕೋಚಪದ್ಮಂ ತಮಂ |
ಪುದಿದಾಸಂಜೆಯ ತೂರ್ಯಮಾಕುಲಟೆಯರ್ ತಾರಾಳಿ ದೀಪಂ ಬೞಿ ||
ಕ್ಕುದಯಂ ಕೆಂಪೆಳಗರ್ಪು ಚಂದ್ರಿಕೆ ಚಕೋರಂ ನೆಯ್ದಿಲಿಂದೂಪಳಂ |
ಮದಿರಾಂದೋಳವಿಹಾರಲೀಲೆಯಿನಿತುಂ ಚಂದ್ರೋದಯಕ್ಕಾಸ್ಪದಂ || 872 ||

ಕವಿದುವು ಧೇನು ಮುಂಚೆ ತುಱುಗಳ್ ಪೊಲದತ್ತಣಿನೂರ್ಗೆ ಬಾನಲಾ |
ದುವು ಪಡುವಣ್ಗೆ ಪಾಱದುವು ಗೂಡಿನ ಸಾರ್ಕೆಗೆ ಪಕ್ಕಿ ಕೊಂಬುಗೊಂ ||
ಡುವು ಮೃಗಮೂರ ಪೊರ್ದುಗೆಯ ಬಟ್ಟೆಗೆ ಮೇಪಿನ ಕಾಪಿನಿಂ ಮರ |
ಳ್ದುವು ದಿನನಾಯಕಂ ವರುಣದಿಙ್ಮಗಮಂ ಮಱಿಗೊಳ್ವ ಕಾಲದೊಳ್ || 873 ||

[1] ವಿತತಪ್ರಾಚ್ಯದ್ರಿಪೀಠಾಗ್ರಿಮದರುಣಶಿಲಾವೃತ್ತಲಿಂಗಂಬೊಲಿಂಬಾ |
ಯ್ತು ತರಂಗೊಂಡೇಱುಗ್ರಯಿಂ ರಾಗದಿನುಪಚಿತಚೇತಶ್ಚಕೋರೀಕದಂಬಂ ||
ದ್ಯುತಿವಲ್ಲೀಸ್ತಂಭಮುಜ್ಜೃಂಭಿತಕುಮುದಕುಟುಂಬಂ ತಮಶ್ಶೈಲಶಂಬಂ |
ರತಿಪಾಟೋಪಾವಲಂಬಂ ಜನಿತವಿಟವಿಡಂಬಂ ಸುಧಾಸೂತಿಬಿಂಬಂ || 874 ||

## IX. ಸೂರ್ಯೋದಯ.

ವರ್ಣನೀಯಾಂಶಗಳು:—

ಹಳಹಳನಿರ್ದ ತಾರೆ ಕಳೆಗುಂದಿದ ಚಂದ್ರನಲರ್ಕೆಗುಂದಿದು |
ತ್ಪಲವನ ಶೈತ್ಯಮುಪ್ಪಲರು ನಂದುವ ದೀಪಮುಗಲ್ವ ಜಾರೆಯರ್ ||

1. ಜಗನ್ನಾಥವಿಜಯ.

ಗಱಿಪುವ ಕೋೞಿ ಶಂಖಮುರುಣಚ್ಛವಿ ಕೆಂಪಿನಮಂಡಲಂ ರಥ ।
ಕ್ಕೆಳಸುವ ಕೋಕಮುಬ್ಬುವಿಕಸಂ ಸಲೆ ಸೂರ್ಯನ ವರ್ಣನಕ್ರಮಂ ॥ 875 ॥

ಜನಿಸಿದ ತಾಣಮೇಂ ಕಿಱಿದೆ ವಾರ್ಧಿ ಸಹೋದರಿಯೇಂ ದರಿದ್ರೆಯೇ ।
ಘನತರಭಾಗ್ಯಲಕ್ಷ್ಮಿಯೊಡಹುಟ್ಟಿದನೇಂ ಲಘುವೇ ಹಿಮಾಂಶು ಭಾ ॥
ವನೆನಿಪನೇನೊ ಜಾವಳನೆ ಕೃಷ್ಣನುಮೆಂಬುದುಕೇಳ್ದು ಮರ್ತ್ಯರೆ ।
ನ್ನನೆ ಮಿಗೆ ಕರ್ಚಿ ಕೊಲ್ವರೆನುತೂಳ್ವವೊಲಾದುರ್ದುದು ಶಂಖನಿಸ್ವನಂ ॥ 876 ॥

ಮೂಡಣ ಸಂಜೆ ಕೆಂದಳಿರ ಕಾವಣದಂತಿರೆ ಚಂದ್ರಮಂಡಲಂ ।
ಬಾಡಿದ ಮಾಧವೀಮಧುರಮಂಜರಿಯಂತಿರೆ ತಾರಕಾಳಿ ನೀ ॥
ರೋಡಿ ಕೞಲ್ದು ಬಿೞ್ದ ಕೞಿವೂಗೆಣಿಯಾಗಿರೆ ತಣ್ಣನಪ್ಪಲರ್ ।
ತೀಡೆ ತಪೋವನಂಬೊಲತಿಪಾವನಮಾಯ್ತು ನಭಂ ಪ್ರಭಾತದೊಳ್ ॥ 877 ॥

## X. ಋತು.

ವರ್ಣನೀಯಾಂಶಗಳು :—

ತರುಮೃಗಪಕ್ಷಿಮೇಘಜಳವಾಯುದಿಶಾಜವಕಾಯಭೋಗಭಾ ।
ಸ್ಕರವಿಧುರಾತ್ರಿವಾಸರಸುರಾಲಯ ? ಪರ್ಬಿರತೋಪಚಾರಸಿಂ ॥
ಧುರಮದಜನ್ಮಯಾನಮದನೋದಯಸಸ್ಯವಿಶೇಷಭಾವದೊಳ್ ।
ಪರಿಣತನಪ್ಪವಂಗೆ ಋತುವರ್ಣನವಿಸ್ತರಮೊಪ್ಪಿ ತೋಱುಗುಂ ॥ 878 ॥

ಮದನನ ದಂಡು ಮಲ್ಲಿಗೆಯ ಬಂಡು ಪಿಕಾಳಿಯ ತೊಂಡು ಪೂತ ಚೂ ।
ತದ ತನಿಗೊರ್ಬು ಮಾಧವಿಯ ಪರ್ಬು ತವಾಲದ ಮರ್ಬು ರಾಜಕೀ ॥
ರದ ತನಿಸೊರ್ಕು ಕಾಮಿಜನದುರ್ಕು ವಿಯೋಗಿಯ ಸೆರ್ಕು ಕೂಡ ಬಂ ।
ದುದು ಮಧುವಾಸರಂ ವಿವಿಧಕೇಸರಮುದ್ಧತಧೂಳಿಧೂಸರಂ ॥ 879 ॥

ಪಿಂಗಳಮಾದ ನೆಲ್ಲ ತೆನೆಯಂ ನಲಿಗರ್ಚಿದ ರಕ್ತಚಂಚು ಪ ।
ಕ್ಷಂಗಳ ಶಾಡ್ವಲಚ್ಛವಿ ಮನಂಗೊಳೆ ಪಾಱುವ ಕೀರಮಾಲೆ ರೋ ॥
ದೋಂಗಣಮೆಂಬ ಪಟ್ಟಣದೊಳೊಪ್ಪುವ ಬೆಳ್ಮುಗಿಲೆಂಬ ಬಳ್ಳಿಮಾ ।
ಡಂಗಳ ಪೊನ್ನ ಮಾಣಿಕದ ಪಚ್ಚೆಯ ತೋರಣದಂತೆ ರಂಜಿಕುಂ ॥ 880 ॥

## XI. ವನಕ್ರೀಡೆ.

ವರ್ಣನೀಯಾಂಶಗಳು :—

ವನಪಾಲರ್ ಪೇೞ್ವಿ ಭೂಪರ್ ತರುಣಿಯರೊಡನಾನಂದನಕ್ಕೆಯ್ದೆ ಪೋಪಾ।
ಬನದೊಳ್ ಪೂಗೊಯ್ವ ಪೂವಿಂ ತುಡಗೆಯನೊಲವಿಂ ಮಾೞ್ಪ ತೂಗುಯ್ಯಲಂ ಮಾ ॥
ವಿನೊಳಾಡುತ್ತಿರ್ಪ ಬೆಟ್ಟೇಱುವ ಮರವಡರ್ದುಂ ಕಾವಣಕ್ಕೋಪ ತಂತ ।
ಮ್ಮನಿಯರ್ ತ್ಯತುಂಬುದಂ ವರ್ಣಿಸುಗೆ ಕವಿ ವನಕ್ರೀಡೆಯೊಳ್ ವರ್ಣನೀಯಂ ॥ 881 ॥

ಸ್ಮರರಾಜಂ ವನಪಾಲನಾಗೆ ರತಿಲಾವಣ್ಯಪ್ರವಾಹೋತ್ಕರಂ ।
ಪರಿನೀರಾಗೆ ನಿರಂತರಂ ಋತುಗಳಾಳುಂ ಕಾಪಿನಾಳಾಗೆ ಚೈ ॥
ತ್ರರಥೋದ್ಯಾನದ ಚೆಲ್ವನೊತ್ತರಿಸಿ ಕೇಳೀಶೈಲಕೇಳೀಸರೋ ।
ವರಕೇಳೀಗೃಹಮೆಂಬಿವಂ ತಳೆದು ಕೇಳೀನಂದನಂ ರಂಜಿಕುಂ ॥ 882 ॥

ಪರಭಾಗಂ ಪೊಣ್ಮೆ ವನ್ನಂ ತನುಲತೆ ಲತೆಯೊಳ್ ಕೂಡೆ ತುಂಗಸ್ತನಂ ಮುಂ ।
ಜರಿಯೊಳ್ ಮುಂಡಾಡೆ ಕಣ್ಗಳ್ ಬೆರಸೆ ಕುಸುಮದೊಳ್ ಕುಂತಳಂ ತುಂಬಿಯೊಳ್ ತ ॥
ಳ್ತಿರೆ ಪುಷ್ಪಾವೋದದೊಳ್ ಸುಯ್ ಕಲಸೆ ಕರತಳಚ್ಛಾಯೆ ತಟಿಕ್ಕೈಸೆ ಬಾಲಾಂ ।
ಕುರಮಂ ಪೂಗೊಯ್ದುಳೊರ್ವಳ್ ಲತೆ ಲತೆಗೊಲವಿಂ ಬಿರ್ದುವಂದಂತಿರಿರ್ದಳ್ ॥ 883 ॥

## XII. ಜಲಕ್ರೀಡೆ.

ವರ್ಣನೀಯಾಂಶಗಳು:—

ಬಿಮುರಂ ವಾರಿವಿಳಾಸಮುಂ ಸಲಿಲಧಾರಾಯಂತ್ರವಾರಿಪ್ರವೇ ।
ಶಮನಾಲೇಪನಕಂಪಮುಂ ಮುಳಿಸುಲೀಲಾಯುದ್ಧಮುಂ ಕಾಮಿನೀ ॥
ಶ್ರಮಮುಂ ಮೂಡಿ ಮುಬ್ಬಿಂಗುತಿರ್ಪ ಪರಿಯುಂ ಮೆಯ್ಯುಬ್ಬರ್ಮಮುಂ ಚೆಲ್ವುಮುಂ ।
ಕ್ರಮದಿಂದಂ ಪೊಱಮಟ್ಟು ನಿಂದ ನಿಲವಂ ಪೇಳ್ವರ್ ಜಲಕ್ರೀಡೆಯೊಳ್ ॥ 884 ॥

ಇದು ಪಿರಿದುಂ ವಸಂತಸಖಿಯಾವನರತ್ನನಿಧಾನಮಂತಿದ ।
ಲ್ತಿದು ಕುಸುಮಾಸ್ತ್ರಶಸ್ತ್ರಚಯಕೋಶಮಹೀಗೃಹಮಂತಿದಲ್ತು ಮ ॥
ತ್ತಿದು ರತಿನಾಥಕಲ್ಪಲತಿಕಾಪ್ರಮದೈಕಕೃತಾಲವಾಲಮೆಂ ।
ಬುದನೆನಿಸಿತ್ತು ಸಂದಣಿಸಿ ನಿಂದಬಲಾವಳಿಯಿಂದೆ ಪೂಗೊಳಂ ॥ 885 ॥

ಸ್ಫುರಿತಾಂಗಂ ಸೂಸೆ ಲಾವಣ್ಯಮನೆಸೆವಲರ್ಗಣ್ ಚಲ್ಲಮಂ ಸೂಸೆ ಲೀಲಾ ।
ದರಹಾಸಂ ಸೂಸೆ ಬೆಳ್ದಿಂಗಳನಲಘುಕುಚಂ ಮೇಲುದಂ ಸೂಸೆ ಚಾವಿಾ ॥
ಕರಕಾಂಚೀಮಂಜುಗುಂಜದ್ಧ್ವನಿ ಕಿವಿಗಮರ್ದಂ ಸೂಸೆ ತಳ್ಪೊಯ್ವ ಸುಯ್ ಕ ।
ತ್ತುರಿಗಂಪಂ ಸೂಸೆ ಲಕ್ಷ್ಮೀಪತಿಯ ತನುವಿನೊಳ್ ಸೂಸಿದಳ್ ನೀರನೊರ್ವಳ್ ॥ 886 ॥

## XIII. ಮದ್ಯಪಾನ.

ವರ್ಣನೀಯಾಂಶಗಳು:—

ಮದಿರಾಪಾನವಿಕಾರಮುಂ ನವವಯಸ್ಸಂಪತ್ತಿಯುಂ ಬಂದು ನೋ ।
ಡದವೊಲ್ ನೋಡುವ ನಲ್ಲನಿರ್ದಿರವನತ್ಯುತ್ಸಾಹಮುಂ ಮಾಡೆ ಚಿ ॥
ತ್ತದೊಳಾಗಲ್ ತನುಮಧ್ಯೆಗಾಯ್ತೆನಸುಮಾನತ್ವಂ ಚತುರ್ಭಂಗಿಭೇ ।
ದದ ಲೀಲಾನಯನಪ್ರಧಾನವಿಧಿಯಿಂ ಕಾದಂಬರೀಗೋಷ್ಠಿಯೊಳ್ ॥ 887 ॥

ಇರೆ ನವಪದ್ಮರಾಗಚಷಕಂ ನಿಜಹಸ್ತತಳಾಗ್ರದೊಳ್ ಮುಸೊಂ।
ಹರೆ ತಳಿರ್ದೊರ್ಂಗಲಂ ತಳೆದ ಕೋಮಲವಲ್ಲರಿಯಂತೆ ರಕ್ತಪಂ॥
ಕರುಹಮನಾಂತ ಪಂಕಜಿನಿಯಂತೆ ಸಮೋದಿತಚಂದ್ರಬಿಂಬಮಂ।
ಧರಿಯಿಸಿದಿಂದ್ರದಿಗ್ವನಿತೆಯಂತೆಸೆದಳ್ ಮಧುಪಾನಗೋಷ್ಠಿಯೊಳ್ ॥ 888 ॥

ಅಲರ್ಗಣ್ ಕೆಂಪಡರಲ್ಕೆ ಪೊಂಗಿದಧರಂ ಬೆಳ್ಪೇಱೆ ರೋಮೋದ್ಗಮಂ।
ತಲೆದೋಱಲ್ ಬೆಮರುಣ್ಮೆ ಲಜ್ಜೆ ತೊಲಗಲ್ ನಿತ್ರಾಣವಾಗಲ್ ಮದಂ॥
ಬಲಿಯಲ್ ಕಣ್ ಮುಗಿಯುತ್ತೆ ಮೂರ್ಛೆ ಮಿಗೆ ತೋಱಲ್ಕಂದು ಚೆಲ್ವಾದುದ।
ಗ್ಗಳಮೆಂಬಂತಿರಲಿನ್ನದೇವೊಗಳ್ವೆನೋ ಕಾದಂಬರೀಸಂಗಮಂ ॥ 889 ॥

## XIV. ಸುರತಕ್ರೀಡೆ.

ವರ್ಣನೀಯಾಂಶಗಳು :—

ಪರಿರಂಭಂ ಚುಂಬನಂ ಸೀತ್ಕೃತಗಳರುತಿ ದಂತಚ್ಛದಂ ರೇಖೆವೊಯ್ಯಲ್।
ಕರಣಂಗಳ್ ಪಲ್ಲಟಂ ನಚ್ಚಿನ ಮುಖರತೆ ಸುಯ್ಲ್ ಕಂಪನಸ್ವೇದಮುಂಗಾಂ॥
ತರಪೂರಂ ರೋಮಹರ್ಷಂ ನಯನಮುಕುಳನಂ ಮಂಚಚಂಚತ್ಕುಂತಿ।
ಸ್ವರವೊಪ್ಪಲ್ಕೊಪ್ಪುವನ್ನಂ ಮೆಱೆಗೆ ಕವಿತೆಯೊಳ್ ನೋಡೆ ಸಂಭೋಗವರ್ಣಂ ॥ 890 ॥

ಬಗೆಯೊಳ್ ಪೊಣ್ಮುವಲಂಪು ಕಾತರಿಕೆಯುಂ ತಂದೀಯೆ ಮೆಯ್ಮೆಯ್ಗೆ ಸಂ।
ದುಗಳೇನಿರ್ಪೊಡಮಿಲ್ಲದಂತೆ ಮಿಗಿಲುಂ ತಳ್ತಪ್ಪಿ ಬಾಯ್ಕೂಟದೊಳ್॥
ಮಿಗೆ ಪೀರ್ವಂತು ಮನೋನುರಾಗರಸಮಂ ಮೆಯ್ಯುರ್ಚಿ ಕಾದಲ್ತೆ ಕೈ।
ಮಿಗುವನ್ನಂ ನೆರೆದರ್ ಮನಃಪ್ರಿಯತಮರ್ ನಾನಾಕಲಾಪ್ರೌಢಿಯಿಂ ॥ 891 ॥

ಸ್ತನಶೈಲೋದ್ಭೂತಗಂಗಾನದಿಯೆನಿಸುವ ಹಾರಾಳಿ ಕಾಳಿಂದಿಯಾದ।
ತ್ತನೆ ನೈಲ್ಯಂಬೆತ್ತ ರೋಮಾವಳಿಯುಭಯನದೀಸಂಗದಿಂ ಪಾಪವಿಚ್ಛೇ॥
ದನರೂಪಂಬೆತ್ತ ದೋಷಾಕರನಿದಱೊಳ್ ತಾಂ ಮಜ್ಜನಂಗೆಯ್ವನೆಂದೆಂ।
ಬಿನೆಗಂ ಚೆಲ್ವಾಯ್ತು ಕಾಂತಾಘನಕುಚಯುಗಳೋನ್ತಧ್ವ. ಸ್ತಂ ನಖಾಂಕಂ ॥ 892 ॥

## XV. ವಿಪ್ರಲಂಭ.

ವರ್ಣನೀಯಾಂಶಗಳು :—

ಪುರದಿಂ ಮೌನದಿನನ್ಯದೇಶಗಮನವ್ಯಾಸಂಗದಿಂ ಸುವ್ರತಾಂ।
ತರದಿಂ ಕೂಡಿದ ವಲ್ಲಭರ್ಗೆ ವಿರಹಂ ಪೂರ್ವಾನುರಕ್ತರ್ಗೆ ತಾಂ॥
ವಿರಹಂ ಸಂದಿಸಿ ಪಾಟ್ಟಿಯಿಂದೆ ಪಿರಿದುಂ ಬರ್ಕುಂ ದಶಾವಸ್ಥೆಗಳ್।
ಹರಿಣಾಂಕಾದಿಗಳಂಜಿಕುಂ ಸರಸಸೇವ್ಯಂ ವಿಪ್ರಲಂಭಸ್ಥಳಂ ॥ 893 ॥

ಇನಿಯಂ ಪ್ರಾಣಮುಗಲ್ದು ಪೋಪ ತೆಱದಿಂದೇನಿಂದಗಲ್ದಿರ್ದನಾ।
ತನ ಪೋಗಿಂಗೆನಗಕ್ಕ ನೋವಿನಿಸುಮಿಲ್ಲೇಕೆಂದೊಡೊಂದುಂಟು ನ॥
ಲ್ಲನ ಚಿತ್ತಂ ಪೆಱಪಿಂಗೆ ಪಿಂಗದೆ ತಗುಳ್ದೋರಂತೆ ನಿಷ್ಕಾರಣಂ।
ನೆನೆವೀಚಿತ್ತದ ಮಾಯ್ದು ನಾಣಿಲಿತನಕ್ಕಾಂ ನೋಂತೆನಬ್ಜಾನನೇ ॥ 894 ॥

ಮಲ್ಲಿಗೆಯಲ್ಲಿ ಪೂತ ಲತೆಯಲ್ಲಿ ಮುಗಿಲ್ಗಡವಲ್ಲಿ ಮಾಲತೀ।
ವಲ್ಲರಿಯಲ್ಲಿ ಸೋಗೆನವಿಲಲ್ಲಿ ಸುಗಂಧಸಮೀರನಲ್ಲಿ ಮಾ॥
ವಲ್ಲಿ ಮದಾಳಿಯಲ್ಲಿ ಗಿಳಿಯಲ್ಲಿ ಪಿಕಾವಳಿಯೆಲ್ಲವಲ್ಲಿ ಕಾ।
ರಲ್ಲಿ ವಸಂತನಲ್ಲಿಯೆನೆ ಕೊಲ್ಲದೆ ಕಾಮಿಯನಾವನಂ ವನಂ ॥ 895 ॥

---

## ಚೇರೆಯ ಅಲ್ಲಾಳ ಬುಧ, ದಾಮೋದರ. 1249.

ಇವರು ಚಿಕ್ಕಮಗಳೂರು 20 ನೆಯ ಶಾಸನವನ್ನು ಬರೆದುದಾಗಿ ಆ ಶಾಸನದ ಕೊನೆಯಲ್ಲಿರುವ

ಕವಿ ಕಬ್ಬದ ದಾಮೋದರ।. . . . ಚಕ್ರೇಶಚೇರೆಯಲ್ಲಾಳಬುಧಂ।
ಸವಿನಯದೆ ಪೇೞ್ದರೆನೆ ಪೞ। ವವನೆಂಬವನಾವ . . . ಕವಿಗಳ ಕೃತಿಯಂ॥

ಎಂಬ ಪದ್ಯದಿಂದ ತಿಳಿಯುತ್ತದೆ.

ಈ ಶಾಸನವು 1249 ರಲ್ಲಿ ಬರೆದುದು. ಇದರಲ್ಲಿ ಹೊಯ್ಸಳವೀರಸೋಮೇಶ್ವರನು ಆಳುತ್ತಿದ್ದಾಗ ಬಿಟ್ಟರಸದಂಡನಾಯಕನು ಅಮ್ಮೆಳೆಯ ದೇವಸ್ಥಾನಗಳಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ. ಇದರಿಂದ ಒಂದೆರಡು ಪದ್ಯಗಳನ್ನು ತೆಗೆದು ಬರೆಯುತ್ತೇವೆ :—

### ವೀರಸೋಮೇಶ್ವರ.

ನೀರದೊಳಿಂದ್ರಸೂನುಗೆಣೆ ಸಂಗಡಮೀವೆಡೆಯೊಳ್ ದಿನೇಶಜಂ।
ಗೋರಗೆ ವಾರಿನಾಥನೊಳುದಾರಗಭೀರತೆಗುನ್ನತಿಕ್ಕೆಯೊಳ್॥
ಮೇರುಗೆ ಪಾಟಿಯೆಂದೊಡವನೀಶರದಾರ್ ದೊರೆ ಚೋಳರಾಜನಿ।
ಸ್ತಾರಕಸೋಮಭೂಮಿಪನೊಳಪ್ರತಿಮಪ್ರಬಳಪ್ರತಾಪನೊಳ್ ॥ 896 ॥

### ಬಿಟ್ಟರಸನ ತಂದೆ ಕೇಶಿರಾಜ.

ಮುನಿದನೆ ಮೂಱುರಾಯರಿದಿರಾಂತೊಡೆ ಗೆಲ್ದಪನೀವೆನೆಂದು ಪೂ।
ಣ್ದನೆ ಜಗತೀತಳಂ ನೆಱೆಯೆ ಬೇಡಿದೊಡಿತ್ತಪನೊಲ್ದುಕಾವೆನಂ॥
ದನೆ ಜವನಟ್ಟಿಕೊಂದಪೆನೆನುತ್ತಿರೆ ಕಾದಪನೆಂದೊಡಿನ್ನದಾರ್।
ತನಗೆಣೆ ವೈರಿವಾರಣವಿದಾರಣಕೇಸರಿಕೇಶಿರಾಜನೊಳ್ ॥ 897 ॥

---

## ಜಯುವರ್ಮ, ನಯುವರ್ಮ. ಸು. 1250.

**ಕುಮುದೇಂದು** (ಸು. 1275) ತನ್ನ ರಾಮಾಯಣದಲ್ಲಿ ಹಿಂದಣ ಕನ್ನಡ ಕವಿಗಳನ್ನು ಸ್ತುತಿಸುವಾಗ ಈ ಇಬ್ಬರು ಕವಿಗಳ ಹೆಸರನ್ನೂ "ಅನುನಯದಿಂ ಗುಣವರ್ಮನ ಜಯುವ। ರ್ಮನ ಗಜಗನ ಗುಣನಂದಿಯ ನಯುವ। ರ್ಮನ ಹೊನ್ನನ" ಎಂಬ ಪದ್ಯಭಾಗದಲ್ಲಿ ಹೇಳಿದ್ದಾನೆ. ಇವರು ಆವ ಗ್ರಂಥಗಳನ್ನು ಬರೆದಿದ್ದಾರೆಯೋ ತಿಳಿಯದು.

---

## ಹರಭಕ್ತ. ಸು. 1250.

ಈತನು ಅನೇಕಂಜನೂರಲ್ಲಿ ಆಂಡಿಯಾಗಿದ್ದನೆಂದೂ ವೇದಭಾಷ್ಯವನ್ನು ಬರೆದನೆಂದೂ ಚೆನ್ನಬಸವಪುರಾಣದ ಈ ಪದ್ಯದಿಂದ ತಿಳಿಯುತ್ತದೆ:—

[1] ಹರಭಕ್ತನೆಂಬನೇಕಂಜನೂರಾಂಡಿಯಾ ।
ಪರಮವೇದಂಗಳಿಗೆ ಭಾಷ್ಯಮಂ ಮಾಡಿ ತಾ ।
ನಿರುತಲ್ಲಿ ಸರಸಿಯೊಳಗಳಿಯುನಂ ಪುಗಿಸಿ ಮಣಿಕರ್ಣಿಕೆಯೊಳೊಡದೆಬ್ಬಿಸಿ ॥
ಹರುಷದಿಂ ರಂಗನಾಥನ ಕೈಯ ಬಾಗಿಲಂ ।
ತೆಱಿಸಿ ಮಹಿಮೆಯ ತೋಱಿ ಶಿವನ ವರದಿಂ ತನ್ನ ।
ಪುರದುಭಯಕೇರಿಯೊಳಗಿರ್ದರಂ ಕೈಲಾಸಕೊಯ್ದನತಿಸಂಭ್ರಮದೊಳು ॥

ಇವನ ಭಾಷ್ಯವು ಬಹುಶಃ ಕನ್ನಡದಲ್ಲಿ ಇರಬಹುದೆಂದು ತೋರುತ್ತದೆ. ಚೆನ್ನಬಸವಪುರಾಣದಲ್ಲಿ ಪಾಲ್ಕುರಿಕೆ ಸೋಮನಾಥನ[2] (ಸು. 1195) ಚರಿತಕ್ಕೂ ಪ್ರತಾಪರುದ್ರನ ಕೈಯಕೆಳಗೆ ದಂಡನಾಯಕನಾಗಿದ್ದ ಕಂಪಲನ[2] (ಸು. 1300) ಚರಿತಕ್ಕೂ ನಡುವೆ ಹರಭಕ್ತನ ಚರಿತವು ಬಂದಿರುವುದರಿಂದ ಈತನು ಸುಮಾರು 1250 ರಲ್ಲಿ ಇದ್ದಿರಬಹುದು.

---

## ಮಹಾಬಲಕವಿ. 1254.

ಈತನು **ನೇಮಿನಾಥಪುರಾಣವನ್ನು** ಬರೆದಿದ್ದಾನೆ. ಇವನು ಜೈನಕವಿ; ಭಾರದ್ವಾಜಗೋತ್ರದವನು; ಇವನ ತಂದೆ ರಾಯಿದೇವ; ತಾಯಿ ರಾಜಿಯಕ್ಕ; ಗುರು ಮೇಘಚಂದ್ರ. ಆಶ್ವಾಸಾಂತ್ಯಗದ್ಯಗಳಲ್ಲಿ "ಮಾಧವಚಂದ್ರತ್ರೈವಿದ್ಯಚಕ್ರವರ್ತಿಶ್ರೀಪಾದಪ್ರಸಾದಾಸಾದಿತ ಸಕಲಕಲಾಕಲಾಪ" ಎಂದು ಹೇಳಿಕೊಂಡಿರುವುದರಿಂದ ಮಾಧವಚಂದ್ರನು ಈತನ ವಿದ್ಯಾಗುರುವಾಗಿರಬಹುದು.

---

1. ಕಾಂಡ 5, ಸಂಧಿ 9, ಪದ್ಯ 63. 2. ಕಾಂಡ 5, ಸಂಧಿ 9, ಪದ್ಯ 5, 91, 77.

ಈ ಗ್ರಂಥವನ್ನು ಶಕ 1176 ಎಂದರೆ, 1254 ರಲ್ಲಿ, ಬರೆದಂತೆ ಈ ಪದ್ಯ ಭಾಗಗಳಲ್ಲಿ ಹೇಳುತ್ತಾನೆ :—

ಷಡಧಿಕಸಪ್ತತಿವತ್ಸರ | ದೊಡಗೂಡಿದ ಶತಸಮಧಿಕವರ್ಷಸಹಸ್ರಂ |
ಕಡೆಯ ಶಕನೃಪನ ಕಾಲಂ | * * ||
* * * * ನೆಗಟ್ಟಿದುದು ಲೋಕೋ |
ತ್ತಮಮಿಾಕಾವ್ಯಂ ಭಾವುಕ | ಸಮುದಯಭಾವ್ಯಂ ಜಗಜ್ಜನಶ್ರುತಿಸೇವ್ಯಂ ||

ಬಂಕನಾಯಕ, ಚೌಡಿಯಕ್ಕ ಇವರಿಗೆ ಕಾಳಯನಾಯಕ, ಕೇತಯನಾಯಕ, ನೇಮ ಎಂಬ ಮೂವರು ಮಕ್ಕಳಿದ್ದರು. ಈ ಕೇತಯನಾಯಕನಿಗೆ ಕ್ಷೇಮಂಕರ ಎಂಬ ಹೆಸರೂ ಉಂಟು. ಈತನು ಕವಿಯಿಂದ ಈ ಗ್ರಂಥವನ್ನು ಮಾಡಿಸಿದನು. ಇವನು ವೀರನಾಗಿಯೂ ಸ್ವತಃ ಕವಿಯಾಗಿಯೂ ಇದ್ದಂತೆ ಈ ಪದ್ಯಗಳಿಂದ ತಿಳಿಯಬರುತ್ತದೆ :—

ನೀತಿವಿದಂ ನಿಯೋಗಕುಶಲಂ ನಿರವದ್ಯಗುಣಾಶ್ರಯಂ ರಣೋ |
ದ್ವೀತಳರುದ್ರನದ್ರವಿಣಬಾಂಧವ * * * * ||
ಶ್ರೀತರುಣೀಲಲಾಟದ ಲಲಾಮವಿಲಾಸಮನಾಂತು ಧಾತ್ರಿಯೊಳ್ |
ಕೇತಯನಾಯಕಂ ಜನನಿರೂಪಿತನಿರ್ಮಳಧರ್ಮನಾಯಕಂ ||

ಧರೆಯಂ ಪೂರಿಸೆ ತನ್ನ ನಿರ್ಮಲಗುಣಂ ವಿದ್ವಜ್ಜನಕ್ಕಾದಮ |
ಚ್ಚರಿಯಂ ಪುಟ್ಟಿಸೆ ತನ್ನ ಕಾವ್ಯಕಥನಾಲಾಪಂ ಮನೋಜಾತನೊಳ್ ||
ನಿರುತಂ ತಾನೆ ವಿಶೇಷಮೆಂದೆನಿಸೆ ತನ್ನಾಕಾರಮೌದಾರ್ಯಮುಂ |
ಸುರಭೂಜಪ್ರಕರಕ್ಕೆ . . ಸೆಯಲಾತಂ ಖ್ಯಾತಿಯಂ ತಾಳ್ದಿದಂ ||

ಈ ಕೇತಯನ ತಂದೆ 'ಕರಣದೀಪ' ಶ್ರೀಪತಿಯ ಮಗಳು ಮರುದೇವಿ. ಇವರಿಗೆ ಚೌಡಲೆ ಎಂಬ ಒಬ್ಬ ಮಗಳಿದ್ದಳು. ಇವಳನ್ನು ಕಲಿದೇವನೆಂಬವನು ಮದುವೆಯಾದನು. ಕೇತಯನಾಯಕನು ಕೋಟಿಬಾಗಯ ಜಿನಾಲಯದಲ್ಲಿ ವ್ರತಾಚರಣವನ್ನು ಮಾಡಿದನು. ಶ್ರೀ ಕರಣದ ಶ್ರೀಪತಿಯ ಅಥವಾ ಸಿರಿಗನ ಮಗ ಲಕ್ಷ್ಮ ಎಂಬವನಿಗೆ ಈ ಮಹಾಬಲಕವಿ ಗುರುವಾಗಿದ್ದನು. ಇವನು 'ಸಚಿವ' ಎಂದು ತನ್ನನ್ನು ವಿಶೇಷಿಸಿ ಹೇಳಿಕೊಂಡಿರುವುದರಿಂದ ಬಹುಶಃ ಈ ಕೇತಯನಾಯಕನಲ್ಲಿಯೇ ಮಂತ್ರಿಯಾಗಿದ್ದಿರಬಹುದು. ತನ್ನ ಗ್ರಂಥವನ್ನು ಶ್ರುತಾಚಾರ್ಯರೇ ಮೊದಲಾದವರು ಸಭೆಯಲ್ಲಿದ್ದು ಕೇಳುವಂತೆ ಹೇಳಿದಹಾಗೂ ತನ್ನ ಶಿಷ್ಯ ಲಕ್ಷ್ಮನಿಂದ ಬರಸಿದಹಾಗೂ ಹೇಳುತ್ತಾನೆ.

ಈತನಿಗೆ ಸಹಜಕವಿಮನೋಗೇಹಮಾಣಿಕ್ಯದೀಪ, ವಿಶ್ವವಿದ್ಯಾವಿರಿಂಚ ಎಂಬ ಬಿರುದುಗಳು ಇದ್ದಂತೆ ತೋರುತ್ತದೆ.

ಇವನು ತನ್ನ ಹಿಂದೆ ಇದ್ದ ಕವಿಗಳಲ್ಲಿ ಅರ ಹೆಸರನ್ನೂ ಹೇಳಿಲ್ಲ. ತನ್ನ ಪಾಂಡಿತ್ಯವನ್ನೂ ಕವಿತಾಚಾತುರ್ಯವನ್ನೂ ಈ ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ :—

ಲೌಕಿಕಪಾರಮಾರ್ಥಿಕವಿಚಾರವಿಚಕ್ಷಣನಿಂದ್ರಚಂದ್ರವೈ।
ಯಾಕರಣಪ್ರಭಾವವಚನಾಗಮವಾಕ್ಪತಿ ತರ್ಕಷಟ್ಕಶಿ॥
ಕ್ಷಾಕರಣೀಯಕರ್ತೃ ಬಹುಭೇದದಲಂಕರಣಾಭಿಧಾನಮಾ।
ಲಾಕುಶಲಂ ಮಹಾಬಳಕವೀಶ್ವರನುತ್ಸವದುಂದುಭಿಸ್ವರಂ॥

ಕುಸಿವನಮರ್ಚುವುದ್ಧುರಸಭಾವವಿದಗ್ಧತೆಯೋಟಿಗ. ದವಿ।
ನ್ಯಸನವಿಳಾಸಮನ್ವಯಿಸುವಚ್ಚರಿಯಾರಮನಕ್ಕಮುಟ್ಟಿಯುಂ॥
ಪೊಸೆಯಿಪ ದೇಸೆ.. ಯನುರೂಪದಳಂಕೃತಿ ಕಾವ್ಯದಲ್ಲಿ ರಂ।
ಜಿಸೆ ಕೃತಿವೇಟ್ಟು ತತ್ಕೃತಿಚಮತ್ಕೃತಿಯುಂ ಪಡೆವಂ ಮಹಾಬಳಂ॥

ಎಳವೆಂಗಳಪಾಂಗಸ್ಪೃಷೆ। ಮಳಯಸಮೀರಣನ ಸೋಂಕು ಪೊಸಸುಗ್ಗಿಯ ತಿಂ।
ಗಳ ಪೊಳೆಪು ಮಹಾಬಳಕೃತಿ। ಯೊಳಗಾಗಿಸದಿರವು ಜಗದ ಜಾಣರ ಮನಮಂ॥

ಇವನ ಗ್ರಂಥ

## ನೇಮಿನಾಥಪುರಾಣ.

ಇದು 22 ನೆಯ ತೀರ್ಥಂಕರನ ಚರಿತವು; ಚಂಪೂಗ್ರಂಥ : 16 ಆಶ್ವಾಸಗಳಾಗಿ ಭಾಗಿಸಲ್ಪಟ್ಟಿದೆ. ಇದರಲ್ಲಿ ಹರಿವಂಶ ಕುರುವಂಶಗಳ ಕಥೆ ಹೇಳಿದೆ.

ಗ್ರಂಥಾವತಾರದಲ್ಲಿ ನೇಮಿನಾಥಸ್ತುತಿಯಿದೆ. ಬಳಿಕ ಕವಿ ಸಿದ್ಧಾದಿಗಳನ್ನೂ ಸರಸ್ವತಿಯನ್ನೂ ಸ್ಮರಿಸಿ ತರುವಾಯ ಭೂತಬಲಿಯಿಂದ ಪುಷ್ಪಸೇನನವರೆಗೆ ಗುರುಗಳನ್ನು [1] ಕ್ರಮವಾಗಿ ಹೊಗಳಿದ್ದಾನೆ. ಅನಂತರ ಕೇತಯನಾಯಕನ ವಿಷಯವನ್ನೂ ಸ್ವವಿಷಯವನ್ನೂ ಹೇಳಿ ಗ್ರಂಥವನ್ನು ಆರಂಭಿಸಿದ್ದಾನೆ.

ಆಶ್ವಾಸಗಳ ಕೊನೆಯಲ್ಲಿ ಈ ಗದ್ಯವಿದೆ :—

ಇದು ಪರಮಪ್ರವಚನಪಯಃಪಾರಾವಾರಶರತ್ಸಾಂದ್ರಚಂದ್ರ ಶ್ರೀಮನ್ಮಾಧವಚಂದ್ರ ತ್ರೈವಿದ್ಯಚಕ್ರವರ್ತಿಶ್ರೀಪಾದಪ್ರಸಾದಾಸಾದಿತಸಕಲಕಲಾಕಲಾಪ ಸಹಜಕವಿಮನೋಗೇಹ

1. ಭೂತಬಲಿ, ಪುಷ್ಪದಂತ, ಜಿನಸೇನ, ವೀರಸೇನ, ಸಮಂತಭದ್ರ, ಕವಿಪರಮೇಷ್ಠಿ, ಪೂಜ್ಯಪಾದ, ಗೃಧ್ರಪಿಂಛ, ಜಟಾಸಿಂಹನಂದಿ, ಅಕಳಂಕ, ಶುಭಚಂದ್ರ, ಕುಮುದೇಂದುಮುನಿ, ಮತ್ತಗಜಂ ಕರದಿಂ ದರ್ಪಮೇರ್ವೆತ್ತಿದ ವಿನಯಚಂದ್ರ, ಮಾಧವಚಂದ್ರ, ರಾಜಗುರು, ಜಟ್ಟರಾಜ್ಯ ವಿಸ್ತಾರಕಮುನಿಚಂದ್ರ, ಬಾಳಚಂದ್ರತ್ರೈವಿದ್ಯ.

ಗದ್ಯೋಪನ್ಯಾಸಮುದ್ಭಾಷಿತಪದಗತವರ್ಗಾಕ್ಷರತ್ಯಾಗಮಿಚ್ಛಾ।
ಪದ್ಯೋಪನ್ಯಾಸಮಂತಾಸ್ಯದಿನೊಗೆಯೆ ಸಭಾಮಧ್ಯದೊಳ್ ಭೇರಿಯಂ ವಾ॥
ದೋದ್ಯೋಗಂಗೆಟ್ಟು ವಾದಿಪ್ರಕರಮೊಙಗೆ ವಾದೀಭವಜ್ರಾಂಕುಶಂ ತ್ರೈ।
ವಿದ್ಯೇಶಂ ಭಾವಸೇನವ್ರತಿ ನೆಗಟ್ದನಿಳಾಚಕ್ರದೊಳ್ ಚಕ್ರಪೂಜ್ಯಂ॥
ಎಂದು ಸ್ತುತನಾದ ಭಾವಸೇನ, ಜಗತೀಪ್ರಸಿದ್ಧಕಾತರ್ಾಂತಿಕವಾದ ಅಭಯೇಂದು, ಮಾಘಣಂದಿಯತಿ, ಪುಷ್ಪಸೇನ.

ಮಾಣಿಕ್ಯದೀಪವಿರಚಿತಮುಂ ಸ್ಯಾದ್ವಾದವಿದ್ಯಾಪ್ರಭಾವವಿಧಾಯಕ ಕ್ಷೇಮಂಕರನಾಯಕ ಕಾರಿತಮುಮಪ್ಪ ಶ್ರೀಮನ್ನೇಮಿನಾಥಪುರಾಣದೊಳ್.

ಈತನ ಬಂಧವು ಪ್ರೌಢವಾಗಿದೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ:—

### ಮಳೆಗಾಲ.

ಸ್ಫುರಿಯಿಪ ಶಸ್ತ್ರಸಂಹತಿಗಳಂತಿರೆ ಮಿಂಚುವ ಮಿಂಚು ತಪ್ಪಯೋ ।
ಧರಘುಟೆಯೊಳ್ ಪತಾಕೆಗಳ ಪಾಂಗಿನೊಳಿಂದ್ರಶರಾಸನಂ ಮನೋ ॥
ಹರತೆಯನೀಯೆ ಶಸ್ತ್ರಹತನಾದ ನಿದಾಘನ ಮೆಯ್ಯ ರಕ್ತಶೀ ।
ಕರದಮರೇಂದ್ರಗೋಪತತಿ ಕಣ್ಗೆಸೆದಿರ್ದುವು ಸರ್ವಧಾತ್ರಿಯೊಳ್ ॥ 898 ॥

ಬಿಸಿಲೆಸಕಂ ಮೊಗಂದಿರಿಪೆ ಮಾಳದ ಚೂಳಿಕೆಗಳ್ ಬಿಗುರ್ತುರ್ಪು ।
ಲ್ಲಸುರ ಪಸುರ್ಗೆ ಪಕ್ಕುಗುಡೆ ಕಾನನಮೆಯ್ದೆ ಕದಂಬಭೂರುಹ ॥
ಪ್ರಸವಪರಾಗದಿಂ ಪುದಿಯೆ ಮೊಲ್ಲೆಯ ಪೂಗುಡಿಗಳ್ ಮುಗುಳ್ತು ಮಿ ।
ಳ್ಪಸಿ ಮಿಳಿರಲ್ಕೆ ಬೀಸಿದುದು ತಣ್ಣನೆ ಪಣ್ಣನೆ ಪಶ್ಚಿಮಾನಿಳಂ ॥ 899 ॥

### ವಸಂತ.

ತಳಿರ ಪಸುರಲರ ಬೆಳ್ಪಳಿ । ಗಳ ಕರ್ಪಂಕುರದ ಕೆಂಪು ಪಣ್ಪೊಂಬಣ್ಣಂ ।
ಗಳಿನೆಸೆವ ನಂದನಾಗ್ರಿಮ । ಮಿಲ್ಕೆಯ್ಸುತ್ತಂಬರಂ ವಿಚಿತ್ರಾಂಬರಮಂ ॥ 900 ॥

### ಮಂದಮಾರುತ.

ವನಜವನಶೀಕರಾರ್ದ್ರಂ । ವನತರುಸುಮನಃಪರಾಗಭರಮಂಥರನೊ ।
ಯ್ಯನೆ ಸುಳಿದುದು ತಜ್ಜನಪದ। ವನೇಭಮದಗಂಧಬಂಧುರಂ ಗಂಧವಹಂ ॥ 901 ॥

### ಬೆಳುದಿಂಗಳು.

ಪುಗೆ ಮೆಯ್ಯಾನದ ಗಂಗಾ । ಪಗೆ ಕುಡಿದೊಡೆ ಪೊಟ್ಟೆ ತೀವದಮೃತಂ ಹರಿಶ ।
ಯ್ಯೆಗೆ ಬಾರದ ಪಾಲ್ಗಡಲೆನೆ । ಜಗಮಂ ಬಳ್ವಳನೆ ಬಳಸಿದುದು ಬೆಳ್ದಿಂಗಳ್ ॥ 902 ॥

ಚಳರುಚಿಯ ತಿರುಳನಮರ್ದಿಂ । ತೊಳೆದೊರೆದು ಚರಾಚರಕ್ಕೆ ಸಜ್ಜುಗೊಟ್ಟುದಿಟಂ ।
ಜಳಜಭವಂ ಮಿಂಚಿಟ್ಟವೊ । ಲಿಳೆಯುಂ ಪರ್ವಿದುದು ಚಂದ್ರಿಕಾವಿಸ್ತಾರಂ ॥ 903 ॥

### ಕುಂಟಣಿ.

ಬಱಿದಂ ಪಯನಾಗಿಪ್ಪರ್ । ಕೊಱಿದಂ ಕೊನರಿಪ್ಪರೀಮುದುಂಕಿಯರಿವರಾ ।
ದರಣಂ ಕಾಮುಕಪಿತೃಧನ । ಹರಣಂ ಭಿಕ್ಷಾವಿಧಾನಜೀವನಕರಣಂ ॥ 904 ॥

## ಗಜಯುದ್ಧ.

ನೂಂಕುವಡರ್ಪು ಪೊಯ್ವದಟು ಬಂಚಿಪ ಬಿನ್ನಣಮೋರೆವೋಪಿನಂ ।
ಕೊಂಕುವ ಸತ್ತ್ವಮೆರ್ಪುವಳವಟ್ಟುವ ಮುಟ್ಟುವ ತಕ್ಕು ಕೆಯ್ಗಿಕೆ ॥
ಯ್ಕಂ ಕುಡುವಾರ್ಪು ಕೋಡ ಕೊನೆಯಿಂದಿಱಿದೆತ್ತುವ ಪಾಂಗು ಮೆಯ್ಗೆ ಮೆ ।
ಯ್ಯಾಂಕೆಯ ಮೆಯ್ವಶಂಬೆಯಸು (?) ನಿತ್ತುವು ಸಾಮಜ ಸಂಗರೋರ್ವಿಯೊಳ್ ॥ 905 ॥

## ಶಿಶುಪಾಲಾದಿಕೃತ ಕೃಷ್ಣಧಿಕ್ಕಾರ.

ಬಡಕಱ್ತಿಯನೊಂದಂ ಪೆ । ಮರ್ಡುವಿನೊಳಿರ್ಪೊಳ್ಳೆಯೊಂದನೊಡೆಯರ ದೆಸೆಯಿಂ ।
ನಡೆಗೆಟ್ಟೋಹಣವೊಂದಂ । ಮಡಿಪಿದ ಸಾಹಸಮದಿಲ್ಲಿ ಸಲ್ಲದು ಮರುಳೇ ॥906॥

ಜಳಧಿಯೊಳಿರ್ದೊಡಿಂಟಿ ಕುಳಶೈಲದೊಳಿರ್ದೊಡೆ ಸುರ್ಗುಗುಟ್ಟಿ ಭೂ ।
ತಳದ ತಳಕ್ಕೆ ಪೊಕ್ಕೊಡದನೆತ್ತಿ ವಿಯದ್ಗತನಾದನಪ್ಪೊಡು ॥
ಚ್ಚಳಿಸಿ ವಿರೋಧಿಯುಷ್ಣರುಧಿರಾಂಬುವಿನಿಂ ಸುತೆ ನಿನ್ನ ಕೇಶಮುಂ ।
ತೊಳೆಯದೊಡೆನ್ನ ಚಕ್ರಮಿದು ಚಕ್ರಮೆ ಕೋವರ ಚಕ್ರಮಲ್ಲವೇ ॥ 907 ॥

## ಹಲಾಯುಧಪ್ರಲಾಪ.

ಕಡುಗಿಡದಪ್ಪ ಕಾನನದೊಳೆನ್ನನಗಲ್ದಿಱೆ ತಮ್ಮ ನೀನಿದಾ ।
ವಡೆಗಡಿಯಿಟ್ಟಯಿಂತುಱಿಪೆ ನಿನ್ನಸುವಂ ತೆಗೆದುಯ್ದನಾವನೋ ॥
ಸುಡಿಯುಯಿಸುತ್ತುಮೆತ್ತಿ ನೊಸಲೊಳ್ ನೊಸಲಂ ಬಿಡೆ ತಾಟಿಸುತ್ತುಮೆ ।
ನ್ನೊಡೆಯನನೆಲ್ಲಿ ಕಾಣ್ಬೆನೆನುತುಂ ಕಡುದುಃಖದಿನಾಹಳಾಯುಧಂ ॥ 908 ॥

ಗಿರಿಯುಂ ಕಿಱ್ತೀಱಿಹೋರಾತ್ರದ ಕಡೆವರೆಗಂ ಕೆಯ್ಕೊಳಾಂತಿರ್ದೆ ದಾರ್ವೀ ।
ಕರಶಯ್ಯಾಶಾರ್ಙ್ಗಶಂಖಂಗಳನವಯವದಿಂದೇಱುವೇಱಿಪ್ಪ ಪೂರಿ ॥
ಷ್ಪುರುಶೌರ್ಯಾ ಮಲ್ಲರೆಲ್ಲಂ ಮುಸುಱಿ ಮುಳಿದು ಕಂಸಂಗೆ ಕೆಯ್ನೀಡಿ ತಿಱ್ರಂ ।
ತಿರುಪುತ್ತುಂ ಕೊಂದದೋಸ್ಸಾಹಸಿ ನಿನಗೆ ಪುಣುಂಬುರ್ಚಿ ಸಾವಂತುಟಾಯ್ತೇ ॥ 909 ॥

---

## ಕೇಶಿರಾಜ. ಸು. 1260.

ಇವನು ಶಬ್ದಮಣಿದರ್ಪಣವನ್ನು ಬರೆದಿದ್ದಾನೆ. ಈ ಗ್ರಂಥದ ಅಂತ್ಯದಲ್ಲಿರುವ—

ದೊರೆವಡೆದ ಚೋಳಪಾಲಕ । ಚರಿತಂ ಶ್ರೀಚಿತ್ರಮಾಲೆಯಂತೆ ಸುಭದ್ರಾ ।
ಹರಣಂ ಪ್ರಬೋಧಚಂದ್ರಂ । ಕಿರಾತಮಿವು ಕೇಶಿರಾಜವಿರಚಿತಕಂಗಳ್ ॥

ಎಂಬ ಪದ್ಯದಿಂದ ಇವನು ವ್ಯಾಕರಣವಲ್ಲದೆ ಬೇರೆ ಐದು ಗ್ರಂಥಗಳನ್ನು ಬರೆದಿರುವಂತೆ ತಿಳಿಯುತ್ತದೆ. ಈ ಗ್ರಂಥಗಳಾವುವೂ ನಮಗೆ ದೊರೆತಿಲ್ಲ.

ಈತನು ಜೈನಕವಿ. **ಸೂಕ್ತಿಸುಧಾರ್ಣವ**ವನ್ನು ಬರೆದ **ಮಲ್ಲಿಕಾರ್ಜುನ**ನ ಮಗನು; **ಹೊಯ್ಸಳನಾರಸಿಂಹ**ನಲ್ಲಿ (1141—1173) ಕಟಕೋಪಾಧ್ಯಾಯನಾಗಿದ್ದ **ಕವಿಸುಮನೋಬಾಣ**ನ ದೌಹಿತ್ರನು; **ಜನ್ನ**ನ ಸೋದರದಳಿಯನು. ಇವನ ತಂದೆ 1233 ರಿಂದ 1254 ರ ವರೆಗೆ ಆಳಿದ ಹೊಯ್ಸಳಸೋಮೇಶ್ವರನ ಕಾಲದಲ್ಲಿ ಇದ್ದುದರಿಂದ **ಕೇಶಿರಾಜ**ನು ಸುಮಾರು 1260 ರಲ್ಲಿ ಇದ್ದಿರಬಹುದು.

ತನ್ನ ಗ್ರಂಥಕ್ಕೆ ಈ ಕವಿಗಳ ಗ್ರಂಥಗಳು ಲಕ್ಷ್ಯವೆಂದು ಹೇಳಿದ್ದಾನೆ:—

ಗಜಗನ ಗುಣನಂದಿಯ ಮನ । ಸಿಜನಸಗನ ಚಂದ್ರಭಟ್ಟಗುಣವರ್ಮಶ್ರೀ ।
ವಿಜಯುರ ಹೊನ್ನನ ಹಂಪನ । ಸುಜನೋತ್ತಂಸನ ಸುಮಾರ್ಗಮಿದಱೊಳ್ ಲಕ್ಷ್ಯಂ ॥

ಈ ಕವಿಗಳ ಗ್ರಂಥಗಳಿಂದಲ್ಲದೆ ರನ್ನ, ನಾಗಚಂದ್ರ, ನಾಗವರ್ಮ, ನೇಮಿಚಂದ್ರ, ಹಂಸರಾಜ, ಬ್ರಹ್ಮಶಿವ ಮೊದಲಾದವರ ಗ್ರಂಥಗಳಿಂದಲೂ ಉದಾಹೃತವಾದ ಪದ್ಯಗಳು ದೊರೆಯುತ್ತವೆ.

ಈತನನ್ನು ಕವಿಮಲ್ಲನು (ಸು. 1400) ತನ್ನ ಮನ್ಮಥವಿಜಯದಲ್ಲಿ—

ನಿರುತಂ ಕರ್ಣಾಟಕದೊಳ್ । ಪರಿಕಿಸೆ ಶಬ್ದಜ್ಞನಾವನೊರ್ವನೆ ಲೋಕ ।
ಕ್ಕರಿದಱ್ತಿ ಭಾಪು ಕವಿಕುಂ । ಜರ ಕೇಶವರಾಜ ಗೋಚರಿಸು ಮನ್ಮನದೊಳ್ ॥

ಎಂದೂ, ಅಭಿನವಕೇಶಿರಾಜ ಎಂದು ಹೆಸರಿಟ್ಟುಕೊಂಡಿರುವ **ಈಶ್ವರಕವಿ** (ಸು. 1600) ತನ್ನ ಕವಿಜಿಹ್ವಾಬಂಧನದಲ್ಲಿ "ಲಕ್ಷಣಶಿಕ್ಷಾಚಾರ್ಯ ಸುಲಕ್ಷಣಿ ಕೇಶವ" ಎಂದೂ, ಇನ್ನು ಕೆಲವರು ಬೇರೆ ವಿಧವಾಗಿಯೂ ಸ್ತುತಿಸಿದ್ದಾರೆ.

ತನ್ನ ಪಾಂಡಿತ್ಯವನ್ನು

ನಡೆದುದೆ ಮಾರ್ಗಂ ಪದವಿಡ । ಲೊಡರಿಸಿದುದೆ ಭಂಗಿ ಕೇಶವಂಗಿದಿರುಂಟೇ ।
ತೊಡಗಿದ ಕೃತಿಗಳೊಳಾನೆಯು । ನಡು ಬಡವೇ ತಾನೆ ಲೋಕದೊಳ್ ಲಾಕ್ಷಣಿಕಂ ॥

ಎಂಬ ಪದ್ಯದಲ್ಲಿ ಹೇಳಿಕೊಂಡಿದ್ದಾನೆ.

ಇವನ ಗ್ರಂಥ

## ಶಬ್ದಮಣಿದರ್ಪಣ.

ಇದು ಕರ್ಣಾಟಕ ವ್ಯಾಕರಣಗ್ರಂಥ. ಇದರಲ್ಲಿ ಸಂಧಿ, ನಾಮ, ಸಮಾಸ, ತದ್ಧಿತ, ಆಖ್ಯಾತ, ಧಾತು, ಅಪಭ್ರಂಶ, ಅವ್ಯಯ ಎಂಬ ಎಂಟು ಸಂಧಿಗಳಿವೆ. ಗ್ರಂಥದ ಕೊನೆಯಲ್ಲಿ "ಪ್ರಯೋಗಸಾರವೆಂಬ ಶಬ್ದಾರ್ಥನಿರ್ಣಯಂ" ಎಂಬ

ಹೆಸರಿನಿಂದ ಒಂಬತ್ತನೆಯ ಸಂಧಿಯೊಂದು ಸೇರಿದೆ. ಇದರಲ್ಲಿ ಪುರಾಣಕವೀಂದ್ರರು ಪ್ರಯೋಗಿಸಿರುವ ಗೂಢಪದಗಳ ಅರ್ಥವನ್ನು ಕೊಟ್ಟಿದ್ದಾನೆ. ಈ ಗ್ರಂಥದಲ್ಲಿ ಕವಿ ಸೂತ್ರಗಳನ್ನು ಕಂದರೂಪವಾಗಿ ಬರೆದು ಅವುಗಳಿಗೆ ತಾನೇ ವೃತ್ತಿಯನ್ನೂ ಬರೆದಿದ್ದಾನೆ. ಲಾಕ್ಷಣಿಕರು ಕರ್ಣಾಟಕ ಲಕ್ಷಣಶಬ್ದಶಾಸ್ತ್ರಮಂ ಪೇಳೆಂದು ಕೇಳಲು ಈ ಗ್ರಂಥವನ್ನು ಬರೆದುದಾಗಿ ಹೇಳುತ್ತಾನೆ. ಗ್ರಂಥದ ಉತ್ಕೃಷ್ಟತೆಯನ್ನು—

ಸಿರಿಗೀಕ್ಷಿಪ ರಸಚಿತ್ರಂ । ಸರಸತಿಗೆರಡನೆಯ ಬೀಣೆಯೆನೆ ಸೌಭಾಗ್ಯಂ ।
ಕರಮಾದುದೆಂದು ಬುಧರಾ । ದರಿಪರ್ ಮೆಚ್ಚಿಂದೆ ಶಬ್ದಮಣಿದರ್ಪಣಮಂ ॥

ಎಂಬ ಪದ್ಯದಲ್ಲಿ ಹೇಳಿದ್ದಾನೆ.

ಗ್ರಂಥಾವತಾರದಲ್ಲಿ ಸರಸ್ವತಿಯ ಸ್ತುತಿಯಿದೆ. ಸಂಧಿಗಳ ಕೊನೆಯಲ್ಲಿ—

ಇದು ಸಮಸ್ತಶಾಬ್ದಿಕಜನಮನೋಜನಿತ ಶಬ್ದಸಂದೇಹಶಲ್ಯ ಚಾರುಚುಂಬಕಾಯಮಾನಾನೂನ ಕರ್ಣಾಟಕಲಕ್ಷಣಶಿಕ್ಷಾಚಾರ್ಯ ಸುಕವಿಕೇಶಿರಾಜ ವಿರಚಿತಮಪ್ಪ ಶಬ್ದಮಣಿದರ್ಪಣದೊಳ್

ಎಂಬ ಗದ್ಯವಿದೆ.

ಶಬ್ದದ ಉತ್ಪತ್ತಿಯನ್ನು ಈ ವಿಧವಾಗಿ ಹೇಳಿದ್ದಾನೆ:—

ಅನುಕೂಲಪವನನಿಂ ಜೀ । ವನಿಷ್ಟದಿಂ ನಾಭಿಮೂಲದೊಳ್ ಕಹಳೆಯ ಪಾಂ ।
ಗಿನವೊಲ್ ಶಬ್ದದ್ರವ್ಯಂ । ಜನಿಯಿಸುಗುಂ ಶ್ವೇತಮದಱ ಕಾರ್ಯಂ ಶಬ್ದಂ ॥

ಕನ್ನಡಭಾಷೆಯ ಸ್ವರೂಪವನ್ನು ಈ ಪದ್ಯದಲ್ಲಿ ಸಂಕ್ಷೇಪವಾಗಿ ಹೇಳಿದ್ದಾನೆ:—

ಗಮಕಸಮಾಸದಿಂ ಜಟಿಕುಳಕ್ಷಳದಿಂ ಶ್ರುತಿಸಹ್ಯಸಂಧಿಯಿಂ ।
ಸಮುಚಿತಮಾಗಿ ಬರ್ಪ ಸತಿಸಪ್ತಮಿಯಿಂ ಸಮಸಂಸ್ಕೃತೋಕ್ತಿಯಿಂ ॥
ವಮಹಪಭೇದದಿಂ ವಿರಹಿತಾವ್ಯಯಸಂಸ್ಕೃತಲಿಂಗದಿಂ ಪದೋ ।
ತ್ತಮಶಿಥಿಲತ್ವದಿಂ ಯತಿವಿಲಂಘನದಿಂದರಿದಲ್ತೆ ಕನ್ನಡಂ ॥

ವ್ಯಾಕರಣಜ್ಞಾನದಿಂದ ಉಂಟಾಗುವ ಫಲವನ್ನು—

ವ್ಯಾಕರಣದಿಂದೆ ಪದಮಾ । ವ್ಯಾಕರಣದ ಪದದಿನರ್ಥಮರ್ಥದೆ ತತ್ತ್ವ ।
ಲೋಕಂ ತತ್ತ್ವಾಲೋಕದಿ । ನಾಕಾಂಕ್ಷಿಪ ಮುಕ್ತಿಯಕ್ಕುಮದೆ ಬುಧರ್ಗೆ ಫಲಂ ॥

ಎಂಬ ಪದ್ಯದಲ್ಲಿ ಹೇಳಿದ್ದಾನೆ.

**ನೃಪತುಂಗನು** ಕವಿರಾಜಮಾರ್ಗದಲ್ಲಿ ಕನ್ನಡವ್ಯಾಕರಣಕ್ಕೆ ಸಂಬಂಧಿಸಿದ ಕೆಲಕೆಲವಂಶಗಳನ್ನು ಅಲ್ಲಲ್ಲಿ ಹೇಳಿದ್ದಾನೆ. ಆದರೂ ಕರ್ಣಾಟಕವ್ಯಾಕರಣವನ್ನು ಕ್ರಮವಾದ ಆನುಪೂರ್ವಿಯೊಡನೆ ಗ್ರಂಥರೂಪವಾಗಿ ಬರೆದವರಲ್ಲಿ **ನಾಗವರ್ಮನೇ** ಮೊದಲನೆಯವನು. ಆತನು ಈ ಶಾಸ್ತ್ರವನ್ನು **ಕಾವ್ಯಾವಲೋಕನದ** ಮೊದಲನೆಯ ಅಧ್ಯಾಯವಾದ ಶಬ್ದಸ್ಮೃತಿಯಲ್ಲಿ ಸಂಗ್ರಹವಾಗಿಯೂ ಭಾಷಾಭೂಷಣದಲ್ಲಿ ಅದಕ್ಕಿಂತ ಸ್ವಲ್ಪ ವಿಸ್ತಾರವಾಗಿಯೂ ಉಪಪಾದಿಸಿದ್ದಾನೆ. **ನಾಗವರ್ಮನ** ಶಬ್ದಸ್ಮೃತಿಯ ಆನುಪೂರ್ವಿಯನ್ನೇ ಅನುಸರಿಸಿದರೂ **ಕೇಶಿರಾಜನು** ಕೆಲವು ಹೊಸ ವಿಷಯಗಳನ್ನೂ ಸೇರಿಸಿ ವಿಸ್ತರಿಸಿ **ಶಬ್ದಮಣಿದರ್ಪಣವೆಂಬ** ಗ್ರಂಥವನ್ನು ಬರೆದಿದ್ದಾನೆ. **ನಾಗವರ್ಮನ** ಗ್ರಂಥದಲ್ಲಿ ಉದಾಹೃತವಾದ ಪದ್ಯಗಳೇ ಪ್ರಾಯಿಕವಾಗಿ ಇದರಲ್ಲಿಯೂ ಉದಾಹೃತವಾಗಿವೆ. ಕನ್ನಡಭಾಷೆಯಲ್ಲಿ ಕರ್ಣಾಟಕ ಶಬ್ದಶಾಸ್ತ್ರವನ್ನು ವಿಸ್ತಾರವಾಗಿ ಪ್ರತಿಪಾದಿಸುವ ಗ್ರಂಥವು ಇದೊಂದೇ.

---

## ಸಮುದಾಯುದ ಮಾಘಣಂದಿ. ಸು. 1260.

ಈತನು **ಶಾಸ್ತ್ರಸಾರಸಮುಚ್ಚಯ, ಪದಾರ್ಥಸಾರ,** ಇವುಗಳಿಗೆ ಕರ್ಣಾಟಕ ಟೀಕೆಯನ್ನು ಬರೆದಿದ್ದಾನೆ. ಇವನು ಜೈನಕವಿ; ಇವನ ಗುರುಪರಂಪರೆ ಹೀಗೆ ಹೇಳಿದೆ:—

ಶ್ರೀಮೂಲಸಂಘದ ಬಲಾತ್ಕಾರಗಣದ ವರ್ಧಮಾನ; ಶಿಷ್ಯ ಪದ್ಮನಂದಿ; ಸಧರ್ಮ ಶ್ರೀಧರಾಚಾರ್ಯ; ಶಿಷ್ಯ ವಾಸುಪೂಜ್ಯ; ಶಿಷ್ಯ ಶುಭಚಂದ್ರ; ಶಿಷ್ಯ ಅಭಯನಂದಿ; ಶಿಷ್ಯ ಅರ್ಹನಂದಿ; ಶಿಷ್ಯ ದೇವಚಂದ್ರ; ಶಿಷ್ಯ ಅಷ್ಟೋಪವಾಸಿ ಕನಕಚಂದ್ರ; ಶಿಷ್ಯ ನಯಕೀರ್ತಿ; ಶಿಷ್ಯ ಮಾಸೋಪವಾಸಿ ರವಿಚಂದ್ರ; ಶಿಷ್ಯ ಶ್ರುತಕೀರ್ತಿ; ಶಿಷ್ಯ ವೀರಣಂದಿ; ಶಿಷ್ಯ ಗಂಡವಿಮುಕ್ತನೇಮಿಚಂದ್ರ; ಶಿಷ್ಯ ಗುಣಚಂದ್ರ; ಶಿಷ್ಯ ಪಕ್ಷೋಪವಾಸಿ ಜಿನಚಂದ್ರ; ಶಿಷ್ಯ ವರ್ಧಮಾನ; ಶಿಷ್ಯ ಶ್ರೀಧರ; ಶಿಷ್ಯ ವಾಸುಪೂಜ್ಯ; ಶಿಷ್ಯ ಉದಯಚಂದ್ರ; ಶಿಷ್ಯ ಕುಮುದಚಂದ್ರ; ಶಿಷ್ಯ ಮಾಘಣಂದಿ (ಕವಿ).

"ಚತುರನುಯೋಗಕುಶಲ" "ಸಿದ್ಧಾಂತಾಭಿವರ್ಧನಸುಧಾಕರ" ಎಂದು ಕವಿ ತನ್ನನ್ನು ವಿಶೇಷಿಸಿ ಹೇಳಿಕೊಂಡಿದ್ದಾನೆ. ಇವನ ಸ್ತುತಿರೂಪವಾದ ಎರಡು ಪದ್ಯಗಳನ್ನು ಇಲ್ಲಿ ಬರೆಯುತ್ತೇವೆ:—

ಅರಿವೆಣ್ಣಾದನದೊರ್ವನೊರ್ವನುರಮಂ ಕೂರ್ತಿತ್ತನೊರ್ವಳ್ಗೆ ದೇ ।<br>
ವರೊಳೊರ್ವಂ ಮೊಱಂಗೆಟ್ಟನೆನ್ನೊಳಿಡರ್ದೆಂದಂಗೋದ್ಭವಂ ಬಿಂಕಮೋ ॥

ಜಾರೆ ತನ್ನೊಳ್ಗುಣದಿಂದೆ ಕಟ್ಟಿ ವೃಷದಿಂದಂ ಪೆಟ್ಟಮುಂ ಪೂಡಿ ನೋ ।
ಡಿರೆ ಸೈದ್ಧಾಂತಿಕಮಾಘಣಂದಿಯೆಱದಂ ಪ್ರೋದ್ದಾಮನಂ ಕಾಮನಂ ॥
ಮಲ್ಲಿಗೆಯ ನಗೆಮೊಗಂಗಳ್ । ಮೆಲ್ಲನೆ ಬೆಳ್ಪೇಱ ಮಂದಮರುತಂ ಭಯದಿಂ ।
ದಲ್ಲಲ್ಲಿಗೆ ಪುಗೆ ಮದನನ । ಬಿಲ್ಲಂ ಶ್ರೀಮಾಘಣಂದಿಯತಿಪತಿ ಮುಱದಂ ॥

ಈತನು, 1273 ರಲ್ಲಿ **ದ್ರವ್ಯಸಂಗ್ರಹಸೂತ್ರಟೀಕೆಯನ್ನು** ಬರೆದ **ಬಾಲಚಂದ್ರಪಂಡಿತನ** ಗುರುವಿನ ಗುರುವೆಂದು ಬೇಲೂರ 131 ನೆಯ ಶಾಸನದಿಂದ (1275) ತಿಳಿವುದರಿಂದಲೂ **ರಾಮಾಯಣವನ್ನು** ಬರೆದಿರುವ **ಕುಮುದೇಂದು ಕವಿ** (ಸು. 1275), ಕುಮುದೇಂದುಗುರುವಿನ ಶಿಷ್ಯನಾದ ಈ ಮಾಘಣಂದಿಯನ್ನು ತನ್ನ ಗುರುವೆಂದು ಹೇಳುವುದರಿಂದಲೂ, ಸುಮಾರು 1260 ರಲ್ಲಿ ಇದ್ದಿರಬಹುದು.

**ಶಾಸ್ತ್ರಸಾರಸಮುಚ್ಚಯಟೀಕೆಯಲ್ಲಿ** 4 ಅಧ್ಯಾಯಗಳಿವೆ. ಅಧ್ಯಾಯಗಳ ಆರಂಭದಲ್ಲಿರುವ ಕಂದಗಳಲ್ಲಿ ಒಂದನ್ನು ತೆಗೆದು ಬರೆಯುತ್ತೇವೆ :—

ಸುರನರಕಿನ್ನರನುತನಂ । ಪರಮಶ್ರೀವೀರನಾಥನಂ ನೆನೆದೊಲವಿಂ ।
ವರಭವ್ಯತತಿಗೆ ಪೇೞ್ವೆಂ । ನಿರುಪಮಚರಣಾನುಯೋಗಮಂ ಕನ್ನಡದಿಂ ॥

**ಪದಾರ್ಥಸಾರಟೀಕೆಯಲ್ಲಿ** 30 ಪರಿಚ್ಛೇದಗಳಿವೆ. ಇದನ್ನು "ಕರ್ಣಾಟದೇಶದ ಜನಂಗಳಱವಂತಾಗಿ ಜಡಮತಿಗಳಂ ಕುಱತು ವ್ಯಕ್ತಾರ್ಥಮಾಗಿ" ಕವಿ ಬರೆದನು. ಪರಿಚ್ಛೇದಗಳ ಕೊನೆಯಲ್ಲಿ ಈ ವಾಕ್ಯವಿದೆ—

ಇದು ವೀತರಾಗಸರ್ವಜ್ಞಪ್ರಣೀತಮುಂ ಸಪ್ತಭಂಗೀಸಮಾಲಂಗಿತಮುಮಪ್ಪ ಪದಾರ್ಥಸಾರಶಾಸ್ತ್ರದೊಳ್.

## ಮಾಘಣಂದಿಯ ಶ್ರಾವಕಾಚಾರ[1]

ಎಂದು ಒಂದು ಗ್ರಂಥವಿದೆ. ಇದು ಶಕ 1175—ಎಂದರೆ 1253 ರಲ್ಲಿ—ಬರೆದುದು. ಇದನ್ನೂ ಈ ಮಾಘಣಂದಿಯೇ ಬರೆದಿರಬಹುದು. ಇದರಿಂದ ಸ್ವಲ್ಪ ಭಾಗವನ್ನು ಉದ್ಧರಿಸಿ ಬರೆಯುತ್ತೇವೆ :—

ಮತ್ತಮಾವರ್ಧಮಾನತೀರ್ಥಕರಕಾಲದೊಳ್ ಗೌತಮಸುಧರ್ಮಜಂಬೂನಾಥರೆಂಬಿವರನುಬದ್ಧಕೇವಳಿಗಳ ಕಾಲಂ ಅಱುವತ್ತೆರಡುವರ್ಷಂ. ನಂದಿನಂದಿಮಿತ್ರಾಪರಾಜಿತಗೋವರ್ಧನಭದ್ರಬಾಹುಗಳೆಂಬಯ್ವರ ಶ್ರುತಕೇವಳಿಗಳ ಕಾಲಂ ನೂಱುವರ್ಷಂ. ಮತ್ತಂ ವಿಶಾಖನುಂ ಪ್ರೋಷ್ಠಿಲನುಂ ಕ್ಷತ್ರಿಯನುಂ ಜಯನುಂ ನಾಗನುಂ ಸಿದ್ಧಾರ್ಥನುಂ ಧೃತಿಷೇಣನುಂ ವಿಜಯನುಂ ಬುದ್ಧಿಲನುಂ ಗಂಗದೇವನುಂ ಸುಧರ್ಮನುಮೆಂಬ ದಶಪೂರ್ವಧರ

1. *Ind. Ant.*, XII, 22.

ರೇಕಾದಶರ ಕಾಲಂ ನೂಱೆಂಬತ್ತುಮೂರುವರ್ಷಮಕ್ಕುಂ. ಮತ್ತಂ ನಕ್ಷತ್ರನುಂ ಜಯಪಾಳನುಂ ಪಾಂಡುವುಂ ದ್ರುಮಸೇನನುಂ ಕುಸುಂಬಾಚಾರ್ಯನುಮೆಂದೇಕಾದಶಾಂಗಧರಪಂಚಕರ ಕಾಲಪ್ರಮಾಣಮಿನ್ನೂಱಿಪ್ಪತ್ತುವರ್ಷಂ. ಮತ್ತಮಾತೀರ್ಥಕರಸಂತಾನದೊಳ್ ಸುಭದ್ರನುಂ ಯಶೋಭದ್ರನುಂ ಯಶೋಬಾಹುವುಂ ಲೋಹಭನಾಮನುಮೆಂಬಾಚಾರಾಂಗಧರಚತುಷ್ಟಯದ ಕಾಲಂ ನೂಱುಹದಿನೆಂಟುವರ್ಷಂ. ಇಂತೀ ಗೌತಮಾದಿಗಳ ಕಾಲಮೆಲ್ಲಂ ಕೂಡಿ ಅಱುನೂಱೆಂಬತ್ತುಮೂಱುವರಿಸಮಕ್ಕುಂ. ಮತ್ತಮಾಚಾರಾಂಗಧರರಿಂ ಬೞಿಕ್ಕೆ ಸಾಸಿರದತೊಂಬತ್ತೇೞನೆಯ ಪರೀಧಾವಿಸಂವತ್ಸರದ ಜ್ಯೇಷ್ಠಶುದ್ಧ ಶ್ರುತಪಂಚಮಿಯದಿನಮಾಶ್ರಾವಕಾಚಾರಶ್ರುತಂ ಪ್ರತಿಷ್ಠಿತಮಾಯ್ತು. ಅಂತು ಸಾಸಿರದೇೞುನೂಱೆಂಬತ್ತುವರಿಸಮಕ್ಕುಂ. ಮುಂದಿನ್ನು ವೀರಸ್ವಾಮಿಯ ಕಾಲಂ ಹತ್ತೊಂಬತ್ತುಸಾಸಿರದಿನ್ನೂಱಿಪ್ಪತ್ತು ವರಿಸಂ ಪ್ರವರ್ತಿಸುಗುಂ........ಮತ್ತಂ ವೀರಜಿನಂ ಮುಕ್ತನಾದಿಂ ಬೞಿಕ್ಕಮಱುನೂಱಯ್ದುವರಿಸಮಯ್ದುತಿಂಗಳಂದು ಶಕರಾಜಂ ಪುಟ್ಟಿದಂ.

---

## ಗೌರಾರ್ಯ. ಸು. 1270.

**ಪದ್ಮಣಾಂಕನು** (ಸು. 1385) ತನ್ನ ಪದ್ಮರಾಜಪುರಾಣದಲ್ಲಿ ಗೌರಾರ್ಯನು **ಕೆರೆಯಪದ್ಮರಸನ** (ಸು. 1165) ಮೊಮ್ಮಗನ ಮಗನೆಂದೂ "ನೂಱೊಂದುಪಾದ ಗದ್ಯವನುಸಿರ್ದು ಪೂಜಮಂ ಪಡೆದ" ನೆಂದೂ ತನಗೆ ಪ್ರಪಿತಾಮಹನೆಂದೂ ಹೇಳಿದ್ದಾನೆ. ಕೆರೆಯಪದ್ಮರಸನ ಮೊಮ್ಮಗನ ಮಗನಾದುದರಿಂದ ಗೌರಾರ್ಯನು ಅವನ ಕಾಲಕ್ಕಿಂತ ಸುಮಾರು ನೂರುವರ್ಷ ಈಚೆ ಎಂದರೆ, ಸುಮಾರು 1270 ರಲ್ಲಿ, ಇದ್ದಿರಬಹುದು. ಇವನ ಗದ್ಯವು ನಮಗೆ ದೊರೆತಿಲ್ಲ.

---

## ಬಾಳಚಂದ್ರ ಪಂಡಿತ. 1273.

ಈತನು **ದ್ರವ್ಯಸಂಗ್ರಹಸೂತ್ರಕ್ಕೆ** ಕರ್ಣಾಟಕಟೀಕೆಯನ್ನೂ **ಪಂಚಪರಮೇಷ್ಠಿಗಳ ಬೊಲ್ಲಿಯನ್ನೂ** ಬರೆದಿದ್ದಾನೆ. ಇವನು ಜೈನಕವಿ. ಈ ಟೀಕೆಯನ್ನು ಶಕ 1195 ರಲ್ಲಿ—ಎಂದರೆ 1273 ರಲ್ಲಿ—ಬರೆದುದಾಗಿ ಈ ಪದ್ಯಗಳಲ್ಲಿ ಹೇಳಿದ್ದಾನೆ :—

ಶಕವರ್ಷಂ ಬಾಣಪದಾ । ರ್ಥಕಳಾಧರರೂಪಸಂಖ್ಯೆಯಿಂದೆಸೆಯೆ ಜಗ ।
ತ್ಪ್ರಕಟಾಂಗಿರಸಶರತ್ಕಾ । ರ್ತಿಕಮಾಸವಳಕ್ಷಪಂಚಮೀವಾಸರದೊಳ್ ॥
ಪಸರಿಸೆ ನಿಜಕೀರ್ತಿ ದ್ರ । ವ್ಯಸಂಗ್ರಹದ ವೃತ್ತಿಯಂ ಸುಲಕ್ಷಣಯುತಮಂ ।
ಮಿಸುಗುವ ಕನ್ನಡದಿಂ ನಿ । ರ್ಮಿಸಿದಂ ಭವ್ಯೈಕಹಿತಮನಾರ್ಯಸ್ತುತಮಂ ॥

ಈತನ ಗುರುಗಳು ನೇಮಿಚಂದ್ರ ಮತ್ತು ಅಭಯಚಂದ್ರ ಎಂಬಂಶವು ಗ್ರಂಥಾಂತ್ಯದ ಈ ಗದ್ಯದಿಂದ ತಿಳಿಯುತ್ತದೆ :—

ಇದು ಸಕಲಾಗಮಸಂಯಮಶ್ರೀಮನ್ನೇಮಿಚಂದ್ರಭಟ್ಟಾರಕಾಭಯಚಂದ್ರಸಿದ್ಧಾಂತದೇವ ಶ್ರೀಪಾದಪದ್ಮಪ್ರಸಾದಾಸಾದಿತ ಸಕಲಾಗಮಸಂಯಮಸಂಪನ್ನ ಶ್ರೀಬಾಳಚಂದ್ರಪಂಡಿತದೇವರಾಗಮವಿರುದ್ಧವಾಗದಂತು ದ್ರವ್ಯಸಂಗ್ರಹಸೂತ್ರಾನುಗತಕರ್ಣಾಟಲಘುವೃತ್ತಿಯಂ ವಿರಚಿಸಿದರ್.

ಈತನು ಶಕ 1197 ರಲ್ಲಿ—ಎಂದರೆ 1275 ರಲ್ಲಿ—ಗತಿಸಿದಂತೆ ಬೇಲೂರು 131 ನೆಯ ಶಾಸನದ ಈ ಭಾಗದಿಂದ ತಿಳಿಯುತ್ತದೆ:—

ಶ್ರೀಮನ್ನೇಮಿಚಂದ್ರಭಟ್ಟಾರಕದೇವರುಂ ಶ್ರೀಮದಭಯಚಂದ್ರಸಿದ್ಧಾಂತಚಕ್ರವರ್ತಿಗಳುಂ ದೀಕ್ಷಾಗುರುಗಳುಂ ಶ್ರುತಗುರುಗಳುಮಾಗ ತಪಶ್ಶ್ರುತಂಗಳಿಂ ಜಗದೊಳ್ ವಿಖ್ಯಾತಂಬೆತ್ತ ಶ್ರೀಮದ್ಬಾಳಚಂದ್ರಪಂಡಿತದೇವರ್ ಶಕವರ್ಷಂ 1197 ನೆಯ ಭಾವ ಸಂವತ್ಸರದ ಭಾದ್ರಪದ ಶುದ್ಧ 12 ಬುಧವಾರದ ಮಧ್ಯಾಹ್ನಕಾಲದೊಳು ಎಮಗೆ ಸಮಾಧಿಯೆಂದು ಚಾತುರ್ವರ್ಣಿಗಳ್ಗಱಿಪಿ ನೀಮೆಲ್ಲರುಂ ಧಾರ್ಮಿಕರಪ್ಪುದೆಂದು ನಿಯಾಮಿಸಿ ಕ್ಷಮಿತವ್ಯಮೆಂದು ಸನ್ಯಸನಪೂರ್ವಕಂ ಸಕಳನಿವೃತ್ತಿಯುಂ ಮಾಡಿ ಪಲ್ಯಂಕಾಸನದೊಳಿರ್ದು ಪಂಚಪರಮೇಷ್ಠಿಗಳ ಸ್ವರೂಪಮಂ ಧ್ಯಾನಿಸುತ್ತುಂ ಸ್ವಸಮಯಪರಸಮಯಂಗಳುಂ ಮೆಚ್ಚೆ ಉತ್ತಮಸಮಾಧಿಯಂ ಪಡೆದರ್.

ಬೇಲೂರು 131 ನೆಯ, 132 ನೆಯ ಶಾಸನಗಳಲ್ಲಿ ಈತನನ್ನು ಸ್ತುತಿಸುವ ಹಲವು ಪದ್ಯಗಳಿವೆ.[1] ಅವುಗಳಿಂದ ಈತನು ದೊಡ್ಡ ಪಂಡಿತನಾಗಿಯೂ ಅನೇಕ ಜೈನಗ್ರಂಥಗಳಿಗೆ ವ್ಯಾಖ್ಯಾನಕರ್ತೃವಾಗಿಯೂ ಇದ್ದಂತೆ ತಿಳಿಯುತ್ತದೆ.

ಇವನ ಗ್ರಂಥ

## ಪಂಚಪರಮೇಷ್ಠಿಗಳ ಬೊಲ್ಲಿ.

ಈ ಗ್ರಂಥವು ಪಂಚಪರಮೇಷ್ಠಿಗಳ—ಎಂದರೆ ಅರ್ಹಂತರು, ಸಿದ್ಧರು, ಆಚಾರ್ಯರು, ಉಪಾಧ್ಯಾಯರು, ಸಾಧುಗಳು ಇವರುಗಳ ಸ್ತುತಿರೂಪವಾದ ಗದ್ಯಗ್ರಂಥ. ಆದಿಯಲ್ಲಿ

---

1 ಪೂರ್ವಾಚಾರ್ಯಪರಂಪರಾಗತಜಿನಸ್ತೋತ್ರಾಗಮಾಧ್ಯಾತ್ಮಸ |
ಚ್ಛಾಸ್ತ್ರಾಣಿ ಪ್ರಥಿತಾನಿ ಯೇನ ಸಹಸಾಭೂವನ್ನಿಲಾಮಂಡಲೇ ॥
ಶ್ರೀಮನ್ಮಾಸ್ಯಭಯೇಂದುಯೋಗಿವಿಬುಧಪ್ರಖ್ಯಾತ ತತ್ಸೂನುನಾ |
ಬಾಳೇಂದುಪ್ರತಿಪೇನ ತೇನ ಲಸತಿ ಶ್ರೀಜೈನಧರ್ಮೋಘನಾ ॥
ದಕ್ಷೋಯಮಕ್ಷಪಾದಾದಿಪಕ್ಷಮಾವೀಕ್ಷ್ಯ ತತ್ ಕ್ಷಣೇ |
ಪ್ರತ್ಯಕ್ಷಾದಿಪ್ರಮಾಣೇನ ಭೇತ್ತುಂ ಬಾಲೇಂದುಸನ್ಮುನಿಃ ॥

ದ್ರವ್ಯಗುಣಪರ್ಯಯಂಗಳ । ಸವ್ಯಗ್ರಕುಶಾಗ್ರಬುದ್ಧಿಯಿಂ ಭಾವಿಸುವಂ ।
ಗವ್ಯವಹಿತನಿಜತತ್ವಂ । ಶ್ರವ್ಯಮೆನಲ್ ಪಂಚಗುರುಪದಂ ಶ್ರಯಣೀಯಂ ॥

ಎಂಬ ಪದ್ಯವಿದೆ. ಅಂತ್ಯದಲ್ಲಿ ಈ ಪದ್ಯಗಳಿವೆ—

ಪದಪಂಚಕವುಕ್ಷಯಸಂ । ಪದಹೇತುಕವೆಂದು ನಂಬಿ ಭಾವಿಸುವಂಗ ।
ಭ್ಯುದಯಾದಿಕಮೇಂ ಗಹನಮೆ । ವಿದಿತಂ ಬಾಲೇಂದುಬುಧನಿರೂಪಿತವಿಧದಿಂ ॥
ಸಿದ್ಧಾಂತವೇದ್ಯಭಯಚಂದ್ರಪದಾರವಿಂದೇ । ಆರಾಧ್ಯ ಪಂಚಗುರುವೋಕ್ಷಪದ ಸ್ವರೂಪಂ ।
ಬಾಲೇಂದುನಾ ನಿಗದಿತಂ ಸುಜನೋತ್ತಮಾ ಯೇ । ತೇ ಭಾವಯಂತು ತರಸಾ ಸಮತಾಂ ಲಭಂತೇ ॥

---

## ಕುಮುದೇಂದು. ಸು. 1275.

ಇವನು ಒಂದು ರಾಮಾಯಣವನ್ನು ಬರೆದಿದ್ದಾನೆ. ಇದಕ್ಕೆ ಕುಮುದೇಂದು ರಾಮಾಯಣವೆಂದು ವ್ಯವಹಾರವಿದೆ.

ಈತನು ಜೈನಕವಿ. ಇವನ ತಂದೆ "ಸಾಹಿತ್ಯಕುಮುದವನಚಂದ್ರಂ ಚತುರ ಚತುರ್ವಿಧಪಾಂಡಿತ್ಯಕಳಾಶತದಳವಿಕಸನದಿನಮಣಿ ಎನಿಪಾವಾಣಸಕುಲತಿಲಕಂ, ವಾದಿಧರಾಧರಕುಲಿಶಂ ಕವಿಮುಖಮಣಿಮುಕುರಂ" ಆದ ಪದ್ಮನಂದಿವ್ರತಿ; ತಾಯಿ ಕಾಮಾಂಬಿಕೆ; ದೊಡ್ಡಪ್ಪನು "ಪರಮಾಗಮನಾಟಕತರ್ಕವ್ಯಾ । ಕರಣ ನಿಘಂಟುಚ್ಛಂದೋಲಂಕೃತಿ । ಚರಿತಪುರಾಣಷಡಂಗಶ್ರುತಿನೀತಿಸ್ಮೃತಿವೇದಾಂತ ॥ ಭರತಸುರತಮಂತ್ರೌಷಧಿಸಂಹಿತೆ । ನರತುರಗಗಜಮಣಿಗಣ ಪರೀಕ್ಷಾಪರಿಣತಂ ॥" ಎನಿಸಿದ ಅರ್ಹನಂದಿವ್ರತಿ. ಕುಮುದೇಂದುವಿನ ತಂದೆ ದೊಡ್ಡಪ್ಪ ಇವರುಗಳು ದೊಡ್ಡ ಪಂಡಿತರಾಗಿಯೂ ಕವಿಗಳಾಗಿಯೂ ಇದ್ದಂತೆ ತೋರುತ್ತದೆ. ಇವನ ಗುರು ಮಾಘಣಂದಿಮುನಿ.

ಹಿಂದಣ ಕವಿಗಳಲ್ಲಿ ಜನ್ನನನ್ನು (1230) ಸ್ತುತಿಸುವುದರಿಂದ ಕುಮುದೇಂದು ಅವನಿಗಿಂತ ಈಚೆಯವನೆಂಬುದು ವ್ಯಕ್ತವಾಗಿಯೇ ಇದೆ. ಈತನು ತನ್ನ ಗುರುವಾದ ಮಾಘಣಂದಿಮುನಿಯನ್ನು "ಸಿದ್ಧಾಂತತ್ರಯಚಕ್ರೇಶ್ವರಂ", "ಅವನತಹೊಯ್ಸಳರಾಜಮುಕುಟಮಣಿಗಣಕಿರಣಂ" ಎಂದು ಹೊಗಳಿದ್ದಾನೆ. 1282 ರಲ್ಲಿ ಬರೆದ ಶ್ರ. ಬೆ. 334 ನೆಯ ಶಾಸನದಲ್ಲಿ "ಶ್ರೀಮನ್ಮಹಾಮಂಡಲಾಚಾರ್ಯರುಂ ಆಚಾರ್ಯವರ್ಯರುಂ ಹೊಯ್ಸಳರಾಯರಾಜಗುರುಗಳುಂ" ಎಂದು ಒಬ್ಬ ಮಾಘಣಂದಿಸಿದ್ಧಾಂತಚಕ್ರವರ್ತಿಯನ್ನು ಸ್ತುತಿಸಿದೆ. ಈ ಮಾಘಣಂದಿಯೇ

ಕುಮುದೇಂದುವಿನ ಗುರುವಾಗಿರಬೇಕು. ಆದುದರಿಂದ ಕವಿ ಸುಮಾರು 1275 ರಲ್ಲಿ ಇದ್ದಿರಬಹುದು.

ಇವನಿಗೆ ಪರವಾದಿಗಿರಿವಜ್ರ, ಸರಸಕವಿತಿಲಕ ಎಂಬ ಬಿರುದುಗಳಿದ್ದಂತೆ ತಿಳಿಯುತ್ತದೆ.

ಪೂರ್ವಕವಿಗಳನ್ನು ಈ ಪದ್ಯದಲ್ಲಿ ಸ್ತುತಿಸಿದ್ದಾನೆ :—

ಅನುನಯದಿಂ ಗುಣವರ್ಮನ ಜಯುವ । ರ್ಮನ ಗಜಗನ ಗುಣನಂದಿಯ ನಯನ ।
ರ್ಮನ ಹೊನ್ನನ ಹಂಪನ ರನ್ನನ ಸುಮನೋಬಾಣನ ಜನ್ನಯನ ॥
ಜನಗುಣಮಣಿಮಯಕಾವ್ಯಕಥಾವ । ರ್ಣನಸೌವರ್ಣಪದಕವೆಮ್ಮಯ ಮತಿ ।
ವನಿತೆಗೆ ಕಂಠಾಭರಣತೆಯುಂ ತಳೆದಿರ್ಕೆ ಕವೀಂದ್ರಪರಂಪರೆಯಾ ॥

ತನ್ನ ಕವಿತಾಚಾತುರಿಯನ್ನೂ ಕಾವ್ಯದ ಉತ್ಕೃಷ್ಟತೆಯನ್ನೂ ಈ ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ :—

ಒರೆಯೆ ಸುವರ್ಣಂ ತೇಯೆ ಮಲಯಜಂ । ಬೆರಸೆ ದಶಾಂಗಂ ತೆಗೆಯೆ ಕುಸುಮದ್ಯುತಿ ।
ಕರಗಿಸೆ ಸಿದ್ಧರಸಂ ಖಂಡಿಸೆ ಪುಂಡ್ರೇಕ್ಷುವ ಕಾಂಡಚಯಂ ॥
ಪರಿಮರ್ದಿಸೆ ಓಮಕುಂಕುಮಮೃಗಮದ । ಮೊರಸೆ ಕರಂ ಸಾಂದಿನ ಪುಣುಗಿನ ಘನ ।
ಪರಿಮಳಮೆನೆ. . . . . . ಮತ್ಕೃತಿಯುಂ ಸಂಘರ್ಷಿಸಲು ॥
ಎಳಸದರಾರ್ ಶರದಿಂದುವ ಚಂದ್ರಿಕೆ । ಗೆಳಸದರಾರ್ ಹರಿಚಂದನದಣ್ಪಿಂ ।
ಗೆಳಸದರಾರ್ ನವವಿಕಸಿತವಿಚಕಿಲಲತಿಕಾಮಂಜರಿಗೆ ॥
ಎಳಸದರಾರ್ ನವಯೌವನಲಕ್ಷ್ಮಿಗೆ । ಯೆಳಸದರಾರ್ ನವಯುವತೀನಿವಹಕೆ ।
ಯೆಳಸದರಾರ್ ಕುಮುದೇಂದುಮುನೀಶ್ವರವಿರಚಿತಕಾವ್ಯಕಥಾರಸಕೆ ॥

ಇವನ ಗ್ರಂಥ

## ಕುಮುದೇಂದು ರಾಮಾಯಣ.

ಇದು ಷಟ್ಪದೀರೂಪವಾಗಿದೆ. ಇದರಲ್ಲಿ ಎಲ್ಲಾ ಜಾತಿಯ ಷಟ್ಪದಿಗಳೂ ಇವೆ ; ಅಲ್ಲಲ್ಲಿ ಕೆಲವು ರಗಳೆಗಳೂ ದೊರೆಯುತ್ತವೆ. ನಮಗೆ ದೊರೆತ ಪ್ರತಿ ಸಮಗ್ರವಾಗಿಲ್ಲದುದರಿಂದ ಗ್ರಂಥದಲ್ಲಿರುವ ಸಂಧಿಗಳ ಸಂಖ್ಯೆ ಇಷ್ಟೆಂದು ಹೇಳಲಾರೆವು. ಇದರಲ್ಲಿ ಜೈನಸಂಪ್ರದಾಯಕ್ಕೆ ಅನುಸಾರವಾಗಿ ರಾಮಾಯಣಕಥೆ ಹೇಳಿದೆ. ಕವಿ ಈ ಗ್ರಂಥವನ್ನು "ವಿತತಸಿದ್ಧಾಂತಪರಿಣತ ಮಾಘಣಂದಿಮುನಿಪತಿಯ ಕಾರುಣ್ಯದಿಂ ಪೇಟ್ದಿಂ" ಎಂದು ಹೇಳುತ್ತಾನೆ.

ಗ್ರಂಥಾವತಾರದಲ್ಲಿ ಮುನಿಸುವ್ರತನ ಸ್ತುತಿಯಿದೆ. ಬಳಿಕ ಕವಿ ಸಿದ್ಧಾದಿಗಳನ್ನೂ ಸರಸ್ವತಿಯನ್ನೂ ಕೇವಲಿಗಳನ್ನೂ ಸ್ಮರಿಸಿ ಕುಂಡಕುಂದಾಚಾರ್ಯನಿಂದ ಜಿನಚಂದ್ರನವರೆಗೆ ಗುರುಗಳನ್ನು[1] ಕ್ರಮವಾಗಿ ಸ್ತುತಿಸಿದ್ದಾನೆ.

ಇವನ ಬಂಧವು ಲಲಿತವಾಗಿದೆ; ವರ್ಣನಾಭಾಗಗಳಲ್ಲಿ ಪ್ರಾಯಿಕವಾಗಿ ಅಭಿನವಪಂಪನ ರಾಮಾಯಣವನ್ನು ಅನುಸರಿಸಿದ್ದಾನೆ.

ಇವನ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

### ಬೇಸಗೆ (ಕುಸುಮಷಟ್ಪದಿ).

ತೊಱೆಹರಿಯುಡುಗೆ ಕೂಡೆ । ಕೆಱೆ ಬತ್ತಿ ಬೀಡೇೞೆ ।
ಬಱಿವಱಿಂಬತ್ತೆ ಪಥಿಕರ ಬಾಯ್ಗಳು ।
ಮಱುಗೆ ತಿಮಿನಿಕರಂಗ । ಳುಱೆ ಕಾಯ್ವ ಕೆಸಱಿನೊಳು ।
ಬಿಱುಗಾಳಿ ಬೀಸೆ ಬೇಸಗೆ ಬಂದುದು ॥ 910 ॥

ತರುಗಳೆಲೆಯುಕ್ಕಿದುವು । ಮರುಮರೀಚಿಕೆಗಳಿಗ ।
ಹರಿಣಗಳು ನೀರೞ್ಕೆಯಿಂ ಪರಿದುವು ।
ಸರಸಿಜಾಕರದೊಳಾ । ದರವುೞಿಯೆ ಮಧುಪಂಗ ।
ಳುರಿವರಿಯುತಂದು ಬಂದುದು ಬೇಸಗೆ ॥ 911 ॥

### ವರ್ಷಾಕಾಲ (ಕುಸುಮ).

ಉಲಿಯೆ ಚಾದಗೆಗಳು । ಮ್ಮುಳಿಸೆ ಹಂಸೆಗಳು ಬೆಳು । ಸುೞಿವುಟ್ಟಿಗಟ್ಟಿಕೇತಕಿಗಳಲ್ಲಿ ।
ನಲಿದು ನರ್ತಿಸೆ ಕೇಕಿ । ಕುಳವಲರೆ ಕಡವು ಕ । ಣ್ತಲೆದು ತೀಡಿತ್ತು ಪಶ್ಚಿಮಮಾರುತಂ ॥ 912 ॥

### ನಂದನ (ಪರಿವರ್ಧಿನಿ).

ಅಲರ್ದ ಕಮಲವನಷಂಡಗಳಿಂದು । ಳ್ಳಲರ್ದ ಕುಮುದವನರಾಜಿಗಳಿಂ ಪ ।
ಣ್ಗೊಲೆಯಿಂ ಬಳುಕುವ ಕೌಂಗುಗಳಿಂ ಕಾಯ್ಗಱುಗಲ ತೆಂಗುಗಳಿಂ ॥
ಸಲೆ ಕತ್ತಲಿಪೆಲೆವಳ್ಳಿಗಳಿಂ ಪ । ಣ್ತೊಲೆವೀಳೆಗಳಿಂ ಬೇರಿಂದಂ ಕಾ ।
ಯ್ವಲೆವೆರ್ಚಿದ ಪನಸಂಗಳಿನಾನಂದನವಾನಂದವನೊದವಿಪುದು ॥ 913 ॥

1. ಕುಂದಕುಂದಾಚಾರ್ಯ, ಸಮಂತಭದ್ರ, ಕವಿಪರಮೇಷ್ಠಿ, ಗುಣಭದ್ರ, ಉಮಾಸ್ವಾತಿ, ಶ್ರೀಪಾದಸ್ವಾಮಿ, ಪೂಜ್ಯಪಾದ, ಅಕಳಂಕ, ವಿದ್ಯಾನಂದ, ಅನಂತವೀರ್ಯ, ವೀರಸೇನ, ಜಿನಸೇನ, ಭೂತಬಲಿ, ಪುಷ್ಪದಂತ, ಸಿಂಹನಂದಿ, ನ್ಯಾಯಶಬ್ದವಿದ್ಯಾವಿದನಪ್ಪ ಪ್ರಭಾಚಂದ್ರ, ವರ್ಧಮಾನ ಭಟ್ಟಾರಕ, ಶ್ರೀಧರಾಚಾರ್ಯ, ವಾಸುಪೂಜ್ಯ, ಶಿಷ್ಯ ಅಭಯೇಂದು, ಮಗ ಕುಮುದೇಂದು, ಮಾಧವಚಂದ್ರ, ತಾರ್ಕಿಕಚಕ್ರೇಶ್ವರ ಅಭಯೇಂದು, ಕುಮುದೇಂದುವ್ರತಿಪತಿಸುತ ಹೊಯ್ಸಳರಾಯ ಗುರು ಮಾಘಣಂದಿಮುನಿ (ಕವಿಯ ಗುರು), ಬಾಳೇಂದು, ಜಿನಚಂದ್ರ.

## ಸೂಕಳಾಶ್ವ (ಭಾಮಿನಿ).

ಹೊಳೆವ ದುಂಡಿಸುವೆತ್ತುವೊತ್ತುವ। ಮುಳಿವ ಹೋಗದೆ ನಿಲುವ ಮೆಯ್ಯುಂ ।
ಬಲಿವ ಹೊಯ್ಲ್ಲಂ ಮೇದು ಸುಯ್ಲ್ಲಂ ನುಂಗುವುರವಣಿಪ ॥
ಮುಳಿವ ಗೋಟಿಗೆಯಿರ್ಪ ಠಾವಿಂ । ತಳರದಿರ್ಪಾಕಡವಗಳ ಬಿಡ ।
ದಳಜಿಸುವ ಸೂಕಳತೆಯುಂ ಕೈಕೊಂಡುದಾತುರಗ ॥ 914 ॥

## ಸೀತೆಯ ಸಭಾಪ್ರವೇಶ (ಪರಿವರ್ಧಿನಿ).

ಕೆಲಕೆಲಬರ್ ಕೀಲಿಸಿದಂತಿರ್ದರ್ । ಕೆಲಕೆಲಬರ್ ಸ್ತಂಭಿಸಿದಂತಿರ್ದರ್ ।
ಕೆಲಕೆಲಬರ್ ಮೂರ್ಛಿಸಿದಂತಿರ್ದರ್ ವಸುಧಾಪಾಲಕರು ॥
ಕೆಲಕೆಲಬರ್ ಪಾವಡರ್ದಂತಿರ್ದರ್ । ಕೆಲಕೆಲಬರ್ ಮೆಯ್ಮಱೆದಂತಿರ್ದರ್ ।
ಗೆಲೆ ಚಿತ್ರದ ಸಭೆಯುಂ ಸಭೆ ಜಾನಕಿ ಪುಗಲು ರತಿಯು ಮಿಗಲು ॥ 915 ॥

## ಸೀತೆಯ ದುಃಖ (ಪರಿವರ್ಧಿನಿ).

ಕರುಣದ ಕರುವೋ ಕಾರ್ಶ್ಯದ ತಿಟ್ಟವೊ। ವಿರಹದ ಬಿದ್ದವೊ ದುಃಖದ ಮೂರ್ತಿಯೊ।
ಪರಿತಾಪದ ರೂಪೋ ಘನವೆಸಿಸಿದ ಭೀತಿಯ ಪುತ್ತಳಿಯೋ ॥
ಉರುಚಿಂತೆಯ ಚಿತ್ರವೊ ನಿರ್ವೇದದ। ಪರಿಜೋ ಮೂರ್ಛೆಯ ವಿತತಾಕೃತಿಯೋ ।
ನಿರುಪಮಶೀಲದ ಗೃಹಮೋ ಎನಲಿರ್ದಳು ಧರಣಿಸುತೆ ॥ 916 ॥

## ಚಂದ್ರಿಕೆ (ಭಾಮಿನಿ).

ನೀಲಗಿರಿ ಹಿಮಶೈಲಮೆನಿಸೆ ತ। ಮಾಲಕಾನನಮುಮಳಮುಕ್ತಾ ।
ಜಾಲಮಂಟಪಮೆನಿಸೆ ಜಾಹ್ನವಿಯೆನಿಸೆ ಕಾಳಿಂದಿ ॥
ಶೂಲಿಯೆನಿಸೆ ಮುಕುಂದಮೂರ್ತಿ ಮ । ರಾಳಮಾಳಿಯೆನಿಸೆ ಪಿಕಾವಳಿ ।
ಕಾಳಿಕಾಪರಮಾಣುವಿಂ ಚಂದ್ರಿಕೆ ವಿರಾಜಿಸಿತು ॥ 917 ॥

## ವನ (ವಾರ್ಧಕ).

ಸುಟಿವ ತೆಂಗಾಳಿಯಿಂ ಪರಿಪಕ್ವಫಲರಸದೆ ।
ಬಳಸಿದ ಸುಗಂಧದಿಂ ಲಲಿತತರುಲತೆಗಳಿಂ ।
ಕಳಕಂಠಕೂಜಿತದೆ ಮೆಯ್ಗೆ ರಸನೆಗೆ ನಾಸಿಕಕ್ಕೆ ಕಣ್ಗಳಿಗೆ ಕಿವಿಗೆ ॥
ನಲವನಿಂಪಂ ಸೊಗಸನಾಶ್ಚರ್ಯಮಂ ಕುತೂ ।
ಹಳತೆಯಂ ಮಾಳ್ಪುದೊದವಿಪುದು ವಿತರಿಪುದು ಸಂ ।
ಗಳಿಪುದೀವುದು ಜಗಂ ಪೊಗಳ್ದು ಕೊಂಡಾಡೆ ತಳಿದೊಗೆ ಬಣ್ಣಿಸೆ ಬಯಸೆ ವನಮೆಸ
[ದುದು ॥ 918 ॥

ಸೂಳೆಯರ ಜಗಳ (ವಾರ್ಧಕ).

ಎಲೆ ಗುಂಡಿ ನೀ ಗುಂಡಿ ಬೀಟ್ಸಾಯಿ ನೀ ನಾಯಿ |
ಉಲಿಯದಿರು ನೀನುಲಿಯದಿರು ಸಾಯ ನೀಸಾಯ |
ಉಲುಕದಿರು ನೀನುಲುಕದಿರು ಚಂಡಿ ನೀ ಚಂಡಿ ಸಿಂಬೆ ನೀ ಸಿಂಬೆಯೆಂದು ||
ತಲೆಯೊತ್ತಿಯೊರ್ವರೊರ್ವರು ಕಚ್ಚಿ ತಾವು ಮುಂ |
ದಲೆವಿಡಿದು ಹೊದೆದ ಸೀರೆಗಳಜಾಯದೇ ಬಿದ್ದು |
ರುಳುವ ಚೌವಟಬೀಟಗಾರ್ತಿಯರ ಜಗಳವಂ ಕಂಡು ನಗುತಿರ್ದನಣುವ || 919 ||

---

## ಈಶ್ವರಾರ್ಯ. 1275.

ಈತನು ದಾವಣಗೆರೆ 70 ನೆಯ ಶಾಸನವನ್ನು ಬರೆದುದಾಗಿ ಆ ಶಾಸನದ ಅಂತ್ಯಭಾಗದಲ್ಲಿರುವ

ವಾಚಸ್ಪತಿಗರಿದೆನೆ ಸಂ | ಕೋಚದೆ ಶಾಸನಮನೀಶ್ವರಾರ್ಯಂ ಪೇಳ್ದಂ ||

ಎಂಬ ಪದ್ಯಭಾಗದಿಂದ ತಿಳಿಯುತ್ತದೆ.

ಈ ಶಾಸನವು ದೇವಗಿರಿಯ ರಾಜನಾದ ರಾಮಚಂದ್ರನ (1271–1309) ಆಳಿಕೆಯಲ್ಲಿ 1275 ರಲ್ಲಿ ಬರೆದುದು. ಇದರಲ್ಲಿ ಈ ರಾಮಚಂದ್ರನ ಮಹಾಪ್ರಧಾನನಾದ ತಿಪ್ಪರಸನು ಬಾನವಳ್ಳಿಯ ನೂರುನಾಲ್ವರ್ಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ. ಇದರಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ :—

ರಾಮಚಂದ್ರ.

ಕನ್ನರದೇವಂಗುದಯಿಸಿ | ಕಿನ್ನರಮಿಥುನಂಗಳಿಂದೆ ಪಾಡಿಸುವಂ ತ |
ನ್ನನ್ನರಿಜಾವೀವರುಂ ಕಡು | ಚೆನ್ನರುಮಿಲ್ಲೆನಿಸಿ ರಾಮಚಂದ್ರಮಹೀಶಂ || 920 ||
ಕಾಮಂ ಖ್ಯಾತಂ ಚೆಲ್ವಿಂ | ಭೀಮಂ ಭುಜಬಲದಿನಮೃತತನುವಿಂ ಸೋಮಂ |
ಕಾಮಂ ಭೀಮಂ ಸೋಮಂ | ರಾಮಮಹೀಪತಿಯೆ ತದ್ಗುಣಂಗಳಿನೆನಿಪಂ || 921 ||

ಗುಹಾರಣ್ಯ.

ಗುಹಗಹನದ ಬಹುಮಹಿಮೆಯ | ನಹಮಹಮಿಕೆಯಿಂದಹೀಂದ್ರಜಿಹ್ವೆಗಳೊಳಗಾ |
ಗಹ ಎಣಿಸಲೆಯ್ದವೆಂದೊಡೆ | ಗಹಗಹಿಸಿಯೆ ನಗಿಸಿಕೊಳ್ಳರೆಣಿಸಿದೊಡನ್ಯರ್ || 922 ||

---

## ನರಹರಿತೀರ್ಥ. 1281.

ಈತನು ವಿಷ್ಣುಸ್ತುತಿರೂಪವಾದ ಹಾಡುಗಳನ್ನು ಬರೆದಿದ್ದಾನೆ. ಇವನು ಮಾಧ್ವಕವಿ; ಮಧ್ವಗುರುವಿನಿಂದ ಮೂರನೆಯ ಪಟ್ಟದ ಸ್ವಾಮಿಯಾಗಿದ್ದನು.

ಸನ್ಯಾಸಿಯಾಗುವುದಕ್ಕೆ ಮುಂದೆ ಗಂಜಾಂ ಪ್ರಾಂತದಲ್ಲಿ ಅಧಿಕಾರಿಯಾಗಿದ್ದನು. ಚಿಕಾಕೋಲಿನಲ್ಲಿ 1281, 1293 ರಲ್ಲಿ ಹುಟ್ಟಿದ ಈತನ ಶಿಲಾಶಾಸನಗಳು ದೊರೆಯುತ್ತವೆ.[1] ಈತನು 1333 ರಲ್ಲಿ ಗತಿಸಿದನೆಂದು ಹೇಳುತ್ತಾರೆ. ಈತನ ಹಾಡುಗಳಲ್ಲಿ ಒಂದನ್ನು ತೆಗೆದು ಬರೆಯುತ್ತೇವೆ :—

ರಾಗ—ಆನಂದಭೈರವಿ—ಅಟತಾಳ.

ಪಲ್ಲವಿ ॥ ಇಂತು ಮರುಳಾದೆ ॥

ಅನುಪಲ್ಲವಿ ॥ ಇಂತು ಮರುಳಾಗಿ ಬಯಲಿಗೆ ಬಳಲಿದೆ ರಕ್ಷಿಸಯ್ಯ ರಘುಕುಲ . [ತಿಲಕ ॥

ಮಾತಿನಲ್ಲಿ ಹರಿದಾಸತನ । ನೀತಿಯಲ್ಲಿ ಬಲುಪ್ರೌಢತನ ।
ಪ್ರೀತಿ ಧನದುರ್ವಿಷಯದಲ್ಲಿ ನಿ । ರ್ಭೀತಿ ದೈವಗುರುದ್ರೋಹದಲಿ ॥ 1 ॥

ಏಕಾಂತದಲಿ ಧನದ ಗೋಷ್ಠಿ । ಲೋಕಾಂತದಲಿ ವೈರಾಗ್ಯದ ಗೋಷ್ಠಿ ।
ಶ್ರೀಕಾಂತನ ಸೇವೆಗೆ ಅನುಮಾನ । ಭೂಕಾಂತನ ಸೇವೆಗೆ ಸನ್ಮಾನ ॥ 2 ॥

ಭಜಿಸು ಬ್ರಹ್ಮಾದಿವಂದಿತಹರಿಯ । ತ್ಯಜಿಸು ಕಾಮಾದಿಶತ್ರುಗಳ ।
ಸುಜನವಂದಿತನಾದ ನರಹರಿಯ । ಭಜಿಸು ಶ್ರೀಹರಿರಘುಪತಿಯ ॥ 3 ॥ 923 ॥

---

## ಬಾಲಚಂದ್ರ (?). 1282.

ಉದ್ಯೋಗಸಾರವೆಂಬ ಒಂದು ಕನ್ನಡ ಗ್ರಂಥವು ದೊರೆಯುತ್ತದೆ. ಗ್ರಂಥದಲ್ಲಿ ಕವಿಯ ಹೆಸರು ಹೇಳಿಲ್ಲ. ಆದರೆ ಕವಿ ತಾನು ನೇಮಿಚಂದ್ರನ ಶಿಷ್ಯನೆಂದು ಹೇಳಿ "ಆತ್ಮಜ್ಞ" ಎಂದು ತನ್ನನ್ನು ವಿಶೇಷಿಸಿಕೊಂಡಿದ್ದಾನೆ. 1282 ರಲ್ಲಿ ಬರೆದ ಶ್ರ. ಬೆ. 334 ನೆಯ ಶಾಸನದಲ್ಲಿ "ಶ್ರೀಮನ್ಮಹಾಮಂಡಲಾಚಾರ್ಯರುಂ ಶ್ರೀಮೂಲಸಂಘದ ಇಂಗಳೇಶ್ವರ ದೇಶೀಯ ಗಣಾಗ್ರಗಣ್ಯರುಂ ರಾಜಗುರುಗಳುಂ" ಆದ ಒಬ್ಬ ನೇಮಿಚಂದ್ರಪಂಡಿತದೇವನನ್ನು ಹೇಳಿ, ಆತನ ಶಿಷ್ಯನಾದ ಒಬ್ಬ ಬಾಲಚಂದ್ರನನ್ನು ಹೇಳಿದೆ. ಈ ಬಾಲಚಂದ್ರನು ಈ ಗ್ರಂಥವನ್ನು ಬರೆದಿರಬಹುದೋ ಏನೋ ತಿಳಿಯದು.

ಇವನ ಗ್ರಂಥ

### ಉದ್ಯೋಗಸಾರ.

ಇದು ಪ್ರಾಯಿಕವಾಗಿ ಕಂದರೂಪವಾಗಿದೆ; ಅಲ್ಲಲ್ಲಿ ಕೆಲವು ವೃತ್ತಗಳೂ ಗದ್ಯಗಳೂ ಇವೆ. ಈ ಗ್ರಂಥದಲ್ಲಿ ಪ್ರತಿಪಾದಿಸುವ ಉದ್ಯೋಗದ ಸ್ವರೂಪವನ್ನು ಕವಿ ಈ ಪದ್ಯಗಳಲ್ಲಿ ಹೇಳಿದ್ದಾನೆ :—

---

[1] *Madras Epigraphical Reports* for 1896 and 1900.

ಬಯಸೆ ಸುಖಮಾಗದೆಂದುಂ । ನಿಯತಮುರೂದ್ಯೋಗಮಿಲ್ಲದದುವುಂ ರತ್ನ ।
ತ್ರಯಭಾವನಾತ್ಮಕಂ ಸಂ । ಶಯಮಿಲ್ಲದೆ ನೆಗಟ್ಟೊಡಿದನದಕ್ಕುಮವಶ್ಯಂ ॥
ನಿರುಪಾಧಿನಿರ್ವಿಕಲ್ಪಕ । ಪರಮಸಮಾಧಿಸ್ವರೂಪಸಫಲೋದ್ಯೋಗಂ ।
ನಿರವಧಿಸುಖೈಕಬೀಜಂ । ದೊರೆಕೊಳ್ಳದದೇಕೆ ವಿಫಲಪಾಪೋದ್ಯೋಗಂ ॥

ಗ್ರಂಥಾದಿಯಲ್ಲಿ ಈ ಪದ್ಯವಿದೆ—

ಆನಮ್ರಭವ್ಯನಿವಹ । ಶ್ರೀನಂದಿಮುನೀಂದ್ರವಂದ್ಯಜಿನಪದಪದ್ಮ ।
ಕ್ಕಾನೆಱಗಿ ಭಕ್ತಿಯಿಂದವು । ನೂನಮನುದ್ಯೋಗಸಾರಮಂ ಪ್ರಕಟಿಸುವೆಂ ॥

ಗ್ರಂಥಾಂತ್ಯದಲ್ಲಿ ಗ್ರಂಥದ ವಿಷಯವಾಗಿಯೂ ತನ್ನ ವಿಷಯವಾಗಿಯೂ ಈ ಪದ್ಯಗಳನ್ನು ಬರೆದಿದ್ದಾನೆ :—

ಉದ್ಯೋಗಸಾರಮಂ ನಿರ । ವದ್ಯಗುಣಂ ಭವ್ಯಹೃದಯವನಜವನಾರ್ಕಂ ।
ವಿದ್ಯಾವಿದಗ್ಧಸಜ್ಜನ । ಹೃದ್ಯಮೆನಲ್ ಪೇೞ್ದನಱ್ತಿಯಿಂದಾತ್ಮಜ್ಞಂ ॥
ಸೂಚಿತರತ್ನತ್ರಿತಯಂ । ಸೂಚಿತಪದರಚಿತಮುದಧಿಪರಿವೃತವಿಲಸ ।
ದ್ಭೂಚಕ್ರದೊಳಿದು ಪಸರಿಸು । ಗಾಚಂದ್ರಾರ್ಕಂ ವಿನೇಯಭಾವ್ಯಂ ಕಾವ್ಯಂ ॥
ಶ್ರುತನಿಧಿವಿಮಲದಯಾಂಬುಧಿ । ವಿತತಯಶೋಧಾಮನೇಮಿಚಂದ್ರಯತೀಂದ್ರ ।
ಶ್ರುತಲಕ್ಷ್ಮೀದ್ವಿತಯುಕ್ತಂ । ಸುತನೆನಿಸಿ ಸುತತ್ತ್ವದರ್ಶಿಯೆನಿಸುವುದರಿದೇ ॥

ಈ ಗ್ರಂಥದಲ್ಲಿ ನೀತಿಬೋಧಕವಾದ ಹಲವು ಪದ್ಯಗಳಿವೆ; ಬಂಧವು ಲಲಿತವಾಗಿಯೂ ಧಾರಾಳವಾಗಿಯೂ ಇದೆ. ಇದರಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ :—

ಪುಸಿಯದ ನರಂಗೆ ವಾಕ್ಸಿ । ಯೊಸೆಗುಂ ನಡನಡನೆ ನಡುಗಿ ನುಡಿಗೇಳಲೊಡಂ ।
ಬೆಸಕೆಯ್ಗುಮಖಿಳಲೋಕಂ । ಜಸಮುಂ ದೆಸೆದೆಸೆಗೆ ಕೂಡಿ ಪಸರಿಸಿಯೆಸೆಗುಂ ॥ 924 ॥

ನೋಡದೆ ನಿಜಗುಣಹಾನಿಯು । ನಾಡಿದೊಡನ್ಯಾಪವಾದಮಂ ನಿನಗದಱಿಂ ।
ದಾಡಿದವಳಾಡಿ ಹೋದಳ್ । ನೋಡಿದವಳ ಮೂಗು ಹೋದುದೆಂಬವೊಲಕ್ಕುಂ ॥ 925 ॥

ಗುಣಿಯೆನಿಪೊಡಖಿಳವಿಬುಧಾ । ಗ್ರಣಿಯೆನಿಪೊಡೆ ಪರಮಮುಕ್ತಿರಮಣೀಮಣಿಭೂ ।
ಷಣಮೆನಿಪೊಡೆ ಕನಸಿನೊಳಂ । ಗಣಿಯಿಸಲಾಗಿತರದೋಷಮಂ ಸ್ವಗುಣಮುಮಂ ॥ 926 ॥

ಪೊಗೞ್ದೊಡೆ ನಿನಗಿಲ್ಲದ ಗುಣ । ಮೊಗೆಗುಮೆ ಮೇಣುಳ್ಳ ನಿಜಗುಣಂಗಳ್ ಬೇಗಂ ।
ಜಗುೞ್ಗುಮೆ ತೆಗೞ್ದೊಡೆ ಪೆಱರಿಂ । ಪೊಗೞ್ಗಮ ತೆಗೞ್ಗಮ ಸಮತ್ವಮಂ ಪಡೆಯವಱೊಳ್ ॥ 927 ॥

ಮುನಿಸೊಸಗೆಗಳಂ ಮನದೊಳ್ | ಕನಸಿನೊಳಂ ನೆನೆಯದಾರೊಳಂ ಶಾಂತರಸಂ |
ತನಗೆ ನಿಜಮೆನಿಪ ಮುನಿಪದ| ವನಜಮನನವರತಮಿರಿಪೆನೆನ್ನಯ ನೊಸಲೊಳ್॥928॥

ಪಗರಣಿಗರುಚಿತವಚನರ್ | ಸೊಗಯಿಪ ಪಲತೆಱದ ಜೋಹಮಂ ಪೊತ್ತು ಮನಂ |
ಬುಗೆ ನಟಯಿಪಂತೆ ದೇಹಿಗ | ಳಗಣಿತಸಂಸಾರರಂಗದೊಳ್ ನಟಯಿಸುವರ್ ॥929॥

ಹೆಣ್ಣೆಂಬ ಹೆಸರ್ಗೆ ಬೆಂಕೆಯ | ಬೆಣ್ಣೆಯವೋಲ್ ಕರಗಿ ಪರಿವ ಬಡಮನದವನಂ |
ಸಣ್ಣಿಗೆಯೊಳರೆದು ಭರದಿಂ| ಸುಣ್ಣನೆ ನೊಣೆಯನೆ ಮನೋಜನೆಂಬ ಕೃತಾಂತಂ॥930॥

ಗುಣಲೇಶಮುಮಂ ಚಿಂತಾ | ಮಣಿಯಿಂದಂ ಮಿಗಿಲೆ ಕಂಡು ಕೊಂಡಾಡಿ ಮನಃ |
ಪ್ರಣಯದಿನಾರಾಧಿಸುವಂ | ಗಣನೀಯನೆ ಮರ್ತ್ಯರೊಡನಮರ್ತ್ಯಸ್ತುತ್ಯಂ॥ 931 ॥

ಮತ್ತೆನಿಸಿದಖಿಳಸಂಗನಿ | ವೃತ್ತಂ ನಿಶ್ಶಂಕನೆಯ್ದೆ ಗುಂ ನಿರುಪಹತಂ |
ಚಿತ್ತಹರಮುಕ್ತಿಪುರಮಂ | ಬತ್ತಲೆವೋಪಂಗೆ ಬಟ್ಟೆಯೊಳ್ ಭಯಮುಂಟೇ ॥932॥

ರಸೆಯಂ ಪೊಕ್ಕೊಡನೇನಾ | ಗಸಮಂ ಭರದಿಂದಮಡರ್ದೊಡಂ ನೆಲನನಿತಂ |
ಮಸಗಿ ತೊಳಲ್ದೊಡಮಕ್ಕುಮೆ | ಜಸಮರ್ಥಂ ಸೌಖ್ಯಮಕೃತಪುಣ್ಯಂಗೆಂದುಂ॥933॥

---

## ಕವಿರಾಜಸಂಕಣ್ಣ. ಸು. 1287.[1]

ಈತನು ಸೊರಬದ 294 ನೆಯ ಶಾಸನವನ್ನು ಬರೆದಂತೆ ಆ ಶಾಸನದ ಅಂತ್ಯಭಾಗದಿಂದ ತಿಳಿಯುತ್ತದೆ. ಈ ಶಾಸನವೇನೋ ಪದ್ಯರೂಪವಾಗಿದೆ. ಆದರೂ ಅಕ್ಷರವೆಲ್ಲಾ ಹೋಗಿರುವುದರಿಂದ ಪದ್ಯಗಳನ್ನು ತೆಗೆದು ಬರೆಯಲಿಕ್ಕಾಗಲಿಲ್ಲ.

---

## ಹಸ್ತಿಮಲ್ಲ. 1290.

ಈತನು ಶಕ 1212 ರಲ್ಲಿ ಒಂದು ಆದಿಪುರಾಣವನ್ನು ಬರೆದಿರುವುದಾಗಿ ತಿಳಿಯಬರುತ್ತದೆ. ಇವನ ಗ್ರಂಥವು ನಮಗೆ ದೊರೆತಿಲ್ಲ. ಆದರೆ ಮೆ॥ ಕೆ. ಬಿ. ಪಾಠಕರು ಇವನ ಗ್ರಂಥವನ್ನು ನೋಡಿರುವಂತೆ ಬರೆದಿದ್ದಾರೆ.

**ದೇವಚಂದ್ರನು** ರಾಜಾವಳೀಕಥೆಯಲ್ಲಿ (1838) ಒಬ್ಬ ಹಸ್ತಿಮಲ್ಲಾಚಾರ್ಯನ ಹೆಸರನ್ನು ಹೇಳಿ ಆತನು ಗುಣಭದ್ರಶಿಷ್ಯನಾದ ವೇದಾಗಮಸ್ತೋತ್ರವ್ಯಾಖ್ಯಾನ ಕರ್ತೃವಾದ ಗೋವಿಂದಭಟ್ಟನ ಮಗನೆಂದೂ ಮದದ ಆನೆಯನ್ನು

1. ಸೊರಬದ 291 ನೆಯ ಶಾಸನವನ್ನು ನೋಡಿ.

ಅಡಗಿಸಿದುದರಿಂದ ಅವನಿಗೆ ಹಸ್ತಿಮಲ್ಲ ಎಂಬ ಹೆಸರು ಬಂದಿತೆಂದೂ ಆತನಿಗೆ ಪಾರ್ಶ್ವಪಂಡಿತ ಮೊದಲಾದ ಮಕ್ಕಳು ಇದ್ದರೆಂದೂ ಆತನು ಉಭಯಭಾಷಾಕವಿ ಚಕ್ರವರ್ತಿಯೆನಿಸಿದ್ದನೆಂದೂ ಆತನ ಶಿಷ್ಯ ಲೋಕಪಾಲಾರ್ಯನೆಂದೂ ಹೇಳಿದ್ದಾನೆ. ಈತನು ಮೇಲೆಹೇಳಿದ ಆದಿಪುರಾಣಕರ್ತೃವಾಗಿರಲಾರನು.

---

## ರಟ್ಟಕವಿ ಅಥವಾ ಅರ್ಹದ್ದಾಸ. ಸು. 1300.

ಈತನು ರಟ್ಟಮತವೆಂಬ ಗ್ರಂಥವನ್ನು ಬರೆದಿದ್ದಾನೆ.

ಇವನು ಜೈನಕವಿ; ಮಾರಸಿಂಹನ ಚಮೂಪತಿಯಾದ ಕಾಡಮರಸನ ವಂಶದಲ್ಲಿ ಹುಟ್ಟಿದವನು. "ಜಿನನಗರಪತಿ," "ಗಿರಿನಗರಾಧೀಶ್ವರ" ಎಂದು ತನ್ನನ್ನು ವಿಶೇಷಿಸಿ ಹೇಳಿಕೊಂಡಿರುವುದರಿಂದ ಆವುದೋ ನಗರಕ್ಕೆ ಇವನು ಅಧಿಪತಿಯಾಗಿದ್ದಂತೆ ತಿಳಿಯುತ್ತದೆ. ತನ್ನ ವಂಶಪರಂಪರೆಯನ್ನು ಈ ರೀತಿಯಾಗಿ ಹೇಳಿಕೊಂಡಿದ್ದಾನೆ :—

ಬಾರೆಂದುರೆಯನ್ನು ಜಯಿಸಿದ ಮಾರಸಿಂಹರಾಜನ ಮತದಿಂದ, ಜಿನನಗರವಲ್ಲಭನಾದ ದ್ವಿಜವಂಶಶಿರೋಮಣಿ ಕಾಡಮರಸನು ತಳಕಾಡು ಕೋಟೆಯನ್ನು ಮುತ್ತಿಕೊಂಡಿದ್ದ ಚಕ್ರವರ್ತಿಯ ದಂಡನ್ನು ನಾಶಮಾಡಿ ಧ್ವಜವನ್ನು ಮುರಿದು ಶತ್ರುಗಳನ್ನು ಕೊಂದು ಹನ್ನೆರಡು ಜನ ಸಾಮಂತರ ಗೆಲಿದು ತನ್ನ ದೊರೆಯನ್ನು ತಣಿಪಿ ದೊರೆಯಿಂದ 25 ಗ್ರಾಮಗಳನ್ನು ಪಡೆದನು. ಕಾಡಮರಸನ ಮಗ ಪ್ರಭುಚೋರ ; ಮಗ ಆಯುಕ, ಮಗ ಶುಭಾಕರ, ಮಗ ಧಾವ, ಮಗ ಶಿವಮಾರಿದೇವ, ಮಗ ಜನಾರ್ದನ, ಮಗ ಎರಗಂಗ, ಮಗ ಎರೆಯಪ, ಮಗ ಕಲಿವಿಕ್ರಮಾರ್ಯ, ಮಗ ಕಾಡಮರಸ. ಇವನ ಸಂತತಿಯಲ್ಲಿ ಕುಂಚ, ಮೊಮ್ಮಗ ಮಾಚ, ಮಗ ದೋರಯ್ಯ, ಮಗ ತಾರಯ್ಯ, ಮಗ ನಾಗಕುಮಾರ, ಮಗ 'ನಾಲ್ಪತ್ತೊಂದೊಕ್ಕಲ ಕುಲಕೆಲ್ಲಂ ತಿಲಕಂ' ಭಾರದ್ವಾಜಗೋತ್ರದ ಚಿಕ್ಕಪಯ್ಯ, ಮಗ ಗಂಗರ ವಿಶ್ವಾಸಕ್ಕೆ ಪಾತ್ರನಾಗಿ ಶಾಸ್ತ್ರಗಳಲ್ಲಿ ಪರಿಣತನಾದ ಕುಂಚತೇಜ ಅಥವಾ ಜಯಬಂಧು. ತ್ರಿಮೂರ್ತಿಗಳಂತೆ ಘಳಿಯವರ್ಮ, ಜಸವಯ್ಯ, ಮಾಚಮಯ್ಯ ಎಂಬ ಮೂವರು ಪ್ರಭುಗಳಿದ್ದರು.

ಮೇಲೆ ಹೇಳಿದ ನಾಗಕುಮಾರನ ಮಗನೇ ರಟ್ಟವೆಡಂಗ, ಸುಕವಿನಿಧಾನ ಮೊದಲಾದ ಬಿರುದುಗಳುಳ್ಳ ರಟ್ಟಕವಿ. ಈತನು, "ಬೂತುಗನಣುಗಂ" ಎಂದು ಹೇಳಿಕೊಂಡಿರುವುದರಿಂದ ನಾಗಕುಮಾರನಿಗೆ ಬೂತುಗ ಎಂಬ ಹೆಸರೂ ಇದ್ದಿರಬಹುದೆಂದು ತೋರುತ್ತದೆ. ಈ ಕವಿ ತನಗೆ ಅನೇಕ ಬಿರುದುಗಳನ್ನು ಹೇಳಿಕೊಂಡಿರುವುದರಿಂದ ಇವನ ನಿಜವಾದ ಹೆಸರು ಇಂಥದೆಂದು ನಿಶ್ಚಯಿಸುವುದು ಕಷ್ಟವಾಗಿದೆ. ಈ ಗ್ರಂಥವನ್ನು ಕನ್ನಡದಲ್ಲಿ ತನ್ನ ಮಗಳಿಗೆ ಹೇಳಿದಂತೆ ತಿಳಿಸುವ

"ನೆಗಟ್ಟಿಭಯಾಂಬುಧಿ ನಿಜಸುತೆಗೆ ಚಂದ್ರಲೇಖೆಗೆ ಪೇಟ್ದಿಪಂ ಕನ್ನಡದಿಂ" ಎಂಬ ಪದ್ಯಭಾಗದಿಂದ ಈತನ ಹೆಸರು ಅಭಯಾಂಬುಧಿ ಎಂದು ಊಹಿಸಬಹುದಾಗಿದೆ.

ಮಾರಸಿಂಹನೆಂಬ ಗಂಗರಾಜನು 961 ರಿಂದ 974 ರ ವರೆಗೆ ಆಳಿದಂತೆ ತಿಳಿಯುತ್ತದೆ. ಕವಿಯು ವಂಶದ ಮೂಲಪುರುಷನಾದ ಕಾಡಮರಸನು ಇವನ ಬಳಿ ಇದ್ದಿರಬೇಕು. ಈ ಕಾಡಮರಸನಿಂದ ಕವಿಗೆ ಸುಮಾರು 15 ತಲೆಯಾಗುವುದರಿಂದ ಅವನ ಕಾಲದಿಂದ ಬಹುಶಃ ಮುನ್ನೂರು ವರ್ಷ ಈಚೆ ಕವಿ ಇದ್ದಿರಬಹುದು. ಶಕ 14 ನೆಯ ಶತಮಾನದಲ್ಲಿದ್ದ ಭಾಸ್ಕರನೆಂಬ ಆಂಧ್ರಕವಿ ಈ ರಟ್ಟಮತವನ್ನು ತೆಲುಗಿನಲ್ಲಿ ಭಾಷಾಂತರ ಮಾಡಿದಂತೆ ತಿಳಿವುದರಿಂದ [1] ಈತನು ಅವನಿಗೆ ಹಿಂದೆ ಇದ್ದಿರಬೇಕು. ಆದುದರಿಂದ ಸುಮಾರು 1300 ರಲ್ಲಿ ಇದ್ದಿರಬಹುದೆಂದು ಊಹಿಸುತ್ತೇವೆ.

ಹಿಂದಣ ಗ್ರಂಥಗಳನ್ನೂ ಗ್ರಂಥಕರ್ತರನ್ನೂ ಈ ಪದ್ಯಗಳಲ್ಲಿ ಹೇಳಿದ್ದಾನೆ:-

ಚಂದಿರಭಟ್ಟರ[2] ದಯೆಯಿಂ । ಸಂದೆಯಮಣಮಿಲ್ಲದಂತು ಕಲ್ತುದು ಮಟ್ಟಿಯಂ ॥
ಅತಿಶಯರತ್ನೋಜ್ಜ್ವಲಸಂ । ಕೃತಿಯೊಳ್ ಧನಕೀರ್ತಿಯೊಳ್ ವರಾಹಮಿಹಿರದೊಳ್ ॥
ರತಿಯೊಳ್ ಗಾರ್ಗ್ಯಾಚಾರ್ಯನ । ಮತದೊಳ್ ಸಲೆಮೇಘಮಾಲೆಯೊಳ್ ನಯದಿಂದಂ ॥
ಎಸೆವ ಮಟ್ಟಿ ಜಟ್ಟನೊಳ್ ಜೋ । ಯಿಸಚಕ್ರಿಯೊಳುದಿತಕೀರ್ತಿನಾರಾಯಣನೊಳ್ ॥
ಮಿಸುಪ ಶಕುನಂಗಳೊಳ್ ಭಾ । ವಿಸೆ ಪೇಟ್ದಂ ಮಟ್ಟಿಯಕುಲಜುಪನೊಳ್ಪಿನ ಜಟ್ಟಂ॥
ನಂದಾಚಾರ್ಯರ್ ಮಾಡಿದರ್ಘಖಂಡಮುಂ ಪೇಟ್ದಂ ॥

ತನ್ನ ಗುಣಾದಿಗಳನ್ನು ಈ ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ:—

ಜನಕನಸುರಾಗದೆ ನೆಗಟ್ದಂ । ಜನನುತಗುಣಿ ವಿತತಕೀರ್ತಿರಮಣೀರಮಣಂ ।
ಮನಸಿಜಸನ್ನಿಭನೆನಿಸಿದ । ವಿನಯಗುಣೋತ್ತುಂಗನೆಸೆವ ಜಟ್ಟವೆಡಂಗಂ ॥
ಗುಣಪಕ್ಷಪಾತಿ ಬೂತುಗ । ನಣುಗಂ ವಿನಯಾಂಬುರಾಶಿ ಸುಕವಿನಿಧಾನಂ ।
ಪ್ರಣುತಜಿನಭಕ್ತನೊಳ್ಪಿನ । ಕಣಿ ನಿರ್ಮಳಕೀರ್ತಿನೇಮಿ ಪುಸಿವರ ಶೂಲಂ ॥

ಇದಲ್ಲದೆ ಅಲ್ಲಲ್ಲಿ ನಯಬಂಧು, ಜಿನದಾಸ, ಅರ್ಹದ್ದಾಸ, ಸಮ್ಯಕ್ತ್ವರತ್ನಾಕರ, ರಟ್ಟಕಂದರ್ಪ, ಕವಿಗಳಾಭರಣ, ರಟ್ಟಕವೀಂದ್ರ, ಕವಿಕಂಜಸಂಭವ, ಜಿನನಗರಪತಿ, ಸಹಜಕವೀಶ್ವರ, ಜಿನಧರ್ಮವತ್ಸಲ, ಗಿರಿನಗರಾಧೀಶ್ವರ ಎಂಬ ವಿಶೇಷಣಗಳು ದೊರೆಯುತ್ತವೆ.

---

1. *Biographical Sketches of Dekkan Poets*, 96. Wilson's *Mackenzie Collection*, 303.　　2. ಪುಟ 73.

ಇವನ ಗ್ರಂಥ

## ರಟ್ಟಮತ ಅಥವಾ ರಟ್ಟಸೂತ್ರ.

ನಮಗೆ ದೊರೆತ ಅಸಮಗ್ರಪ್ರತಿಯಲ್ಲಿ ವೃತ್ತ, ಕಂದ, ರಗಳೆ, ಅಕ್ಕರ, ತ್ರಿಪದಿ ಎಲ್ಲಾ ಸೇರಿ ಸುಮಾರು 900 ಇವೆ. ಈ ಭಾಗದಲ್ಲಿ ಈ ವಿಷಯಗಳು ಪ್ರತಿಪಾದಿತವಾಗಿವೆ:—

ಮಳೆಯ ಕುರುಹು, ಆಕಸ್ಮಿಕಲಕ್ಷಣ, ಶಕುನ, ವಾಯುಚಕ್ರ, ಗೋಪ್ರವೇಶ, ಭೂಕಂಪ, ಭೂಜಾತಫಲ, ಮಳೆಯನಯ, ಉತ್ಪಾತಲಕ್ಷಣ, ಪರಿವೇಷಲಕ್ಷಣ, ಇಂದ್ರಧನುರ್ಲಕ್ಷಣ, ಪ್ರಥಮಗರ್ಭಲಕ್ಷಣ, ದ್ರೋಣಸಂಖ್ಯೆ, ಮಿಂಚಿನಲಕ್ಷಣ, ಪ್ರತಿಸೂರ್ಯಲಕ್ಷಣ, ಸಂವತ್ಸರಫಲ, ಗ್ರಹಂಗಳ ಪಗೆಕೆಳೆ, ಮೇಘಗಳ ನಾಮಕುಲವರ್ಣಧ್ವಾನವಿಚಾರ, ದೇಶವೃಷ್ಟಿ, ಮಾಸಫಲ, ರಾಹುಚಕ್ರ, ನಕ್ಷತ್ರಫಲ, ಬಿತ್ತುವ ಶಕುನ, ಉದಕಾರ್ಗಳ, ಸಂಕ್ರಾಂತಿಫಲ.

ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

ಸ್ವೇದಜಮಂಡಜಬೀಜಜ । ಮಾದರದ ಜರಾಯುಜಂಗಳೆನಿಸಿದ ನಾಲ್ಕುಂ ।
ಭೇದದ ಸಸ್ಯೋತ್ಪತ್ತಿಗೆ । ಮೇದಿನಿ ಜಲಮರ್ಕರಶ್ಮಿ ಪವನಂ ಮುಖ್ಯಂ ॥ 934 ॥

ಖರಕರನ ತಾಪದಿಂದಂ । ಧರಣಿತಳಂ ಬೀಡೆವಿಟ್ಟು ತಾಪದೊಳಂ ಭೋ ।
ರ್ಗರೆದು ಮೞೆಗಱೆಯೆ ವಿಶ್ವಂ । ಭರೆ ಬೆಳೆಗುಂ ಮನಕೆ ಬಂದ ಧಾನ್ಯವ್ರಜಮಂ ॥ 935 ॥

ಮಾವು ಬರೆ ನವಣೆ ಬೆಳೆಗುಂ । ಬೇವಿನೊಳೆಳ್ಳಕ್ಕು ಮೆಸೆವ ಹುಣಿಸೆಗಳೊದವಿಂ ।
ಭಾವಿಸೆ ನೆಲ್ಲುಂ ಬೆಳೆದಪು । ದಾವುದುಮೆಕ್ಕೆಯೊಳೆ ಬೆಳೆವುದೊಳ್ಪಿನಜಿಟ್ಟಾ ॥ 936 ॥

ದಿವಸಕರದೀಪ್ತಿಯಿಂದುವಿ । ನವೊಲಿರೆಯುಂ ತಾಂ ಘನಾಳಿ ಕಾಗೆಯ ಬಸಿಱಿಂ ।
ದವನೊಳಕೊಂಡಿರೆಯುಂ ತಿಂ । ಡುವ ಪವನಂ ನಿರುತಿಯೊಳಗೆ ಮೞೆಯಿಲ್ಲೆಂದಂ ॥ 937 ॥

ಜಲಜಸಖಬಿಂಬಮತ್ತು । ಜ್ವಲಮಪ್ಪೊಡೆ ವಾಯು ಪವನನೊಳ್ ಬೀಸುವೊಡಂ ।
ಜಲದಂಗಳ ರುಚಿಗಳ್ ನಿ । ರ್ಮಳಮಪ್ಪೊಡಮಧಿಕವೃಷ್ಟಿಯಕ್ಕುಂ ಜಿಟ್ಟಾ ॥ 938 ॥

ಕಾಗೆ ಬಿಳಿದಾದೊಡಿರುಳಾ । ದಾಗಳ್ ಸುರಚಾಪಮಾದೊಡಂ ಕಪ್ಪೆಗೆ ಚೆ ।
ಲ್ವಾಗಿಯೆ ಚಂಡಿಕೆ ನೆಗೆದೊಡ । ನಾಗದು ಮೞೆ ಡಾವರಂಗಳಕ್ಕುಂ ಜಿಟ್ಟಾ ॥ 939 ॥

ಬಾವಿಯ ಕೇರನಿಟ್ಟಿಗೆಯೆ ಕಟ್ಟಿಸು ಸುಣ್ಣಮನಿಕ್ಕು ಕಲ್ಲೊಳಾ ।
ಪೋ. ಡೆಗೊಳ್ಳದಂತರಿಸೆ ಕಟ್ಟಿಸು ಕರ್ಚಿನೊಳಿಕ್ಕು ಮತ್ತಮಾ ॥
ಬಾವಿಯ ಬಟ್ಟೆ ನೀಳ್ದಗಲೆ ಕಲ್ಗಳನೊಳ್ಪಿತನಿಕ್ಕು ಮತ್ತೆ ನೀಂ ।
ಬಾವಿಯ ಸುತ್ತಲುಂ ಮದಿಲನಿಕ್ಕಿಸು ಮಾಡಿಸುಧೀರ ಭಾಜಿಕಂ (?) ॥ 940 ॥

ನೆಲ್ಲಿಯುಸಟ್ಟುಬಾಳಮುಸಿತಾಂಜನವೊಳ್ಳಿಹುವುಸ್ತಿಯು. ಕೇ |
ಡಿಲ್ಲದ ಚಿಲ್ಲಗೊಟ್ಟೆಪೊಸಪೀರೆಯಬಿತ್ತಿನೊಳಾದ ಬೂದಿಯಂ ||
ನಿಲ್ಲದೆ ಬಾವಿಯೊಳ್ ಕೆಲ ........ಬಾಱದೂಱಲೊಳ್ |
ಪೊಲ್ಲವಿವೆಂಬ ಬಾವಿಗಳ ನೀರವ್ಯತೋಪಮವಾಗೆ ಱಟ್ಟುಗಾ || 941 ||

---

## ಚೌಂಡರಸ. ಸು. 1300.

ಇವನು ಅಭಿನವದಶಕುಮಾರಚರಿತೆಯನ್ನು ಬರೆದಿದ್ದಾನೆ.

ಈತನು ಬ್ರಾಹ್ಮಣಕವಿ; ಭಾರದ್ವಾಜಗೋತ್ರದವನು. "ಉದ್ದಂಡ ಮನೋಹರಪ್ರಚುರಶಿಷ್ಯಂ" ಎಂದು ಹೇಳಿಕೊಂಡಿದ್ದಾನೆ. ಇವನ ತಂದೆ ಮಧುಸೂದನ; ತಾಯಿ ಮಲ್ಲವ್ವೆ; ಹೆಂಡತಿ ಲಕ್ಷ್ಮಿ. ತನ್ನ ಅಣ್ಣನು 'ಸರಸಕವೀಶ್ವರ'[1] ಎಂದು ಹೇಳಿದ್ದಾನೆ. ಗ್ರಂಥಾರಂಭದಲ್ಲಿ 'ಪಂಡರೀರಾಯನಭಂಗವಿಟ್ಠಲನಲಂಪಿನೊಳೀಗೆ ಮಗಿಷ್ಟಸಿದ್ಧಿಯಂ' ಎಂದು ಸ್ತುತಿಸಿ, ಹದಿನಾಲ್ಕನೆಯ ಆಶ್ವಾಸದಲ್ಲಿ ಪಂಡರಾಪುರದ ದೇವಸ್ಥಾನವನ್ನು ವರ್ಣಿಸಿ ಕಥಾನಾಯಕಮುಖೇನ ವಿಟ್ಠಲದೇವರನ್ನು ಒಂದು ಅಷ್ಟಕದಿಂದ ಸ್ತೋತ್ರಮಾಡುವುದರಿಂದ ಈತನು ಪಂಡರಾಪುರದವನಾಗಿರಬಹುದು, ಅಥವಾ ವಿಟ್ಠಲದೇವರು ಇವನಿಗೆ ಕುಲದೈವವಾಗಿರಬಹುದು.

ಸಕಲಾಂತರ್ಯಾಮಿ ಜೀವಪ್ರಕರವಿವಿಧಚೈತನ್ಯರೂಪಂ ಜಗದ್ವ್ಯಾ |
ಪಕಭಾವಂ ವಿಷ್ಣುವೆಂದಾಗಮತತಿ ಸತತಂ ಸಾರ್ವ ಸಂಬಂಧದಿಂ ಕೌ ||
ತುಕದಿಂದಾನಾವುದಂ ಬಣ್ಣಿಸಿದೊಡದು ಪರಿಸ್ತೋತ್ರಮೆಂದೀಗಳೀಚ |
ತ್ರಕಥಾವಿಸ್ತಾರಮಂ ಬಣ್ಣಿಸಲೊಡರಿಸಿದೆಂ ಸತ್ಕವಿಶ್ರೇಣಿ ಮೆಚ್ಚಲ್ ||

ಎಂಬುದರಿಂದ ಈತನು ವಿಷ್ಣುಭಕ್ತನೆಂಬಂಶವು ವ್ಯಕ್ತವಾಗುತ್ತದೆ.

ಪೂರ್ವಕವಿಗಳಲ್ಲಿ ರುದ್ರಭಟ್ಟನನ್ನು (ಸು. 1180) ಸ್ತುತಿಸಿರುವುದರಿಂದ ಕವಿ ಅವನ ಕಾಲಕ್ಕೆ ಈಚೆಯವನು ಎಂಬುದು ವ್ಯಕ್ತವಾಗಿದೆ. ಎಷ್ಟು ಕಾಲ ಈಚೆ ಇದ್ದನು ಎಂದು ನಿರ್ಧರಿಸುವುದಕ್ಕೆ ಸಾಕಾದ ಆಧಾರವು ದೊರೆತಿಲ್ಲ. ಸುಮಾರು 1300 ರಲ್ಲಿ ಇದ್ದಿರಬಹುದೆಂದು ಊಹಿಸುತ್ತೇವೆ.

ಈತನಿಗೆ ಸರಸಕವಿ, ಕವಿರಾಜಶೇಖರ ಎಂಬ ಬಿರುದುಗಳಿದ್ದಂತೆ ತೋರುತ್ತದೆ. ಪೂರ್ವಕವಿಗಳನ್ನು ಈ ಪದ್ಯದಲ್ಲಿ ಸ್ಮರಿಸುತ್ತಾನೆ:—

ಪೊಗೞ್ವೆಂ ಲಕ್ಷಣಲಕ್ಷಿತಾದ್ಭುತವಚೋನಿಷ್ಕಂಪನಂ ಪಂಪನಂ |
ಜಗತೀಪ್ರೀತಿಕರಪ್ರಸಿದ್ಧಕವಿತಾಸಂಪನ್ನನಂ ಪೊನ್ನನಂ ||

---

1. ಈತನು ಆವಗ್ರಂಥಗಳನ್ನು ಬರೆದಿದ್ದಾನೆಯೋ ತಿಳಿಯದು.

ಸುಗಮಾರ್ಥಸ್ಫುಟಶಬ್ದಸುಂದರಕಿರದ್ವಾಕ್ಸಾಂದ್ರನಂ ಚಂದ್ರನಂ ।
ಭಗವದ್ವಿಷ್ಣುಕಥಾವತಾರರಚಿತಶ್ರೀಭದ್ರನಂ ರುದ್ರನಂ ॥

ತನ್ನ ವಿಷಯವನ್ನೂ ಗುಣಾದಿಗಳನ್ನೂ ಈ ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ :—

ದ್ವಿಜವಂಶಾಂಬುಧಿಪೂರ್ಣಚಂದ್ರನಸಮಖ್ಯಾತಂ ಭರದ್ವಾಜಗೋ ।
ತ್ರಜನುದ್ದಂಡಮನೋಹರಪ್ರಚುರಶಿಷ್ಯಂ ದಾನಕಲ್ಪದ್ರುಮಂ ॥
ತ್ರಿಜಗನ್ಮಂಗಳಮೂರ್ತಿ ವಿಟ್ಠಲಪದಾಂಭೋಜಾತಭೃಂಗಂ ಗುಣ ।
ವ್ರಜಯುಕ್ತಂ ಕವಿತಾವಿಳಾಸನೆ ವಲಂ ಚೌಂಡಂ ದಯಾಮಂಡನಂ ॥
ವರಮಧುಸೂದನಂ ಜನಕನೊಪ್ಪುವ ಮಲ್ಲವೆ ಮಾತೆಯುಗ್ರಜಂ ।
ಸರಸಕವೀಶ್ವರಂ ತನಗೆ ವಲ್ಲಭೆ ಲಕ್ಷ್ಮಿ ಪ್ರಿಯೆನಿಪ್ಪ ಪೆಂಪು ಬಿ ॥
ತ್ತರಿಸುವೊಡಗ್ಗಳಂ ನಿಜಮೆನಲ್ ಮೆಱೆವಂ ಹರಿಪಾದಶೋಣಪಂ ।
ಕರುಹಮಧುವ್ರತಂ ಸುಕವಿಚೌಂಡರಸಂ ಕವಿರಾಜಶೇಖರಂ ॥

ಇವನ ಗ್ರಂಥ

## ಅಭಿನವ ದಶಕುಮಾರಚರಿತೆ.

ದಂಡಿಕವೀಶ್ವರನು ಸಂಸ್ಕೃತದಲ್ಲಿ ರಚಿಸಿರುವ ಗ್ರಂಥವನ್ನು ತಾನು ಚಂಪೂರೂಪವಾಗಿ ಕನ್ನಡಿಸಿದಂತೆ

ಮೊದಲೊಳ್ ದಂಡಿಕವೀಶ್ವರಂ ದಶಕುಮಾರಾಖ್ಯಾತಚಾರಿತ್ರಮಂ ।
ಪದಪಿಂ ಸಂಸ್ಕೃತಭಾಷೆಯಿಂ ರಚಿಸಿದಂ ಧಾತ್ರೀಜನಸ್ತೋತ್ರಸ ॥
ಮ್ಮದಮಪ್ಪಂತದನಾಂ ಪ್ರಸಿದ್ಧಿಯುವತಾಕಾಕಾರಮಂ ನಟ್ಟುವಂ ।
ವಿದಿತಂ ರಂಗದೊಳಾಡಿ ತೋರ್ಪ ತೆಱದಿಂ ಪೇೞ್ವೆಂ ಸುಕರ್ಣಾಟದಿಂ ॥

ಎಂಬ ಪದ್ಯದಲ್ಲಿ ಹೇಳುತ್ತಾನೆ.

ನಮಗೆ ದೊರೆತ ಅಸಮಗ್ರಪ್ರತಿಯಲ್ಲಿ 13 ಆಶ್ವಾಸಗಳೂ 14 ನೆಯದರಲ್ಲಿ ಎಪ್ಪತ್ತು ಪದ್ಯಗಳೂ ಇವೆ. ಮಂತ್ರಗುಪ್ತ ನಿರೋಷ್ಠ ಕಥಾವೃತ್ತಾಂತವೆಂಬ 13 ನೆಯ ಆಶ್ವಾಸವನ್ನು ಮಾತೃಕೆಯಲ್ಲಿರುವಂತೆಯೇ ನಿರೋಷ್ಠವಾಗಿ ಬರೆದಿದ್ದಾನೆ.

ಗ್ರಂಥಾವತಾರದಲ್ಲಿ ಪಂಡರೀರಾಯನಾದ ಅಭಂಗವಿಟ್ಠಲನನ್ನು ಸ್ತುತಿಸಿದ್ದಾನೆ. ಬಳಿಕ ಲಕ್ಷ್ಮಿ, ಈಶ್ವರ, ಪಾರ್ವತಿ, ಬ್ರಹ್ಮ, ಸರಸ್ವತಿ, ವಿನಾಯಕ, ಚಂಡಿಕೆ ಇವರನ್ನು ಕ್ರಮವಾಗಿ ಸ್ಮರಿಸಿದ್ದಾನೆ.

ಆಶ್ವಾಸಗಳ ಕೊನೆಯಲ್ಲಿ ಈ ಗದ್ಯವಿದೆ :—

ಇದು ನಿಖಿಲಬುಧಜನಮನೋವನಜವನದಿವಾಕರಕಿರಣಪ್ರತಿಮ ಪ್ರಸನ್ನಶ್ರೀಮದ ಭಂಗವಿಟ್ಠಲಪದಾಂಭೋಜಮತ್ತಮಧುಕರ ಮಧುಸೂದನನಂದನ ಸರಸಕವಿ ಚಾಂಡರಾಜ ವಿರಚಿತಮಪ್ಪ ಅಭಿನವದಶಕುಮಾರಚರಿತದೊಳ್.

ಇವನ ಬಂಧವು ಲಕ್ಷಣಬದ್ಧವಾಗಿಯೂ ಲಲಿತವಾಗಿಯೂ ಇದೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ: —

ನೆಲ್ಲ ಗದ್ದೆ.

ದೆಸೆಗೆ ಕವಲ್ತು ಗಂಟೊಡೆದು ನುಣ್ಪಸುರಿಂ ಪೊರೆಯೇಱ ಕೊರ್ಬಿಯು ।
ರ್ಬಿಸಿ ಪೊಡೆದುಂಬಿ ಪಾಲ್ದೆನೆಗಳುರ್ಬೆ ಕರಂ ತಲೆವಾಗಿ ಬಿಣ್ಪಿನಿಂ ॥
ದೆಸೆವುವು ನೀಳ್ದ ತಮ್ಮ ಮುಖದೊಪ್ಪಮನೊಪ್ಪಿರೆ ನೀರ್ಗಳೊಳ್ ನಿರೀ ।
ಕ್ಷಿಸುವವೊಲಾವಗಂ ಕಣಿಶಸಂತತಿಗಳ್ ಕಳಮಪ್ರದೇಶದೊಳ್ ॥ 942 ॥

ಮಂದಮಾರುತ.

ಅಲರ್ದಲರ್ದೊರ್ಂಗಲಂ ಕುಣಿಸುತುಂ ಸೊನೆಸೋನೆಯನೆಯ್ದೆ ಸೂಸುತುಂ ।
ತಳಿರ್ಗಳನಿಂಪಿನಿಂ ನುಸುಳುತುಂ ಮಕರಂದಮನಪ್ಪುತುಂ ಕೊಳಂ ॥
ಗಳ ತಡಿಯೊಳ್ ವಿಹಾರಿಸುತೆ ಪಾಡುವ ಸೋಗೆಗಳಂ ಬಿದಿರ್ಚುತುಂ ।
ಪಲವು ವಿನೋದದಿಂ ಸುಳಿವುದಾಬನದೊಳ್ ವಿಗೆ ಮಂದಮಾರುತಂ ॥ 943 ॥

ಮಾವು.

ತಳಿರ್ವನೆಯೊಳ್ ಪೊರಳ್ದು ಸೊನೆಬಿಂದುಗಳೊಳ್ ನಸುನಾಂದು ಗಂಡುಗೋ ।
ಗಿಲೆಗಿಳಿದುಂಬಿಗಳ್ಗೆ ಗಿದು ತಂಕಣಗಾಳಿಗೆ ಕಂಪಿಸುತ್ತೆ ಪೂ ॥
ಗಳನುಱೆ ನೂಂಕಿ ಚೈತ್ರವಿಟನೊಳ್ ವಿರಹಾತುರೆಯಾದ ಕಾಂತೆವೋಲ್ ।
ವಿಲಸಿತಮಾಗಿ ಮಾಮರದೊಳಿರ್ದುವು ಮಾವಿನ ಪಣ್ಗಳೋಳಿಗಳ್ ॥ 944 ॥

ಬಕ್ಕೆವಲಸು.

ಕುಸುಮಮಂ ತೀವಿ ಪೊರ್ದುಗುಂ ಮಧುಪಸಂಗಕ್ಲೇಶಮೆಂದಂತದಂ ।
ಬಿಸುಟೆತ್ತದ್ಭುತದಿಂ ಮೊದಲ್ತುದಿವರಂ ಕಾಯ್ತುಣ್ಗಳಂ ಪೇಱೆ ಕ ॥
ಣ್ಗೆಸೆದೊಪ್ಪಂಬಡೆದಿರ್ಪ ಬಕ್ಕೆವಲಸಂ ಮುಂ ಕಂಡು ಪದ್ಮೋದ್ಭವಂ ।
ರಸವಸ್ತುಪ್ರಕರಂಗಳಂ ಬಟ್ಟಕದೇಂ ಮಾಡಲ್ ಮನಂದಂದನೋ ॥ 945 ॥

### ಮಕ್ಕಳ ಬಯಕೆ.

ಚಿಲಿಪಿಲಿಗುಟ್ಟು ನುಣ್ಣೊದಳ್ಗಳಿಂ ಕಿವಿಗಿಂಪನೊಡರ್ಚೆ ಗೆಜ್ಜೆಗಳ್ |
ಘಲಿಕೆನಿಪಂತಿರಲ್ದು ಬಿಗಿಯಪ್ಪಿ ಕುಚಂಗಳನುಂಡು ಸೋಂಕಿಲೊಳ್ ||
ಮಲಗಿ ಮನಕ್ಕೆ ಸಮ್ಮದಮನೀವ ಕುಮಾರಕನಂ ಮದೀಯಸ |
ತ್ಕುಲಗೃಹದೀಪಕನಂ ಪಡೆವ ಸೈಪಿನ ಸುಗ್ಗಿಯದೆಂದು ಸಾರ್ಗುಮೋ || 946 ||

### ಕತ್ತಲೆ.

ಸೋಂಕಿಂ ಸ್ಥಾವರಮುಂ ಮಾ | ತಂ ಕೇಳ್ವುದರಿಂದೆ ಜಂಗಮಂಗಳನಱಿವರ್ |
ತಾಂ ಕಾಣ್ಕೆಗರಿದೆನಲ್ ಬಗೆ | ಗೆಂ ಕಡುಮುಂದ್ಯಸಿ ನಿಂದುದೋ ಘನತಿಮಿರಂ || 947 ||

ಬಗಿದು ಪುಗಲರಿದು ನೋಡಲ್ | ಬಗೆಯಲ್ ಕಣ್ಣಲ್ಲದೊಯ್ಯನಡಿಯಿಡೆ ಚಿತ್ತ |
ಕ್ಕೊಗೆಗುಮತಿಭೀತಿಯೆನಲು | ರ್ವಿಗೆ ದಟ್ಟೈಸಿರ್ದುದಂಧಕಾರಾಕಾರಂ || 948 ||

ಪದೆಪಿಂದಂಬರಲಕ್ಷ್ಮಿಯಿಚ್ಚೆಕೊಳಲಿಂದೌತ್ಸುಕ್ಯದಿಂ ಕಜ್ಜಳಂ |
ಪುದಿದೊಪ್ಪಿರ್ದ ಕರಂಡಮಂ ತೆಗೆದು ತನ್ನುತ್ಸಾಹದಿಂ ಮುಚ್ಚಳಂ ||
ಮುದದಿಂದಂ ತೆಗೆಯುತ್ತುಮಿರ್ಪ ಪದದೊಳ್ ಕೆಯ್ತಪ್ಪಿ ಬಿಟ್ಟಂಜನಂ |
ಕೆದಱಿತ್ತೆಂಬಿನಮುರ್ಬಿ ಮರ್ಬು ಪರಿದತ್ತತ್ತಂ ದಿಶಾಭಿತ್ತಿಯೊಳ್ || 949 ||

### ಧರ್ಮ.

ಗಾಡಿಯೊಳರ್ಥಕಾಮಮೆರಡಂ ಗಳಿಸಲ್ ಬಗೆದಂದು ಧರ್ಮಮಂ |
ನೋಡಿದೊಡಂತದೆಲ್ಲಿಯದು ಸಂತತನಿರ್ಮಳಮಪ್ಪ ಧರ್ಮಮಂ ||
ಮಾಡುವೊಡರ್ಥಕಾಮಮೆರಡುಂ ಕಿಡವೆಂದಱಿದಿರ್ದು ಧರ್ಮದೊಳ್ |
ಕೂಡುವರೇಕೆ ಮಿಕ್ಕ ಪುರುಷಾರ್ಥಮನಜ್ಞರೆನಿಪ್ಪ ಮಾನವರ್ || 950 ||

---

## ನಾಚಿರಾಜ. ಸು. 1300.

ಈತನು ಅಮರಕೋಶಕ್ಕೆ ಕನ್ನಡದಲ್ಲಿ ಒಂದು ವ್ಯಾಖ್ಯಾನವನ್ನು ಬರೆದಿದ್ದಾನೆ; ಇದಕ್ಕೆ ನಾಚಿರಾಜೀಯವೆಂದು ವ್ಯವಹಾರವಿದೆ.

ಇವನು ಜೈನಕವಿ; ಶ್ರವಣಬೆಳ್ಗೊಳದ ಮಠದಲ್ಲಿರುವ ಅಮರಕೋಶದ ಒಂದು ಕನ್ನಡವ್ಯಾಖ್ಯಾನದ ಕೊನೆಯಲ್ಲಿ—"ಶಕ 1318 ನೆಯ ಯುವದಲ್ಲಿ (1395) ರಾಯರಾಜಗುರುಮಂಡಲಾಚಾರ್ಯ ರಾಯವಾದಿಪಿತಾಮಹ ಸಕಲ ವಿದ್ವಜ್ಜನಚಕ್ರವರ್ತಿ ನಿಖಿಳಶಾಸ್ತ್ರವ್ಯಾಖ್ಯಾನವಿಶಾರದ ಶ್ರೀಮಲಧಾರಿನಾಗಚಂದ್ರ

ಭಟ್ಟಾರಕರ ಶಿಷ್ಯರಪ್ಪ ಶ್ರೀಧರ್ಮಭೂಷಣ ಶ್ರೀಅಭಯಚಂದ್ರಸೈದ್ಧಾಂತಿಕದೇವರು ಬರೆದ ಶ್ರೀಪಂಚಪರಮೇಷ್ಠಿಗಳ ಸ್ವರೂಪ, ಯೋಗಾಮೃತ, ಅಮರಸಿಂಹದ ವೃತ್ತಿ, ನಾಚಿರಾಜ, ಕೌಮಾರವ್ಯಾಕರಣ"—ಎಂದು ಇರುವುದರಿಂದ ನಾಚಿರಾಜನ ಈ ವ್ಯಾಖ್ಯಾನವು ಆ ವರ್ಷಕ್ಕೆ ಹಿಂದೆ ಇದ್ದಿತೆಂಬುದು ಸ್ಪಷ್ಟವಾಗಿಯೇ ಇದೆ. ಮೂಡಬಿದರೆಯಲ್ಲಿರುವ ನಾಚಿರಾಜೀಯದ ಪ್ರತಿಗಳಲ್ಲಿ ಧನಂಜಯ, ರಭಸ, ಇವರುಗಳ ಗ್ರಂಥಗಳನ್ನು ನಾಚಿರಾಜನು ಉಪಯೋಗಿಸಿದಂತೆ ತಿಳಿವುದರಿಂದ ಅವರ ಕಾಲಕ್ಕೆ ಈಚೆ ಇದ್ದಿರಬೇಕು; ಸುಮಾರು 1300 ರಲ್ಲಿ ಇದ್ದಿರಬಹುದೆಂದು ಊಹಿಸುತ್ತೇವೆ.

---

## ಯಶಶ್ಚಂದ್ರ. ಸು. 1300.

ಈ ಜೈನಕವಿಯ ಹೆಸರನ್ನು ಮಧುರನು (ಸು. 1385) ತನ್ನ ಧರ್ಮನಾಥಪುರಾಣದಲ್ಲಿಯೂ ಭಾಸ್ಕರನು (1424) ತನ್ನ ಜೀವಂಧರಚರಿತ್ರೆಯಲ್ಲಿಯೂ ಹೇಳಿದ್ದಾರೆ. ಭಾಸ್ಕರನು "ಯಶಶ್ಚಂದ್ರನ ಬಹುಜ್ಞತೆ" ಎಂದು ಈತನನ್ನು ಗೌರವಿಸಿದ್ದಾನೆ. ಇವನು ಆವ ಗ್ರಂಥವನ್ನು ಬರೆದಿದ್ದಾನೆಯೋ ತಿಳಿಯದು. ಇವನ ಕಾಲವು ಸುಮಾರು 1300 ಆಗಿರಬಹುದು.

---

## ಪದ್ಮಪ್ರಭ. ಸು. 1300.

ಇವನು ವಿಂಶತಿಪ್ರರೂಪಣೀಟೀಕೆಯನ್ನು ಬರೆದಿದ್ದಾನೆ. ಈತನು ಜೈನಕವಿ. ಸುಮಾರು 1250 ರಲ್ಲಿ ಹುಟ್ಟಿದ ಮಾಘಣಂದಿ ಶ್ರಾವಕಾಚಾರದಿಂದ ಅನುವಾದ ಮಾಡುವುದರಿಂದ ಆ ಕಾಲಕ್ಕೆ ಈಚೆ ಸುಮಾರು 1300 ರಲ್ಲಿ ಇದ್ದಿರಬಹುದು. ಇವನ ಟೀಕೆಯ ಆದಿಯಲ್ಲಿ ಈ ಪದ್ಯವಿದೆ:—

ಶ್ರೀವರ್ಧಮಾನನಾನತ। ದೇವಾಧಿಪಮುಕುಟಕಿರಣಘಟ್ಟಿತಚರಣಂ।
ಕೇವಲಬೋಧವಿಲೋಚನ। ನಾವಿಷ್ಕೃತಸಕಲತತ್ತ್ವನೀಗೆಮಗಜಿ‌ವಂ॥

ಈ ಟೀಕೆಯಿಂದ ಸ್ವಲ್ಪ ಭಾಗವನ್ನು ತೆಗೆದು ಬರೆಯುತ್ತೇವೆ:—

ಅಚ್ಯುದಪದೊತ್ತಿ ಆಜೀವಾ.

ಆಜೀವಾ, ಅಂಬಿಲಕೂಟಿನುಂಬರ್. ಅಚ್ಯುದಪದೊತ್ತಿ, ಅಚ್ಯುತಕಲ್ಪಪರ್ಯಂತಂ ಪುಟ್ಟುವರ್.[1]

---

1. *Ind. Ant.*, XLI, 89.

## ಅಮೃತನಂದಿ. ಸು. 1300.

ಇವನು ಅಕಾರಾದಿ ವೈದ್ಯನಿಘಂಟುವನ್ನು ಬರೆದಿದ್ದಾನೆ. ಈತನು ಜೈನ ಕವಿ; ಸುಮಾರು 1300 ರಲ್ಲಿ ಇದ್ದಿರಬಹುದೆಂದು ತೋರುತ್ತದೆ. ಇವನ ನಿಘಂಟುವಿನಲ್ಲಿ ಸಂಸ್ಕೃತಪದಗಳಿಗೆ ಕನ್ನಡದ ಪರ್ಯಾಯಶಬ್ದಗಳು ಹೇಳಿವೆ.

---

## ಪ್ರಭಾಚಂದ್ರ. ಸು. 1300.

ಈತನು ಸಿದ್ಧಾಂತಸಾರ, ಚಾರಿತ್ರಸಾರ ಇವುಗಳಿಗೆ ಟೀಕೆಯನ್ನು ಬರೆದಿದ್ದಾನೆ. ಇವನು ಜೈನಕವಿ. ಇವನ ಕಾಲವು ಸುಮಾರು 1300 ಆಗಿರಬಹುದೆಂದು ಊಹಿಸುತ್ತೇವೆ.

---

## ಕನಕಚಂದ್ರ. ಸು. 1300.

ಈತನು ಕೊಂಡಕುಂದಾಚಾರ್ಯನ ಮೋಕ್ಷಪ್ರಾಭೃತ ಅಥವಾ ಸಹಜಾತ ಪ್ರಕಾಶ ಎಂಬ ಗ್ರಂಥಕ್ಕೆ ಕನ್ನಡವ್ಯಾಖ್ಯಾನವನ್ನು ಬರೆದಿದ್ದಾನೆ. ಇವನು ಜೈನಕವಿ; ಸುಮಾರು 1300 ರಲ್ಲಿ ಇದ್ದಿರಬಹುದು.

---

## ನವಿಲ್ಗುಂದದ ಮಾದಿರಾಜ. ಸು. 1300.

ಎರಡನೆಯ ಗುಣವರ್ಮನ (ಸು. 1235) ಪುಷ್ಪದಂತಪುರಾಣದ ಒಂದು ಪ್ರತಿಯ ಕೊನೆಯಲ್ಲಿ ಆ ಗ್ರಂಥವನ್ನು ಈ ಮಾದಿರಾಜನು ಪ್ರತಿಮಾಡಿದಂತೆ ಹೇಳುವ ಈ ಎರಡು ವೃತ್ತಗಳು ದೊರೆಯುತ್ತವೆ:—

ಶಲ್ಯವಿದೂರಬಂಕರಸನಂಕದ ಮಾಚಿಯು ತಂದೆ ನಿತ್ಯವಾಂ ।
ಗಲ್ಯಸುಶೀಲಯುಕ್ತೆ ಮಹದೇವಿಯು ವಲ್ಲಭನೊಳ್ಪುವೆತ್ತ ಸಾ ॥
ಕಲ್ಯಕಲಾಮೃತಾಂಬುನಿಧಿಸೋಮನ ಚಾಮುನ ಸೂನುವೊಲ್ಪು ಸಾ ।
ಕಲ್ಯಗುಣಾಸ್ಪದಂ ಬರೆದಪಂ ಬುಧಮಾಧವನೀಪ್ರಬಂಧಮಂ ॥

ಬಿಂದುವಿನೊಂದು ಶೋಭೆ ತಲೆಕಟ್ಟಿನ ಪೊರ್ಕುಳಿ ಚೆಲ್ವು ಮಾತ್ರೆಯೊಳ್ ।
ನಿಂದ ಬೆಡಂಗು ಬಳ್ಳಿಯೊಳೊಡಂಬಡುತಿರ್ಪ ನಯಂ ವಿಸರ್ಗದೊ ॥
ಳ್ಪೊಂದಿರಲಕ್ಕರಕ್ಕೆ ಬರೆವಂ ಚದುರರ್ ಪರಿವರ್ಣಿಸಲ್ ನವಿ ।
ಲ್ಗುಂದದ ಮಾದಿರಾಜವಿಬುಧಂ ವಿಬುಧೋದಿತನವ್ಯಕಾವ್ಯಮಂ ॥

ಈ ಪದ್ಯಗಳನ್ನು ನೋಡಿದರೆ ನವಿಲ್ಗುಂದದ ಮಾದಿರಾಜನು ಕವಿಯೆಂಬುದಕ್ಕೆ ಅಡ್ಡಿಯಿಲ್ಲ. ಈ ಪದ್ಯಗಳಿಂದ ಇವನು ಸಾಕಲ್ಯಕುಲದವನು; ಇವನ ತಂದೆ ಚಾವು, ಹೆಂಡತಿ ಮಹದೇವಿ, ಮಕ್ಕಳು ಬಂಕರಸ ಮತ್ತು ಮಾಚಿ, ಸ್ಥಳ ನವಿಲ್ಗುಂದ; ಈತನ ಬರಹವು ಸುಂದರವಾದುದು—ಎಂಬಂಶಗಳು ಗೊತ್ತಾಗುತ್ತವೆ. ಇವನಿಗೆ ಬುಧಮಾಧವ ಎಂಬ ಬಿರುದು ಇದ್ದಂತೆ ತೋರುತ್ತದೆ. ಸುಮಾರು 1235 ರಲ್ಲಿ ಹುಟ್ಟಿದ ಪುಷ್ಪದಂತಪುರಾಣವನ್ನು 'ವಿಬುಧೋದಿತನವ್ಯಕಾವ್ಯಮುಂ' ಎಂದು ಹೇಳುವುದರಿಂದಲೂ ಮೇಲೆ ಕೊಟ್ಟಿರುವ ಪದ್ಯಗಳ ಶೈಲಿಯಿಂದಲೂ ಮಾದಿರಾಜನು ಸುಮಾರು 1300 ರಲ್ಲಿ ಇದ್ದಿರಬಹುದೆಂದು ಊಹಿಸುತ್ತೇವೆ.

---

## ಬ್ರಹ್ಮದೇವ. 1320.

ಶಿವಮೊಗ್ಗ 69 ನೆಯ ಶಾಸನವನ್ನು ಈತನು ಬರಸಿದುದಾಗಿ ಆ ಶಾಸನದ ಕೊನೆಯಲ್ಲಿರುವ "ಬರಸಿದಾತ ಕವೀಶ್ವರ ಬ್ರಹ್ಮದೇವ" ಎಂಬ ವಾಕ್ಯದಿಂದ ತಿಳಿಯುತ್ತದೆ. 'ಕವೀಶ್ವರ ಬಹ್ಮದೇವ' ಎಂದು ಹೇಳಿರುವುದರಿಂದ ಈತನು ಕವಿಯಾಗಿದ್ದನೆಂಬುದರಲ್ಲಿ ಸಂಶಯವಿಲ್ಲ; ಆವ ಗ್ರಂಥಗಳನ್ನು ಬರೆದಿದ್ದಾನೆಯೋ ತಿಳಿಯದು.

---

## ಆರ್ಯಸೇನ. ಸು. 1331.

ಈತನು ನಾಗರಾಜನ (1331) ಪುಣ್ಯಾಸ್ರವವನ್ನು ತಿದ್ದಿ ಅಂದಗೊಳಿಸಿದಂತೆ ಆ ಗ್ರಂಥದಲ್ಲಿಯು

ಶ್ರುತವಾರ್ಧಿಯಾರ್ಯಸೇನ। ವ್ರತಿಪತಿ ಕೊಂಡಾಡಿ ತಿರ್ದಿ ಕನ್ನಡದೊಳ್ಪಂ।
ಪ್ರತಿಪಾದಿಸಿದನೆನಲ್ಕೀ। ಕೃತಿ ಪೆರ್ಮೆಯನಾಂತುದೆಂಬುದೇನಚ್ಚರಿಯೋ॥

ಎಂಬ ಪದ್ಯದಿಂದ ತಿಳಿಯುತ್ತದೆ. ಇವನು ಕವಿಯಾಗಿದ್ದಿರಬೇಕು. ಆವ ಗ್ರಂಥಗಳನ್ನು ಬರೆದಿದ್ದಾನೆಯೋ ತಿಳಿಯದು.

---

## ನಾಗರಾಜ. 1331.

ಇವನು ಪುಣ್ಯಾಸ್ರವವನ್ನು ಬರೆದಿದ್ದಾನೆ. ಈತನು ಜೈನಕವಿ; ಕೌಶಿಕಗೋತ್ರದವನು. ಇವನ ತಂದೆ ಸೇಡಿಂಬ ಪುರದಲ್ಲಿ ಜಿನಶಾಸನದೀಪಕನಾದ ವಿವೇಕವಿಟ್ಠಲದೇವ; ತಾಯಿ ಭಾಗೀರಥಿ; ಸಹೋದರ ತಿಪ್ಪರಸ; ಗುರು ಅನಂತ

ವೀರ್ಯ. ಸಗರದ ನಗರದವರು ಕೇಳಿಕೊಳ್ಳಲು ಈ ಗ್ರಂಥವನ್ನು ಸಂಸ್ಕೃತದಿಂದ ಕನ್ನಡಿಸಿ ಬರೆದಂತೆ ಹೇಳುತ್ತಾನೆ. ಆಶ್ವಾಸಾಂತ್ಯಗದ್ಯಗಳಲ್ಲಿ "ಮಾಸಿವಾಳದ ನಾಗರಾಜ" ಎಂದೂ ಉಭಯಕವಿತಾವಿಳಾಸ ಎಂದೂ ಹೇಳಿಕೊಂಡಿದ್ದಾನೆ.

ಈ ಗ್ರಂಥವನ್ನು ಶಕ 1253 ನೆಯ ಪ್ರಜಾಪತಿವರ್ಷದಲ್ಲಿ–ಎಂದರೆ 1331 ರಲ್ಲಿ—ಬರೆದಂತೆ ಗ್ರಂಥಾಂತ್ಯದಲ್ಲಿರುವ "ಪುರಶರಯುಗ್ಮಚಂದ್ರಪರಿಸಂಖ್ಯೆ ಶಕಾಬ್ದಮದಾಗೆ ವತ್ಸರಂ ಸರಸಿಜಗರ್ಭನಾಮಮುಳವಟ್ಟಿರಲ್" ಎಂಬ ಪದ್ಯಭಾಗ ದಿಂದ ತಿಳಿಯುತ್ತದೆ.

ಈತನಿಗೆ ಸುಲಲಿತಕವಿತಾಕಲ್ಪವಲ್ಲೀವಸಂತ, ಭಾರತೀಭಾಳನೇತ್ರ, ಸರಸ್ವತೀಮುಖತಿಲಕ, ಕವಿಮುಖಮುಕುರ ಎಂಬ ಬಿರುದುಗಳು ಇದ್ದಂತೆ ತೋರುತ್ತದೆ.

ಪೂರ್ವಕವಿಗಳನ್ನು ಈ ಪದ್ಯದಲ್ಲಿ ಸ್ತುತಿಸಿದ್ದಾನೆ:—

ಪೊನ್ನಿಗನೋಜೆ ಪಂಪರಸನೊಪ್ಪುವ ಕಾವ್ಯದ ಕೀರ್ತಿಯಾವಗಂ ।
ಜನ್ನನೊಳೊಪ್ಪುವೆತ್ತ ಪೊಸಮಾತು ಗಜಾಂಕುಶನರ್ಥಗೌರವಂ ॥
ಮುನ್ನಿನ ಬಂಧುವರ್ಮಗುಣವರ್ಮರ ಜಾಣ್ನುಡಿ ನಾಗಚಂದ್ರನ ।
ತ್ಯುನ್ನತಿವೆತ್ತ ದೇಸೆ ನೆಲಸಿರ್ಕೆ ಮದೀಯಕಥಾಪ್ರಬಂಧದೊಳ್ ॥

ತನ್ನ ಗುಣಾದಿಗಳನ್ನೂ ಕವಿತಾಚಾತುರಿಯನ್ನೂ ಈ ಪದ್ಯಗಳಲ್ಲಿ ಹೇಳಿ ಕೊಂಡಿದ್ದಾನೆ:—

ಕೌಶಿಕಗೋತ್ರನತ್ಯಧಿಕಪುಣ್ಯಪವಿತ್ರನುದಗ್ರತತ್ವನ ।
ಭ್ಯಾಸಿತಸತ್ಕವಿತ್ವನವನೀತಲವಂದ್ಯನನಿಂದ್ಯನೇನಸಂ ॥
ತ್ರಾಸನಶೀಲನರ್ಥಿಜನತಾಪ್ರತಿಪಾಲನನಂತವೀರ್ಯಯೋ ।
ಗೀಶಪದಾಬ್ಜಭೃಂಗನಭಿಮಾನಸುರೇಂದ್ರವಿನೂತಭೂಧರಂ ॥
ನಿರವದ್ಯಂ ವಿಶ್ವವಿದ್ಯಾಪತಿ ಸಕಲಗುಣಾಲಂಕೃತಂ ಸೂಕ್ತಿರತ್ನಾ ।
ಕರನರ್ಹತ್ಪಾದಪಂಕೇರುಹಷಟ್ಚರಣಂ ಕೀರ್ತಿಕಾಂತಾಮನೋಜಂ॥
ಸ್ಥಿರವಾಕ್ಯಂ ಭವ್ಯಸೇವ್ಯಂ ಸರಸಕವಿಜನಾನಂದಮಂದಾರಭೂಜಂ ।
ಧರೆಯೊಳ್ ತಾಂ ಸಂಪುವೆತ್ತಂ ಸುಲಲಿತಕವಿತಾಕಲ್ಪವಲ್ಲೀವಸಂತಂ ॥
ಬೆಡಗಂ ಪತ್ತಿಸಿ ಬೇಱದೊಂದು ಪದವಿನ್ಯಾಸಂ ಸಮಾಸಂ ಬಲಂ ।
ಮುಱುಕಂ ಪೆತ್ತುದೆನಲ್ಕಲಂಕೃತಿಗಳಿಂ ತಳ್ಪೊಯ್ದು ಚಿತ್ರಾರ್ಥದೊಳ್ ॥
ನೆಱೆದಿಂಪಂ ಪಡೆಯಲ್ಕೆ ಪೇೞ್ವೊಡೆ ವಲಂ ನಾಗಂ ಕಲಾವಲ್ಲಭಂ ।
ನೆಱೆ ಬಲ್ಲಂ ಬಿಡು ಗರ್ವಮಂ ಕುಳಕವಂ ಸತ್ಕಾವ್ಯಬಂಧಂಗಳಂ ॥

ತವರಾಜದ ಸಿರಿಯಂತಿರೆ। ಸವಿಯಂ ಸಾಲಿಡುವುದಖಿಳಬುಧತತಿಗೆಲ್ಲಂ ।
ಕಿವಿಯೊಳ್ ನಾಗೇಂದ್ರನ ನಿಜ। ಕವಿತೆಯ ಕನ್ನಡದ ನುಡಿಯ ಬೆಡಗಿನ ಗಡಣಂ ॥

ಇವನ ಗ್ರಂಥ

## ಪುಣ್ಯಾಸ್ರವ.

ಇದು ಚಂಪೂಗ್ರಂಥ; 12 ಅಧಿಕಾರಗಳಾಗಿ ಭಾಗಿಸಲ್ಪಟ್ಟಿದೆ. ಇದರಲ್ಲಿ 52 ಕಥೆಗಳಿವೆ. ಸಗರದ ನಗರದವರಿಗೋಸ್ಕರ ತನ್ನ ಗುರು ಅನಂತವೀರ್ಯನ ಆಜ್ಞಾನುಸಾರವಾಗಿ ಈ ಗ್ರಂಥವನ್ನು ಬರೆದಂತೆ ಹೇಳುತ್ತಾನೆ. ಇದರಲ್ಲಿ ಪೂಜೆ, ಗುರೂಪಾಸ್ತಿ, ಸ್ವಾಧ್ಯಾಯ, ಸಂಯಮ, ದಾನ, ತಪಸ್ಸು ಎಂಬ ಸಾಗಾರಧರ್ಮವನ್ನು—ಎಂದರೆ ಗೃಹಸ್ಥಧರ್ಮವನ್ನು—ವಿವರಿಸಿ "ಅಲ್ಲಿ ಒಂದೊಂದಱ ನೆಗೞ್ತೆಯೊಳೋರೊರ್ವರ್ ಪ್ರಸಿದ್ಧಿವಡೆದು ಸ್ವರ್ಗಾಪವರ್ಗಂಗಳನೆಯ್ದಿದ ಪುರಾಣಪುರುಷರ ಕಥೆಗಳಂ" ಹೇಳಿದ್ದಾನೆ. ಈ ಗ್ರಂಥವನ್ನು ಆರ್ಯಸೇನನು ತಿದ್ದಿ ಅಂದಗೊಳಿಸಿದನೆಂದು ಹೇಳುತ್ತಾನೆ.

ಗ್ರಂಥಾವತಾರದಲ್ಲಿ ಕವಿ ಜಿನೇಂದ್ರನನ್ನು ಸ್ತುತಿಸಿದ್ದಾನೆ. ಬಳಿಕ ಸಿದ್ಧಾದಿಗಳು, ಪಂಚಪರಮೇಷ್ಠಿಗಳು, ಸರಸ್ವತಿ ಇವರನ್ನು ಸ್ಮರಿಸಿ ಅನಂತರ ವೀರಸೇನನಿಂದ ಅನಂತವೀರ್ಯವ್ರತಿಯ ವರೆಗೆ[1] ಗುರುಗಳನ್ನು ಕ್ರಮವಾಗಿ ಸ್ತುತಿಸಿದ್ದಾನೆ. ಅಧಿಕಾರಗಳ ಅಂತ್ಯದಲ್ಲಿ—

ಇದು ದಿವಿಜರಾಜರಾಜಿತಕಿರೀಟತಟಘಟಿತ ನೂತ್ನರತ್ನಪ್ರತಾನಮರೀಚಿಮಂಜರೀರಂಜಿತಭಗವದರ್ಹತ್ಪರಮೇಶ್ವರಪಾದಾರವಿಂದಾಮಂದಮಕರಂದಮಧುಕರಾಯಮಾನ ಶ್ರೀಮದನಂತ ವೀರ್ಯಮುನೀಂದ್ರ ಪದನಖಮಯೂಖಲೇಖಾಲಲಾಮಂ ಭಾರತೀಭಾಳನೇತ್ರನುಭಯಕವಿತಾವಿಳಾಸಂ ಶ್ರೀಮನ್ನಾಸಿವಾಳದ ನಾಗರಾಜವಿರಚಿತಮಪ್ಪ ಪುಣ್ಯಾಸ್ರವದೊಳ್

ಎಂಬ ಗದ್ಯವಿದೆ.

ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

### ದುಷ್ಕವಿದೂಷಣ.

ಕುದಿದೆಡೆಯಾಡಿ ನೋಡಿ ಪದನೊಂದೆರಡಂ ಸರಗೋದು ಮೇಲುಗಾ ।
ಐದೆ ಬೞಿಕಂ ಮನಂಜರಿದು ಜಾನಿಸಿ ಚಿಂತಿಸಿ ಗೂಡುಗೊಂಡುಮಾ ॥
ಗದೆ ಮಳೆಯಲ್ಲಿ ಕೇದಗೆಯನೇಱದ ಕೋಡಗದಂತೆ ಹಾಸ್ಯಸಂ ।
ಪದಕೆಡೆಯಪ್ಪ ದುಷ್ಕವಿಗಳಿಲ್ಲದೊಡೇನಿಳೆ ಶೂನ್ಯಮಪ್ಪುದೇ ॥ 951 ॥

1 ವೀರಸೇನ, ಜಿನಸೇನ, ಸಿಂಹಣಂದಿ, ವೃದ್ಧಗೃಧ್ರಪಿಂಛಾಚಾರ್ಯ, ಕುಂಡಕುಂದಾಚಾರ್ಯ, ಗುಣಭದ್ರ, ಪೂಜ್ಯಪಾದ, ಸಮಂತಭದ್ರ, ಅಕಳಂಕಮುನಿ, ಸೇನಗಣಾಗ್ರಣಿ, ಕುಮಾರಸೇನವ್ರತಿ, ಧರಸೇನದೇವ, ಅನಂತವೀರ್ಯವ್ರತಿ.

## ವಸಂತ.

ಮಾಗಿಯನೊಕ್ಕಲಿಕ್ಕಿ ಮಕರಧ್ವಜನಾಜ್ಞೆಯನಾಂತು ನೆತ್ತಿಯೊಳ್ ।
ಕೋಗಿಲೆಗಿತ್ತು ನಾಲಗೆಯ ಸಂಪದಮಂ ಮದವನ್ಮದಾಳಿಗಳ್ ॥
ರಾಗಿಸೆ ಬಳ್ಳಿಮಾವುಗಳ ಕಾವಣದೊಳ್ ನೆಲೆವೀಡುವಿಟ್ಟು ಚೈ ।
ತ್ರಾಗಮವೊಪ್ಪಿದತ್ತು ವಿರಹಿಪ್ರಕರಂ ನಡುಗುತ್ತುಮಿರ್ಪಿನಂ ॥ 952 ॥

## ಕಾಡು.

ವಿಕಸಿತಪುಷ್ಪದಂತರಳಿ ಕನ್ನಡಿಗರ್ ಕರೆವಂತೆ ಬನ್ನಿ ಬಂ ।
ಧಕಿಯರ ನಾಮದಂತೊಗೆದ ಪಾದರಿ ರೋಗಿಗಳಂತೆ ತಾಱೆ ಪಾ ॥
ವಕನ ಶರೀರದಂತರುಳಿ ಸುಂಕಿಗನಂತಿರೆ ಚೆಲ್ಲ ... ।
..ನ ವಿಯೋಗದಂತೊಗೆದ ಬೊಬ್ಬುಲಿ ಪರ್ವಿದಟವ್ಯವೊಪ್ಪುಗುಂ ॥ 953 ॥

## ರಾಜ್ಯ.

ಇಱಿಹಂ ದಾಯದೊಳುಷ್ಣ ವಪ್ಪಿಮುಖದೊಳ್ ಯುದ್ಧಂ ದಿಟಂ ಮಲ್ಲರೊಳ್ ।
ಮಱಿಹಂ ಮಿಥ್ಯೆಯೊಳಾವಗಂ ನೆಗಲ್ದ. ಶಂಕಾಕುಳಂ ಪುಲ್ಲಿಯೊಳ್ ॥
ತೊಱಹಂ ಕ್ಷೀಣಮದಂಗಳೊಳ್ ಬಡತನಂ ಸ್ತ್ರೀಮಧ್ಯದೊಳ್ ತೀಱಗಂ ।
ದೆಱೆಕಂ ಗೋವಿನೊಳಲ್ಲದಿಲ್ಲ ಪೆಱತೇನಾರಯ್ವೊಡಾ ರಾಜ್ಯದೊಳ್ ॥ 954 ॥

## ಮುದುಹಾರುವ.

ಮಿನಿಮಿನಿಗಣ್ ತೆಱಂಟುದಲೆ ಜೋಲ್ದಿಹ ಮೆಯ್ತೊವಲಟ್ಟಿ ಪೊಟ್ಟೆ ಮಱ ।
ಗಿಸ ಪನಿ ಬಿರ್ದ ಪುರ್ವು ತೆರೆಗೊಂಡ ಮುಖಂ ನಡುಗುತ್ತುಮಿರ್ಪ ಕೈ ॥
ಕುನುಗಿದ ಬೆನ್ನು ಬೀಡೆವರಿದಿರ್ದ ಮಡಂ ಪೆರೆಗೊಂಡ ಕಾಲ್ಗಳಿಂ ।
ಮನಕೆ ವಿರಕ್ತಿಯಂ ಪಡೆದು ಮುಪ್ಪಿನ ಪಾರ್ವನದೊರ್ವನೊಪ್ಪಿದಂ ॥ 955 ॥

## ಸಂಸಾರ.

ಸುಡಲೀಸಂಸ್ಕೃತಿಯೆಂಬುದು । ಕಡಲಿನ ತೆರೆ ಮುಗಿಲ ನೆರವಿ ಮಂಜಿನ ಪುಂಜಂ ।
ಕುಡುಮಿಂಚಿನ ಸಿರಿ ಗಾಳಿಯ । ಸೊಡರ್ಗುಡಿ ಸುರಚಾಪದೆಸಕಮೆನೆ ನಚ್ಚುವರೇ ॥ 956 ॥

## ಎತ್ತು.

ಮೊನೆ ಮುಱಿದಿರ್ದ ಸೀಳ್ದ ಕೊನೆಗೋಡುಗಳಿಂ ಮಿಡಿಗೊಂಡ ಬಾಲದಿಂ ।
ಘನತರಮಾಗಿ ಜೋಲ್ವ ಗಳಕಂಬಳದಿಂ ತೆರೆಗೊಂಡ ಪುರ್ಬಿನಿಂ ॥
ತೊನೆವಿಣಿಯಿಂ ಭಯಂಕರಮನಿತ್ತು ಠಣಂಕರಿಸುತ್ತೆ ಬಂದುದೀ ।
ತನ ವೃಷಭೇಂದ್ರದಂತೆ ಮಲೆಯುತ್ತೆ ಮಹಾಬಳನೊಂದು ಶಾಕ್ವರಂ ॥ 957 ॥

## ಶಿವಕವಿದೇವ. ಸು. 1340.

ಈತನು ವೀರಶೈವಕವಿ; ಬಸವಪುರಾಣವನ್ನು ಬರೆದ **ಭೀಮಕವಿಯ** (1369) ತಂದೆ. ಇವನನ್ನು ಭೀಮಕವಿ "ವಿಮಳಸದ್ಗುರುಸೇವೆಯಲಿ ಜಂ। ಗಮಭಜನೆಯಲಿ ಲಿಂಗನಿಷ್ಠಾ। ಸಮತೆಯಲಿ ತನುಮನಧನಂಗಳನಿತ್ತಭವಭಕ್ತಿ। ಸಮಯವಾರ್ಧಿವಿವರ್ಧನೋಜ್ಜ್ವಲ। ಹಿಮಗು" ಎಂದು ಸ್ತುತಿಸಿದ್ದಾನೆ. ಕವಿಯೆಂದು ವಿಶೇಷಿಸಿ ಹೇಳಿರುವುದರಿಂದ ಇವನು ಏನಾದರೂ ಗ್ರಂಥವನ್ನು ಬರೆದಿರಬೇಕು; ನಮಗೆ ಅವುದೂ ದೊರೆತಿಲ್ಲ.

**ಬಸವಲಿಂಗನ** (ಸು. 1830) ಶರಣಬಸವರಗಳೆಕಂದದಲ್ಲಿ ಬಾಲಚಂದ್ರನಗರದ ಒಬ್ಬ ಶಿವಕವಿ ವಸ್ತುಕರೂಪವಾದ ಒಂದು ಬಸವಪುರಾಣವನ್ನು ಬರೆದಂತೆ ಹೇಳಿದೆ.[1] ಅಲ್ಲದೆ 'ಚೆನ್ನಬಸವಪುರಾಣದಲ್ಲಿ ಒಬ್ಬ ಶಿವಕವಿ ಬಾಯಿಬಿದರೆಯಲ್ಲಿ ಸುರಿತಾಳನೊಡನೆ ವಾದಿಸಿದಂತೆ "ವರಶಿವಕವೀಶನಂದಾಬಾಯಿಬಿದರೆಯಲಿ। ಸುರಿತಾಳನೊಡನೆ ವಾದಿಸಿ ಸತ್ತ ಕುದುರೆಗಂ। ಹರಣಮಂ ಪಡೆದು ಸುರಿತಾಳನ ಮಗಂ ಸಾಯಲವನ ಪರಣವನು ಪಡೆವಂ" ಎಂಬ ಪದ್ಯಭಾಗದಲ್ಲಿ[2] ಹೇಳಿದೆ. ಈ ಸುರಿತಾಳನು ಬಹಮನಿರಾಜ್ಯದ ತುರುಷ್ಕರಾಜನಾಗಿರಬಹುದು.

ಆದರೆ **ಭೀಮಕವಿಯ** ತಂದೆಗೆ **ದೇವ** ಎಂಬುದೇ ನಿಜವಾದ ಹೆಸರಾಗಿ ಶಿವಕವಿಯೆಂಬುದು ಬರಿಯ ವಿಶೇಷಣವಾಗಿ ಇದ್ದಂತೆ ತಿಳಿಯಬರುವುದರಿಂದ ಮೇಲೆ ಹೇಳಿದ ಈ ಇಬ್ಬರು ಕವಿಗಳೂ ತದ್ಭಿನ್ನರೆಂದು ಹೇಳಬೇಕಾಗಿದೆ.

---

## ಗುರುದೇವ. ಸು. 1350.

ಈತನು ಮಹಿಮ್ನಸ್ತೋತ್ರ, ಮಲ್ಹಣಸ್ತೋತ್ರ, ಮಲೆಯರಾಜಸ್ತೋತ್ರ, ಅನಾಮಯಸ್ತೋತ್ರ, ಹಲಾಯುಧಸ್ತೋತ್ರ, ಭೃಂಗಿಸ್ತವ ಇವುಗಳಿಗೆ ಕನ್ನಡ ವ್ಯಾಖ್ಯಾನವನ್ನು ಬರೆದಿದ್ದಾನೆ.

ಇವನು ವೀರಶೈವಕವಿ; ಮಲ್ಲಿಕಾರ್ಜುನಪಂಡಿತಾರಾಧ್ಯನ (ಸು. 1160) ವಂಶೋದ್ಭವನು. ಸಂಸ್ಕೃತದಲ್ಲಿ ಈತನು ಬರೆದಿರುವ ವೀರಶೈವಾಚಾರಪ್ರದೀಪಿಕೆಯಲ್ಲಿ ತನ್ನ ಪರಂಪರೆಯನ್ನು ಹೀಗೆ ಹೇಳಿಕೊಂಡಿದ್ದಾನೆ—

ದ್ರಾಕ್ಷಾರಾಮದ ಕೋಟಿಪಲ್ಯಾಖ್ಯದೇಶಿಕ; ಮಗ ಭೀಮಪಂಡಿತ, ಅವನ ಹೆಂಡತಿ ಗೌರಮಾಂಬೆ, ಇವರ ಮಗ ಮಲ್ಲಿಕಾರ್ಜುನಪಂಡಿತ, ಇವನು ವೆಲನಾಡುಚೋಳನ

1. Kittel's "Nagavarma's Prosody," LXXX.
2. ಕಾಂಡ 5, ಸಂಧಿ 9, ಪದ್ಯ 72.

ಆಸ್ಥಾನದಲ್ಲಿ ವಾದಿಗಳನ್ನು ಜಯಿಸಿದನು ; ಮಗ ಪಂಡಿತಾರಾಧ್ಯ ; ಮಗ ವೀರಾರಾಧ್ಯ; ತತ್ಪತ್ನೀಕಸಂಭೂತ ಗುರುಬಸವ ; ಮಕ್ಕಳು ಗಂಗಾಧರ, ಬಸವ ; ಬಸವನ ಮಕ್ಕಳು ಹಿರಿಯಾರ್ಯ, ಪಂಡಿತಾರ್ಯ ; ಪಂಡಿತಾರ್ಯನ ಮಗ ಗುರುಲಿಂಗ : ಮಕ್ಕಳು ಗುರುದೇವ, ಪಂಡಿತಾರ್ಯ, ಬಸವಾರಾಧ್ಯ, ಜಕ್ಕಾರಾಧ್ಯ.

ಈ ಗುರುದೇವನೇ ವ್ಯಾಖ್ಯಾಕಾರ. ವೀರಶೈವಾಚಾರಪ್ರದೀಪಿಕೆಯನ್ನು ಸಿದ್ಧದೇವನಿಗೋಸ್ಕರ ರಚಿಸಿದಂತೆ ಹೇಳುತ್ತಾನೆ. ಈ ಸಿದ್ಧದೇವನಾರೋ ತಿಳಿಯದು. ಮಲ್ಲಿಕಾರ್ಜುನಪಂಡಿತನಿಂದ 7 ನೆಯ ತಲೆಯವನಾದುದರಿಂದ ಇವನ ಕಾಲವು ಸುಮಾರು 1350 ಆಗಬಹುದು.

ಟೀಕೆಯ ಕೊನೆಯಲ್ಲಿ ಈ ಗದ್ಯವಿದೆ—

ಇತಿ ಶ್ರೀಮದ್ವೇದಾಗಮೋಪನಿಷತ್ಪುರಾಣೋಕ್ತಮಾರ್ಗಪ್ರವರ್ತನಪ್ರವೀಣ ಪಂಡಿತಾರಾಧ್ಯದೇವನಾಮಾಚಾರ್ಯವರ್ಯತನೂಭವಗುರುಲಿಂಗದೇವಾಹ್ವಯದೇಶಿಕೇಂದ್ರಪ್ರತೀಕೋದ್ಭವ ಗುರುದೇವಾಖ್ಯೇನ ಕರ್ಣಾಟಭಾಷಾಕೃತಾ ಟೀಕಾ ಪರಿಸಮಾಪ್ತಾ.

---

## ಪುಷ್ಪದಂತ. ಸು. 1350.

ಧರ್ಮನಾಥಪುರಾಣವನ್ನು ಬರೆದ ಮಧುರನು (ಸು. 1385) ಕರ್ಣಾಟಕ ಕವಿಸ್ತವಾವಸರದಲ್ಲಿ ಒಬ್ಬ ಪುಷ್ಪದಂತಕವಿಯನ್ನು ಸ್ತುತಿಸಿದ್ದಾನೆ. ಈ ಕವಿ ಆವ ಗ್ರಂಥವನ್ನು ಬರೆದಿದ್ದಾನೆಯೋ ತಿಳಿಯದು. ಇವನು ಮಧುರನಿಗೆ ಹಿಂದೆ ಇದ್ದನೆಂಬುದು ಸ್ಪಷ್ಟವಾಗಿದೆ; ಎಷ್ಟು ಹಿಂದೆ ಇದ್ದನೋ ತಿಳಿಯಲಾಗುವುದಿಲ್ಲ; ಸುಮಾರು 1350 ರಲ್ಲಿ ಇದ್ದಿರಬಹುದೆಂದು ಊಹಿಸುತ್ತೇವೆ.

---

## ಬಾಹುಬಲಿ ಪಂಡಿತ. 1352.

ಈತನು ಧರ್ಮನಾಥಪುರಾಣವನ್ನು ಬರೆದಿದ್ದಾನೆ. ನಮಗೆ ಈ ಗ್ರಂಥದ ಕೊನೆಯ ಓಲೆ ಮಾತ್ರ ದೊರೆತಿರುವುದರಿಂದ ಕವಿಯ ವಿಷಯವಾಗಿಯೂ ಗ್ರಂಥದ ವಿಷಯವಾಗಿಯೂ ವಿಶೇಷಾಂಶಗಳನ್ನು ತಿಳಿಸಲು ಅವಕಾಶವಿಲ್ಲದೆ ಇದೆ. ಈತನು ಜೈನಕವಿ ; ನಯಕೀರ್ತಿಯ ಶಿಷ್ಯನು. ಈ ಗ್ರಂಥವನ್ನು ಶಕ 1274 ನಂದನದಲ್ಲಿ, ಎಂದರೆ 1352 ರಲ್ಲಿ, ಬರೆದಂತೆ

ಸ್ವಸ್ತಿ ಶ್ರೀಶಕವತ್ಸರಂ ಸಲೆ ಚತುಸ್ಸಪ್ತದ್ವಯೈಕಾಂಕವಿ ।
ನ್ಯಸ್ತಂ ನಂದನವರ್ಷದಲ್ಲಿ ಮಧುಮಾಸಶ್ವೇತಪಕ್ಷಾಷ್ಟಮೀ ॥

ವಿಸ್ತಾರೀಕೃತ ಸೋಮವಾರದೊಳಿದಂ ಸಂಪೂರ್ಣಮಂ ಮಾಡಿದಂ ।
ಪ್ರಸ್ತುತ್ಯಪ್ರತಿಭಾಪರಂ ಭುಜಬಲಿಪ್ರಖ್ಯಾತಯೋಗೀಶ್ವರಂ ॥

ಎಂಬ ಪದ್ಯದಿಂದ ತಿಳಿಯುತ್ತದೆ. ಈತನಿಗೆ ಉಭಯಭಾಷಾಕವಿಚಕ್ರವರ್ತಿ ಎಂಬ ಬಿರುದಿದ್ದಂತೆ ತೋರುತ್ತದೆ. ತನ್ನ ಗುಣಾದಿಗಳನ್ನು ಈ ಪದ್ಯದಲ್ಲಿ ಹೇಳಿಕೊಂಡಿದ್ದಾನೆ—

ಪಿರಿದುಂ ಸಂತೋಷಮಂ ತಾಳ್ದಿದನತಿಶಯಮತ್ಕಾವ್ಯಮಂ ಮಾಡಿ ತೇಜ ।
ಸ್ಫುರಣಂ ವಿದ್ಯಾಸಮುದ್ರಾಮೃತಮಯಕಿರಣಂ ವಂದಿಮಂದಾರರೂಪಂ ॥
ಸ್ಮರರೂಪಂ ನೀರಜಂ ಬಾಹುಬಲಿ ಸುಕವಿರಾಜಂ ವಿಪಶ್ಚಿತ್ಸಹಾಯಂ ।
ಧರಣೀಶೋಲ್ಲಾಲನೀಯಂ ಘನಗುಣನಿವಹಂ ಚಾತುರೀಜನ್ಮಗೇಹಂ ॥

ಇವನ ಗ್ರಂಥ

## ಧರ್ಮನಾಥಪುರಾಣ.

ಇದು ಚಂಪೂರೂಪವಾಗಿದೆ; 16 ಆಶ್ವಾಸಗಳಾಗಿ ಭಾಗಿಸಲ್ಪಟ್ಟಿದೆ. ಇದರಲ್ಲಿ 15 ನೆಯ ತೀರ್ಥಕರನಾದ ಧರ್ಮನಾಥನ ಚರಿತವು ಹೇಳಿದೆ. ಆಶ್ವಾಸಗಳ ಅಂತ್ಯದಲ್ಲಿ ಈ ಗದ್ಯವಿದೆ—

ಇದು ಸಕಲಭುವನಜನವಿನೂಯಮಾನಾನೂನಮಹಿಮಾಮಾನನೀಯ ಪರಮಜಿನಸಮಯಕಮಳಿನೀಕಳಹಂಸಾಯಮಾನ ಶ್ರೀಮನ್ನಯಕೀರ್ತಿದೇವಪ್ರಸಾದಸಂಪಾದಪಾದನಿಧಾನದೀಪವರ್ತಿಯುಭಯಭಾಷಾಕವಿಚಕ್ರವರ್ತಿ ಬಾಹುಬಲಿಪಂಡಿತದೇವಪರಿನಿರ್ಮಿತಮಪ್ಪ ಧರ್ಮನಾಥಪುರಾಣದೊಳ್.

---

## ಕೇಶವವರ್ಣಿ. 1359.

ಈತನು **ಗೊಮ್ಮಟಸಾರ, ಅಮಿತಗತಿಶ್ರಾವಕಾಚಾರ** ಇವುಗಳಿಗೆ ಕರ್ಣಾಟಕವೃತ್ತಿಯನ್ನು ಬರೆದಿದ್ದಾನೆ. **ದೇವಚಂದ್ರನು**(1838) **ರಾಜಾವಳೀ** ಕಥೆಯಲ್ಲಿ ಇವನು ಸಾರತ್ರಯಕ್ಕೂ ಕನ್ನಡವ್ಯಾಖ್ಯಾನಗಳನ್ನು ಬರೆದಿರುವಂತೆ ಹೇಳುತ್ತಾನೆ. **ಮಂಗರಾಜನು** 1 (ಸು. 1360) ಈತನನ್ನು 'ಸಾರತ್ರಯವೇದಿ' ಎಂದು ಹೇಳುವುದರಿಂದಲೂ ಕವಿಯೂ ಸಾರತ್ರಯವೇದಿ ಎಂದು ಹೇಳಿಕೊಂಡಿರುವುದರಿಂದಲೂ **ದೇವಚಂದ್ರನು** ಹೇಳುವುದು ನಿಶ್ಚಯವಾಗಿರಬಹುದೆಂದು ತೋರುತ್ತದೆ. ಈತನು ಜಿತೇಂದ್ರಮಾಲೆಗೂ ಕನ್ನಡ ಟೀಕೆಯನ್ನು ಬರೆದಿರುವಂತೆ ತಿಳಿಯುತ್ತದೆ.

ಇವನು ಜೈನಕವಿ; ಅಭಯಸೂರಿಸಿದ್ಧಾಂತಚಕ್ರವರ್ತಿಯ ಶಿಷ್ಯನು. ಗೊಮ್ಮಟಸಾರದ ಕರ್ಣಾಟಕವೃತ್ತಿಯನ್ನು ಧರ್ಮಭೂಷಣಭಟ್ಟಾರಕನ ಆಜ್ಞೆಯಿಂದ ಶಕವರ್ಷ 1281 ರಲ್ಲಿ—ಎಂದರೆ 1359 ರಲ್ಲಿ, ಪೂರೈಸಿದಂತೆ ಈ ಪದ್ಯಗಳಿಂದ ತಿಳಿಯುತ್ತದೆ:—

ಪೊಣರ್ದಿರ್ದೀಧೂರ್ತಜನೋಪಸರ್ಗಮನಿಶಂ ಬೆಂಬತ್ತೆ ಬೆಂಬೀೞದಾ ।
ನೊಣರ್ದೆಂ ಗೊಮ್ಮಟಸಾರವೃತ್ತಿಯನಿದಂ ಕರ್ಣಾಟವಾಕ್ಯಂಗಳಿಂ ॥
ಪ್ರಣುತರ್ ಧೀಧನರುಂ ಬಹುಶ್ರುತರಿದಂ ತಿರ್ದಿಂ ಬುಧರ್ ಧರ್ಮಭೂ ।
ಷಣಭಟ್ಟಾರಕದೇವರಾಜ್ಞೆಯಿನಿದಂ ಸಂಪೂರ್ಣಮಂ ಮಾಡಿದೆಂ ॥
ನೆರೆದು ಶಕಾಬ್ದಮಿಂದುವಸುನೇತ್ರಶಶಿಪ್ರಮಿತಂಗಳಾಗಿ ಸಂ ।
ದಿರುತಿರೆಯುಂ ವಿಕಾರಿವರವತ್ಸರಚೈತ್ರವಿಶುದ್ಧಪಕ್ಷಭಾ ॥
ಸುರತರಪಂಚಮೀದಿವಸದಂದಿದು ಗೊಮ್ಮಟಸಾರವೃತ್ತಿಭಾ ।
ಸ್ಕರನೊಗೆದಂ ವಿನೇಯಜನಹೃತ್ಸರಸೀಜಮನುಳ್ಳಲರ್ಚುತುಂ ॥

ಈ ಗೊಮ್ಮಟಸಾರವು, ಜೀವಕಾಂಡ ಕರ್ಮಕಾಂಡ ಎಂದು ಎರಡು ಭಾಗವಾಗಿದೆ. ವೃತ್ತಿಯ ಕೊನೆಯಲ್ಲಿ ಈ ಗದ್ಯವಿದೆ:—

ಇಂತು ಭಗವದರ್ಹತ್ಪರಮೇಶ್ವರಚಾರುಚರಣಾರವಿಂದದ್ವಂದ್ವವಂದನಾನಂದಿತಪುಣ್ಯಪುಂಜಾಯಮಾನ ಶ್ರೀಮದ್ರಾಜರಾಯಗುರುಮಂಡಲಾಚಾರ್ಯ ಮಹಾವಾದವಾದೀಶ್ವರರಾಯವಾದಿಪಿತಾಮಹ ಸಕಲವಿದ್ವಜ್ಜನಚಕ್ರವರ್ತಿ ಶ್ರೀಮದಭಯಸೂರಿಸಿದ್ಧಾಂತಚಕ್ರವರ್ತಿಶ್ರೀಪಾದಪಂಕಜರಜೋರಂಜಿತಲಲಾಟಪಟ್ಟಂ ಶ್ರೀಕೇಶವವಿರಚಿತ ಗೊಮ್ಮಟಸಾರಕರ್ಣಾಟಕವೃತ್ತಿಜೀವತತ್ವಪ್ರದೀಪಿಕೆಯೊಳ್.

ಅಮಿತಗತಿಶ್ರಾವಕಾಚಾರಕರ್ಣಾಟಕವೃತ್ತಿ 15 ಪರಿಚ್ಛೇದಗಳಾಗಿ ಭಾಗಿಸಿದೆ. ಕೊನೆಯಲ್ಲಿ—

ಇಂತು ಪರಮಜಿನಸಮಯಸಿದ್ಧಾಂತಪೀಯೂಷಾರ್ಣವವರ್ಧಿಷ್ಣುಕುಮುದಬಾಂಧವ ಶ್ರೀಮದಭಯಸೂರಿಸಿದ್ಧಾಂತಚಕ್ರವರ್ತಿಶ್ರೀಪಾದಪದ್ಮಾರಾಧಕನಪ್ಪ ಸಾತತ್ರಯವೇದಿ ಕೇಶಣ್ಣವಿರಚಿತಾಮಿತಗತಿಶ್ರಾವಕಾಚಾರವೃತ್ತಿಯೊಳ್

ಎಂಬ ಗದ್ಯವಿದೆ.

---

## ಮಂಗರಾಜ.

### ವಿಚಾರಂ.

ಈ ಹೆಸರಿನವರು ಮೂವರು ಕವಿಗಳಿದ್ದಂತೆ ತಿಳಿಯಬರುತ್ತದೆ. ಮೊದಲನೆಯವನು ಖಗೇಂದ್ರಮಣಿದರ್ಪಣವನ್ನು ಬರೆದಿದ್ದಾನೆ. ಇವನ ಕಾಲಕ್ಕೆ ಈಚೆ ಇದ್ದವನಾದುದರಿಂದ

ಅಭಿನವಮಂಗರಾಜ ಎಂಬ ಹೆಸರನ್ನು ಇಟ್ಟುಕೊಂಡ ಎರಡನೆಯವನು ಮಂಗರಾಜನಿಘಂಟು ಅಥವಾ ಅಭಿನವನಿಘಂಟು ಎಂಬ ಕೋಶವನ್ನು ಬರೆದಿದ್ದಾನೆ. ಮೂರನೆಯವನು ಸಮ್ಯಕ್ತ್ವಕೌಮುದಿ, ಜಯನೃಪಕಾವ್ಯ, ನೇಮಿಜಿನೇಶಸಂಗತಿ, ಪಾಕಶಾಸ್ತ್ರ, ಪ್ರಭಂಜನಚರಿತೆ, ಶ್ರೀಪಾಲಚರಿತೆ ಮೊದಲಾದ ಗ್ರಂಥಗಳನ್ನು ಬರೆದಿದ್ದಾನೆ.

ಮೊದಲನೆಯವನು ಹೊಯ್ಸಳದೇಶದ ದೇವಳಿಗೆಯನಾಡಿನಲ್ಲಿಯ ಮುಗುಳಿಯಪುರದ ಅಧಿಪನೆಂದೂ ಪೂಜ್ಯಪಾದನ ಶಿಷ್ಯನೆಂದೂ ಹೇಳಿಕೊಂಡಿದ್ದಾನೆ. "ಧರೆಗನುರಾಗಮಂ ಹರಿಹರಕ್ಷಿತಿಪಂ ಕುಡುತಿರ್ಪನೊಲ್ಮೆಯಿಂ" ಎಂದು ಹೇಳುವುದರಿಂದ ಈತನು ವಿಜಯನಗರದ ಹರಿಹರರಾಜನ ಕಾಲದಲ್ಲಿ ಇದ್ದಂತೆ ತಿಳಿಯುತ್ತದೆ.

ಎರಡನೆಯವನು ಕಮ್ಮೆಕುಲದ ವಿಶ್ವಾಮಿತ್ರಗೋತ್ರದ ರೆವಮ್ಮಾರ್ಯರಾಮರಸನಮಗನು. ಶಶಿಪುರದ ಸೋಮೇಶ್ವರನ ವರಪ್ರಸಾದದಿಂದ ಗ್ರಂಥವನ್ನು ಬರೆದಂತೆ ಹೇಳುತ್ತಾನೆ. ತನ್ನ ನಿಘಂಟುವನ್ನು ಶಕ 1320 ರಲ್ಲಿ—ಎಂದರೆ 1398 ರಲ್ಲಿ, ಬರೆದಂತೆ ಹೇಳಿದ್ದಾನೆ.

ಮೂರನೆಯವನು ಹೊಯ್ಸಳದೇಶದ ಹೊಸವೃತ್ತಿಯ ನಾಡಿನಲ್ಲಿರುವ ಕಲ್ಲಹಳ್ಳಿಯ ಅಧಿಪನೆಂದೂ ಮಹಾಮಂಡಲೇಶ್ವರಚಂಗಾಳ್ವಭೂಮಿಪಾಲನ ಸಚಿವರ ವಂಶದಲ್ಲಿ ಹುಟ್ಟಿದವನೆಂದೂ ಕಲ್ಲಹಳ್ಳಿಯ ಪ್ರಭುವಾದ ವಿಜಯೇಂದ್ರನ ಮಗನೆಂದೂ ತನ್ನ ಗ್ರಂಥಗಳಲ್ಲಿ ಹೇಳಿಕೊಂಡಿದ್ದಾನೆ ಸಮ್ಯಕ್ತ್ವಕೌಮುದಿಯನ್ನು ಶಕ 1431 ರಲ್ಲಿ—ಎಂದರೆ 1508 ರಲ್ಲಿ, ಬರೆದಂತೆ ಹೇಳಿದ್ದಾನೆ.

ಅಲ್ಲದೆ 1432 ರಲ್ಲಿ ಹುಟ್ಟಿದ ಶ್ರ. ಬೆ. 258 ನೆಯ ಸಂಸ್ಕೃತಶಾಸನವನ್ನು ಒಬ್ಬ ಮಂಗರಾಜನು ಬರೆದಂತೆ ಆ ಶಾಸನದ ಅಂತ್ಯಭಾಗದ ಪದ್ಯದಿಂದ [1] ತಿಳಿಯುತ್ತದೆ. ಈತನೂ ಕನ್ನಡದಲ್ಲಿ ಬರೆದಿದ್ದರೂ ಇರಬಹುದು.

---

## ಮಂಗರಾಜ I. ಸು. 1360.

ಈತನು ಖಗೇಂದ್ರಮಣಿದರ್ಪಣವನ್ನು ಬರೆದಿದ್ದಾನೆ. ಇವನು ಜೈನಕವಿ; ಹೊಯ್ಸಳರಾಜ್ಯದಲ್ಲಿಯ ದೇವಳಿಗೆಯೆಂಬ ನಾಡಿನ ಮುಖ್ಯಪಟ್ಟಣವಾದ ಮುಗುಳಿಯಪುರದ ವಿಭು. ಇವನ ಗುರು ಪೂಜ್ಯಪಾದಮುನಿ, ಹೆಂಡತಿ ಕಾಮಲತೆ. ಇವನಿಗೆ ಮೂವರು ಪುತ್ರರಿದ್ದಂತೆ ತಿಳಿಯುತ್ತದೆ.

ಈತನು "ಧರೆಗನುರಾಗಮಂ ಹರಿಹರಕ್ಷಿತಿಪಂ ಕುಡುತಿರ್ಪನೊಲ್ಮೆಯಿಂ" ಎಂಬುದರಿಂದ ವಿಜಯನಗರದ ರಾಜನಾದ ಹರಿಹರನ (1336—1353) ಕಾಲದಲ್ಲಿದ್ದಂತೆ ತಿಳಿಯುತ್ತದೆ; ಕೇಶವವರ್ಣಿಯನ್ನು (1359) ಸ್ಮರಿಸುವುದ

---

ಪ್ರಬಂಧಧ್ವನಿಸಂಬಂಧಾ ಸದ್ರಾಗೋತ್ಪಾದನಕ್ಷಮಾ ।
ಮಂಗರಾಜಕವೇರ್ವಾಣೀ ವಾಣೀವೀಣಾಯತೇ ತರಾಂ॥

ರಿಂದ ಆವನಿಗೆ ಸಮಕಾಲದಲ್ಲಿಯೋ ಸ್ವಲ್ಪ ಈಚೆಯೋ ಇದ್ದಿರಬೇಕು; ಸುಮಾರು 1360 ರಲ್ಲಿ ಇದ್ದಿರಬಹುದೆಂದು ತೋರುತ್ತದೆ.[1]

ಈತನಿಗೆ ಸುಲಲಿತಕವಿಪಿಕವಸಂತ, ವಿಭುವಂಶಲಲಾಮ, ಕವಿಜನೈಕಮಿತ್ರ, ಅಗಣಿತಗುಣನಿಳಯ, ಅಖಿಳವಿದ್ಯಾಜಲನಿಧಿ, ಪಂಚಗುರುಪದಾಂಬುಜಭೃಂಗ ಎಂಬ ಬಿರುದುಗಳಿದ್ದಂತೆ ತೋರುತ್ತದೆ. ಅಲ್ಲದೆ ಕೆಲವು ಪದ್ಯಗಳಲ್ಲಿ ಮನೋಹರ ಚರಿತ, ಕವಿಪದ್ಮಭಾಸ್ಕರ, ಸುಜನವರೇಣ್ಯ, ಬುಧಮಿತ್ರ, ಗುಣಗಣನಿಳಯ, ಅತಿ ಹಿತವಚನ, ಅಹಿಮದಗರುಡ, ಸಾಹಿತ್ಯವೈದ್ಯವಿದ್ಯಾಂಬುನಿಧಿ, ವಿದಗ್ಧಾಭರಣ, ಭಿಷಗ್ವರತಿಲಕ, ಸಕಲಸುಜನಸೇವ್ಯ, ವಿದಗ್ಧಚೂಡಾರತ್ನ, ವಿವೇಕಚೂಡಾರತ್ನ, ಮೊದಲಾದ ಸಂಬೋಧನಗಳು ದೊರೆಯುತ್ತವೆ. ಆರನ್ನು ಸಂಬೋಧಿಸಿ ಈ ಗ್ರಂಥ ವನ್ನು ಹೇಳಿರಬಹುದೋ ತಿಳಿವುದಿಲ್ಲ. ಆದರೆ ಮೇಲೆ ಹೇಳಿದ ಇವನ ಬಿರುದು ಗಳಿಂದಲೂ ಕವಿಗಳು ಸ್ವಕೃತಪದ್ಯಗಳ ಕೊನೆಯಲ್ಲಿ ತಮ್ಮ ಹೆಸರುಬಿರುದುಗಳನ್ನು ಹೀಗೆ ಹೇಳಿಕೊಳ್ಳುವ ಸಂಪ್ರದಾಯವಿರುವುದರಿಂದಲೂ ಈ ಸಂಬೋಧನಗಳು ಕವಿಗೆ ಅನ್ವಯಿಸಬಹುದೆಂದು ತೋರುತ್ತದೆ.

ತನ್ನ ಗುಣಾದಿಗಳನ್ನು ಈ ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ:—

ಶ್ರೀಜಿನಪಾದಪದ್ಮಮಧುಪಂ ಪರಮಾತ್ಮವಿಲೀನಚೇತನಂ ।
ಭೋಜದಳೇಕ್ಷಣಂ ಪಗಮಲಕ್ಷಣಲಕ್ಷಿತದಿವ್ಯದೇಹದಿಂ ॥
ರಾಜಸಮಾನನಿಂದ್ರವರವೈಭವಸಜ್ಜನಪಾರಿಜಾತನೆಂ।
ದೀಜಗಮುಜ್ತಯಿಂದೆ ಮಿಗೆ ಬಣ್ಣಿಸುಗುಂ ವಿಭುಮಂಗರಾಜನಂ ॥

ಸುರುಚಿರವೃತ್ತರತ್ನಸದನಂ ಜನರಕ್ಷಣದಕ್ಷನಬ್ಜಮಂ ।
ಧರೆಯ ಸುಜನ್ಮಭೂಮಿ ಪುರುಷೋತ್ತಮಸಂಗತನಾವಗಂ ಶುಭಾ ॥
ಕರವಿಲಸತ್ಸರಸ್ವತಿ ನಿರಂತರಮಪ್ಪುದಜಾಂಡೆ ಸಿಂಧುಗಂ ।
ದೊರೆ ಮುಗುಳೀಪುರಪ್ರಭು ವಿದಗ್ಧಶಿಖಾಮಣಿ ಮಂಗಳೋತ್ತಮಂ ॥

ಇವನ ಗ್ರಂಥ

## ಖಗೇಂದ್ರಮಣಿದರ್ಪಣ.

ಇದು ಕಂದವೃತ್ತರೂಪವಾದ ವಿಷವೈದ್ಯಗ್ರಂಥ; 16 ಅಧಿಕಾರಗಳಾಗಿ ಭಾ ಗಿಸಲ್ಪಟ್ಟಿದೆ. ವಿದ್ವದ್ಗೋಷ್ಠಿಯಲ್ಲಿದ್ದಾಗ ಒಂದು ದಿವಸ "ಕನ್ನಡದಿಂ ಸಮಸ್ತಜನ ಗೋಚರಮಪ್ಪವೊಲಣ್ಣ ಪೇಟ್ಟುದು ನೀಂ ನಮಗೆಂದು ಭವ್ಯರೊಸೆದಟ್ಟಿಯೊಳ್

1. ಶ್ರ. ಬೆ. 253 ನೆಯ ಶಾಸನವು (1422) ಒಬ್ಬ ಮಂಗಪದಂಡನಾಥನನ್ನು ಸ್ತುತಿಸುತ್ತದೆ. ಇವನು ಬೇರೆ ಮನುಷ್ಯನೆಂದು ತೋರುತ್ತದೆ.

ಬೆಸಗೊಳೆ" ಈ ಕೃತಿಯನ್ನು ಮಾಡಿದೆನೆಂದು ಹೇಳುತ್ತಾನೆ. ವೈದ್ಯಗ್ರಂಥವನ್ನು ಬರೆದುದಕ್ಕೆ ಕಾರಣವನ್ನೂ ಭೇಷಜವು ಮೋಕ್ಷಸಾಧನವೆಂಬಂಶವನ್ನೂ ಈ ಭಾಗದಲ್ಲಿ ಹೇಳಿದ್ದಾನೆ:—

ಮರನಂ ಗಾಳಿಯು ದೂಳಿಯುಂ ರಜನಿಯುಂ ನೀರಾಟಮುಂ ಚೀಟಮುಂ ।
ಸುರೆಯುಂ ಸೂಳೆಯುರಂ ಏಟಾಟವಿಕರಂ ಕೊಂಡಾಡಿ ಬೆಂಡಾಗದೀ ॥
ಧರೆಯೊಳ್ ಸರ್ವಜನೋಪಕಾರಮೆನಲೀಮಂತ್ರೌಷಧಿವ್ರಾತಮುಂ ।
ನಿರುತಂ ಭಾವಿಸಿ ಪೇಟ್ದ ಮಾನವನೆ ತಾಂ ದೇವಂ ಧರಾಚಕ್ರದೊಳ್ ॥

ಎಂದಶೇಷಬುಧಜನೋಪಕಾರಾರ್ಥಂ ಸ್ಥಾವರಜಂಗಮಕೃತ್ರಿಮಪ್ರಭೃತಿ ನಾನಾವಿಷಾಪಹರಣ ಕಾರಣಮಪ್ಪ ಗ್ರಂಥಮಂ ಪೇೞಲೊಡರ್ಚಿದೆಂ.

ನರರ್ಗರುಜತೆ ಭೇಷಜದಿಂ । ದರುಜತೆಯಿಂ ದೇಹ ದೇಹದಿಂದಂ ಜ್ಞಾನಂ ।
ಪರಮಜ್ಞಾನದೆ ಮೋಕ್ಷಂ । ದೊರೆಕೊಳ್ಗುಮದೆಂದು ಪೇೞ್ದಪೆಂ ಭೇಷಜಮಂ ॥

ವೈದ್ಯಗ್ರಂಥಗಳನ್ನು ಬರೆದಿರುವ ಆರ್ಯರ ಹಲವು ಮತಗಳಲ್ಲಿ ತನಗೆ ತಿಳಿದು ವನ್ನು ಸಂಗ್ರಹಿಸಿ ಬರೆದುದಾಗಿ ಹೇಳುತ್ತಾನೆ. ಈ ಗ್ರಂಥದಲ್ಲಿ ಸ್ಥಾವರವಿಷಪ್ರಕ್ರಿಯೆಯ ಭಾಗವನ್ನು ಪೂಜ್ಯಪಾದನ ವೈದ್ಯಗ್ರಂಥದಿಂದ ಸಂಗ್ರಹಿಸಿರುವಂತೆ ಈ ಪದ್ಯದಲ್ಲಿ ಹೇಳುತ್ತಾನೆ :—

ಪರಜನವಚನಾಂಭೋರಾಶಿಯೊಳ್ ತಮ್ಮ ಧೀಮಂ ।
ದರಸುಮಧನಜಾತಂ ವೈದ್ಯಶಾಸ್ತ್ರಾಮೃತಂ ತ ॥
ದ್ವರಮುನಿಪತಿಯಪ್ಪೀಪೂಜ್ಯಪಾದೋಕ್ತಿಯೊಳ್ ಸ್ಥಾ ।
ವರವಿಷಹರಮಂ ಸಂಕ್ಷೇಪದಿಂದೊಪ್ಪೆ ಪೇೞ್ವೆಂ ॥

ಈ ಗ್ರಂಥದಲ್ಲಿ ಪ್ರತಿಪಾದಿತವಾದ ವಿಷಯಗಳು ಕೆಳಗಣ ಪದ್ಯಗಳಲ್ಲಿ ಹೇಳಿವೆ :—

ಉರಗಮೃಗಮೂಖಿ ವೃಶ್ಚಿಕ । ಸುರೆ ಕೀಟಕಮುಂ ಕುಧಾನ್ಯತಂಬುಲಕನಕಂ ।
ನಿರುಪಮಿತಕೃತ್ರಿಮಂಗಳ್ । ಪರಿಕಿಪೊಡಿವು ದಶವಿಧಂ ವಿಷಂಗಳೆನಿಕ್ಕುಂ ॥

ಇವಱೊಳ್,

ಸ್ಥಾವರಜಂಗಮಕೃತ್ರಿಮ । ಮಾವಾವ ವಿಷಕ್ಕೆ ತತ್ಪ್ರತೀಕಾರಮುಮಂ ।
ಜೀವಹಿತಮಪ್ಪುದಂ ಪರಿ । ಭಾವಿಸಿ ಪೇೞ್ವೆಂ ಜನಾಗಮೋಕ್ತಕ್ರಮದಿಂ ॥

ಗ್ರಂಥಾವತಾರದಲ್ಲಿ ಕವಿ ಪಾರ್ಶ್ವನಾಥನನ್ನು ಸ್ತುತಿಸಿದ್ದಾನೆ. ಬಳಿಕ ಸಿದ್ಧಾದಿಗಳು, ಸರಸ್ವತಿ, ಪದ್ಮೆ, ಗಣಧರರು ಇವರನ್ನು ಸ್ಮರಿಸಿ ಸಮಂತಭದ್ರನಿಂದ ಕೇಶವವರ್ಯನವರೆಗೆ[1] ಗುರುಗಳನ್ನು ಕ್ರಮವಾಗಿ ಸ್ತುತಿಸಿದ್ದಾನೆ.

ಆಶ್ವಾಸಗಳ ಕೊನೆಯಲ್ಲಿ ಈ ಗದ್ಯವಿದೆ—

ಇದು ಸಕಲವಿದಮಲಜಿನೇಂದ್ರೋಕ್ತಸಿದ್ಧಾಂತಪಯಃಪಯೋಧಿಪಾರಗ ಶ್ರೀಪೂಜ್ಯಪಾದಮುನೀಂದ್ರಚಾರುಚರಣಾರವಿಂದಗಂಧಗುಣಾನಂದಿತಮಾನಸಂ ಶ್ರೀಮದಖಿಳಕಳಾಗಮೋತ್ತುಂಗ ಮಂಗವಿಭುವಿರಚಿತಮಪ್ಪ ಖಗೇಂದ್ರಮಣಿದರ್ಪಣದೊಳ್.

ವಿಷಯವು ವೈದ್ಯವಾದರೂ ಪದ್ಯಗಳು ಲಲಿತವಾಗಿಯೂ ಧಾರಾಳವಾಗಿಯೂ ಇವೆ. ಬಂಧವನ್ನು ನೋಡಿದರೆ ಈತನು ಪ್ರೌಢಕವಿಯೆಂಬುದಕ್ಕೆ ಅಡ್ಡಿಯಿಲ್ಲ. ಈತನ ಬಂಧದ ವಿಷಯವಾಗಿ ಈ ಪದ್ಯವು ದೊರೆಯುತ್ತದೆ:—

ಪ್ರಾಸಂ ಪದಬಂಧಮನು । ಪ್ರಾಸಂ ಯಮಕಂ ರಸಾನುಭಾವಂ ಸಾದರ್ಾ ।
ದೇಸೀಯಂ ಗಣನಿಯಮಂ । ಭಾಸುರದಿಂ ಮಂಗನುಸಿರ್ವ ಕವಿತೆಗೆ ಸಾಜಂ ॥

ಈ ಸ್ತುತಿಯನ್ನು ನೋಡಿದರೆ ಈತನು ಬೇರೆ ಗ್ರಂಥಗಳನ್ನೂ ಬರೆದಿರಬಹುದೆಂದು ತೋರುತ್ತದೆ. ನಮಗೆ ಅವುವೂ ದೊರೆತಿಲ್ಲ.

ಈ ಗ್ರಂಥದಿಂದ ಚಿಕಿತ್ಸೆ ಮೊದಲಾದ ವಿಷಯಗಳನ್ನು ಹೇಳುವ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

### ಓಷಧಿಯ ಅವಯವಗಳ ಗುಣತಾರತಮ್ಯ.

ಪ್ರಸವಕ್ಕೆ ಪತ್ರ ಪತ್ರ । ಕ್ಕೆಸೆವ ಫಲಂ ಫಲಕೆ ವಲ್ಲಿ ವಲ್ಲಿಗೆ ಪಣ್ಣಂ ।
ತಸದೃಶದ ಪಣ್ಗೆ ಬೇರ್ಗಳ್ । ವಿಶೇಷತರವೀರ್ಯವೃದ್ಧಿಯಕ್ಕುಂಟುಗುಣಂ ॥ 958 ॥

### ಸದ್ವೈದ್ಯ.

ಸ್ಥಿರತರಬುದ್ಧಿ ಭಾವಯುತನನ್ವಯಶುದ್ಧನನೂನಮೂರ್ತಿ ಸ ।
ತ್ಪುರುಷನನೂನವಾಕ್ಯನಮಲಾಂಗನಶುತ್ತಿತಕರ್ಮನಾಗಳುಂ ॥
ಪರಹಿತವೃತ್ತನೊಳ್ಪದನುದಾರಗಭೀರಗುಣಾಢ್ಯನಪ್ಪವಂ ।
ಧರೆಗೆ ಭಿಷಗ್ವರಾಗ್ರಣಿಯೆನಿಪ್ಪನತಂಪ್ರನವದ್ಯವರ್ಜಿತಂ ॥ 959 ॥

### ವಿಷದೋಷದ ಲಕ್ಷಣ.

ಅತಿಸಾರಂ ಮೂರ್ಛೆ ದಾಹಂ ಮತಿವಿಕಳತೆಯುಂ ಭ್ರಾಂತಿ ಹೃಚ್ಛೂಲೆ ತಾಪಂ ।
ಗತಸತ್ವಂ ನೇತ್ರಮಾಂದ್ಯಂ ಪ್ರಕೃತಿವಿಕೃತಿಯುಂ ಗದ್ಗದಧ್ವಾನಕಂಠಂ ॥

---

1. ಸಮಂತಭದ್ರ, ಪೂಜ್ಯಪಾದ ವೀರಸೇನ, ಕೊಂಡಕುಂದ, ಪೂಜ್ಯಪಾದ, ಭಾನುಕೀರ್ತಿಮಲಧಾರಿಮುನಿ, ಸೋಮ, ಧರ್ಮಭೂಷಣ, ಸ್ವಗುರು ಪೂಜ್ಯಪಾದಮುನಿ, ಅಭಿನವಚಾರುಕೀರ್ತಿ, ಲಕ್ಷ್ಮೀಸೇನ, ಮಾಣಿಕ್ಯನಂದಿ, ಶಾಸ್ತ್ರತ್ರಯವೇದಿ ಕೇಶವಸ್ವಾಮಿ.

ಗತಿಭಂಗಂ ಶ್ವಾಸಕಾಸಂ ರುಧಿರವಮನಮುಂ ಸ್ವೇದಮತ್ಯಂತಖೇದಂ ।
ಧೃತಕೋಪಂ ತಾಮಿವೆಲ್ಲಂ ವಿಷಮುತರಮೆನಿಪ್ಪಂಗಚಿಹ್ನಂಗಳಕ್ಕುಂ ॥ 960 ॥

## ಚಿಕಿತ್ಸೆ.

ವಮನೋಪವಾಸಮಂತ್ರ । ಕ್ರಮದಿಂ ಮಾಡಿಸಿ ಮಲಾಪಹರಣಮನಿಂಬಿಂ ।
ಸಮನಿಸಿ ಬಳ್ಳಿಕ್ಕಮುವರ್ಗಂ । ದು ಮಹಾಭೇಷಜಮನೀಯೆ ವಿಷಹರಮಕ್ಕುಂ ॥ 961 ॥

## ವಮನಪ್ರಯೋಗಾದಿ.

ಮದನಫಲಲೋಧ್ರಮುಂಬಿವ । ನುದಕದೊಳಂ ಕುಡಿಯೆ ಕುಡುವುದಂತಲ್ಲದೊಡೀ ।
ವುದು ಬಜೆಯೊಳುಪ್ಪುಮಂ ಬೆರ । ಸದು ವಮನಮದಾಗೆ ಸರ್ವವಿಷಸಂಹರಣಂ ॥ 962 ॥

ಉದಕದೊಳೆ ಬಿಳಿಯ ಬೇರಂ । ಪದನಱಿದೀಯಲ್ಕೆ ವಿಷಮನಟ್ಟಿಗಾವಮನಂ ।
ಅದು ದೊರಕದಂದು ಚುಂಚಿನೊ । ಳೊದವಿದ ಬೀಜಮುಮನರೆದು ಕೊಡುವುದು [ಬೇಗಂ ॥ 963 ॥

ನೀರೊಳ್ ಮಱುಗಿಸಿ ಕೊಡು ಕಾ । ಟ್ಟೀರೆಯ ಬೇರಂ ಸಮಾಕ್ಷಿಕಂ ಸಘೃತಂಸಂ ।
ಹಾರಿಸುಗುಂ ವಮನಂ ವಿಷ । ದಾರುಣಮಂ ತತ್ಕ್ಷಣಂ ಭಿಷಗ್ವರಮತದಿಂ ॥ 964 ॥

ಮರದಿಗುಡೆಗೂಡಿ ಕೊತ್ತುಂ । ಬರಿಯಿಂದಂ ಕಳೆವುದಲ್ತೆ ಹಾಲಾಹಲಮಂ ।
ನಿರುತಂ ಗುಡಕಾರ್ಪಾಸದ । ಸುರಸಂಗಳ್ಕಾಲಕೂಟಮಂ ಸಂಹರಿಕುಂ ॥ 965 ॥

ನೀರಿಂದೆ ಬಿಳಿಯಗುಂಜೆಯ । ಬೇರಂ ಬಜೆವೆರಸು ರಾಗದಿಂ ಕುಡಿಸಲೊಡಂ ।
ದಾರುಣವಿಷದಗ್ಧಂ ಸಂ । ಸಾರದೆ ಪೆಜತೇಂ ವಿಷಾಪಹಾರಮದಕ್ಕುಂ ॥ 966 ॥

ಜಂಬೀರಪುತ್ರಜೀವಿಯ । ನಿಂಬಿಂ ಕುಡಿಸಲ್ಲದಂದು ಹಸಱನ ಹೊಸಕ ।
ಟ್ಟಂಬುದುಮಂ ಕುಡೆ ಜೀಪಾ । ಳಂಬೊರೆದ ವಿಷಂಗಳಂ ವಲಂ ಸಂಹರಿಕುಂ ॥ 967 ॥

ಕೊಡಸಿಗೆಯ ರಸಂ ನೆಣಸಂ । ಕುಡುವುದು ಮೇಣ್ ತಕ್ರನಾಗರಂಗಳನೊಲವಿಂ ।
ಕುಡುವುದು ಬಾಟ್ಟಿಯ ಪಣ್ಣಿಂ । ತೊಡರ್ದ ವಿಷಂ ಕೆಡುವುದಲ್ತೆ ಮರಿಚದೊಳೆ ವಿಷಂ ॥ 968 ॥

ನಸುಗುನ್ನಿಯ ತಿನಿಸಿಂಗಂ । ಪಸುವಿನ ಘೃತಮಲ್ಲದಂದು ಭಸಿತಂ ಮೇಣ್ ನೀ ।
ಲಿಸಮೇತಹಂಸಪಾದಿಯು । ಮೆಸೆವ ಸುಗಂಧಿಗಳೆ ಬಗೆಯೆ ನಿರ್ವಿಷಮಕ್ಕುಂ ॥ 969 ॥

ನಱುವಂಜನೆಲಾವರಿಕೆಯ । ತುಱುಚಿಯ ಕರಿಯಂ ಜಲಾನ್ವಿತಂ ಪೂಸುಗೆ ಮೇಣ್ ।
ಪಱುಗುಂ ಪಂಕವಿಲೇಪದಿ । ನಱು ನಸುಗುನ್ನಿಯ ವಿಷಂ ಭಿಷಗ್ವರತಿಲಕಾ ॥ 970 ॥

ಏಲಕ್ಕಿಕಿರುಕುಸಾಲಿಯ | ದಲ್ಲದೊಡೆಳ್ಳೆಣ್ಣೆ ಮಯುಣಯುತಮಾದುದಱಿಂ |
ದಲ್ಲದೊಡೆ ಮಧುಕಘೃತದಿಂ | ನಿಲ್ಲವು ಭಲ್ಲಾತಕಾಖ್ಯದೊಂದಿದ ಪುಣ್ಗಳ್ ॥ 971 ॥

ನೀರೊಳ್ ನೆಯ್ಯಂ ಪೊಯ್ದು | ಜಾರಿಸಿ ತಳಿಗೆಯೊಳೆ ಬಿಡದೆ ಮೂರ್ಸೂರ್ಬ್ರಿರೆಗಂ |
ನೀರಿಂದೆ ತೊಳೆದು ಪೂಸೆ ನಿ | ವಾರಿಸುಗುಂ ಗೇರಪುಣ್ಣನಂತಾಕ್ಷಣದೊಳ್ ॥ 972 ॥

ಆದರದಿಂದಳಿಲೆಯನು | ಷ್ಣೋದಕದಿಂ ಕಡೆದ ತಕ್ರದೊಳ್ ಬೆರಸಿಯುದಂ |
ಬಾದೇಂ ಕುಡಿಸಲ್ ಮದ್ಯದೊ | ಳಾದ ಮದಂ ಕಿಡುಗುಮೆಂಬುದದು ಕೇವಳಮೇ ॥ 973 ॥

ನೀರುಮನಾಕಂಠಾಂತಂ | ಪೂರಿಸಿದ ನರಂಗಮುಮದುರ್ವಳ್ಳಿಯ ಬೇರಂ |
ಜಾರಿಸಿ ಕಳಿಯಂ ಕುಡಿಸಲ್ | ವಾರಿ ಮರಲ್ದೊಡಲಿನಾನರಂ ಜೀವಿಸುಗುಂ ॥ 974 ॥

ಕುಂಬಾಱರ ತಿಗುರಿಯೊಳಿ | ಟ್ಟುಂಬಿನೊಳಂ ತಿರುಪಿ ನೀರೊಳಿಟ್ಟುದರದೊಳಂ |
ತುಂಬಿದ ನೀರಂ ಕಳೆ ಬಟ್ | ಕಂ ಬಿಡದಗ್ನಿಯೊಳೆ ಕಾಸಿ ಮಾಱ್ಪುದು ಮರ್ದಂ ॥ 975 ॥

ಪೂಸುವುದು ಭಸಿತಮಂ ತಾಂ | ಕಾಸುವುದು ಶರೀರಮಂ ಚಿಮುರ್ವ್ವರ್ನ್ನಿಗಮುಪ |
ವಾಸಮಿರಿಸುವುದು ಹಿತಮು | ತ್ತ್ರಾಸಂ ನೀರ್ಗುರ್ಡಿದು ಬಸಿಱಬಾತನ ತನುವಂ ॥ 976 ॥

ಕಲ್ಲುಗಳೊತ್ತಿ ಕಾಲೊಳುಱೆ ನೊಂದೊಡೆ ಬಾತು ಸಿಗುರ್ಗಳಿಂದೆ ನೋ |
ವುಳ್ಳೊಡೆ ಭಾನುದುಗ್ಧಮನೆ ಪೊಯ್ದು ಕರಂ ಸೊಗಸಪ್ಪ ಮಾಱ್ಕೆಯಿಂ ||
ಮೆಲ್ಲನೆ ಮೆಟ್ಟೆ ಕಾಯ್ದೊಲೆಯನಾಗಳೆ ಮಾಣ್ಗುಮದರ್ಕೆ ಬಾವಿನಿಂ |
ಮುಳ್ಳುಸಿಗುರ್ಗಳುಂ ಪೊಱಗಮುಚ್ಚಳಿಕುಂ ವಿಭುಮಂಗನುಕ್ತಿಯಿಂ ॥ 977 ॥

---

## ಅಭಿನವಶ್ರುತಮುನಿ. ಸು. 1365.

ಈತನು ಮಲ್ಲಿಷೇಣರಚಿತವಾದ ಸಜ್ಜನಚಿತ್ತವಲ್ಲಭಕ್ಕೆ ಕರ್ಣಾಟಕವ್ಯಾಖ್ಯಾನವನ್ನು ಬರೆದಿರುವಂತೆ ತಿಳಿಯುತ್ತದೆ. ಮದರಾಸ್ ಪ್ರಾಚ್ಯಕೋಶಾಲಯದಲ್ಲಿರುವ ಈ ಗ್ರಂಥದ ಒಂದು ಪ್ರತಿಯ ಕೊನೆಯಲ್ಲಿ "ಕರ್ಣಾಟಕವ್ಯಾಖ್ಯಾ— ಚಂದ್ರಕೀರ್ತಿಯಮಿನಶ್ಶಿಷ್ಯೇಣ ಪುಣ್ಯಾತ್ಮನಾ" ಎಂದು ಒಂದೆಡೆಯಲ್ಲಿಯೂ "ಅಭಿನವಶ್ರುತಮುನಿನಾ ಕೃತಾ" ಎಂದು ಮತ್ತೊಂದೆಡೆಯಲ್ಲಿಯೂ ಹೇಳಿದೆ. ಆ ಪ್ರತಿ ಶಕ 1439 ರಲ್ಲಿ ಬರೆದುದು. ಶ್ರವಣಬೆಳ್ಗೊಳದ 254 ನೆಯ ಶಾಸನದಲ್ಲಿ (1398) ಒಬ್ಬ ಅಭಿನವಶ್ರುತಮುನಿಯನ್ನು ವಿಶೇಷವಾಗಿ ಸ್ತುತಿಸಿದೆ.

**ಈತನೇ ಕವಿಯಾಗಿರಬಹುದು.** ಮೇಲಣ ಶಾಸನವು ಹುಟ್ಟಿದ ಕಾಲಕ್ಕೆ ಸ್ವಲ್ಪ ಹಿಂದೆ ಈತನು ಇದ್ದಹಾಗೆ ತೋರುವುದರಿಂದ ಇವನ ಕಾಲವು ಸುಮಾರು 1365 ಆಗಿರಬಹುದು.

---

## ಭೀಮಕವಿ 1369.

ಈತನು ಬಸವಪುರಾಣವನ್ನೂ ಭೀಮಕವೀಶ್ವರರಗಳೆಯನ್ನೂ ಬರೆದಿದ್ದಾನೆ. ಭೃಂಗಿದಂಡಕವನ್ನೂ ಬರೆದಿರುವಂತೆ **ಸಿದ್ಧನಂಜೇಶನ** (ಸು. 1650) **ರಾಘವಾಂಕ** ಚಾರಿತ್ರದಿಂದ ತಿಳಿಯುತ್ತದೆ. ಇವನು ವೀರಶೈವಕವಿ; ಇವನ ತಂದೆ ಶಿವಕವಿದೇವ.[1] ತಾನು ಉಭಯಕವಿತ್ವಸಮರ್ಥನು ಎಂದು ಹೇಳಿಕೊಂಡಿದ್ದಾನೆ. ಬಸವಪುರಾಣವನ್ನು 'ಉಡುದೇವಸಿಧಿನಯನೇಂದು' ಸಂಖ್ಯಾತವಾದ ಸೌಮ್ಯವರ್ಷದಲ್ಲಿ (ಶಕ 1291)—ಎಂದರೆ 1369 ರಲ್ಲಿ, ಮುಗಿಸಿದಂತೆ ಹೇಳುತ್ತಾನೆ. ಇವನ ಇತರ ಗ್ರಂಥಗಳು ನಮಗೆ ದೊರೆತಿಲ್ಲ.

ಕೊಂಡಗೂಳಿಯಕೇಶಿ, ಸಿರಿಪಂಡಿತ, ಶಿವಲೆಂಕಮಂಚಣಪಂಡಿತ, ಗುರುಮಲ್ಲಿಕಾರ್ಜುನಪಂಡಿತ, ಇವರುಗಳಿತ್ತುದ್ದಂಡಮತಿಯಿಂದ ಬಸವದಂಡನಾಥನ ಕೃತಿಯನ್ನು ಬರೆದೆನು ಎನ್ನುತ್ತಾನೆ. ಪೂರ್ವಕವಿಗಳಲ್ಲಿ **ಹರೀಶ್ವರ ರಾಘವಾಂಕರನ್ನು** ಈ ಪದ್ಯದಲ್ಲಿ ಸ್ತುತಿಸಿದ್ದಾನೆ.—

ಸರಸಮೃದುಮಧುರೋಪಮೆಗಳಂ । ಕುರಿಸೆ ವಸ್ತುಕವರ್ಣಕಂಗಳ ।
ನೆರಪಿ ಹರನಂ ಹರಗಣಂಗಳನ್ನೆದೆ ಕೀರ್ತಿಸಿದ ॥
ಧರೆಗುಭಯಕವಿಶರಭಭೇರುಂ । ಡರಸುಕವಿ ಹರಿಬುಧವರನ ತ ।
ದ್ವರಸುತನ ರಾಘವನ ಕೃಪೆಯಿಂ ರಚಿಸುವೆಂ ಕೃತಿಯಾ ॥

ಈತನನ್ನು **ಪದ್ಮಣಾಂಕ** (ಸು. 1385), **ವಿರೂಪಾಕ್ಷಪಂಡಿತ** (1584), **ಷಡಕ್ಷರದೇವ** (1655) ಮೊದಲಾದ ವೀರಶೈವಕವಿಗಳು ಹೊಗಳಿದ್ದಾರೆ.

ತನ್ನ ಕವಿತೆಯ ವಿಷಯವಾಗಿ ಹೀಗೆ ಹೇಳಿಕೊಂಡಿದ್ದಾನೆ:—

ವೈರಿಪದವಪಶಬ್ದವಚಮ । ತ್ಕಾರಮಧಮೋಪಮೆ ವಿಯತಿ ಪದ ।
ಪೂರಕಂ ದುಸ್ಸಂಧಿಯನಿಬದ್ಧಂ ವಿರುದ್ಧಾರ್ಥ ॥
ನೀರಸಂ ಶೈಥಿಲ್ಯವರ್ಣಂ । ಕಾರಕವಿರಹಿತಂ ಕ್ರಿಯಾಳಂ ।
ಕಾರಹೀನವೆನಿಪ್ಪ ಪೊಳ್ಳಂ ತೂಱ ಕಳೆದಿಂತು ॥

---

1. ರಾಘವಾಂಕಚಾರಿತ್ರದಲ್ಲಿ ಶಿವದೇವ ಎಂದು ಹೇಳಿದೆ.

ಸರಸಮೃದುತರಯಮಕಗಮಕವಿ । ಸರಸಮಾಸಪ್ರಾಸದೇಶೀ ।
ಸರಣಿಶಬ್ದಾರ್ಥೋಪಮಾಚಾತುರ್ಯಮಾಧುರ್ಯಂ ॥
ಸರಳಪದಶಯ್ಯಾದ್ಯಧ್ವಾ । ಕರಣಯುತಲಾಲಿತ್ಯನಿಯಮಾ ।
ಕ್ಷರಸಲಕ್ಷಣಭಾವಮಾಗಿರೆ ರಚಿಸುವೆಂ ಕೃತಿಯಾ ॥

ಇವನ ಗ್ರಂಥ

## ಬಸವಪುರಾಣ.

ಇದು ಭಾಮಿನೀಷಟ್ಪದಿಯಲ್ಲಿ ಬರೆದಿದೆ; ಆಶ್ವಾಸ 8, ಸಂಧಿ 61, ಪದ್ಯ 3621.[1] ಇದರಲ್ಲಿ ಬಸವನ ಚರಿತವೂ ಅವನು ಮಾಡಿದ ಪವಾಡಗಳೂ ಹೇಳಿವೆ. ಅಲ್ಲಲ್ಲಿ ಶಿವಭಕ್ತರ ಕಥಗಳೂ ಹೇಳಿವೆ. "ಬಡಮತಿಯಾದ ನಾನು ಬಸವ ಪುರಾಣವನ್ನು ಹೇಗೆ ರಚಿಸಲಿ" ಎಂದು ಕವಿ ಶಿವಯೋಗನಿದ್ರಾಮುದ್ರಿತ ದೊಳಿರಲು ಪಾಲ್ಕುರಿಕೆಸೋಮೇಶನೂ ಅನಘದೇವಾರ್ಯನೂ ಕನಸಿನೊಳು ಬಂದು "ನಾವು ನಿನ್ನಾತ್ಮದೊಳಗಿದ್ದು ಬಸವಕಥೆಯನ್ನು ವಿರಚಿಸುವೆವು; ಬರೆದು ಕೊಳ್" ಎನ್ನಲು ಅವರಾಜ್ಞೆಯನ್ನು ಶಿರಸಾವಹಿಸಿ ಮತಿವೆತ್ತು "ಅಸಮಲಿಂಗೈ ಕ್ಯಾನುಭಾವಪ್ರಸರಮತಿ ಕವಿ ಸೋಮನಾಥಂ । ರಸವೊಸರೆ ಮುನ್ನುಸಿರ್ದುದನೆ ಕನ್ನಡಿಸಿ ಪೇಟ್ದೆಂ" ಎಂದು ಹೇಳುತ್ತಾನೆ.

ಗ್ರಂಥಾವತಾರದಲ್ಲಿ ಕವಿ ಬಸವನನ್ನು ಸ್ತುತಿಸಿ ಬಳಿಕ ಸಿದ್ಧವಟಧಾಮನಾದ ಈಶ್ವರನನ್ನು ಹೊಗಳಿದ್ದಾನೆ.

ಆಶ್ವಾಸಗಳ ಕೊನೆಯಲ್ಲಿ ಈ ಪದ್ಯವಿದೆ:—

ಇದು ಸಕಳಮಾಹೇಶ್ವರಾಮಳ । ಪದಪಯೋಜಪರಾಗಮದಷ ।
ಟ್ಪದವೆನಿಪ ಪಾಲ್ಕುರಿಕೆಸೋಮೇಶ್ವರನ ಕಾರುಣ್ಯ ॥
ಒದಗಿದಖಿಳಕಳಾಪ್ರಪೂರಿತ । ಹೃದಯ ಭೀಮಕವಿಪ್ರಣೀತಾ ।
ಭ್ಯುದಯಬಸವಪುರಾಣಕಥೆಯೊಳ್ . . ॥

ಇವನ ಬಂಧವು ಲಲಿತವಾಗಿಯೂ ಧಾರಾಳವಾಗಿಯೂ ಇದೆ.

ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

---

1. ಗುರುರಾಜಚಾರಿತ್ರದ (ಸು.1650) ಒಂದು ಪ್ರತಿಯ ಗ್ರಂಥಕ್ಕೆ ಸೇರದ ಮೊದಲು ಓಲೆಗಳಲ್ಲಿ ಬಸವಪುರಾಣದ ವಿಷಯವಾಗಿ ಹೀಗೆ ಬರೆದಿದೆ:—ಬಸವಪುರಾಣದ ಪ್ರತಿಗಳಲ್ಲಿ ಷಟ್ಪದಂಗಳು ಸೂತ್ರತಪ್ಪಿ ಹಿಂಚುಮುಂಚಾಗಿಯೂ ಪೂರ್ವಾರ್ಧಾಪರಾರ್ಧಗಳು ಹಿಂಚುಮುಂಚಾಗಿಯೂ ಕಥೆಯೂ ಕಾಂಡಗಳೂ ಹಿಂಚುಮುಂಚಾಗಿಯೂ ಇವೆ. ಕಾಂಡಗಳಲ್ಲಿ ಬಂದ ನಾಂದಿಯೇ ಪುನರುಕ್ತಿ ಬಂದಿವೆ. ಕೆಲವು ಪದ್ಯಗಳು ಹೆಚ್ಚಿಗೆ. ಅಂತು ಕಾಂಡ ೮ ಕ್ಕೆ ಸಂಧಿ ೬೦ ಕ್ಕೆ ಪದ ೩೬೩೧ ಕ್ಕಂ ಹೆಚ್ಚಾಗಿದ್ದರೆ ಹೆಚ್ಚಿಗೆಯೆಂದು ತಿಳಿವುದು, ಕಡಮೆಯಾಗಿದ್ದರೆ ಲೇಖನದೋಷವೆಂದರಿವುದು. ಕೆಲವು ಪದ್ಯಗಳನ್ನು ಸರ್ವಲಕ್ಷಣಪೂರ್ಣವಾಗಿ ತಿದ್ದಿ ನೇರ್ಪಡಿಸಿದರು ನೀಲಕಂಠಾಚಾರ್ಯರು,

### ಕೈಲಾಸ.

ಇಂದುರುಚಿ ಬಲಿದುದೊ ಹರಸ್ಮೇ। ರಂ ದಿವಿಯೊಳಾಕಾರವಾಯ್ತೊ ಹಿ।
ಮಂದಳೆದುದೋ ಕಠಿನಮಂ ಸುಧೆ ಬೆಳೆದಚಲವಾಯ್ತೋ॥
ಕುಂದಚಂದನಮಲ್ಲಿಕಾಹರಿ। ಚಂದನಾಮರಸಿಂಧುಜಲಸಿತ।
ವೃಂದವಿಾರೂಪಾದುದೆನೆ ರಜತಾದ್ರಿ ರಂಜಿಪುದು ॥ 978 ॥

### ಭೃಂಗಿ.

ಅಂಗವಂ ನಡುಗಿಸುತೆ ಬಸುಱಂ। ಪೊಂಗಿಸುತಲಕ್ಕುಳಿಸುತುಂ ವಾ।
ದ್ಯಂಗಳಿಗೆ ಬೆಚ್ಚುತ್ತೆ ಬೆದಱುತೆ ಬಾಯನುಱುಗಿಸುತೆ॥
ಕಂಗಳಂ ಮೆಳ್ಳಿಸುತೆ ಪಲ್ಗಿರಿ। ದುಂಗುಟಂಗಳನೂಱ ನಡೆಯುತೆ।
ಭೃಂಗಿ ನಗಿಸುತ್ತೇಡಿಸುತೆ ಶಿವನಿದಿರೊಳಾಡಿದನು ॥ 979 ॥

### ನಾಗಲಾಂಬೆ.

ಕಂದದೆಂದುಂ ದಿನದಿನಕೆ ಕಳೆ। ಗುಂದದೆಂದುಂ ರಾಹುಬಾಧೆಯೊ।
ಳೊಂದದೆಂದುಂ ಹುಣ್ಣಿಮೆಯ ದಿನದಂದು ಶರದಿಂದು॥
ಕುಂದಗಂಧಿಯ ವದನರುಚಿಗೊರೆ। ವಂದುದಂದವೆನಿಪ್ಪುದೆಳವೆಱ।
ಯಿಂದವತಿಕಾಂತಿಯೊಳೆಸೆವುದಬಲೆಯ ವಿಸುಪ ನೊಸಲು ॥ 980 ॥

ಮದಪಿಕಂ ಮುಟ್ಟಿದ ತಳಿರೊ ಷ। ಟ್ಪದವೆಱಗದರಲೋ ಶುಕಂ ಮು।
ಟ್ಟದ ಫಳವೊ ಗಱ ಮುಟ್ಟದಂಗಜನಂಬೊ ಕಳಹಂಸೆ॥
ಕದರ್ುಕದ ಮೃಣಾಳವೊ ಶರಧಿಯು। ಪ್ಪುದಕವೊಂದದ ಮಣಿಯೊ ಫಣಿ ಹಿಡಿ।
ಯದ ಸುಧಾಕರಬಿಂಬವೋ ಅವಳೆಸೆವ ಕನ್ನಿಕೆಯೋ ॥ 981 ॥

### ಸೂರ್ಯೋದಯ.

ಜಕ್ಕವಕ್ಕಿಗಳಿಕ್ಕೆಗೊಂಡುವು। ಪಕ್ಕಿಗಳು ಗಗನಕ್ಕೆ ನೆಗೆದುವು।
ಸಿಕ್ಕಿದಳಿ ಹೊಱವಂಟುವಬ್ಜಂಗಳ ಬಸುಱೊಳಿದರ್ು॥
ಉಕ್ಕು ಬಱತುದು ಚಂದ್ರಮನ ಮುಸು। ಕಿಕ್ಕಿದುವು ನೆಯ್ದಿಲೆಗಳುಡುಗಳು।
ದಿಕ್ಕುಗಟ್ಟುವು ದೆಸೆದೆಸೆಗೆ ಪದ್ಮಂಗಳರಳಿದುವು ॥ 982 ॥

### ಬಸವ.

ಅಚ್ಚಶಿವನೊಂದಚ್ಚುಭಕ್ತಿಯ। ನಚ್ಚು ಶರಣರ ಮಚ್ಚುಹಿರಿಯರ।
ಮೆಚ್ಚು ಸತ್ವದ ಕೆಚ್ಚು ಪರವಾದಿಗಳೆದೆಯ ಕಿಚ್ಚು॥
ಮಚ್ಚರಿಸುವರ ಭಿಚ್ಚು ಕುಜನರ। ಬೆಚ್ಚು ಶಾಂತಿಯ ಹೆಚ್ಚು ಧೂರ್ತರ।
ಕೊಚ್ಚು ಕಲಿತನದಚ್ಚು ಸುಖಕಣಿ ಮುಚ್ಚುಮಱೆಯಿಲ್ಲ ॥ 983 ॥

### ಬೇಡರು.

ಒಡಲುಗೊಂಡ ತಮಂಧಪಟಲವೊ । ನಡೆವ ನೀಲಾದ್ರಿಗಳೊ ಕೈಕಾ ।
ಲ್ವಡೆದ ಕಜ್ಜಲಗಿರಿಗಳೋ ಕರ್ಬೊನ್ನ ಭಿತ್ತಿಗಳೋ ॥
ನುಡಿಗಲಿತ ಮಾತಂಗಸಂಘವೊ । ಹೆಡೆಯುಡುಗಿದಸಿತಾಹಿಗಳೊ ಎನ ।
ಲೆಡೆವಿಡದೆ ಸಂದಣಿಸಿ ಬೇಡರು ಬಂದರಾಯೆಡೆಗೆ ॥ 984 ॥

### ಭಕ್ತಿಮಾರ್ಗವನ್ನು ಬಿಟ್ಟು ಕರ್ಮಮಾರ್ಗಾವಲಂಬನೆ.

ಹಟ್ಟಿಯೊಳು ಸುರಧೇನು ಬಂದಳ । ವಟ್ಟಿರಲು ಗೊಡ್ಡಂ ಪಿಡಿದು ಮತಿ ।
ಗೆಟ್ಟು ಕಱೆದಪೆನೆಂಬವನವೊಲು ಪಿರಿದು ತವರಾಜ ॥
ಕಟ್ಟದಿರೊಳಾಗಳುಮಿರಲ್ಕದ । ಬಿಟ್ಟು ತವುಡಂ ಮುಕ್ಕುವನವೊಲು ।
ಗಟ್ಟವಜ್ರವಿರಲ್ಕೆ ಸುರಗಿಯುನರ್ಥಿಸಿದನವೊಲು ॥ 985 ॥

---

## ಕವಿಪುಟ್ಟಣಾಂಕ ಪಂಡಿತ. ಸು. 1380.

**ಮನ್ಮಥವಿಜಯವನ್ನು** ಬರೆದ **ಕವಿಮಲ್ಲನು** (ಸು. 1400) ಈತನನ್ನು ಹೀಗೆ ಸ್ತುತಿಸಿದ್ದಾನೆ:—

ಚತುರಚತುರ್ಮುಖಂ ಕೃತಕೃತಿಪ್ರಮುಖಂ ವರವೇದಶಾಸ್ತ್ರವಿ ।
ಶ್ರುತಮತಿ ಕಾಮತತ್ವಭರತಾಗಮಶಬ್ದವಿಚಾರಕಾವ್ಯಪ ॥
ದ್ಧತಿರಸಭಾವರಾಗರಮಣೀಯಕರಂ ಕವಿಪುಟ್ಟಣಾಂಕಪಂ ।
ಡಿತನೆನಲಾತನಿಂದಱವು ಪೊಣ್ಮಿದ ಮಲ್ಲನದೇಂ ಕೃತಾರ್ಥನೋ ॥

ಇದರಿಂದ ಈತನು ದೊಡ್ಡಪಂಡಿತನೂ ಕವಿಯೂ ಆಗಿದ್ದಂತೆಯೂ ಕವಿಮಲ್ಲನಿಗೆ ವಿದ್ಯಾಗುರುವಾಗಿದ್ದಂತೆಯೂ ತಿಳಿಯುತ್ತದೆ. ಆವ ಗ್ರಂಥಗಳನ್ನು ಬರೆದಿದ್ದಾನೆಯೋ ತಿಳಿಯದು. ಇವನು ಸುಮಾರು 1380ರಲ್ಲಿ ಇದ್ದಿರಬಹುದು.

---

## ನೃಸಿಂಹಕವಿ. 1382.

ಈತನು ಮಳವಳ್ಳಿಯ 21 ನೆಯ ಶಾಸನವನ್ನು ಬರೆದುದಾಗಿ ಆ ಶಾಸನದ ಕೊನೆಯ—

ಪದ್ಯಂವಿರಚಿಸಿದಂ ನಿರ।ವದ್ಯಂ ಸುಕವೀಂದ್ರಲಪನಮಣಿಮಯಮುಕುರಂ ।
ವಾದ್ಯತ್ಕಂಠೀರವರವ । ನುದ್ಯತ್ತುಹಿನಾಂಶುಕಿರಣಕೀರ್ತಿ ನೃಸಿಂಹಂ ॥

ಎಂಬ ಪದ್ಯದಿಂದ ತಿಳಿಯುತ್ತದೆ.

ಈ ಶಾಸನವು ವಿಜಯನಗರದ ಹರಿಹರರಾಯನ ಆಳಿಕೆಯಲ್ಲಿ 1382 ರಲ್ಲಿ ಬರೆದುದು. ಇದರಲ್ಲಿ ಬಡವಾರಕುಲತಿಲಕ ಲೋಭಿರಾಯಗಜಾಂಕುಶ ಕೀರ್ತಿದೇವತನೂಭವ ಭಟ್ಟರ ಬಾಚಿಯಪ್ಪನು ತುಂಗಭದ್ರಾತೀರದಲ್ಲಿ ಪರಮಪದವನೆಯ್ದಲು ಆತನ ಮಗ ಬುಕ್ಕಣ್ಣನು ಶಾಸನವನ್ನು ಪ್ರತಿಷ್ಠೆಮಾಡಿದಂತೆ ಹೇಳಿದೆ. ಇದರಿಂದ ಒಂದು ಪದ್ಯವನ್ನು ತೆಗೆದು ಬರೆಯುತ್ತೇವೆ :—

ಬಾಚ.

ಶೂರತೆಯಂ ಮೃಗಾಧಿಪನೊಳಾಕ್ಷಮೆಯಂ ಕ್ಷಿತಿಯೊಳ್ ಗಭೀರಮಂ ।
ವಾರಿಧಿಯೊಳ್ ಮನೋರಮತೆಯಂ ಮಕರಧ್ವಜನೊಳ್ ಸುಶಾಂತಿಯಂ ॥
ವಾರಿಜವೈರಿಯೊಳ್ ಪಡೆದು ಪದ್ಮಜ ನಿರ್ಮಿಸಿದಂತೆ ರಂಜಿತಂ ।
ಚಾರುಚರಿತ್ರಕೀರ್ತಿಯ ತನೂಭವ ಬಾಚನುದಾರನುರ್ವಿಯೊಳ್ ॥ 986 ॥

---

## ಮಧುರ. ಸು. 1385.

ಈತನು ಧರ್ಮನಾಥಪುರಾಣವನ್ನೂ ಗುಮ್ಮಟಸ್ತುತಿರೂಪವಾದ ಒಂದು ಅಷ್ಟಕವನ್ನೂ ಬರೆದಿದ್ದಾನೆ.

ಇವನು ಜೈನಕವಿ; ವಾಜಿವಂಶಕ್ಕೆ ಸೇರಿದವನು; ಭಾರದ್ವಾಜಗೋತ್ರದವನು; ಇವನ ತಂದೆ ವಿಷ್ಣು, ತಾಯಿ ನಾಗಾಂಬಿಕೆ, ಪೋಷಕ ಬುಕ್ಕರಾಜಸುತ ಹರಿಹರರಾಯನ ಪ್ರಧಾನನಾದ ಮುದ್ದದಂಡೇಶ. "ಭೂನಾಥಾಸ್ಥಾನ ಚೂಡಾಮಣಿ" ಎಂಬುದರಿಂದ ಈತನು ಹರಿಹರನ ಆಸ್ಥಾನಕವಿಯಾಗಿದ್ದಿರಬೇಕು.

ಧರ್ಮಪುರಾಣರಚನೆಗೆ ಕಾರಣವು ಹೀಗೆ ಹೇಳಿದೆ :—

ಕೊಟ್ಟುಬಾಗೆಯ ವಿಭುವಾದ ಬೊಮ್ಮಿಸೆಟ್ಟಿಗೂ ಬೈಚಾಂಬೆಗೂ ಬ್ರಹ್ಮ,[1] ನಾಗ, ಮಲ್ಲಿಕಾರ್ಜುನ ಎಂಬ ಮೂವರು ಮಕ್ಕಳಿದ್ದರು. ಇವರು ಜೈನರು. ಇವರಲ್ಲಿ ಮಲ್ಲಿಕಾರ್ಜುನನು ಅಥವಾ ಮಲ್ಲಿನಾಥನು ಕೊಂಡಕುಂದಾನ್ವಯದ ಮೂಲಸಂಘದ ದೇಶೀಯಗಣದ, ಬಲ್ಲಾಳರಾಯಜೀವರಕ್ಷಾಪಾಳನೆಂಬ ಬಿರುದುಳ್ಳ ಚಾರುಕೀರ್ತಿಪಂಡಿತನ ಪಟ್ಟಕ್ರಮಾಗತನಾದ, ರಾಜಪೂಜಿತನಾದ, ರಾಜಸಭೆಯಲ್ಲಿ ಜಿನಮಾರ್ಗಮೆ ಮಾರ್ಗಮೆಂದು ಸ್ಥಾಪಿಸಿದ, ಅಭಿನವಚಾರುಕೀರ್ತಿಪಂಡಿತಾಚಾರ್ಯನ ಅನಂತರದಲ್ಲಿ ಪಟ್ಟಕ್ಕೆ ಬಂದು ಗೋಮಟೇಶ್ವರಸ್ವಾಮಿಗೆ ಅನೇಕಾವೃತ್ತಿ ಅಭಿಷೇಕವನ್ನು ಮಾಡಿಸಿದ, ಪಂಡಿತದೇವನ ಶಿಷ್ಯನು. ಆಹಾರಾಭಯಭೈಷಜ್ಯಶಾಸ್ತ್ರದಾನಗಳಿಂದ ನೆಗಳ್ತೆವಡೆದ ಈ ಮಲ್ಲಿಕಾರ್ಜುನನು ಮಧುರನ ಬಳಿಗೆ

---

1. ಇವನನ್ನು "ವಿನುತಾಶೇಷಕಲಾವಿಲಾಸರಚನಾವಿಸ್ತಾರದಿಂ ಬ್ರಹ್ಮಂ" ಎಂದು ಹೇಳಿರುವುದರಿಂದ ಇವನೂ ಕವಿಯಾಗಿದ್ದಿರಬಹುದು.

ಬಂದು ಪ್ರೀತಿಯಿಂದ ನಾನಾವಸ್ತುಪ್ರತಿಪತ್ತಿಯಂ ಸಲಿಸಿ ಅವನನ್ನು ಧರ್ಮಭೂಷಣನ ಹಿಂದೆ ಪಟ್ಟಕ್ಕೆ ಬಂದ ಭಟ್ಟಾರಕರಾಜರಾಯಗುರುವೆನಿಸಿದ ವರ್ಧಮಾನಮುನಿಯ ಸನ್ನಿಧಿಗೊಯ್ದು ಅವನಿಂದ ಹೇಳಿಸಲು ಕವಿ ಈ ಧರ್ಮನಾಥಪುರಾಣವನ್ನು ರಚಿಸಿದನು.

ಬುಕ್ಕರಾಜನ ಮಗನಾದ ಹರಿಹರರಾಯನು 1377 ರಿಂದ 1404 ರ ವರೆಗೆ ಆಳಿದುದಾಗಿ ತಿಳಿವುದರಿಂದ ಆ ರಾಜನ ದಂಡಾಧಿಪನಲ್ಲಿ ಆಶ್ರಿತನಾಗಿದ್ದ ಈ ಕವಿ ಸುಮಾರು 1385 ರಲ್ಲಿ ಇದ್ದಿರಬಹುದು.

ಈತನಿಗೆ ಕಲಾವಿಲಾಸ, ಕವಿರಾಜಕಲಾವಿಲಾಸ, ಕವಿಮಾಧವ, ಮಧುರಮಾಧವ, ಸರಸಕವಿರಸಾಲವಸಂತ, ಭಾರತೀಮಾನಸಕೇಳೀರಾಜಹಂಸ, ವಿಶ್ವವಿದ್ಯಾಸಮುದಯಸುಮನಸ್ಸಂಚರಚ್ಚಂಚರೀಕ ಎಂಬ ಬಿರುದುಗಳಿದ್ದಂತೆ ತೋರುತ್ತದೆ.

ಪೂರ್ವಕವಿಗಳಲ್ಲಿ **ಪಂಪ, ಪೊನ್ನ, ರನ್ನ, ನಾಗಚಂದ್ರ, ನೇಮಿಚಂದ್ರ, ಜನ್ನ** ಇವರನ್ನು ಸ್ತುತಿಸಿದ್ದಾನೆ. ಅಲ್ಲದೆ ತನ್ನ ಕವಿತಾಚಾತುರಿಯನ್ನು ಹೇಳುವ ಈ ಪದ್ಯದಲ್ಲಿ ಶ್ಲೇಷೆಯಿಂದ **ಜನ್ನ, ರನ್ನ, ಪುಷ್ಪದಂತ, ಗಜಾಂಕುಶ, ಮನಸಿಜ, ಶ್ರೀವಿಜಯ, ಸುಜನೋತ್ತಂಸ, ಯಶಶ್ಚಂದ್ರ, ನೇಮಿಚಂದ್ರ** ಇವರುಗಳ ಹೆಸರನ್ನೂ ಹೇಳಿದ್ದಾನೆ:—

ಕವಿತಾಶ್ರೀಗೆ ಜನಾರ್ದನಂ ಪುರುಷರತ್ನಂ ಪುಷ್ಪದಂತಂ ರಿಪು ।
ಪ್ರವರೋತ್ತುಂಗಗಜಾಂಕುಶಂ ಮನಸಿಜಾಕಾರಂ ಸಭಾಮಧ್ಯಲ ॥
ಬ್ಧವರಶ್ರೀವಿಜಯಂ ಸಮಸ್ತಸುಜನೋತ್ತಂಸಂ ಯಶಶ್ಚಂದ್ರನು ।
ತ್ಸವಲೀಲಾರಥನೇಮಿಯೆಂದು ಮಧುರಂ ಪೆತ್ತಂ ಮಹಾಖ್ಯಾತಿಯಂ ॥

ಇವನನ್ನು **ಮಂಗರಸ 111** (1508) ಮೊದಲಾದ ಕವಿಗಳು ಸ್ತುತಿಸಿದ್ದಾರೆ. ತನ್ನ ಕವಿತಾಚಾತುರಿಯನ್ನೂ ಗುಣಾದಿಗಳನ್ನೂ ಈ ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ:—

ಮದನನ ಬಿಲ್ಲ ಬಳ್ಳಿ ಬಲಿದತ್ತು ವಸಂತದ ಮೋಹನಂ ಪೊದ ।
ಱ್ದುದು ಕಡುಗಾಡಿವೆತ್ತಲೆವ ತೆಂಕಣಗಾಳಿಯ ಸೊಂಕು ಸೊರ್ಕುವೆ ॥
ತ್ತುದು ಪುದುವಂದುದಂದು ನೆಲೆವೆರ್ಚಿರೆ ಭಾವರಸಂ ರಸಜ್ಞೆಯೊಳ್ ।
ಮೃದುಪದವಿಟ್ಟಳಕ್ಕುಮೆನೆ ಭಾರತಿ ಬಂದು ಕಳಾವಿಳಾಸನಾ ॥
ಆವ ರಸಾತಿರೇಕವೊ ಕರಾಗ್ರದೊಳೋದುವ ರಾಜಕೀರಲೀ ।
ಲಾವಚನಂಗಳೋಗಡಿಸಲುಕ್ಕೆವದಿಂ ಕುಡುಕೆಂದು ತಂದು ಚಂ ॥
ಚೂವಿವರಕ್ಕೆ ಮಾಣಿಕದ ಮುದ್ರಿಕೆಯಂ ಪಡಿಗೆತ್ತು ಭಾರತೀ ।
ದೇವಿ ನಿರಂತರಂ ಸವಿವಳಾತನ ನವ್ಯವಚೋವಿಳಾಸಮಂ ॥

ಕವಿಮಧುರನ ಮಾತುಗಳೀಂ । ಸವಿಯೊ ಮದಪ್ಲವಕೆ ಮೊರೆವ ಮಱಿದುಂಬಿಗಳಂ ।
ತವೆ ತೊಲಗಿಸಿ ತನ್ನಯ ಮೊಱ । ಗಿವಿಯಿಂ ಮೊಗೆಮೊಗೆದು ಸುಮುಖನಾಸ್ವಾದಿಸುವಂ ॥

ಪೆಸರೆಸಕದ ಪಾಲಯ್ಯಂ । ಪೊಸತೇನೆಱದುಂಬುದಂಬಿಲಂ ಗಡಮೆಂಬೀ ।
ಗಸಣಿಯೊಳೊಂದದೆ ನೆಗೞ್ದಾ । ಳ್ವೆಸರುಂ ಮಧುರಂ ದಲವನ ಮಾತುಂ ಮಧುರಂ ॥

ಗಣಿದಂಗೊಳ್ವೊಡೆ ಮಿಕ್ಕಿನಕ್ಕರದ ಮಾತಂತಿರ್ಕೆ ತನ್ನಾಣೆಗೋ ।
ಸಣೆ ಸಲ್ಗುಂ ಸುಕವೀಂದ್ರವೃಂದಸಭೆಯೊಳ್ ತಾನೆಂದೊಡಮ್ಮಮ್ಮ ಧಾ ॥
ರಿಣಿಯೊಳ್ ಕೇಳ್ದಱಿಯಾ ಜಡಾ ಮಧುರನಂ ನಿರ್ಣೀತಕರ್ಣಾಟಲ ।
ಕ್ಷಣಭಾಷಾಕವಿರಾಜನಂ ಪ್ರವಿಲಸದ್ವಾಣೀಮುಖಾಂಭೋಜನಂ ॥

[1]ನೆರೆಯಱಿಯದ ಹೊರೆಯಱಿಯದ । ಬಿರುದುಗಳೇಕೆಮಗೆ ಕೃತಿಯನೀಕ್ಷಿಸಿ ಮಿಗೆ ಮು ।
ಚ್ಚರಿಸುವ ಕವಿಯೆರ್ದೆ ಬಿಕ್ಕನೆ । ಬಿರಿದಿರ್ದುದೆ ಬಿರುದು ಮಿಕ್ಕ ಬಿರುದುಂ ಬಿರುದೇ ॥

ಇವನ ಗ್ರಂಥಗಳಲ್ಲಿ

## 1. ಧರ್ಮನಾಥಪುರಾಣ.

ಇದು 15 ನೆಯ ತೀರ್ಥಕರನಾದ ಧರ್ಮನಾಥನ ಚರಿತೆ (ನಮಗೆ ಸಮಗ್ರವಾದ ಪ್ರತಿ ದೊರೆತಿಲ್ಲವಾದುದರಿಂದ ಇಷ್ಟಾಶ್ವಾಸಗಳಿವೆಯೆಂದು ಹೇಳಲಾರೆವು.) ಈ ಗ್ರಂಥದ ಉತ್ಕೃಷ್ಟತೆಯನ್ನು ಕವಿ ಈ ಪದ್ಯಗಳಲ್ಲಿ ಹೇಳಿದ್ದಾನೆ :—

ಬಣ್ಣಣೆಯ ಕುಸುರಿಮಾತುಗ । ಳಣ್ಣಂದಿರ ತೆಱದಿನನ್ನದಿನ್ನದೆನುತ್ತಾಂ ।
ಬಣ್ಣಿಸಲಱಿಯೆಂ ಕವಿತೆಗೆ । ಕಣ್ಣೆಱೆಯಾದುದು ಕಲಾವಿಲಾಸನ ಕಾವ್ಯಂ ॥

ಆದಿಪುರಾಣಂಗಳ್ ಪೞ । ದಾದುವೆನಲ್ ಮತ್ತೆ ಮಧುರಕವಿತಾಮೃತಮು ।
ತ್ಪಾದಿಸೆ ಚೋದ್ಯಮಿದಭಿನವ । ಮಾದುದು ಧಾರಿಣಿಗೆ ಧರ್ಮನಾಥಪುರಾಣಂ ॥

ಗ್ರಂಥಾವತಾರದಲ್ಲಿ ಕವಿ ಧರ್ಮನಾಥನನ್ನು ಸ್ತುತಿಸಿದ್ದಾನೆ. ಬಳಿಕ ಸಿದ್ಧಾದಿಗಳು, ಯಕ್ಷಿಯಕ್ಷರು, ಸರಸ್ವತಿ, ಅನುಬದ್ಧಕೇವಲಿಗಳು, ಕೇವಲಿಗಳು, ದಶಪೂರ್ವಧರರು, ಏಕಾದಶಾಂಗಧಾರಿಗಳು, ಇವರನ್ನು ಸ್ಮರಿಸಿ ಅನಂತರ ಜಿನಸೇನನಿಂದ ಮಹಾನಂದಿಯೋಗಿಯವರೆಗೆ ಗುರುಗಳನ್ನು[2] ಹೊಗಳಿದ್ದಾನೆ. ಆಶ್ವಾಸಗಳ ಕೊನೆಯಲ್ಲಿ ಈ ಗದ್ಯವಿದೆ :—

ಇದು ಸಕಲಸುಕವಿಜನಮನಸ್ಸುಧಾಕರಕಾಂತಸಂತತದ್ರವೀಕರಣಕಾರಣ ಕರ್ಣಾಟಕವಿತಾಕಲಾವಿಲಾಸವಿಧು ಮಧುರಕವೀಂದ್ರನಿರ್ಮಿತಮಪ್ಪ ಧರ್ಮನಾಥಪುರಾಣದೊಳ್.

---

1. ಈ ಪದ್ಯವು ಶಬ್ದಾನುಶಾಸನದ 121 ನೆಯ ಸೂತ್ರದ ಕೆಳಗೆ ಉದಾಹೃತವಾಗಿದೆ.

2. ಜಿನಸೇನ, ವೀರಸೇನ, ಸಮಂತಭದ್ರ, ಅಕಳಂಕ, ಪೂಜ್ಯಪಾದ, ಗುಣಭದ್ರ, ಕುಂಡಕುಂದ, ಕವಿಪರಮೇಷ್ಠಿ, ಬಲಾತ್ಕಾರಗಣದ ಧರ್ಮಭೂಷಣದೇವ, ಇವನ 'ಸಿಂಹಾಸನವನೆಸಗಿದ' ವರ್ಧಮಾನಮುನಿ, ಮಹಾನಂದಿಯೋಗಿ.

ಇವನು ಹದಿನಾಲ್ಕನೆಯ ಶತಮಾನದವನಾದರೂ ಇವನ ಬಂಧವು ಹಿಂದಣ ಜೈನಕವಿಗಳ ಬಂಧದಂತೆಯೇ ಪ್ರೌಢವಾಗಿಯೂ ಹೃದಯಂಗಮವಾಗಿಯೂ ಇದೆ. ಇವನ ಗ್ರಂಥಗಳಿಂದ **ಕಾವ್ಯಸಾರವನ್ನು** ಬರೆದ **ಅಭಿನವವಾದಿವಿದ್ಯಾನಂದನೂ** (1533) **ಶಬ್ದಾನುಶಾಸನವನ್ನು** ಬರೆದ **ಭಟ್ಟಾಕಳಂಕನೂ** (1604) ಪದ್ಯಗಳನ್ನು ಉದ್ಧರಿಸಿ ಬರೆದಿದ್ದಾರೆ.

ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

### ನೆಲ್ಲುಗದ್ದೆ.

ಮೊಳೆವ ಪದಂ ಮಡಲಿಱಿದುಱಿ | ಬೆಳೆವ ಪದಂ ಪೊಡೆಗಳೊಡೆದು ಪಾಲ್ದೆನೆದುಱುಗ |
ಲ್ದಳೆವ ಪದಂ ಗಿಳಿವಿಂಡುಗ | ಳಿೞಿವ ಪದಂ ಕೆಯ್ಗಳೊಳ್ ಪದಂಬಡೆದೆಸೆಗುಂ ॥ 987 ॥

### ಉದ್ಯಾನವನ.

ಸೀಪೊದವಿದ ನುಣ್ಗೊನೆಯಿಂ | ತೂಪ ರಸದ್ರಾಕ್ಷೆಗೆಸೆವ ಕುಸುಮದ ರಜದಿಂ |
ಕಾಪುವರಿದೊಸರ್ವ ಸೊನೆಯಿಂ | ತೂಪಿಱಿವ ರಸಾಲಲತೆಗಳೇನೊಪ್ಪಿದುವೋ ॥ 988 ॥

### ತೆಂಗು.

ನಾರಿಕೇಳಮೆಸೆಗುಂ ಫಳಾಳಿಯಿಂ | ನಾರಿ ಕೇಳ ನೆಗೞ್ದೊಮ್ಮೊಳೊಪ್ಪುವಿ |
ನ್ನೀರದಾವ ಸವಿ ನೋಡಿಮೆಂದಣಂ | ನೀರದಾವಳಿಗೆ ನೀಡುವಂದದಿಂ ॥ 989 ॥

### ದಾಳಿಂಬ.

ಕೆಂಬರಲ್ಗೆಣೆಮಾಡುವರೇ | ಕೆಂಬ ರಸಂಬಡೆದು ರಂಜಿಪೊಳ್ವಿತ್ತಿನ ದಾ |
ಳಿಂಬದ ಬನದ ಶುಕಾಳಿಗ | ಳಿಂಬದವಣ್ಗೆಱಗಿ ತಱಗಿದುವು ನೋಡಬಲೇ ॥ 990 ॥

### ಮಂದಮಾರುತ.

ಬಿಡದುಗುವ ಸೊನೆಯ ಸೋನೆಯ | ಕಡುಗೆಸಱೊಳ್ ಸಿಲ್ಕಿ ಬಂದ ಮಾವಿನ ಕೆಯ್ಯಿಂ |
ಪಿಡಿದಲ್ಲಿ ಮೆಲ್ಲಮೆಲ್ಲನೆ | ನಡೆವುದು ಕಣ್ಗುರುಡನಂತಿರುಪವನಪವನಂ ॥ 991 ॥

### ದೇಶ.

ನಳಿನೀಗರ್ಭವಿಚಿತ್ರಶಿಲ್ಪಗೃಹಮುಪ್ಪಾದೇಶದೊಳ್ ಸಂತತಂ |
ದಳಿತಾಂಭೋಜಕುಳಂ ಕೊಳಂ ಪರಿಮಳದ್ಭೃಂಗಾಳಿ ತಂಗಾಳಿ ನಿ ॥
ರ್ಮಳರತ್ನಾವೃತಕಂದರಂ ದರಮುದಂಚಚ್ಛಂದನಂ ನಂದನಂ |
ವಿಳಸದ್ಭೂರಿಧನಂ ಜನಂ ಪೃಥುಘಟಾಪೀನಾಕುಳಂ ಗೋಕುಳಂ ॥ 992 ॥

## ಚಂದ್ರಗ್ರಹಣ.

ಬಯ್ಸನೆ ಬಂದಂಬರದೊಳ್ | ಮೆಯ್ಯಂ ಮುಱಿಮಾಡಿ ಕಲಸಿದಮೃತದ ತುತ್ತಂ |
ಸುಯ್ಯುದೆಱಿದುಂಬ ಕಾಲನ | ಕೆಯ್ಯನೆ ನಿಮಿರ್ದತ್ತು ರಾಹು ಸಸಿವಿಡಿದೆಡೆಯೊಳ್
|| 993 ||

## ಅಶೋಕ.

ಮದಕಲಮರಾಳಗಮನೆಯ | ಪದಮಂ ಪಲ್ಲವದೆ ಪೋಲ್ತೆನೆಂಬನುರಾಗಂ |
ಪುದಿದಿರ್ದ ಶೋಕವಲ್ಲರಿ | ಸುದತಿಯರೆಡಗಾಲೊಳೊದಸಿಕೊಂಡಪುದಿನ್ನುಂ || 994 ||

## ಆನೆಯ ಮರಿ.

ಮೊಲೆಗಳನುಂಬ ಪೆಪ್ಪಳಿಸಿ ನೋಡುವ ತಾಯ್ವಿಡಿ ಮೆಲ್ವಸಲ್ಲಕೀ |
ದಲಮನಲಂಪಿನಿಂ ತೆಗೆದು ಸೂಸುವ ಸುಂಡಲನೆತ್ತಿ ಸುತ್ತೆ ನಾ ||
ಲ್ಗೆಲದೊಳಡುರ್ತು ಪಾಯ್ದು ಪರಿದಾಡುವನೇಕರಸಾನುಭಾವಮ |
ಗ್ಗಲಿಸಲದೊಂದು ಪಲ್ಲಮಱಿ ಲಲ್ಲೆಯ ಚೆಲ್ಲಮನೇನೊಡರ್ಚಿತೋ || 995 ||

## ಮಾಲೆಗಾರ್ತಿ.

ನೋಡಿದೊಡೀಕೆ ಪೊಚ್ಚಪೊಸನೆಯ್ದಿಲ ಮಾಲೆಗಳಾದುವೋತು ಮಾ |
ತಾಡಿದೊಡೋವೊ ಬಂದುಗೆಯ ಮಾಲೆಗಳಾದುವು ಮಂದಹಾಸಮಂ ||
ಮಾಡಿದೊಡಚ್ಚಮಲ್ಲಿಗೆಯ ಮಾಲೆಗಳಾದುವಿದೊಂದು ಚೋದ್ಯಮಂ |
ನೋಡಿರೆ ಮಾಲೆಗಾರ್ತಿಯೊ ದಿಟಕ್ಕಿವಳಗ್ಗದ ಮಾಯಕಾರ್ತಿಯೋ || 996 ||

## ರಾಜ.

ಪರಿರಂಭಂಗೆಯ್ವೊಡೊಂದಲ್ಲದೆ ಕರಮೆರಡಿಲ್ಲೋವೊ ದಿಗ್ದಂತಿಗೊಲ್ದಾ |
ದರದಿಂ ಬಾಯ್ಗೊಡಲಿಚ್ಛೈಪೊಡೆ ಸುಡು ಪಲವುಂ ನಂಜುವಾಯ್ ಪನ್ನಗೇಂದ್ರಂ ||
ಗೆರೆದಾನೋರಂತೆ ಬೆಂಬತ್ತೆಯುಮೆರ್ದೆಗುಡದೆಗ್ಗಾದಿಕೂರ್ಮಂಗೆನುತ್ತು |
ರ್ವರೆ ಬಿಟ್ಟಾವೂವರಂ ಭೂವರನ ಭುಜದೊಳಿರ್ಪಳ್ ಮನೋರಾಗದಿಂದಂ
|| 997 ||

## ಪುತ್ರದೋಹದ.

ಮೆಲ್ಲನೆ ಮಲಗಿರೆ ಕದಪಂ | ಮೆಲ್ಲನೆ ಜಕ್ಕುಲಿಸೆ ನಕ್ಕು ಮಗನಗಿದೊದೆಯಲ್ |
ಮೆಲ್ಲಡಿಗೆ ಸಿಲ್ಕಿ ಹಾರಂ | ಝಲ್ಲನೆ ಪಱಿದೊಕ್ಕ ಮುತ್ತನೆಂದಾಯ್ದಪೆನೋ
|| 998 ||

ಬಿನದದಿನೋಡುತಂದುಗೆಯ ಗೆಜ್ಜೆಯ ಮೆಲ್ಲುಲಿಯುಣ್ಮೆ ಪೊಣ್ಮೆ ಭೋಂ |
ಕನೆ ಪರಿತಂದು ನುಣ್ಬದಳ ಮಾತುಗಳಂ ಕಿಱಿದಾಡಲಾನದೇ ||

ನೆನೆ ಕಡುನಾಣ್ಚಿ ಪಾಯ್ವು ಕೊರಲಂ ಬಿಗಿಯುಪ್ಪಿ ಮರಲ್ದು ನೋೞ್ಪ ಸಂ ।
ದನನೆಳ್ಳಲೋಳಿವಾಯ ಸವಿಮುದ್ದಿನ ಸಮ್ಮದಮೆಂತು ಸ್ವರ್ಗ್ಗವೋ ॥ 999 ॥

### ನಾಸ್ತಿಕವಾದ.

ನೆನೆದಿಲ್ಲದ ಪರಸುಖಮುಂ । ಕನಸಿನ ಭತ್ತಕ್ಕೆ ಗೋಣಿಯೊಯ್ವವೊಲಿಹದೊಳ್ ।
ತನಗತನುಸುಖಮನೀವೀ । ತನುವಂ ತಪಕೊಡ್ಡಿಗೊಡ್ಡುಮಾಡುವನೆಗ್ಗಂ ॥ 1000 ॥
ಕಟ್ಟದಿರ ಸುಖಮನನಿತಂ । ಬಿಟ್ಟೀಗಳೆ ಬರ್ಪುದೆಂದು ಬರೆದಱಗುಱಪಂ ।
ಕೊಟ್ಟು ಪರಲೋಕದೋಲೆಯ । ನಟ್ಟಿದರಾರಾರ ಪಿತೃಪಿತಾಮಹರರಸಾ ॥ 1001 ॥
ಮೊದಲೊಳ್ ಲಜ್ಜೆಯನೆಯ್ದೆ ಸುಟ್ಟು ಕುರುಳಂ ಕೊಟ್ಟುಟ್ಟುದಂ ಬಿಟ್ಟು ಲೋ ।
ಕದ ಹಾಸ್ಯಕ್ಕೊಳಗಪ್ಪ ಬೂತುಗಳ ಮಾತೇಂ ಸತ್ತು ಕಾಣ್ಬೊಂದು ಸ ॥
ಗ್ಗದಿನಿರ್ದಲ್ಲಿಯೆ ಸಾಡೆ ಕಾಣ್ಬ ನರಕಂ ಲೇಸೆಂದು ಮೆಯ್ಯೊಲ್ವ ಲೋ ।
ಕದ ಬಾಯ್ಗಾದೆಯನೆಯ್ದೆ ಕೇಳ್ದುಮೆಳೆ ಧಾತ್ರೀನಾಥ ಬೇಳಪ್ಪುದೇ ॥ 1002 ॥

### ನೀತಿ.

ನವರಂಧ್ರವೆಂಬ ಕನ್ನಂ । ಸವೆದಿರಲೊಡಲೆಂಬ ಮನೆಯನೊಯ್ಯನೆ ಪೊಕ್ಕಾ ।
ಜವನೆಂಬಾರಡಿಗಳ್ಳಂ । ತವಕದಿನಸುವೆಂಬ ವಸುವನೊಯ್ಯದೆ ಮಾಣಂ ॥ 1003 ॥
ಕಟ್ಟೋಗರಮಿಲ್ಲದೆ ಗಡ । ಬಟ್ಟೆಗರಡಿಯೆತ್ತರಡಸಿ ಕಡುನಿಡುವಯಣಂ ।
ಮುಟ್ಟರೆ ಸಂಬಳದನ್ನಂ । ಗಟ್ಟದೆ ಮಱುಭವದ ಬಟ್ಟೆವೋಪವನೆಗ್ಗಂ ॥ 1004 ॥

## 2. ಗುಮ್ಮಟಸ್ತುತಿ.

ಇದು ಶ್ರವಣಬೆಳ್ಗೊಳದ ಗೊಮ್ಮಟೇಶ್ವರನ ಸ್ತುತಿರೂಪವಾದ ಅಷ್ಟಕವು ಎಂಬಂಶವು ಈ ಗ್ರಂಥಾಂತದಲ್ಲಿರುವ ಈ ಪದ್ಯದಿಂದ ತಿಳಿಯುತ್ತದೆ:—

ಭೂನಾಥಾಸ್ಥಾನಚೂಡಾಮಣಿ ಮಧುರಕವೀಂದ್ರಂ ವಿನೇಯಾನುಕಂಪಾ ।
ಧೀನಂ ಸದ್ಭಕ್ತಿಯಿಂ ಬಿತ್ತರಿಸಲಭಿನವಪ್ರಾತಿಹಾರ್ಯಂಬೊಲಿಂಬಾ ॥
ದೀನವ್ಯಶ್ರವ್ಯದಿವ್ಯಾಷ್ಟಕಮನೆ ನುಡಿದರ್ಗೋದಿದರ್ಗಾವಗಂ ನಿ ।
ತ್ಯಾನಂದಶ್ರೀಯನೀವಂ ಬೆಳುಗುಳನಗರೀನಾಯಕಂ ಗುಮ್ಮಟೇಶಂ ॥

ಇದರಲ್ಲಿ 9 ವೃತ್ತಗಳಿವೆ. ಪ್ರತಿಪದ್ಯವೂ ಗುಮ್ಮಟೇಶಾ ಎಂದು ಮುಗಿಯುತ್ತದೆ. ಇದರಿಂದ ಒಂದೆರಡು ಪದ್ಯಗಳನ್ನು ತೆಗೆದು ಬರೆಯುತ್ತೇವೆ:—

ಶ್ರೀಪಾದಾಂಭೋಜದೊಳ್ ಮುಂಬರಿದೆಱಗುತಮುಳ್ದುಂಬಿಯಂತೞ್ಕಿಱಂ ನಾ ।
ಭೀಪೂರ್ಣಾವರ್ತದೊಳ್ ತತ್ತಳಿಸುತುಮೆಳಮೀನಸ್ತೆ ವಕ್ತ್ರೇಂದುವಂ ಸಾ ॥
ರ್ದಾಪೊೞ್ತಂ ನರ್ತನಂಗೆಯ್ವುದು ಚಟುಳಚಕೋರಾಳಿಯಂತೆನ್ನ ನೇತ್ರಂ ।
ಬಾಪಿನ್ನೆಂತಪ್ಪ ಲಾವಣ್ಯದ ತವನಿಧಿಯೋ ನಿನ್ನ ಮೆಯ್ ಗುಮ್ಮಟೇಶಾ ॥ 1005 ॥

[1] ಮುಱಿಗೆಂದುಂ ಕೋಡದುಗ್ರಾತಪಕೆ ಸೆಡೆಯದುದ್ಯದ್ಧಿಮಕ್ಕಳ್ಕದೋರಂ ।
ಕೊಲವಿಂ ಸಮ್ಯಕ್ತ್ವಪೋಮಾರ್ಗದೊಳೊದವಿದಮಂಗಕ್ಷಯಶ್ರೀ ಕರಂ ಕೆ ॥
ಯ್ಯೊಳಗಪ್ಪಳ್ ತಪ್ಪಳಿಂದುರ್ವರೆಗನುವಿಸುವಂತಾವಗಂ ತೋಱುವೀನಿ ।
ಶ್ಚಲಮೂರ್ತಿಶ್ರೀಯ ಸಾಮರ್ಥ್ಯಮನಱಿಮರುಳರ್ ಬಲ್ಲರೇ ಗುಮ್ಮಟೇಶಾ
॥ 1006 ॥

---

## ಪದ್ಮಣಾಂಕ. ಸು. 1385.

ಇವನು **ಪದ್ಮರಾಜಪುರಾಣ**ವನ್ನು ಬರೆದಿದ್ದಾನೆ. ಈತನು ವೀರಶೈವ ಕವಿ; ಕೆರೆಯಪದ್ಮರಸನ ವಂಶದಲ್ಲಿ ಹುಟ್ಟಿದವನು. ತನ್ನ ವಂಶಪರಂಪರೆಯನ್ನು ಈ ರೀತಿಯಾಗಿ ಹೇಳಿಕೊಂಡಿದ್ದಾನೆ:—

ಶಿವಯೋಗಿಮಲ್ಲರಸ ಅಥವಾ ಮಲ್ಲಿಕಾರ್ಜುನಪಂಡಿತ; ಮಗ ಸಕಳೇಶಮಾದರಸ; ಮಗ ಮಾಯಿದೇವ; ಮಗ ಕೆರೆಯಪದ್ಮಣಾರ್ಯ; ಮಗ ಕುಮಾರಪದ್ಮರಸ; ಮಗ ವಿಶ್ವಾರಾಧ್ಯ; ಮಗ ದೇವಾರಾಧ್ಯ; ಮಗ ‘ನೂರೊಂದು ಪಾದ ಗದ್ಯವನು ಸಿರ್ದು ಪೂವಂ ಪಡೆದ’ ಗೌರಾರ್ಯ; ಮಗ ದೇವಾರ್ಯ; ಮಗ ವೀರಣಾಚಾರ್ಯ; ಮಕ್ಕಳು ಪದ್ಮಣಾರ್ಯ, ಚಾಮುಂಡಾರ್ಯ; ಪದ್ಮಣಾರ್ಯನ ಮಗ ಕವಿ ಪದ್ಮಣಾಂಕ.

ತನ್ನನ್ನು ಉಭಯಕವಿ ಎಂದು ವಿಶೇಷಿಸಿ ಹೇಳಿಕೊಂಡಿದ್ದಾನೆ.

ಇವನು **ಕೆರೆಯಪದ್ಮರಸ**ನಿಂದ (ಸು. 1165) ಎಂಟನೆಯ ತಲೆಯುವನಾದುದರಿಂದ ಅವನ ಕಾಲಕ್ಕೆ ಸುಮಾರು 200 ವರ್ಷ ಈಚೆಯುವನಾಗಿದ್ದಿರಬೇಕು; ಸುಮಾರು 1385 ರಲ್ಲಿ ಇದ್ದಿರಬಹುದೆಂದು ಊಹಿಸುತ್ತೇವೆ.

ಪೂರ್ವಕವಿಗಳನ್ನು ಈ ಪದ್ಯದಲ್ಲಿ ಸ್ತುತಿಸಿದ್ದಾನೆ.—

ಪದೆದು ಬುಧರಾಶ್ರಯಿಪ ಬಾಣಂಗಸಿತಕಂಠ ।
ಪದಭಕ್ತನುದ್ಭಟಂಗತುಳಕವಿ ರಾಘವಂ ।
ಗುದಿತಕುಕವಿಮುಖೇಂದುರಾಹು ಭೋಜಂಗೆ ಮಂಗಳಮಯಹರೀಶ್ವರಂಗೆ ॥
ಸದಯದೇವಾರ್ಯಭೀಮಂಗೆ ಗುರುತರಗುಣಾ ।
ಸ್ಪದಮಯೂರಂಗೆ ಜಿತಝಷಕೇತುರೂಪನೆನಿ ।
ಸಿದ ಮಲುಹಣಂಗೆ ಲೋಕಾಪ್ತಭಾರವಿಗೆಣಿಗುವೆಂ ನವಗ್ರಹಬಲಾರ್ಥಂ ॥

ತನ್ನ ಕವಿತಾಚಾತುರಿಯನ್ನು ಈ ರೀತಿಯಲ್ಲಿ ಇತರರು ಹೊಗಳದಂತೆ ಹೇಳಿಕೊಂಡಿದ್ದಾನೆ:—

---

1. ಇದು ಶಬ್ದಾನುಶಾಸನ ಸೂತ್ರ 140 ರ ಕೆಳಗೆ ಉದಾಹೃತವಾಗಿದೆ.

ರಸದಾಳಿಯೆಸೆವ ಪಾಲ್ಪೊನಲೊ ಸೊಗಯಿಪ ಪೊಚ್ಚ ।
ಪೊಸಜೇನ ಸೋನೆಯೋ ಹುಣ್ಣಿಮೆಯ ಸಸಿಯ ಬ ।
ಟ್ಟೊಸರ್ದು ಪರಿತರ್ಪ ದಿವ್ಯಾಮೃತದ ತೊಱೆಯೊ ಪಾಲ್ಗಡಲುರ್ವಿ ಮೇರೆದಪ್ಪಿ ॥

ಒಸೆದು ದಾಂಗುಡಿವಿಟ್ಟು ಪಸರಿಸಿತೊ ಈ ಕೃತಿಯ ।
ರಸವೊ ಪೇೞಿಂದೆಲ್ಲ ರಸಿಕರಾನಂದಿಪಂ ।
ತೆಸಗುವುದು ತದ್ವಿಧಿಯೊಳೆಸಗದಿರ್ದೊಡೆ ಬಯ್ವರೇ ಬಡಿವರೇ ಜಡಿವರೇ ॥

ಸುಡಿ ಬೆಡಂಗಂ ಬೀಱೆ ರೀತಿ ವಿಖ್ಯಾತಿಯಂ ।
ಮಡಲಿಡೆ ಚಮತ್ಕಾರಮುಮುಮ ಸತ್ಕಾರಮಂ ।
ಸಡಗರಿಸೆ ಮೋಹನಂ ಮೋಹರಿಸೆ ಗಾಡಿ ಪರಿದಾಡಿ ಪೊಱಪೊಣ್ಮೆ ಸೊಸೆ ॥

ಕಡುಜಾಣ್ಮೆ ಕೈಗಣ್ಮೆ ಮೃದುಪದಂ ಸಂಪದಮ ।
ನಡರೆ ಭಾವಂ ಸತ್ಪ್ರಭಾವಮುಂ ಕೈಗೈಯೆ ।
ಪಡೆದು ಕೃತಿಯುಂ ಶಿವಾರ್ಪಿತವನೆಸಗುವ ನಿನ್ನ ಸೈಪಿಂಗೆ ಸಾಟಿಯುಂಟೇ ॥

ಇವನ ಗ್ರಂಥ

## ಪದ್ಮರಾಜಪುರಾಣ.

ಇದು ಕೆರೆಯ ಪದ್ಮರಸನ ಚರಿತವು; ವಾರ್ಧಕಷಟ್ಪದಿಯಲ್ಲಿ ಬರೆದಿದೆ; ಸಂಧಿ 13, ಪದ್ಯ 1266.

ಈ ಗ್ರಂಥದ ಉತ್ಕೃಷ್ಟತೆಯನ್ನು ಕವಿ ಈ ಪದ್ಯಗಳಲ್ಲಿ ಹೇಳಿದ್ದಾನೆ :—

1 ಸತಿಸಪ್ತಮಿಯ ಭೇದಮಂ ಱಟಕುಳಕ್ಕಳಮ ।
ನತಿಶಯದ ಗಮಕಕ್ರಿಯಾನಮಾಸಂಗಳಂ ।
ಪ್ರತಿಸಹಸಂಧಿಯುಂ ತದ್ಧಿತಪದಮನಪಭ್ರಂಶದೇಶೀಯುಂಗಳಂ ॥

ನುತವಾಗೆ ಯೋಗಿಪ ಸಮಾಸಮಂ ಸುಸಮಸಂ ।
ಸ್ಕೃತಮಂ ವಿರಚಿತಾವ್ಯಯೋರುಸಂಸ್ಕೃತಲಿಂಗ ।
ತತಿ ಶಿಥಿಲಪದಮುಖಾದ್ಯುಕ್ತ ಲಕ್ಷಣಮಱಿವ ಚತುರರೀಕ್ಷತಿಗೊಲಿಯರೇ ॥

ಸರಸತ್ವದಿಂ ಸಲಕ್ಷಣದಿಂ ಬೆಡಂಗಿನಿಂ ।
ಪರಮಸೌಂದರ್ಯದಿಂ ಜಾತಿಯಿಂ ಗುಣದಿನು ।
ತ್ಕರವೃತ್ತಿಯಿಂದಲಂಕಾರದಿಂ ಮೋಹನದೆ ಭಾವದಿಂ ನಿರ್ದೋಷದಿಂ ॥

---

1. ಶಬ್ದಮಣಿದರ್ಪಣದ ಕೊನೆಯಲ್ಲಿ "ಗಮಕಸಮಾಸದಿಂ" ಎಂದಾರಂಭಿಸುವ ಪದ್ಯದೊಡನೆ ಹೋಲಿಸಿ.

ನಿರುಪಮಮೃದೂಕ್ತಿಯಿಂ ಪ್ರೀತಿಯಿಂ ರೀತಿಯಿಂ ।
ವರಗಮಕದೆಸಕದಿಂದೊಳ್ಪಿಂ ಸಕಲಕಲಾ ।
ಸ್ಫುರಣದಿಂದೊಪ್ಪವೀಕೃತಿಯುವತಿ ಕೋವಿದರನೇಂ ಸೋಲಿಸದೆ ಬಿಡುವಳೇ ॥

ಗ್ರಂಥಾವತಾರದಲ್ಲಿ ಕವಿ ವಿಶ್ವೇಶ್ವರನನ್ನು ಸ್ತುತಿಸಿದ್ದಾನೆ. ಬಳಿಕ ಪಾರ್ವತಿ, ಬಸವ, ಅವನ ಹೆಂಡತಿ ಗಂಗಾಂಬಿಕೆ, ವೀರಭದ್ರ, ಭೃಂಗಿ, ಷಣ್ಮುಖ, ಪ್ರಮಥಗಣ, ಅರುವತ್ತು ಮೂವರು ಇವರುಗಳನ್ನು ಸ್ಮರಿಸಿ ತರುವಾಯ—

ಶ್ರೀ ವಿಶುದ್ಧಪ್ರಕರಣಂಗಳಸೆಸಗಿ ವೇದ ।
ಶೈವತಂತ್ರಾವಳಿಗೆ ಭಾಷ್ಯಮಂ ದೀಪಿಕೆಯ ।
ಸಾವೃತ್ತಿಯಂ ವ್ಯಾಖ್ಯೆಯಂ ಬರೆದ ಬೋಧಾಯನಾರ್ಯನುರುಶಂಕರಾರ್ಯಂ ॥
ಓವೊ ಹರದತ್ತರ್ ತ್ರಿಲೋಚನಾಘೋರಶಿವ ।
ದೇವಗುಣನಿಲಯಸವರ್ಗಾತ್ತಶಂಭುಗಳಾನ ।
ತಾವನರ್ ಭೂತಿಕಂಠಾದಿಪೂರ್ವಾಚಾರ್ಯರ್

ವೀರಮಾಹೇಶ್ವರಾಚಾರಸಂಗ್ರಹಶಾಸ್ತ್ರಕಾರನೆನಿಸಿದ ನೀಲಕಂಠನಾಗಾರ್ಯ, ಬಸವ ರಾಜೀಯಮಂ ನೆಗಳ್ದ ಪಾಲ್ಕುರಿಕೆಸೋಮೇಶ್ವರ, ಸಾರೋದ್ಧಾರಮಂ ಪಡೆದ ಲಕ್ಷ್ಮೀಧರಾರಾಧ್ಯ, ಶಿವಜ್ಞಾನದೀಪಿಕೆಯ ರಚಿಸಿದ ಮಲ್ಲಿಕಾರ್ಜುನಾಚಾರ್ಯ, ಶಿವಲೆಂಕಮಂಚಣ್ಣ, ಮಲ್ಲಿಕಾರ್ಜುನಪಂಡಿತಾರಾಧ್ಯ, ಶ್ರೀಪತಿಪಂಡಿತ—ಇವರು ಗಳನ್ನು ಹೊಗಳಿದ್ದಾನೆ.

ಆಶ್ವಾಸಗಳ ಕೊನೆಯಲ್ಲಿ—

ಮದಕುಧರವಿದಳನಭಿದುರ ಪರಮಶಿವಭಕ್ತ ।
ಪದಶತದಳಾದಭ್ರಮಕರಂದಲೀಲಾಪ್ರ ।
ಮದಪರವಶೀಭೂತಮಧುಕರೋಪಮ ಪದ್ಮಣಾಂಕಪ್ರಣೀತಮಾಗಿ ॥
ಸದಮಳಾಖಿಳಶಾಸ್ತ್ರಸಾರಮೆಂದೆನಿಸುವ ।
ಭ್ಯುದಯಕರಪದ್ಮರಾಜಪುರಾಣಕಥೆಯೊಳ್

ಎಂದಿದೆ.

ಈ ಗ್ರಂಥದಲ್ಲಿ ಕೆರೆಯಪದ್ಮರಸನು ಲೋಕಾಯತಿಕಾರ್ಹತ ಬೌದ್ಧ ಮೀಮಾಂಸಕ ಭಾಟ್ಟ ಶಾಕ್ತಮತಗಳನ್ನು ವಾದದಲ್ಲಿ ಖಂಡಿಸಿದಂತೆ ಹೇಳುವ ಭಾಗಗಳಲ್ಲಿ ಕವಿ ಶ್ರುತಿಸ್ಮೃತಿಗಳ ವಾಕ್ಯಗಳನ್ನು ಪದ್ಯಗಳಲ್ಲಿ ಹೊಂದಿಕೆಯಾಗಿ ಸೇರಿಸಿ ಬರೆದಿದ್ದಾನೆ. ಗ್ರಂಥವನ್ನು 'ಪಾಪಕ್ಷಯಾರ್ಥಂ ಭಕ್ತಿಯಿಂ ವಿರಚಿಸಿದೆಂ' ಎಂದು ಹೇಳುತ್ತಾನೆ. ಹೊಯ್ಸಳವಂಶವನ್ನು ಹೇಳುವಾಗ ಹೊಯ್ಸಳಶಬ್ದಕ್ಕೆ ಇತರರು

ಹೇಳುವ ಹಾಗೆಯೇ—ಒಬ್ಬ ಯತಿ ಸಳನಿಗೆ ಸೆಳೆಯನ್ನು ಕೊಟ್ಟು ಹುಲಿಯನ್ನು ಹೊಯ್ಯೆಂದು ಹೇಳಲು ಹೊಯ್ದುದರಿಂದ ಈ ಹೆಸರು ಬಂದಿತೆಂದು ಹೇಳುತ್ತಾನೆ.

ಇವನ ಬಂಧವು ಪ್ರೌಢವಾಗಿಯೂ ಲಕ್ಷಣಬದ್ಧವಾಗಿಯೂ ಇದೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ:—

### ವಸಂತ.

ಅಸುಗೆ ನೇಱಲ್ ಮಾಮರಂ ಪಲಸು ಮೊದಲಾಗಿ ।
ಮಿಸುಪ ಮರಗಳ್ ಕನಗೊರ್ನರ್ ಚಿಗುರ್ ಚೆಂದಳಿರ್ ।
ಪೊಸನನೆಗಳುಳ್ಳರಲ್ ಕಸುಗಾಯ್ ಕರಂ ದೋರೆ ತನಿವಣ್ಗಳಾಂತು ಮೆಱೆಯೆ ॥
ಒಸೆದವಱ ಸವಿಯನುಱೆ ಸವಿದು ಪಡಿಯುಱವಕ್ಕಿ ।
ಯೆಸೆವರಲ್ವಕ್ಕಿ ಕನ್ನಡವಕ್ಕಿ ಮೆಲ್ಲುಲಿಯ ।
ನೆಸಗೆ ಝುಂಕೃತಿಗೆಯ್ಯೆ ಸವಿವಾತನಾಡೆ ಕಣ್ಗೆಸೆದುದು ವಸಂತಸಮಯಂ ॥ 1007 ॥

ಪೞಯೆ ಮದಮಂ ಮಾಗಿ ಕಱಿಯೆ ಸೊಗಸಂ ಮಾವು ।
ನೆಱೆಯೆ ಕಳೆವೆರ್ಚೆ ಸಸಿ ಮೆಱೆಯೆ ಮಾಧವಿ ಪೂತು ।
ತೊಱೆಯೆ ಲಜ್ಜೆಯನವನಿ ಜಱೆಯೆ ತಪಮಂ ಯಮಿಗಳಿಱಯೆ ನನೆಗಣೆಯೋಪರಂ॥
ಮುಱಯೆ ವಿರಹಿಯಗುಟ್ಟು ಬೆಱೆಯೆ ಕುಸುಮೇಷು ಕುಕಿ ।
ಲಿಱಯೆ ಕೋಕಿಲೆ ದುಃಖವಱಿಯೆ ಸುಖಿಜನಕೆ ಕ ।
ಣ್ಸೆಱೆದುದು ವಸಂತಮಾಸಂ ಭೋಗಿತತಿಮುಖವಿಕಾಸಂ ಸುಖೈಕವಾಸಂ ॥ 1008 ॥

### ಸಮುದ್ರ.

ವಿದ್ರುಮವನಾವೃತಂ ವಿದ್ರುಮವನಾವೃತಂ ।
ಭದ್ರಮುಕ್ತಾಶೋಭಿ ಭದ್ರಮುಕ್ತಾಶೋಭಿ ।
ಯುದ್ರಾವಮೈನಾಗವರಶರಣನುದ್ರಾವಮೈನಾಗವರಶರಣಕಂ ॥
ಸದ್ರತ್ನಸಂಘಸತ್ಪೋದ್ರೇಭಶರನಿಚಯ ।
ಸದ್ರತ್ನಸಂಘಸತ್ಪೋದ್ರೇಭಶರನಿಚಯ ।
ಮುದ್ರಿಕ್ತತಾಶೂನ್ಯಮುದ್ರಿಕ್ತತಾಶೂನ್ಯಮಂಭೋಧಿಯುಜ್ಜೃಂಭಿಕುಂ ॥ 1009 ॥

### ಗಂಗೆ.

ಅದೆಯುರ್ಬುತದೆಯೊಡೆಯುತದೆ ತೋಱುತದೆ ಮಿಱು ।
ತದೆಯುಣ್ಮುತದೆ ಪೊಣ್ಮುತದೆ ಪೊಂಗುತದೆ ಪೊಳೆಯು ।
ತದೆ ಸುೞಯುತದೆ ಸೂಸುತದೆ ಪರ್ವುತದೆ ಪರಿಯುತದೆ ಪರಿಕಲಿಸುತದರುತೆ ॥

ಅದೆ ಹಿಗ್ಗುತದೆ ಪೆರ್ಚುತದೆ ಬುದ್ಬುದಂದೋಱು ।
ತದೆ ನೊರೆಯನೊದವಿಸುತ್ತದೆ ತೆರೆಯನಾಗಿಸು ।
ತ್ತದೆ ಭೋರ್ಗರೆಯುತೆ ಬರುತದೆಯೆಂದು ನೆರೆದ ಸಭೆಯುಲಿಯುತಿರಲ್ಕೆತಂದುದು ॥ 1010 ॥

## ಮಾದೇವಿ.

ಚಂಚಲಾಕ್ಷಿಗಳ ಡಾಳಂ ಬಳ್ಳಿಮಿಂಚಂ ಪ।
ಳಂಚಱಿಯೆ ಕಿವಿಗಳಾಶ್ರೀಕಾರದಾಕಾರ ।
ಮಂ ಚುನ್ನವಾಡೆ ಕುಡುಪುರ್ವು ಕರ್ವಿನ ಬಿಲ್ಲ ಬಿಂಕಮಂ ಕೊಂಕುಗೈಯೆ॥
ಮಿಂಚುವ ನೊಸಲ್ ತೊಳಗುವೆಳವೆಱೆಯ ಮೋಹನಕೆ ।
ಪಂಚತ್ವಮಂ ಸಾರ್ಚೆ ನಗೆಮೊಗಂ ಪೂರ್ಣೇಂದು ।
ವಿಂ ಚೆಲ್ವುದೋಱೆ ಕಾಮುರ್ಗಿಲ ಪೆರ್ಮೆಗೆ ನೂರ್ಮಡಿಸೆ ಮುಡಿಯದೇಂ ಮೆಱೆದಳೋ ॥ 1011 ॥

## ಕೆರೆಯಪದ್ಮರಸ.

ಸ್ಫುರಿಸಿ ಲಿಂಗತ್ರಯಮನಾಕ್ರಿಯಾಕಾರಕೋ ।
ತ್ಕರನಾಗಿ ತದ್ಧಿತಮನಱಿಪಿಯುಂತಸ್ಫೋರು ।
ತರವಿಧಿಯನೊರೆದು ವಕ್ತವ್ಯಮಿಂತೆಂದು ಬೋಧಿಸಿಯಾಗಮದ ಹೃದಯಮಂ ॥
ನಿರವಿಸಿ ಲಸತ್ಸ್ವತ್ವಯುಂಜೇಬ್ಬು ಮೋಕ್ಷ ಪ್ರಕೃತಿ ।
ಪುರುಷವೃತ್ತಿಯನ್ವೆದೆ ಕಾಣಿಸುವ ಸೂತ್ರದಿಂ ।
ಚರಿಪವೋಲೆಸಗಿ ಶಾಬ್ದಿಕರ ಗುರುವೆನಿಪ ಕೆಱೆಪದ್ಮರಸರೋವುಗಿಳೆಯಂ ॥ 1012 ॥

## ಪರಮತಖಂಡನ.

ಕೆಡುವೀಪ್ರಪಂಚಮಂ ನಿತ್ಯವೆಂದೆಂಬ ಬಾ ।
ಯ್ಬಡಿಕ ಮೀಮಾಂಸಕಾ ನೀಂ ಸುಮ್ಮನಿರ್ ಪುಂಸ್ತ್ವ ।
ಜಡಭಾವಪುರುಷಪ್ರಕೃತಿಗಳ ವಿವೇಕಿಸಿಯುಱಯೆ ಮೋಕ್ಷವೆಂಬ ಸಾಂಖ್ಯಾ ॥
ಉಡುಗು ಷಡ್ವಿಂಶಮಿಾಶ್ವರತತ್ವವೆಂದು ನಿಜ ।
ದೆಡೆಯನಱಿಯದೆ ಭವಕೆ ಬರ್ಪ ಪಾತಂಜಲನೆ ।
ನುಡಿಯದಿರ್ ಬ್ರಹ್ಮಕ್ಕೆ ಜೀವತೆಯನೊರೆವ ವೇದಾಂತಿ ನಿನಗೇತಱಱವ್ವೆ ॥ 1013 ॥

## ಕವಿಮುಖಕವಾಟ ಪದ್ಯ. (ಗತಪ್ರತ್ಯಾಗತಪದ್ಯ)

ವರವಿತನುನಿರಭೀಗಕನತಾವಿಕಭಸಶಿವ ।
ನಿರತತನುವಿರುಚಾರುಚಜರಾತನುಪಶುಪಸು ।
ಸರಸರಸಕಮರಣರತವಿರತಹಿಯತಯಜಕಕುಶಲಕರ ಶಶಕಕರಕ ॥

ಕರಕಕಶಶರಕಲಶಕುಕಜಯುತಯುಹಿತರವಿ|
ತರಣರಮಕಸರಸರಸಸುಪಶುಪನುತರಾಜ |
ಚರುಚಾರುವಿನುತತರನಿವಶಿಸಭಕವಿತಾನಕಗಭೀರನಿನುತವಿರವ ॥ 1014 ॥

(ಕರ್ಣಾಟವಿಭಕ್ತಿಮಾತ್ರದಲ್ಲಿ ಉಪನ್ಯಾಸಚಾತುರ್ಯದಿಂದ ಅನುಲೋಮ ಪ್ರತಿಲೋಮಾರ್ಥದವಾಗಿ ಮಾಡಿದ ಕವಿಮುಖಚಪೇಟಾಖ್ಯಸಾರ್ಥಕವಾದ ಮಹಾಪ್ರಬಂಧವಿದು.)

---

## ವಜ್ರ. 1393.

ಈತನು ಸೊರಬದ 264 ನೆಯ ಶಾಸನವನ್ನು ಬರೆದಂತೆ ಆ ಶಾಸನದಲ್ಲಿರುವ

ವಪುವಂ ಗೋಪತಿಯುಬಿಯಲ್ | ವಿಪುಳತಂಪರೋಕ್ಷನುತಿಯ ಪೇೞ್ದಂ ವಜ್ರಂ
ತಪನಶಶಿಯಿರ್ಪಿನಂ ವ | ರ್ತಿಪ ತೆಜದಿಂ ಸದ್ಬುಧಾಳಿ ಪೊಗೞಲ್ ಕೃತಿಯಂ ॥

ಎಂಬ ಪದ್ಯದಿಂದ ತಿಳಿಯುತ್ತದೆ ಈ ಶಾಸನವು ಶಕ 1315ರಲ್ಲಿ–ಎಂದರೆ 1393 ರಲ್ಲಿ– ಬರೆದುದು. ಇದರಲ್ಲಿ ಸ್ವರ್ಗಸ್ಥನಾದ ಮಹಾಪ್ರಭು ಕುಪ್ಪಟೂರ ಗೋಪೀನಾಥನ ಸ್ತುತಿರೂಪವಾದ ಪದ್ಯಗಳಿವೆ. ಈ ಶಾಸನದ ಅನೇಕ ಭಾಗವು ಹೋಗಿದೆ. ಅಸಮಗ್ರವಾದ ಒಂದು ಪದ್ಯವನ್ನು ಕೆಳಗೆ ಬರೆಯುತ್ತೇವೆ :—

. . . . . . . . . . . . . . . ಮನೋರಥಾರ್ಥಮಂ |
ಕುಡುವನದಾರೊ ಬಂಧನದಿನಿರ್ಪ್ಪರನಶ್ರಮದಿಂದೆ ಬೇಗದಿಂ ॥
ಬಿಡಿಸುವರಿಲ್ಲ ಬಂಧುಗಳ ಪಾಲನೆ ಪೋದುದು ಗೋಪಿನಾಥ ಹಾ |
ಮಡಿದನೆನುತ್ತೆ ಕಣ್ಬನಿಯ ತಂದುದು ಕುಂದದೆ ಧಾರಿಣೀಜನಂ ॥ 1015 ॥

---

## ಅಭಿನವಮಂಗರಾಜ. 1398.

ಈತನು ಅಭಿನವನಿಘಂಟು ಅಥವಾ ಕವಿಮಂಗಾಭಿಧಾನ ಎಂಬ ಗ್ರಂಥವನ್ನು ಬರೆದಿದ್ದಾನೆ. ಚಿಂತಾಮಣಿಪ್ರತಿಪದವೆಂಬ ಗ್ರಂಥವನ್ನೂ ಬರೆದಿರುವುದಾಗಿ ಪ್ರತೀತಿಯಿದೆ. ಇದು ನಮಗೆ ದೊರೆತಿಲ್ಲ.

ಇವನು ಬ್ರಾಹ್ಮಣಕವಿ; ಕಮ್ಮೆಕುಲದವನು ; ವಿಶ್ವಾಮಿತ್ರಗೋತ್ರದವನು. ಈತನ ತಂದೆ ರೆಮ್ಮಾರ್ಯರಾಮರಸ. ಶಶಿಪುರದ ಸೋಮೇಶ್ವರನ ವರಪ್ರಸಾದದಿಂದ ಈ ನಿಘಂಟುವನ್ನು ಬರೆದಂತೆ ಹೇಳುತ್ತಾನೆ. ‘ ಸೋಮೇಶನೊಲಿದಿ

ತ್ತನಾಹತಮತಿಯು ಕುಱುಪಿನಭಿನವಮಂಗ' ಎಂದು ತನ್ನನ್ನು ವಿಶೇಷಿಸಿ ಹೇಳಿಕೊಂಡಿದ್ದಾನೆ. ಈ ನಿಘಂಟುವನ್ನು ಶಕ 1320 ರಲ್ಲಿ –ಎಂದರೆ 1398 ರಲ್ಲಿ– ಬರೆದಂತೆ ಹೇಳುತ್ತಾನೆ.

**ಇವನಿಗೆ ಬಾಲಶಾರದೆ, ಅಭಿನವಬಾಲಸರಸ್ವತಿ ಎಂಬ ಬಿರುದುಗಳಿದ್ದಂತೆ ತಿಳಿಯುತ್ತದೆ.**

ತನಗೆ ಹಿಂದೆ ಇದ್ದ ನಿಘಂಟುಕಾರರನ್ನು ಈ ಪದ್ಯದಲ್ಲಿ ಹೇಳಿದ್ದಾನೆ—

ವರರುಚಿಯ ಜಾಣ್ಮೆ ಗೋಪಾಲಕನ ಬೆಡಗು ಭಾ ।
ಗುರಿಯ ಗೂಢತೆ ಧನಂಜಯನ ಪರ್ಯಾಯ ಸುರ ।
ಹರಿಯ ಸುವಿಭಕ್ತಿ ವಿಶ್ವಪ್ರಕಾಶದ ಚದುರು ನಾಗವರ್ಮನ ಕನ್ನಡಂ ॥
ವರವೈಜಯಂತಿಯ ನಯಂ ಹಲಾಯುಧನ ವಿ ।
ಸ್ತರದ ವಚನೋಕ್ತಿಯೆಂಬಿಂತಿವೆಲ್ಲವನು ಸಂ ।
ವರಿಸಿಯಭಿನವಮಂಗನುಸಿರಿದಂ ಸ್ತ್ರೀಬಾಲರಜ್ಞವಂತುಟಭಿಧಾನವಂ ॥

ತನ್ನ ಪ್ರಶಸ್ತಿಯನ್ನು "ಅಭಿನವಮಂಗನುಸಿರ್ದ ಸತ್ಕವಿತೆಯಂ ಜಜ್ಞಿವರಾರ್ ಮಾಜ್ಞಿವರಾರ್ ಮಿಕ್ಕರೋಲ್ ಮನುಜತಿಕ್ಷಾಪೇಕ್ಷೆಯಿಂದಾದನೇ" ಎಂಬ ಪದ್ಯಭಾಗದಲ್ಲಿ ಹೇಳಿಕೊಂಡಿದ್ದಾನೆ.

ಇವನ ಗ್ರಂಥ

## ಅಭಿನವನಿಘಂಟು ಅಥವಾ ಮಂಗಾಭಿಧಾನ.

ಇವನ ಕಾಲಕ್ಕೆ ಹಿಂದೆ ಇದ್ದ **ನಾಗವರ್ಮ**ನ ನಿಘಂಟುವನ್ನು ಮನಸ್ಸಿನಲ್ಲಿಟ್ಟುಕೊಂಡು ತನ್ನ ಗ್ರಂಥಕ್ಕೆ ಅಭಿನವನಿಘಂಟು ಎಂದು ಹೆಸರಿಟ್ಟಿರುವಂತೆ ತೋರುತ್ತದೆ.

ಇದು ಉದ್ದಂಡಷಟ್ಪದಿಯಲ್ಲಿ ಎಂದರೆ ವಾರ್ಧಕಷಟ್ಪದಿಯಲ್ಲಿ ಬರೆದಿದೆ. ಇದರಲ್ಲಿ ಸ್ವರ್ಗ, ಭೂ, ಪಾತಾಳ, ಸಾಮಾನ್ಯ, ನಾನಾರ್ಥ ಎಂಬ 5 ಕಾಂಡಗಳಿವೆ. ಒಂದೊಂದು ಕಾಂಡವೂ ವರ್ಗಗಳಾಗಿ ಭಾಗಿಸಲ್ಪಟ್ಟಿದೆ. ಈ ಗ್ರಂಥದಲ್ಲಿ ಸಂಸ್ಕೃತ ಶಬ್ದಗಳಿಗೆ ಕನ್ನಡದಲ್ಲಿ ಅರ್ಥವನ್ನು ಕೊಟ್ಟಿದ್ದಾನೆ. ತನ್ನ ಗ್ರಂಥದ ಉತ್ಕೃಷ್ಟತೆಯನ್ನೂ ಪ್ರಯೋಜನವನ್ನೂ ಈ ಪದ್ಯದಲ್ಲಿ ಹೇಳಿದ್ದಾನೆ:—

ಪಡೆದ ತಾಯಂತಲಂಕಾರದಂದಮನೀವು ।
ದಡರ್ದ ಪಿತನಂತೆ ಲಕ್ಷಣಸುಶಬ್ದಮನೀವು ।
ದೊಡೆಯನಂತೆ ಪದಾರ್ಥಮಾವುದಂಗನೆಯಂತೆ ಭಾವರಸಗಳನೀವುದು ॥

ಕಡುಗುರುವಿನಂತತಿವಿಭಕ್ತಿಲಿಂಗಮನೀವು ।
ದೊಡನಾಡಿಯಂತೆ ತಾತ್ಪರ್ಯಾರ್ಥವಿಾವುದೆಂ ।
ದೊಡರಿಸಿದನಭಿನವನಿಘಂಟನಭಿನವಮಂಗನಭಿನವವಿಲಾಸದಿಂದೆ ॥

ಗ್ರಂಥಾವತಾರದಲ್ಲಿ ಸೋಮೇಶನನ್ನು ಸ್ತುತಿಸಿ ಬಳಿಕ ಸರಸ್ವತೀವಿನಾಯಕರನ್ನು ಹೊಗಳಿದ್ದಾನೆ.

ಕಾಂಡಗಳ ಕೊನೆಯಲ್ಲಿ—

ಇತಿ ಶಶಿಪುರಾಧಿನಾಥಸೋಮೇಶ್ವರಚಾರುಚರಣಾರವಿಂದಮಧುಸೇವಿತಮಧುಕರಾಯಮಾನ ಸಕಲವಿಬುಧಜನಮಾನಸೋಲ್ಲಾಸನಿವಾಸ ಅಭಿನವಬಾಲಸರಸ್ವತಿ ಮಂಗರಾಜವಿರಚಿತಮಪ್ಪಭಿನವಾಭಿಧಾನದೊಳ್

ಎಂಬ ಗದ್ಯವಿದೆ.

ಈ ಗ್ರಂಥದಿಂದ ಒಂದೆರಡು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

ಕೇಂಕೃತಂ ಪಕ್ಷಿಯೊಳಗೀಂಕೃತಂ ಪಾತನೊಳು ।
ಝೇಂಕೃತಂ ತುಂಬಿಯೊಳು ಚೀತ್ಕೃತಂ ರಥಗಳೊಳು ।
ಭೀಂಕೃತಂ ಬಾಣದೊಳು ಫೀಟ್ಕೃತಂ ಕಲಭದೊಳು ಬೃಂಹಿತಂ ಮದಗಜದೊಳು ॥
ಟಂಕೃತಂ ಬಿಲ್ಲಿನೊಳು ಸೀತ್ಕೃತಂ ಸುರತದೊಳು ।
ಹೂಂಕೃತಂ ಧೀರರೊಳು ಮಾಂಕೃತಂ ಪರ್ಣಿಯೊಳು ।
ಝುಂಕೃತಂ ಕಟಕದೊಳು ಹೇಷಾಕೃತಂ ವಾಜಿತತಿಯುಲ್ಲಿ ವರ್ತಿಸಿರ್ಕುಂ ॥ 1016 ॥

ಕೈಕಾಲುಮೋಟನಾದಂ ಕುಣಿಕನೆನಿಸಿರ್ಕುಂ ।
ಕೈಕಾಲು ಕಿಱಿದಾಗೆ ವಾಮನೆನಿಸಿರ್ಕುಮಾ ।
ಕೈಕಿತಂ ಪೃಷ್ಠಿಯೆನೆ ಸೂಕ್ಷ್ಮದವನಕ್ಕು ಕುಬ್ಜಂ ಗುಡ್ಡನೆಂದೆನಿಕ್ಕುಂ ॥
ಏಕಹಸ್ತಂ ವಿಕಳಪಾಣಿಯೊಕ್ಕೈಯನ ।
ಕ್ಕೇಕಾಂಘ್ರಿಯೆನೆ ಕುಂಟನಕ್ಕು ಗತನಾಸಿಕಂ ।
ಮೂಕೊಱೆಯನಕ್ಕು ಕಿವಿಯಿಲ್ಲದವ ಮೂಟನಕ್ಕದ್ವಿಜಂ ಬೋಡನಕ್ಕುಂ ॥1017॥

---

## ಆಯತವರ್ಮ. ಸು. 1400.

ಈತನು ಕನ್ನಡರತ್ನಕರಂಡಕವನ್ನು ಬರೆದಿದ್ದಾನೆ. ಇವನು ಜೈನಕವಿ; ವರ್ಧಮಾನಸಿದ್ಧಾಂತದೇವನ ಶಿಷ್ಯನು. ಇವನ ವಿಷಯವಾಗಿ ಇವನ ಗ್ರಂಥದಿಂದ ಇನ್ನೇನೂ ತಿಳಿವುದಿಲ್ಲ. ಇವನ ಕಾಲವನ್ನು ನಿಶ್ಚಯಿಸುವುದಕ್ಕೆ ಸರಿಯಾದ ಆಧಾರವಿಲ್ಲ; ಸುಮಾರು 1400 ರಲ್ಲಿ ಇದ್ದಿರಬಹುದೆಂದು ತೋರುತ್ತದೆ.

ಇವನ ಗ್ರಂಥ

## ಕನ್ನಡ ರತ್ನಕರಂಡಕ.

ಇದು ಚಂಪೂಗ್ರಂಥ; ಸಮ್ಯಗ್ದರ್ಶನಸ್ವರೂಪನಿರೂಪಣ, ಸಮ್ಯಗ್ಜ್ಞಾನಸ್ವರೂಪನಿರೂಪಣ, ಸಮ್ಯಕ್ಚಾರಿತ್ರಸ್ವರೂಪನಿರೂಪಣ ಎಂದು 3 ಪರಿಚ್ಛೇದಗಳಾಗಿ ಭಾಗಿಸಲ್ಪಟ್ಟಿದೆ. ಇದರಲ್ಲಿ ಜೈನಮತಕ್ಕೆ ಸಂಬಂಧಪಟ್ಟ ರತ್ನತ್ರಯವೆಂಬ ದರ್ಶನಜ್ಞಾನಚಾರಿತ್ರಗಳು ವರ್ಣಿಸಲ್ಪಟ್ಟಿವೆ. ಗ್ರಂಥಾವತಾರದಲ್ಲಿ ಚತುರ್ವಿಂಶತಿ ಜಿನಸ್ತುತಿ ಇದೆ. ಗ್ರಂಥಾಂತ್ಯದಲ್ಲಿ ಈ ಗದ್ಯವಿದೆ—

ಇದು ಭಗವದರ್ಹತ್ಪರಮೇಶ್ವರಪರಮಭಟ್ಟಾರಕವೀತರಾಗಸರ್ವಜ್ಞವದನವನಜಸಮುದ್ಗತಸದಸದಾತ್ಮಕಪರಮತತ್ತ್ವಭಾವನಾಭಾವಿತಸ್ವಾಂತ ಶ್ರೀವರ್ಧಮಾನಸಿದ್ಧಾಂತದೇವಚರಣಸರಸೀರುಹಸ್ಮರಣಪರಿಣತಾಂತಃಕರಣಕುಶೇಶಯ ಶ್ರೀಮದಾಯುತವರ್ಮವಿರಚಿತಮಪ್ಪ ರತ್ನಕರಂಡಕದೊಳ್.

ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ—

### ರತ್ನತ್ರಯ.

ತತ್ತ್ವದ ರುಚಿ ಸಮ್ಯಕ್ತ್ವಂ । ತತ್ತ್ವಂಗಳನೊಳ್ಳಿತಾಗಿಯಱಿವುದು ಬೋಧಂ ।
ತತ್ತ್ವಂ ತನ್ನೊಳ್ ನೆಱೆದಿರೆ । ಸತ್ತ್ವಂಗಳನೋವಿಕಾವುದದುವೆ ಚರಿತ್ರಂ ॥ 1018 ॥

### ಸಲ್ಲೇಖನೆ.

ಎಲ್ಲಾ ಪರಿಗ್ರಹಮುಮಂ । ಬಿಲ್ಲದ ಮನದೊಡೆಯನಾಗಿ ಸಲೆ ತಪಮಂ ತ ।
ಳ್ವಿಲ್ಲದೆ ಕೆಯ್ಕೊಳ್ವುದು ತಾಂ । ಸಲ್ಲೇಖನೆಯೆಂದು ಪೇೞ್ವರಾಚಾರ್ಯರ್ಕಳ್ ॥ 1019 ॥

### ವೈರಾಗ್ಯ.

ಜಳಬುದ್ಬುದದಿಂ ಕ್ಷಣಿಕಂ । ಜಳಧರನಿವಹಂಗಳಿಂದಮಧ್ರುವಮುಳ್ಕಂ ।
ಗಳ ರಂಜನೆಯಂತಚಿರಂ । ಬಳಸಿದ ಬಂಧುಗಳುಮೊಡಲುಮೊದವೆಯುಮೆಂತುಂ ॥ 1020 ॥

ಚತುರಂಗಬಲಮುಮಾಯುಧ । ತತಿಯುಂ ಬರಮಿತ್ತ ದೈವಮುಂ ಬಂಧುಗಳುಂ ।
ಕ್ಷಿತಿಯುಂ ನಿಜಭುಜವೀರ್ಯಮು । ಮತೀತಮಪ್ಪಂದು ಕಾಯಲಾಱವು ನರರಂ ॥ 1021 ॥

ಸಂಸಾರಕಾರಣಂಗಳ್ । ಹಿಂಸಾರುಚಿ ಕಳವು ಪುಸಿ ಪರಸ್ತ್ರೀಗಮನಂ ।
ಮಾಂಸಮಧುಮದ್ಯಸೇವನೆ । ಸಂಸಯಮೇಂ ದುಃಖಕಾರಣಂಗಳಿವಿನಿತುಂ ॥ 1022 ॥

---

## ಚಂದ್ರಕೀರ್ತಿ. ಸು. 1400.

ಈತನು ಪರಮಾಗಮಸಾರವನ್ನು ಬರೆದಿದ್ದಾನೆ. ಇವನು ಜೈನಕವಿ. ಗ್ರಂಥಾಂತ್ಯದಲ್ಲಿರುವ

ಮುನಿಪತಿ ದರ್ಶನಶುದ್ಧಂ । ವಿನುತಯಶಂ ಶೀಲರತ್ನನಚಳಿತಧೈರ್ಯಂ ।
ಮನಸಿಜಮದಕರಿಸಿಂಹಂ । ವಿನಯನಿಧಾನಂ ಸರಸ್ವತೀಮುಖತಿಲಕಂ ॥
ಯಮನಿಯಮಧ್ಯಾನಯುತಂ । ಸಮಚಿತ್ತಂ ತತ್ತ್ವವೇದಿ ವೈರಾಗ್ಯಯುತಂ ।
ಶಮಿತಕಷಾಯಂ ನಿಸ್ಪೃಹ । ನಮಲಂ ಭವ್ಯಂ ಸರಸ್ವತೀಮುಖತಿಲಕಂ ॥

ಎಂಬ ಪದ್ಯಗಳಲ್ಲಿ ಕವಿ ತನ್ನ ಗುಣಾದಿಗಳನ್ನು ಹೇಳಿಕೊಂಡಿರುವಂತೆ ತೋರುತ್ತದೆ. ಅಲ್ಲದೆ ಆತನಿಗೆ ಸರಸ್ವತೀಮುಖತಿಲಕ ಎಂಬ ಬಿರುದು ಇದ್ದಂತೆಯೂ ತಿಳಿಯುತ್ತದೆ. ಒಂದೆರಡುಪದ್ಯಗಳು ಕವಿಜನಮಿತ್ರ ಎಂದು ಮುಗಿಯುತ್ತವೆ. ಇದೂ ಕವಿಯ ಬಿರುದಾಗಿದ್ದರೂ ಇರಬಹುದು. ಕವಿಯ ಕಾಲವನ್ನು ನಿರ್ಧರಿಸಲು ಆವ ಆಧಾರವೂ ಇಲ್ಲ; ಸುಮಾರು 1400 ರಲ್ಲಿ ಇದ್ದಿರಬಹುದೆಂದು ತೋರುತ್ತದೆ.

ಇವನ ಗ್ರಂಥ

### ಪರಮಾಗಮಸಾರ.

ಇದು ಕಂದವೃತ್ತಗಳಲ್ಲಿ ಬರೆದಿದೆ; ಪದ್ಯಗಳು 132. ಇದರಲ್ಲಿ ಆತ್ಮಸ್ವರೂಪ, ವೈರಾಗ್ಯ ಮುಂತಾದ ವಿಷಯಗಳು ನಿರೂಪಿತವಾಗಿವೆ. ಇವಕ್ಕೆ ಈ ಹೆಸರು ಬರಲು ಕಾರಣವನ್ನು ಕವಿ ಈ ಪದ್ಯದಲ್ಲಿ ಹೇಳುತ್ತಾನೆ—

ಪರಮಜಿನೇಶ್ವರಮತದೊಳ್ । ಪರಿಕಿಸಿ ಸಾರಾಯಮಪ್ಪುವಂ ಕೊಂಡು ಕರಂ ।
ವಿರಚಿಸಿತಪ್ಪುದಱಿಂದಂ । ಪರಮಾಗಮಸಾರಮಾದುದೀಕೃತಿಯುಂದಂ ॥

ಗ್ರಂಥಾವತಾರದಲ್ಲಿ ಪುರುದೇವಸ್ತುತಿ ಇದೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ—

ಎನ್ನ ಧನಮೆನ್ನ ಪುತ್ರರಿ । ದೆನ್ನಯ ಗೃಹಮೆನ್ನ ವಸ್ತುವಾಹನಮೆನುತುಂ ।
ತನ್ನ ನಿಜಾತ್ಮನನಱಿಯದೆ।ಮನಿಸುಗುಂ ಮೂಢಮತಿಯೊಳೊಂದಿದಜೀವಂ ॥1023॥

ಧ್ಯಾನಂ ಕಿಚ್ಚಾಗಲಸದ್ । ಜ್ಞಾನಂ ತಿದಿಯಾಗೆ ವೃತ್ತವೌಷಧವಾಗಲ್ ।
ಜ್ಞಾನಿ ಸುದುಗಾತ್ಮಲೋಹಮ । ನೇನುಂ ಮಳಮೊಂದು ನಿಲ್ಲದಂತಿರೆ ಮುದದಿಂ ॥ 1024 ॥

ನೀರೊಳಗೆ ಪುಟ್ಟಿ ಪದ್ಮಂ । ನೀರೊಳ್ ತಾಂ ಮುಟ್ಟದಂತೆ ನಿಜರುದ್ಧಾತ್ಮಂ ।
ಸಾರಮಣಮಲ್ಲದೀ ಸಂ । ಸಾರದೊಳೊಂದಿರ್ದುಮೊಂದನಮಳನಮೂರ್ತಂ ॥1025॥

ಆನಪ್ಪೊಡಘವಿಹೀನಂ । ತಾನಪ್ಪೊಡೆ ಕರ್ಮಜನಿತಮಾಯೊಡಲೆನುತುಂ ।
ಜ್ಞಾನಿಯದಜಿಲ್ಲಿ ಮೋಹಮ ।ನೇನುಂ ಪೊರ್ದಿಸದೆ ನೆಗಟ್ಟುಮಾತ್ಮೋನ್ನತಿಯೊಳ್ ॥ 1026 ॥

ತನು ತನಗೆಂಬ ತನ್ನಿ ತನಗೆಂಬ ಧನಂ ತನಗೆಂಬ ರಾಜ್ಯರಂ ।
ಜನೆ ತನಗೆಂಬ ದರ್ಪಮುನದಿರ್ಪಿಯೆ ತನ್ನೊಳೆ ತಾನೆ ಭಾವಿಸಲ್ ॥
ತನು ತನಗಲ್ಲ ತನ್ನಿ ತನಗಲ್ಲ ಧನಂ ತನಗಲ್ಲ ರಾಜ್ಯರಂ ।
ಜನೆ ತನಗಲ್ಲವೆಂದುಟಿದು ನಿಂದುದೆ ಯೋಗಿಗೆ ಯೋಗಿಲಕ್ಷಣಂ ॥ 1027 ॥

---

## ಕವಿಮಲ್ಲ. ಸು. 1400.

ಈತನು ಮನ್ಮಥವಿಜಯವನ್ನು ಬರೆದಿದ್ದಾನೆ. ಇವನು ಬ್ರಾಹ್ಮಣ ಕವಿ; ಕವಿಪುಟ್ಟಣಾಂಕಪಂಡಿತನಿಂದ (ಸು.1380) ವಿದ್ಯೆಯನ್ನು ಕಲಿತಂತೆ ಹೇಳುತ್ತಾನೆ. ಇವನಿಗೆ ಲಕ್ಷಣಕವಿ ಎಂಬ ಬಿರುದಿದ್ದಂತೆ ತಿಳಿಯುತ್ತದೆ. ಇವನಕಾಲವು ಸುಮಾರು 1400 ಆಗಿರಬಹುದು. ಸಂಸ್ಕೃತ ಕವಿಗಳಲ್ಲಿ ಕಾಳಿದಾಸಬಾಣಮಯೂರರನ್ನು ಸ್ಮರಿಸಿ ಕನ್ನಡಕವಿಗಳಲ್ಲಿ ಅಗ್ಗಳ ಮುಂತಾದವರನ್ನು ಈ ಪದ್ಯಗಳಲ್ಲಿ ಸ್ತುತಿಸುತ್ತಾನೆ—

ಇಳೆಯೊಳ್ ಕರ್ಣಾಟಭಾಷಾವಿದರೆನಿಸಿಪೊಳ್ಗಬ್ಬಿಗರ್ ತಾವೆನಿಪ್ಪ ।
ಗ್ಗಳದೇವಂ ನೇಮಿಚಂದ್ರಂ ಮನಸಿಜ ಸುಜನೋತ್ತಂಸ ರುದ್ರಾಂಕ ಪೊನ್ನಂ ॥
ಕಳೆಯಾಣ್ತಂ ನಾಗವರ್ಮಾದ್ಯನುಪಮಗುಣಿಗಳ್ ನೂತನಬ್ರಹ್ಮರಮ್ಮೊಳ್ ।
ವಿಳಸದ್ವಾಗ್ವೃತ್ತಿಯಂ ಕಾಬ್ಬುರಮೆಸಗುವಿನಂ ಮಾಳ್ಕೆ ಕಾರುಣ್ಯದಿಂದಂ ॥
ನಿರತಂ ಕರ್ಣಾಟಕದೊಳ್ । ಪರಿಕಿಸೆ ಶಬ್ದಜ್ಞನಾವನೊರ್ವನೆ ಲೋಕ ।
ಕ್ಕರಿದಲ್ತೆ ಭಾಪು ಕವಿಕುಂ । ಜರ ಕೇಶವರಾಜ ಗೋಚರಿಸು ಮನ್ನನದೊಳ್ ॥

ಇವನ ಗ್ರಂಥ

### ಮನ್ಮಥವಿಜಯ.

ಇದು ಚಂಪೂರೂಪವಾಗಿದೆ. ಗ್ರಂಥಾವತಾರದಲ್ಲಿ ಕವಿ ಕಾಮನನ್ನು ಸ್ತುತಿಸಿದ್ದಾನೆ; ಬಳಿಕ ಈಶ್ವರ, ವಿಷ್ಣು, ಬ್ರಹ್ಮ, ಆದಿಶಕ್ತಿ, ಗಣೇಶ, ಸರಸ್ವತಿ ಇವರುಗಳನ್ನು ಪರಿವಿಡಿಯಿಂದ ಹೊಗಳಿದ್ದಾನೆ. ತನ್ನ ಗ್ರಂಥದ ಹೆಸರು ಮುಂತಾದುದನ್ನು ಈ ಪದ್ಯದಲ್ಲಿ ಹೇಳಿದ್ದಾನೆ—

ಸ್ಮರವಿಜಯಂ ಕೃತಿವೆಸರಾ । ದರಿಪರ್ ಶೃಂಗಾರಸಾರಕೋವಿದರೊಲವಿಂ ।
ವಿರಚಿಸಿದಂ ಲಕ್ಷಣಕವಿ । ವರನೆಂದೆನೆ ಮೆಚ್ಚಿ ಕೂರ್ತು ಪೊಗಟ್ಟುದರೊಳರೆ ॥

ಗ್ರಂಥಾಂತ್ಯದಲ್ಲಿ ಈ ಗದ್ಯವಿದೆ—

ಇದು ವಿದಿತಮದನಮುದ್ರಾಂಕಿತವಿದೂರಜನನಿಬಂಧನಕಾರಾಗಾರಮಭಿನವನಾಯಕನಾಯಿಕಾಶೃಂಗಾರಸಾರೋದ್ಧಾರಮುಂ ಸಕಲವಿಬುಧಸೇವ್ಯಮಾನಮುಂ ಲಕ್ಷ್ಮಣಕವೀಂದ್ರವಿರಚಿತಮಪ್ಪ ಮನ್ಮಥವಿಜಯದೊಳ್.

ಈ ಗ್ರಂಥದಿಂದ ಸ್ವಪ್ರಶಂಸಾರೂಪವಾದ ಕವಿಯ ಒಂದು ಪದ್ಯವನ್ನು ಉದ್ಧರಿಸಿ ಬರೆಯುತ್ತೇವೆ—

ಚತುರಾಸ್ಯಂ ಜಡಜಸ್ಥನಂಗಜಹರಂ ಕಾಡೊಳ್ ಸಮಂತಿರ್ಪನ ।
ಚ್ಯುತನೆಂದುಂ ಸಿರಿಯಿಂದೆ ಗರ್ವಿತನವಂ ಭೂಭಾರಕಜ್ಞಾನಿ ಗೀ ॥
ಷ್ಪತಿ ಪಾಣ್ಬಂ? ಗೊರವಂಕಳಾವಳಿಯನೆಂದಿಂತೆಲ್ಲಿಯುಂ ನಿಲ್ಲದ ।
ಪ್ರತಿಮಳ್ ಸತ್ಕವಿಮಲ್ಲನೊಳ್ ಮೊಗದೆ ನಿಂದಳ್ ವಾಣಿ ಸಲ್ಲೀಲೆಯಿಂ ॥1028 ॥

---

## ನೀಲಕಂಠಶಿವಾಚಾರ್ಯ. ಸು. 1400.

ಈತನು ಬರೆದಿರುವ ಬ್ರಹ್ಮಸೂತ್ರವ್ಯಾಖ್ಯಾನರೂಪವಾದ ಕ್ರಿಯಾಸಾರವೆಂಬ ಸಂಸ್ಕೃತಗ್ರಂಥದ 19 ನೆಯ ಉಪದೇಶದ ಕೊನೆಯಲ್ಲಿರುವ "ಅಧ್ವನಾಮಧ್ವಪತೇ ಶ್ರೇಷ್ಠಸ್ಯಾಧ್ವನಃ ಪಾರಮಶೀವೇತಿಮಂತ್ರೇಣ ಕೃತಕಲಾಸನ್ನಿಧಿಃ ನಸ್ಯ ಲಿಂಗಸ್ಯ ದೀಕ್ಷಾಪೂರ್ವಕಧಾರಣಮಿತ್ಯಾಗಮಪ್ರಕಾರೋ ಭಾಷಾಪ್ರಬಂಧೇ' ಸ್ಮೃತ್ಯುತೇ' ವಲೋಕನೀಯಃ" ಎಂಬ ಭಾಗದಿಂದ ಇವನು ಒಂದು ಕನ್ನಡಗ್ರಂಥವನ್ನೂ ಬರೆದಿರುವಂತೆ ತಿಳಿಯುತ್ತದೆ.

ಈತನು ವೀರಶೈವಕವಿ; ಇವನ ತಂದೆ ಮಲ್ಲಯದೇವ, ತಾಯಿ ಚೆನ್ನಮಾಂಬೆ. **ಮಲ್ಲಣಾರ್ಯನ** ವೀರಶೈವಾಮೃತಪುರಾಣದಲ್ಲಿ (1530) ಈತನ ಕ್ರಿಯಾಸಾರದಿಂದ ಅನುವಾದಮಾಡಿರುವುದರಿಂದ ಈತನು ಅವನಕಾಲಕ್ಕೆ ಹಿಂದೆ ಇದ್ದಿರಬೇಕು. ಎಷ್ಟು ಹಿಂದೆ ಇದ್ದನೋ ತಿಳಿಯದು; ಸುಮಾರು 1400 ರಲ್ಲಿ ಇದ್ದಿರಬಹುದೆಂದು ಊಹಿಸುತ್ತೇವೆ.

---

## ಅಭಿನವಚಂದ್ರ. ಸು. 1400.

ಇವನು ಅಶ್ವಶಾಸ್ತ್ರವೆಂಬ ಗ್ರಂಥವನ್ನು ಬರೆದಿದ್ದಾನೆ. ಈತನು ಬ್ರಾಹ್ಮಣಕವಿ. ಇವನ ತಂದೆ ಕಾಳಪಯ್ಯ, ತಾಯಿ ಅತ್ತಿಮಬ್ಬೆ, ಅಣ್ಣ ಸೋಮದೇವ, ಸ್ಥಳ ಬಾಗೆವಾಡಿ. "ಚಂದ್ರಕವೀಂದ್ರ ವಾಗ್ವಿಲಾಸಂ ನೆಗಟಿಲ್ ವಾಜಿಶಾಸ್ತ್ರಮುಂ ವಿರಚಿಸು

ವೆಂ" ಎಂಬುದರಿಂದ ಹಿಂದೆ ವಾಜಿಶಾಸ್ತ್ರವನ್ನು ಬರೆದ ಚಂದ್ರಕವಿಯನ್ನು ಅನುಸರಿಸಿ ಕವಿ ಈ ಗ್ರಂಥವನ್ನು ಬರೆದಂತೆ ತೋರುತ್ತದೆ. ಈ ಚಂದ್ರಕವಿ ಮದನತಿಲಕವನ್ನು ಬರೆದ ಚಂದ್ರರಾಜನಾಗಿರಬಹುದು. ಆ ಚಂದ್ರಕವಿಯನ್ನು ಅನುಸರಿಸಿ ಅಭಿನವ ಚಂದ್ರ ಎಂದು ಕವಿ ತನಗೆ ಹೆಸರಿಟ್ಟುಕೊಂಡಿರಬಹುದು. ಇವನ ಕಾಲವನ್ನು ನಿರ್ಧರಿಸುವುದಕ್ಕೆ ಸರಿಯಾದ ಆಧಾರವಿಲ್ಲ; ಸುಮಾರು 1400 ರಲ್ಲಿ ಇದ್ದಿರಬಹುದೆಂದು ಊಹಿಸುತ್ತೇವೆ.

ಇವನಿಗೆ ಸುಕರವಿಳಾಸ, ಬುಧಬಂಧು, ವಿಬುಧದಿನಕರ, ಗುಣರತ್ನ ಎಂಬ ಬಿರುದುಗಳಿದ್ದಂತೆ ತೋರುತ್ತದೆ.

ತನಗೆ ಹಿಂದೆ ಅಶ್ವಶಾಸ್ತ್ರವನ್ನು ಬರೆದವರಲ್ಲಿ ಕೆಲವರ ಮತವನ್ನು ಹೊಸಗನ್ನಡದಿಂದ ಹೇಳುವಂತೆ ಈ ಪದ್ಯದಲ್ಲಿ ಹೇಳಿದ್ದಾನೆ:—

ಅನುಪಮಹಯಶಾಸ್ತ್ರಾಗಮ | ವನಸಿಥಿಯೊಳ್ ಸಂಪದತ್ತಕೃತಿಲಕ್ಷಣಮಂ |
ದಿನಕರತನಯನ ರೇವಂ | ತನ ಮತಮಂ ಪೇೞ್ವೆನೆಸೆಯೆ ಪೊಸಗನ್ನಡದಿಂ ||

ತನ್ನ ಕವಿತಾಚಾತುರಿಯನ್ನು ಈ ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ—

ಪ್ರಹಸಿತಸರಸ್ವತೀಮುಖ | ಕುಹರವಿನಿರ್ಗತನುತಪ್ರಸನ್ನಾಳಾಪಂ |
ಸಹಜಮಿದೆಂಬಂತಿರೆ ನಾ | ಙ್ಕ್ತಿಮಯನಾಂ ಮೆಱೆದು ವಿಬುಧರಂ ಮೆಚ್ಚಿಸುವೆಂ ||
ಅರ್ಥಾವಗಾಢಮೆನಿಸಿ | ಪರ್ಥಂ ಬುಧಜನದ ಮನಕೆವರೆ ಪೇೞಲ್ಕ |
ನ್ವರ್ಥಂ ಕವಿತಾಪ್ರಭವಸ | ಮರ್ಥಿಕೆಯೆನಗುಂಟು ಪೇೞ್ವೆನೆನ್ನ ಜೀವನಿತಂ ||

ಕುಕವಿಗಳನ್ನು ಈ ಪದ್ಯದಲ್ಲಿ ನಿಂದಿಸಿದ್ದಾನೆ.—

ಅಗೞ್ದಡಪಿ ಪೆಜರ ಕೃತಿಯಂ | ತಗುಳ್ದುಮವಂ ನುಡಿದು ಕೊರಲ ಸೆರೆ ಬಿಗಿವಿನೆಗಂ |
ಬಗುಳ್ದು ಬೞಿಕೆಡದಕಾಲೊಳ್ | ನುಗುಳ್ದು ಮನಂಮುಗುೞ್ದು ಮಣಿವ ದುಷ್ಕವಿ ಕವಿಯೇ ||

ಇವನ ಗ್ರಂಥ

## ಅಶ್ವಶಾಸ್ತ್ರ.

ಇದು 16 ಅಧ್ಯಾಯಗಳಾಗಿ ಭಾಗಿಸಲ್ಪಟ್ಟಿದೆ; 888 ಪದ್ಯಗಳನ್ನು ಒಳಕೊಂಡಿದೆ. ಪದ್ಯಗಳು ಪ್ರಾಯಿಕವಾಗಿ ಕಂದಗಳಾಗಿವೆ. ಇದರಲ್ಲಿ ಸರ್ವಾಂಗ ಪರೀಕ್ಷೆ, ವರ್ಣ, ಸುಳಿ, ಹಲ್ಲಿನಿಂದ ವಯಸ್ಸನ್ನು ನಿರ್ಣಯಿಸುವುದು, ಹಯ ವಯೋಲಕ್ಷಣ, ಪೋಷಣವಿಧಿ, ಚಿಕಿತ್ಸೆ ಮೊದಲಾದ ವಿಷಯಗಳು ಹೇಳಿವೆ.

ಗ್ರಂಥವತಾರದಲ್ಲಿ ವಿಷ್ಣುಸ್ತುತಿ ಇದೆ. ಬಳಿಕ ಕವಿ ಶಿವ, ಬ್ರಹ್ಮ, ಸೂರ್ಯ, ಗಣಪತಿ, ಲಕ್ಷ್ಮಿ, ಮಹಿಷಾಸುರಮರ್ದಿನಿ ಇವರುಗಳನ್ನು ಸ್ಮರಿಸಿದ್ದಾನೆ.

**ತನ್ನ ಕವಿತಾಶಕ್ತಿಯನ್ನು ತೋರಿಸಲು ಈ ಗ್ರಂಥವನ್ನು ಪದ್ಯರೂಪವಾಗಿ ಬರೆದಂತೆ ಈ ಪದ್ಯದಲ್ಲಿ ಹೇಳಿದ್ದಾನೆ—**

ಕನ್ನಡಕವಿ ನಿಜಕವಿತೆಯ । ಬಿನ್ನಣಮಂ ಮೆಱೆವುದರಿದೆ ಪದ್ಯದೊಳದಱಿಂ ।
ಬಿನ್ನಣಮನಱಿಪಲೆಂದಾನೆನ್ನರ್ಥಿಯ ವಾಜಿಶಾಸ್ತ್ರಮಂ ವಿರಚಿಸುವೆಂ ॥

**ಅಧ್ಯಾಯಗಳ ಅಂತ್ಯದಲ್ಲಿ ಗ್ರಂಥಕ್ಕೆ ಚಂದ್ರಮತ ಎಂಬ ಹೆಸರು ಹೇಳಿದೆ.**

**ಇದು ವೈದ್ಯಗ್ರಂಥವಾದರೂ ಬಂಧವು ಲಲಿತವಾಗಿದೆ. ಇದರಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—**

ಅತಿದೂರಂ ಪಯಣಕ್ಕೆ ಬೇಂಟೆಗೆ ವಿನೋದಾರ್ಥಕ್ಕೆ ಸಂದಿಗ್ಧದೊಳ್ ।
ಜಿತಕಾರ್ಯಕ್ಕರಿರಾಜರಕ್ಕೆ ಭಟರುಂ ಗಂಧೇಭಮುಂ ಸುತ್ತಿ ಮು ॥
ತ್ತಿ ತುಱುಂಬಿದರ್ ಪದಕ್ಕೆ ಚಿಂತಿತಮನೋವಾಕ್ಕಾಯಕರ್ಮಂಗಳೊಳ್।
ಜಿತಮಪ್ಪಂತು ನಿಜಾಧಿಪಂಗೆ ತುರಗಂ ಮಾೞ್ಕುಂ ಸುಖೋಪಾಯಮಂ ॥ 1029 ॥

ಪ್ರಿಯಂ ಮಱೆಯಲ್ ನೆಲನಂ। ಕಾಯಲ್ ಮನಮೆಯ್ದೆ ಡೆಯನೆಯ್ದಲ್ ಬಗೆಯಂ।
ಪಾಯಲ್ ಬಯಸುವೊಡಾಜಾ । ನೇಯತುರಂಗಮುಮನೆಯ್ದೆ ಪೊರೆವುದು ಭೂಪಂ ॥ 1030 ॥

ವಾಜಿಯೆ ಮೊದಲಾ ವಿಜಯ । ಕ್ಕಾಜಿಯೊಳರಸಂಗೆ ಬುದ್ಧಿವಂತಂಗದಱಿಂ ।
ವಾಜಿಗಳನೆಯ್ದೆ ಪೊರೆವುದು । ಪೂಜಿಸುವುದು ವಿಜಯಲಕ್ಷ್ಮಿಯುಂ ಬಯಸುವವಂ ॥ 1031 ॥

ತೆರೆಯಿಲ್ಲದ ಸೆರೆಯಿಲ್ಲದ। ನರೆಯಿಲ್ಲದ ಕಿಱಿಯವಾಗಿ ತೆಳ್ಪನೆ ಮೊಸೆಯಾ ।
ಗಿರೆ ಕಿವಿಗಳೊಳಗೆ ಸುೞ್ಳಾ । ಗಿರೆ ಕಟಮುಂ ವಿಕಟಮಾಗದಿರೆ ಹರಿ ಶುಭದಂ॥ 1032 ॥

ಉರಮುಂ ಲಲಾಟಪಟ್ಟಂ । ತರಮುಂ ವಿಸ್ತೀರ್ಣಮಾಗೆ ಕೆಚ್ಚಿಗಣ ಕಡೆವ ।
ಕ್ಷೀರಮುಮತಿಧವಳಮಾಗು । ತ್ತಿರೆ ಪಸ್ಗೊಂದನೆಯ ತಿಂಗಳಭಿನವಚಂದ್ರಾ ॥ 1033 ॥

ಪುರಿವುದು ಕಡುಬಿಸಿಯಪ್ಪಂ। ತಿರೆ ಮುೞಲಂ ನಾಂದ ನೀರೆಯೊಳ್ ಪೊಯ್ದುನಯಂ।
ಬೆರಸಿರೆ ನೇಕಂಗೆಯ್ವುದು । ತುರಗದ ಪೋಷಕ್ಕೆ ಮುಳಲಸೇಕಂ ದಿವ್ಯಂ ॥ 1034 ॥

ಪಡುಗುಂ ಪೊರಳ್ಗುಮೆೞ್ಗುಂ । ನಿಡುಮುಡಿಯಕ್ಕುಂ ಬೆಮರ್ಗುಮುಮ್ಮಳಿಸುಗುಮಾ ।
ಗಡೆ ತಲೆಯಂ ಕೆಚ್ಚಿಗಿಟ್ಟಪು। ದಡಿಗಡಿಗೆ ಸುಭಿಕ್ಷಶೂಲೆ ಕೆರಳ್ದ ತುರಂಗಂ ॥ 1035 ॥

ಶೃಂಗಿಯ ಬೇರುಂ ವಾಣಿಜ। ದಿಂಗುಂ ಬೆಳ್ಳುಳ್ಳಿ ತಿಗಡೆ ಸೈಂಧವವಿಾ ಪಂ ।
ಚಾಂಗಮುಮಂ ಸಮನಾಗಿ ತು। ರಂಗಕ್ಕಿಕ್ಕುವುದು ಸರ್ವಶೂಲಾಪಹರಂ ॥ 1036 ॥

ತುರಗಕ್ಕೆ ಲದ್ದಿ ಪೋಱಮುಡ। ದಿರೆ ಪುಣಸೆಯ ಪಣ್ಣ ಬತ್ತಿಯೊಳ್ ಸೈಂಧವಮಂ ।
ಬೆರಸಿ ಗುದಮುಮದೊಳಿಡೆ ಬಾ । ಧಿರಮಕ್ಕುಂ ಕಠಿನಮಾಗಿ ಬಿಗಿದಿರ್ದ ಮಲಂ ॥1037॥

ಅರಿದಾಳಂ ಪೊಸಸುಣ್ಣಮಿಂದ್ರಯವೆಯುಂ ಗಂಧೋತ್ಪಲಂ ದಾರುಸಿಂ ।
ಧುರಕಲ್ಲುಪ್ಪು ಕಟುತ್ರಯಂ ರಜನಿ ಸದ್ಯಃಕ್ಷಾರಮೆಂಬಿಂತಿವಂ ।
ಸರಿಗೊಂಡಾವಿನ ದುಗ್ಧದಿಂ ಸಮನೆಗೊಂಡೆಳ್ಳೆಣ್ಣೆಯಿಂದಟ್ಟು ತಂ ।
ದಿರಿಸಿಂಬಾಗಿರೆ ಪೂಸೆ ಕಜ್ಜ ಮೊದಲಾದಶ್ವವ್ರಣಂ ಪಿಂಗುಗುಂ ॥ 1038 ॥

ಬಾಲಂಬೀಸದು ನುಡಿಗಳ। ನಾಲಿಸದಾಹಾರಚಿಂತೆಗೆಯ್ಯದು ಕಿವಿಗಳ್ ।
ಕೀಲಿಸೆ ಕಂಪಿಸೆ ಜಾನಿಸೆ। ಕಾಲವುಖಪ್ರಾಪ್ತಿಯಕ್ಕುಮಭಿನವಚಂದ್ರಾ ॥ 1039॥

---

## ಜಿನಾಚಾರ್ಯ. ಸು. 1400.

**ಶೃಂಗಾರಕವಿಹಂಸರಾಜನು** (ಸು. 1600) ತನ್ನ **ರತ್ನಾಕರಾಧೀಶ್ವರಶತಕದಲ್ಲಿ** "ಪೊಂಗಿರ್ದರ್ಗಳಸೇವಿುರತ್ನಕುಮುದೇಂದು ಶ್ರೀಜಿನಾಚಾರ್ಯ **ಕಾವ್ಯಂಗಳ್ ಮಾಡವೆ** ಸೋಹವುಂ ಮುಕುತಿಯುಂ" ಎಂಬ ಪದ್ಯಭಾಗದಲ್ಲಿ **ಈತ**ನನ್ನು ಕನ್ನಡಕವಿಗಳಾದ **ಅಗ್ಗಳ** (1189), **ನೇಮಿ** (ಸು. 1170), **ರನ್ನ** (993), **ಕುಮುದೇಂದು** (ಸು. 1275) ಇವರ **ಗೋಷ್ಠಿಯಲ್ಲಿ** ಸೇರಿಸಿರುವುದರಿಂದ ಇವನು ಕನ್ನಡದಲ್ಲಿ ಗ್ರಂಥಗಳನ್ನು ಬರೆದಿರಬೇಕು. ನಮಗೆ ಅವುವೂ ದೊರೆತಿಲ್ಲ. ಈತನು **ಶೃಂಗಾರಕವಿಹಂಸರಾಜನ** ಕಾಲಕ್ಕೆ ಹಿಂದೆ ಇದ್ದಿರಬೇಕೆಂಬುದು ಸ್ಪಷ್ಟವಾಗಿಯೇ ಇದೆ; ಸುಮಾರು 1400 ರಲ್ಲಿ ಇದ್ದಿರಬಹುದೆಂದು ತೋರುತ್ತದೆ.



# ಗ್ರಂಥಶುದ್ಧಿ.

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| 5 | 27 | ಭಾಸು | ಭಾಸುರ |
| 10 | 19 | ಕರ್ತ | ಕರ್ತೃ |
| 11 | 27 | *Ina* | *Ind* |
| 12 | 18 | ಅರ್ಹದ್ಧಾಸ | ಅರ್ಹದ್ದಾಸ |
| 14 | 29 | *Ina* | *Ind* |
| 22 | 16 | 'ಭಟ್ಟಾಕಳಂಕನು' ಎಂಬುದರಿಂದ 'ಸ್ತುತಿಸಿದ್ದಾನೆ' ಎಂಬುದರವರೆಗೆ ಬಿಟ್ಟು ಬಿಡಬೇಕು. | |
| 30 | 2 | ಕನ್ನಡದಲ್ಲಿ ಆದಿಪುರಾಣ | ಆದಿಪುರಾಣ |
| 34 | 14 | ಕೊಂಡ | ಕೊಂಡು |
| 37 | 14 | ಬೆಳಿವಾರ್ಯರ್ | ಬೆಳವಾರ್ಯರ್ |
| 41 | 6 | ನಾದದಿಂ | ನಾದರದಿಂ |
| 50 | 23 | ಬಂದ | ಬಂದು |
| 51 | 1 | ಭವನಂ | ಭುವನಂ |
| 64 | 21 | ಪೊಸ | ಪೊಸ |
| 71 | 3 | ವಂದಂಡವ | ವಂದಂದವ |
| 86 | 4 | ವಸ್ತ | ವಸ್ತು |
| 89 | 20 | ಶಾಸ್ತ | ಶಾಸ್ತ್ರ |
| 93 | 11 | ಕೃತಿಯುರ್ಧಂ | ಕೃತಿಯುರ್ಥಂ |
| 97 | 18 | ಯುಶರುತಮರ್ | ಯುಶರುತ್ತಮರ್ |
| 99 | 26 | ತೋರ | ತೋರು |
| 107 | 23 | ತೊದವು | ತೊಡವು |
| 108 | 26 | ಪೇಟಿಸ್ವಾಡೆ | ಪೇಟಿಸ್ವೊಡೆ |
| 109 | 26 | ಪುಗಿಸಿದುವಟ್ಟೆ | ಪುಗಿಸಿದುವಟ್ಟೆ |

110 ನಾಗಚಂದ್ರನು ಬಿಜಾಪುರದಲ್ಲಿರುವ ಒಂದು ಶಾಸನವನ್ನೂ ಬರೆದಿರಬಹುದೋ ಎಂಬ ಸಂದೇಹಕ್ಕೆ ಅವಕಾಶವಿರುವಂತೆ ತೋರುತ್ತದೆ. ಈ ಶಾಸನವು ಬಿಜಾಪುರದ ಮ್ಯೂಜಿಯುಮಿನಲ್ಲಿ ಇಟ್ಟಿದೆ. ಇದಕ್ಕೆ A 23 ಎಂಬ ಅಂಕವನ್ನು ಕೊಟ್ಟಿದ್ದಾರೆ. ಈ ಶಾಸನದ ಕೆಲವು ಪದ್ಯಗಳಿಗೂ ನಾಗಚಂದ್ರನ ಗ್ರಂಥಗಳ ಪದ್ಯಗಳಿಗೂ ಬಹಳ ಮಟ್ಟಿಗೆ ಹೋಲಿಕೆಗಳು ಕಾಣುತ್ತವೆ. ಕೆಲವು ಉದಾಹರಣಗಳನ್ನು ಕೊಡುತ್ತೇವೆ:—

## ಶಾಸನದ 2 ನೆಯ ಪದ್ಯ.

ಪಿರಿದಾಯಾಸದಿನಿನ್ನೆಗಂ ತಳೆದ ಧಾತ್ರೀಭಾರಮಂ ವಿಕ್ರಮಾ।
ಭರಣಂಗೊಪ್ಪಿಸಿ ಚೇಟ್ಪದಂ ಪಡೆದುವೆಂತಾನುಂ ದಿಶಾದಂತಿ ದಿ ॥
ಕ್ಕರಿಣೀಪೇಚಕಚುಂಬನೈಕಸುಖಮಂ ಶೇಷೋರಗಂ ಭೋಗಿನೀ।
ಪರಿರಂಭೋತ್ಸವಮಂ ಪುರಾಣಕಮಠಂ ನಿದ್ರಾಂಗನಾಸಂಗಮಂ ॥

**ಪಂಪರಾಮಾಯಣ VI, 84.**

## ಶಾಸನದ 20 ನೆಯ ಪದ್ಯ.

ಆಕ್ಷೋಣೀಧರವದುವುಂ (?)। ದಕ್ಷಿಣದಿಙ್ಮುಖದೊಳೆಸೆವ ಶಶಿಖಂಡದವೋ।
ಲೀಕ್ಷಣಸುಖಮಯಮಿರ್ಪುದು। ದಕ್ಷಿಣಭರತತ್ರಿಖಂಡದಾರ್ದ್ರಾಖಂಡಂ ॥

**ಪಂಪರಾಮಾಯಣ I, 45.**

## ಶಾಸನದ 1 ನೆಯ ಪದ್ಯ.

ಶ್ರೀಮಚ್ಚಳುಕ್ಯವಂಶಲ। ಲಾಮಂ ಚತುರುದಧಿಮೇಖಳಾಳಂಕೃತಧಾ।
ತ್ರೀಮಂಡಲಮಂ ವಿಕ್ರಮ। ಧಾಮಂ ನಿಜಭುಜಕೃಪಾಣದಿಂ ರಕ್ಷಿಸಿದಂ ॥

**ಪಂಪರಾಮಾಯಣ IX, 39; X, 77.**

ಈ ಶಾಸನದ ಪದ್ಯಗಳ ಸಂಖ್ಯೆ ಮೂವತ್ತು. ಇದರಲ್ಲಿ ಚಾಳುಕ್ಯರಾಜನಾದ ತ್ರಿಭುವನಮಲ್ಲ ವಿಕ್ರಮಾದಿತ್ಯನ (1076—1126) ಆಳಿಕೆಯಲ್ಲಿ ಭಾಯಿಲದಂಡನಾಯಕನು ಒಂದು ದೇವಸ್ಥಾನವನ್ನು ಕಟ್ಟಿಸಿದನೆಂದು ಹೇಳುವಂತೆ ತೋರುತ್ತದೆ.

ಇದರಿಂದ ಇನ್ನೂ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ:—

## ವಿಕ್ರಮಾದಿತ್ಯ.

ಪುದುವಿಲ್ಲಬ್ಧಿವರಂ ನೆಲಕ್ಕೆ ಬೆರಗಿಲ್ಲಾರ್ಪಿಂಗೆ ಕೂರ್ಪಿಂಗೆ ಬೆ।
ಚ್ಚದರಿಲ್ಲಾಜ್ಞೆಗೆ ಸೀಮೆಯಿಲ್ಲ ತಳತಂತ್ರಕ್ಕಂತುಮಿಲ್ಲಾಹವ ॥
ಕ್ಕೆದಿರಿಲ್ಲೋಡಿದ ವೈರಿಗಳ್ಗೆ ಪವಣಿಲ್ಲಾರ್ದತ್ತೆ ಕೀರ್ತ್ತಿ ಪೋ।
ಗದ ದುರ್ಗತ್ರಯಮಿಲ್ಲದೇಂ ಪಿರಿಯನೋ ಚಾಳುಕ್ಯಚಕ್ರೇಶ್ವರಂ ॥

## ಮಲ್ಲಿಕಾರ್ಜುನ.

ಮಣಿವೆಸರಂ ಪಡೆದು ನಭೋ। ಮಣಿವೋಲ್ ಬೆಳಗುಗುಮೆ ಶೋಣಮಣಿಗಳ್ ಪೆಸರಿಂ।
ಪೆಣೆಕೆಗೆ ಕುಮಾರರೆನಿಸುವ। ರೆಣೆಯೆನಿಸುವರಾರೊ ಮಲ್ಲಿಕಾರ್ಜುನನೃಪನೊಳ್ ॥

## ಗೋವಿಂದ.

ಶ್ರೀವಧು ವಕ್ಷದೊಳಿರೆ ವಾಕ್। ಶ್ರೀವಧು ಮುಖಕಮಲದೊಳ್ ವಿರಾಜಿಸೆ ವಿಜಯ।
ಶ್ರೀವಧು ನಿಲೆ ನಿಜಭುಜದೊಳ್। ಗೋವಿಂದಂ ಕೀರ್ತಿವಧುಗೆ ವಲ್ಲಭನಾದಂ ॥

## ಮೇರು.

ಶರಧಿಸರೋವರಮನಳಂ । ಕರಿಸಿದ ಧರಣೀಸರೋಜಕರ್ಣಿಕೆಯೆಂಬಂ ।
ತಿರೆ ಕಪಿಳಕಿರಣದಿಂದಂ । ಬರಮುಂ ಪಜ್ಜಳಿಸಿದತ್ತು ಮೇರುನಗೇಂದ್ರಂ ॥

## ನಾರಾಯಣ.

ಮನುಸೂತ್ರಕ್ಕೆಡೆಗೊಟ್ಟ ಮುತ್ತಿನಸರಂ ಚಾರಿತ್ರಮಾಳಾನಿತಂ ।
ಬಿನಿಗಾಲೇಪನಸಾಂದ್ರಚಂದನರಸಂ ವಿಖ್ಯಾತವಿದ್ಯಾವಿಳಾ ॥
ಸಿನಿಗಾಳೋಕನದರ್ಪಣಂ ಪ್ರ.. ಲಕ್ಷ್ಮೀವಲ್ಲಭಂ ಶ್ರೀಪದ ।
ಕ್ಕೆ ನಿವಾಸಂ ಮನಮೊಂದೊಡೇವೊಗಟಿ್ವನಾಂ ನಾರಾಯಣಖ್ಯಾತಿಯಂ ॥

---

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| 112 | 13 | ಕುದು | ಕುದುರೆ |

113 ಅಭಿನವದಶಕುಮಾರಚರಿತೆಯನ್ನು ಬರೆದ ಚಾಂಡರಸನು (ಸು. 1300) ತಾನು "ಕವಿತಾವಿಳಾಸನೆ ವಲಂ" ಎಂದು ಹೇಳಿಕೊಳ್ಳುತ್ತಾನೆ (ಪುಟ 404)

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| 117 | 18 | ನೈಯಾಯಿಕಾಗ್ರೇಸಂ | ನೈಯಾಯಿಕಾಗ್ರೇಸರಂ |
| 120 | 19 | ಬಂದನೊಜಿಲ್ಲ | ಬಂದನೊಜಿಲ್ಲು |
| 122 | 7 | ಮಾದಲೊಳ್ | ಮೊದಲೊಳ್ |
| 126 | 16 | ವಸಮತಿ | ವಸುಮತಿ |
| 134 | 24 | ಮಂತವರಂವ | ಮಂತವರಂಮ |
| 135 | 10 | ಪೆರ್ಬದುಕೆ | ಪೆರ್ಬಡುಕೆ |
| 147 | 2 | ನಾಲು | ನಾಲ್ಕು |
| 148 | 11 | ಇಪೆ | ಇವೆ |
| 170 | 18 | ದೇವಸ್ಥಾನ | ದೇವಸ್ಥಾನ |
| 176 | 29 | ಹಾಟಿಸಿ | ಹಾಜಿಸಿ |
| ,, | ,, | ಬಿಟ್ಟ | ಬಿಟ್ಟು |
| 219 | 13 | ವನಲಕ್ಮಿ | ವನಲಕ್ಷ್ಮಿ |
| 225 | 22 | ನುತಿಸಿದನು | ನುತಿಸಿದನು’. |
| 233 | 14 | ತೋಳಿವೆಂಬಂ | ತೋಳಿವೆಂಬಂತೆ |

234 ಹರೀಶ್ವರನ ರಕ್ಷಾಶತಕದಲ್ಲಿ 101 ವೃತ್ತಗಳಿವೆ; ಪ್ರತಿ ವೃತ್ತವೂ "ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ" ಎಂದು ಮುಗಿಯುತ್ತದೆ. ಈ ಶತಕವು ಭಕ್ತಿವೈರಾಗ್ಯಗಳನ್ನು ಬೋಧಿಸುತ್ತದೆ.

ಇದರಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ—

ಮನಮೆನ್ನಂ ದುರ್ವಿಕಾರಕ್ಕೆೞಿದಪುದು ಮನಂ ಮಾನಮಂ ನುಗ್ಗುಗುಟ್ಟು |
ತ್ತೆ ನಸುಂ ತಾಂ ವಹ್ನಿಯೊಳ್ ನೂಂಕಿದಪುದು ಮನಮಿಾಮಾಯೆಯುಂ ಬಿಟ್ಟು ನಿಮ್ಮಂ ||
ನೆನೆಯಲ್ ತಾನೀಯದಯ್ಯೋ ಶಿವನೆ ಭವನೆ ಕಾರುಣ್ಯವಾರಾಶಿಯೆನ್ನೀ |
ಮನಮಂ ಸೈತಿಟ್ಟು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ||
ನವೆದೆಂ ರೋಗಂಗಳಿಂದಂ ಸೆಡೆದೆನನುದಿನಂ ಸೇವೆಯಿಂದಂ ನಿರರ್ಥಂ |
ಸವೆದೆಂ ಕಾಮಂಗಳಿಂದಂ ಬಿಗೆ ಪರಿಭವದೊಳ್ ಬೆಂದೆನಾನಾಸೆಯಿಂದಂ ||
ತವಿಲಾದೆಂ ಕೋಪದಿಂದಳ್ಕಿದೆನತಿಮದದಿಂ ಮುಂದುಗೆಟ್ಟೆರ್ದಪೆಂ ಶಂ |
ಭುವೆ ನೀಲಗ್ರೀವ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ||
ಇದನೊಲ್ಲೆಂ ದೈನ್ಯಮಂ ಸೂಡದೆ ಪರವಧುವಂ ಕೂಡದೇನೊಂದುಮಂ ಬೇ |
ಡದೆಯಾರಂ ಮಿಥ್ಯೆಯಿಂ ನೋಡದೆ ಪರಸುಖದೊಳ್ ಬಾಡದಾಚಾರದೊಳ್ ಕೋ ||
ಡದೆ ವಿದ್ಯಾಗರ್ವದೊಳ್ ಕೂಡದೆ ಚಪಳತೆಯಿಂ ನೀಡದತ್ಯಾಸೆಯುಂ ಮಾ |
ಡದೆ ಬಾೞ್ವಂತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ||

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| 238 | 24 | ದರ್ಪಿಪ | ದರ್ಪಿಷ್ಠ |
| 239 | 2 | ವರ್ಣನವಪ್ಪ | ವರ್ಣನಮಪ್ಪ |
| 246 | 17 | ಜಗದಾರಾಧ | ಜಗದಾರಾಧ್ಯ |
| 261 | 20 | ಲ್ಗಡುಕು | ಲ್ಗುಡುಕು |
| 276 | 18 | ಸುತ್ತಿೞಿದ | ಸುತ್ತಿೞಿದ |
| 279 | 22 | ಪದ್ಯಗಳನು | ಪದ್ಯಗಳನ್ನು |
| 287 | 26 | ಸಟಿಗಾಳಿ | ಸುಟಿಗಾಳಿ |
| 303 | 5 | ದಿಟಿಕೆಯು | ದಿಟಿಕೆಯೆ |
| ,, | 14 | ತೋಟಿಲ್ಚು | ತೊಟಿಲ್ಚು |
| 311 | 8 | ಬಂಬಲ್ಗೆಳ್ಪವು | ಬಂಬಲ್ಗೊಳ್ಪವು |
| 319 | 8 | ಕೂರ್ಬುಗೆಯಿಂ | ಕೊರ್ಬುಗೆಯಿಂ |
| 320 | 8 | ನಂದಳಿಗೆ ಲಕ್ಷ್ಮೀನಾರಣಪ್ಪನು ಶ್ರೀರಾಮಪಟ್ಟಾಭಿಷೇಕ | |

ವನ್ನು ತನ್ನ ತಾಯಿಯಾದ ಮಹಾಲಕ್ಷ್ಮಿಯ ಹೆಸರಿನಲ್ಲಿ ಬರೆದಿದ್ದಾನೆ. 3 ನೆಯ ಸಂಪುಟದ 219 ನೆಯ ಪುಟವನ್ನು ನೋಡಿ. ರಾಮಪಟ್ಟಾಭಿಷೇಕ ಎಂಬುದು ಶ್ರೀರಾಮಪಟ್ಟಾಭಿಷೇಕ ಎಂದಿರಬೇಕು.

| | | | |
|---|---|---|---|
| 327 | 6 | ರಗರನಪ್ಪ | ಗರಗರನಪ್ಪ |
| ,, | 7 | ಹೂರಣಮನಿಸಿ | ಹೂರಣಮೆನಿಸಿ |
| 359 | 8 | ಽಕಾಳಿ | ಶುಕಾಳಿ |

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| 371 | 18 | ಏರೆಯಂಗ | ಎರೆಯಂಗ |
| 375 | 7 | ಸೀಲ್ಕೆ | ಸೀಲ್ಗೆ |
| 383 | 24 | ದರ್ಘ್ಯ | ದರ್ಪ್ಯ |
| 408 | 8 | ಚಾರಿತ್ರಸಾರದ ಟೀಕೆಯನ್ನು ಪ್ರಭಾಚಂದ್ರನು ಮಲಧಾರಿ ಲಲಿತಕೀರ್ತಿಯ ಶಿಷ್ಯ ಕಲ್ಯಾಣಕೀರ್ತಿಗೋಸ್ಕರ ಬರೆದಂತೆ ತಿಳಿಯುತ್ತದೆ. | |
| 408 | 10 | ಸಹಜಾತ | ಸಹಜಾತ್ಮ |
| 412 | 5 | ವೀರಹಿ | ವಿರಹಿ |
| ,, | 14 | ತೊಱಹಂ | ತೊಱೆಹಂ |
| 427 | 18 | ಧರ್ಮಪುರಾಣ | ಧರ್ಮನಾಥಪುರಾಣ |
| 430 | 18 | ತಱುಗಿದುವು | ತುಱುಗಿದುವು |
| 441 | 12 | ಬರಯುತ್ತೇವೆ | ಬರೆಯುತ್ತೇವೆ |
| ,, | 21 | ವೊದವೆ | ವೊಡವೆ |
| 445 | 28 | ಗ್ರಂಥವತಾರ | ಗ್ರಂಥಾವತಾರ |

## ದ್ವಿತೀಯ ಸಂಪುಟ

17 ವಾಗ್ವಲ್ಲಕೀಪ್ರೈಣಿಕ ಎಂಬುದು ನೇಮಿಚಂದ್ರನ ಬಿರುದುಗಳಲ್ಲಿ ಒಂದು. ಈ ಚಂದ್ರಪ್ರಭಸ್ತುತಿ ಲೀಲಾವತಿಯಲ್ಲಿದೆ.

142 ತೊರವೆ ಎಂಬ ಗ್ರಾಮವು ಸೋಲಾಪುರದ ಜಿಲ್ಲೆಯಲ್ಲಿಲ್ಲ; ಬಿಜಾಪುರದ ಜಿಲ್ಲೆಯಲ್ಲಿದೆ.

---

## EXTRACTS FROM OPINIONS ON
## VOL. II OF THE KARNATAKA-KAVICHARITE
## OR LIVES OF KANNADA POETS.



As I may claim to have had a hand in starting this line of inquiry, it is specially gratifying to find that it has been taken up with so much interest and ability. It is sad that the life was cut short of your most valuable collaborator and namesake, but the Kannada people have been placed under a deep debt of gratitude to you for resolving to carry on the work by yourself and bring it to a finish. It will open the eyes of the Kannadigas to the extensive literary treasures existing in their language of which there has been but little knowledge hitherto.

Mr. B. Lewis Rice, C.I.E.

---

It is a most admirable and valuable work. I can well realize the colossal labour of the task which fell upon your unaided shoulders in the midst of so much other work. But it is a *Puṇya* of the first class. I heartily congratulate you on the success that has attended your long and heavy labours.

Dr. L. D. Barnett.

---

Please accept my congratulations on your having been able to make available for the public so large an additional instalment of the harvest of your patriotic researches. Your work places all Kanarese-loving people in your debt.

Rev. E. P. Rice, B.A.

---

You have earned the gratitude of the living and the dead alike by your devoted labour of twenty-five years. You have rescued the memory of many whose works will never see the

light of day if their countrymen do not venture money on printing. You have prospected the field and if the mines are not worked, it will not be your fault. I have nothing but admiration for the scholarship, the perseverance, and the calm, critical judgment to which every page of the volume bears witness.

Mr. H. Narayana Rao, B.A., B.L.

---

From the contents of the book, I see the magnitude of the trouble that you have taken in completing this monumental work. You occupy, most deservedly, the highest place among those who have worked hard to enrich Kannada Literature.

Mr. M. Venkatakrishnaiya.

---

Your laborious work of the last twelve years will for all time mark you out as one of the greatest benefactors of the Kannada language, and therefore, of the Kannada people also.

Mr. B. Rama Rao, M.A., LL.B.

---

The immense amount of labour that your researches in the field of Kannada literature should have involved does credit to your patience and literary enthusiasm.

Rao Bahadur M. Shama Rao, M.A.

---

ತಾವು ಶ್ರೀವೈಷ್ಣವಮತಾವಲಂಬಿಗಳಾಗಿದ್ದರೂ ಶಾಸ್ತ್ರಶೋಧನ ಮೊದಲಾದ ಪ್ರಮುಖಕಾರ್ಯಗಳಲ್ಲಿ ತಾವು ತೋರಿಸಿರುವ ನಿಷ್ಪಕ್ಷಪಾತತೆಯು ಪೂಜ್ಯಬುದ್ಧಿಗೆ ನನ್ನ ಆನಂದವನ್ನು ತಮಗೆ ಮಾಲಿಕೆಹಾಕಿರುವೆನು. ತಾವು ಮಹತ್ತಾದ ಸರ್ಕಾರದ ಕೆಲಸದಲ್ಲಿ ಅತ್ಯಂತ ಮಹತ್ತರವಾದ ಈ ಘನ ಕಾರ್ಯವನ್ನು ಕೈಗೊಂಡು ಸುಮಂಗಲವಾಗಿ ಸಾಗಿಸಿರುವುದಕ್ಕೆ ನನ್ನ ಆಶ್ಚರ್ಯದ ತುರಾಯಿಯನ್ನು ಒಪ್ಪಿಸಿರುವೆನು. ಈ ವಿಷಯವಾಗಿ ಎಷ್ಟು ವರ್ಣಿಸಿದರೂ ಸಾಲದು. ನನ್ನ ಸಂತೋಷಕ್ಕೆ ಪಾರವೇ ಇಲ್ಲ. ನನ್ನಲ್ಲಿ ಸ್ವಭಾವಸಿದ್ಧವಾಗಿ ಈ ಸಂಬಂಧವಾಗಿ ಜನಿಸಿರುವ ಅತ್ಯಂತ ಸಂತೋಷ ಸಾಗರವನ್ನು ತಮಗೆ ಒಪ್ಪಿಸುವ ನನ್ನ

ಕೃತಜ್ಞತೆಯನ್ನು ಅಗಸ್ತ್ಯಹಸ್ತವೆಂಬ ತಮ್ಮ ಪವಿತ್ರೋದ್ದೇಶಕ್ಕೆ ಆಪೋಶನ ಮಾಡಿಸಿರುತ್ತೇನೆ.—**ಎತ್ತಗದ ಮಠದ ದೊಡ್ಡರಾಮಾರಾಧ್ಯರು.**

---

In 1907 appeared the first volume of this monumental work. The death of the admirable scholar who had collaborated with him in the first volume, the vastness of the field to be covered by him in this section of the work, and above all the heavy and continuous labours entailed by the researches of the Archaeological Department of the Mysore Government, furnish more than sufficient reasons for the lapse of time ; indeed, thay make us marvel how the author could find leisure and energy to write at all a book of such size and excellence. It sums up all that is known of some 350 poets who flourished in the period and wrote on all the branches of literature studied in India, and it gives copious extracts from their works. *Mens agitat molem:* the mass of information is clearly arranged and well indexed, the style lucid and concise.

Even where the written books have perished, inscriptions preserve the records of scores of otherwise forgotten scholars who could and did turn verses with all the niceties of classical style ; and it is one of the many excellent features of the present work that it has reaped from epigraphic sources a rich harvest of this fruit. Assuredly the work is a worthy record of that *Sobagina Suggi*, the literature of the Kannada land.

Journal ot the Royal Asiatic Society
of Great Britain and Ireland.

---

Rao Bahadur R. A. Narasimhacharya has already contributed much to the resuscitation of the indigenous literature of the past. His latest work in this department is another volume on "The Lives of Kannada Poets" between the 15th and 17th

centuries, based on research into ancient manuscripts, coins and epigraphs of old. He has made the volume as exhaustive as possible, no poet of any repute being left out of account. The works of many poets not known before have been rescued and extracts from the writings are given in the volume. A critical introduction in English is prefixed to the work which is published under the auspices of the Mysore University and dedicated to H. H. the Maharaja of Mysore.

Madras Mail.

---

When the first volume of this great work was published some years ago, it was hailed as an event in the history of Oriental Research in India. The second volume must have entailed no less labour than its predecessor. No wonder if the historian has had to devote twenty-five years to this stupendous undertaking. The present volume mentions the names of about 370 men of letters and covers the period from 1400 to 1700 A.D. The Mysore University is to be sincerely congratulated on the publication of so valuable a mine of research.

Bombay Chronicle.

---

The publication of Part II of the "Lives of Kannada Poets" is a matter of congratulation no less to the Kannada public than to the accomplished author. The period covered by the present volume comprises the 15th, 16th and 17th centuries; and we are introduced to more than four hundred writers—men and also women. The volume before us bears impressive testimony to the vast erudition and careful industry of the author. It pleases us to note that such a valuable work has come to us with the *imprimatur* of the Mysore University.

Karnataka.

---

ಈ ದ್ವಿತೀಯ ಸಂಪುಟದಲ್ಲಿ ೧೫ ನೆಯ ಶತಮಾನದಿಂದ ೧೭ ನೆಯ ಶತಮಾನದವರೆಗೆ ಯಾವ ಯಾವ ಕವಿಶ್ರೇಷ್ಠರು ಯಾವ ಯಾವ ಗ್ರಂಥಗಳನ್ನು ಬರೆದಿದ್ದಾರೋ ಆ ವಿಷಯವನ್ನು ತಿಳಿಸಿ ಅವರ ಗ್ರಂಥಗಳಿಂದ ಅವರ ಶಕ್ತಿಯನ್ನು ಪ್ರಕಾಶಪಡಿಸುವ ಭಾಗಗಳನ್ನೂ ಉದಾಹರಿಸಿರುತ್ತಾರೆ. ಈ ಗ್ರಂಥವನ್ನು ರಚಿಸುವುದರಲ್ಲಿ ಮ॥ ರಾ॥ ನರಸಿಂಹಾಚಾರ್ಯರವರು ಬಹಳ ಮೆಹನತ್ತು ಮಾಡಿರುವರು. ಕನ್ನಡದ ಮಹಿಮೆಯನ್ನು ತಿಳಿದುಕೊಳ್ಳಲು ಅಪೇಕ್ಷೆಯುಳ್ಳವರಿಗೆ ಈ ಗ್ರಂಥವು ಅತ್ಯಂತ ಸಾಧಕವಾಗಿರುವುದು. ಈ ಗ್ರಂಥವನ್ನು ರಚಿಸಿದುದಕ್ಕಾಗಿ ಕನ್ನಡ ಭಾಷಾಭಿಮಾನಿಗಳೆಲ್ಲ ಮ॥ ನರಸಿಂಹಾಚಾರ್ಯರವರಿಗೆ ಕೃತಜ್ಞರಾಗಿರಬೇಕು.

**ಸಾಧ್ವಿ.**

---

ಮ॥ ರಾ॥ ನರಸಿಂಹಾಚಾರ್ಯರವರ ಭಾಷಾವಾತ್ಸಲ್ಯವು ಸ್ತೋತ್ರಾರ್ಹವಾದುದು. ಇಂಥ ಗ್ರಂಥಗಳನ್ನು ಬರೆಯುವುದಕ್ಕೆ ಅವರಿಗೆ ಇರುವ ಅನುಕೂಲ್ಯಗಳು ಮತ್ತಾಗಿವೆ? ಅನುಕೂಲ್ಯಗಳಿದ್ದರೂ ಅವರ ದಾರ್ಢ್ಯವೂ ಸಾಮರ್ಥ್ಯವೂ ಇರತಕ್ಕವರು ಎಷ್ಟು ಮಂದಿ? ತಮ್ಮ ಬಲಭುಜವಾಗಿದ್ದ ಎಸ್. ಜಿ. ನರಸಿಂಹಾಚಾರ್ಯರು ಸ್ವರ್ಗಸ್ಥರಾಗಿ ತಾವು ಏಕಬಾಹುಗಳಾಗಿದ್ದರೂ ವೃದ್ಧರಾಗಿದ್ದರೂ ಇರ ಸಹಾಯ ನಿರಪೇಕ್ಷರಾಗಿ ಇಂಥ ಮಹತ್ಕಾರ್ಯವನ್ನು ಕೈಗೊಂಡು ದೇಹವನ್ನು ತೇದು ಭಾಷಾಸೇವೆ ಮಾಡುತ್ತಿರುವುದನ್ನು ನೋಡಿ ಕನ್ನಡ ನಾಡೇ ತನ್ನ ಕೃತಜ್ಞತೆಯನ್ನು ವ್ಯಕ್ತಪಡಿಸುತ್ತಿದೆ. ನಮ್ಮ ಕರ್ಣಾಟಕ ಸಂಘದ ಮಾತೇನು—**ಪ್ರಬುದ್ಧ ಕರ್ಣಾಟಕ.**

---